# ಪ್ರಾಕ್ಟಿಕಲ್

# ಹಿಪ್ನಾಟಿಸಂ

ಲೇಖಕರು

*ಡಾ. ನಾರಾಯಣ ದತ್ತ ಶ್ರೀಮಾಲಿ*

ಎಮ್. ಎ., ಪಿ.ಹೆಚ್. ಡಿ.,

ಅಧ್ಯಕ್ಷರು

ಭಾರತೀಯ ಜ್ಯೋತಿಷ್ಯ ಅಧ್ಯಯನ ಮತ್ತು ಅನುಸಂಧಾನ ಕೇಂದ್ರ

ಮತ್ತು

ತಂತ್ರ-ಮಂತ್ರ-ಯಂತ್ರ, ಹಸ್ತ ಸಾಮುದ್ರಿಕೆ

ಸ್ವಪ್ನಗಳ ಸಂಸ್ಥೆ

ಹಾಗೂ

ನಲವತ್ತೆರಡಕ್ಕಿಂತಲೂ ಹೆಚ್ಚು ಪುಸ್ತಕಗಳ ಲೇಖಕರು

**ನಿಖಿಲ್ ಕಂಪ್ಯೂಟರ್ಸ್ ಅಂಡ್ ಪಬ್ಲಿಷರ್ಸ್ ,**

**ಮೇನ್ ಬಜಾರ್ ಕ್ರಾಸ್ , ವಿಜಯಾ ಟಾಕೀಸ್ ಹತ್ತಿರ, ಹೊಸಪೇಟೆ.583201**

ದೂರವಾಣಿ: 24846, 26396, 27191

# ಪರಿವಿಡಿ

# ಪ್ರಕಾಶಕರ ಟಿಪ್ಪಣಿ

ಪ್ರಾಕ್ಟಿಕಲ್ ಹಿಪ್ನಾಟಿಸಂ ಈ ಪುಸ್ತಕವು 1985 ರಲ್ಲಿ ಮೊಟ್ಟಮೊದಲನೆಯದಾಗಿ ಇಂಗ್ಲೀಷ್ ನಲ್ಲಿ ಪ್ರಕಾಶಿತಗೊಂಡಿತು. ಈಗ ಲೇಖಕರ ಅನುಮತಿ ಹಾಗೂ ಕೃಪೆಯಿಂದಾಗಿ ಇದು ಕನ್ನಡಕ್ಕೆ ಅನುವಾದ ಗೊಂಡಿರುವುದು ಕನ್ನಡಿಗರ ಅದೃಷ್ಟವೆಂದೇ ಹೇಳಬೇಕು.

ಇಂಗ್ಲಿಷ್ ಪುಸ್ತಕದ ಪ್ರಕಾಶಕರಾದ ದೆಹಲಿಯ *ಪುಸ್ತಕ ಮಹಲ್*‌ನವರು ಲೇಖಕರೊಂದಿಗೆ ನೇರವಾಗಿ ವಿಚಾರವಿನಿಮಯ ಮಾಡಿ ಕೊಂಡಿರುವುದರಿಂದ ಅವರದೇ ಟಿಪ್ಪಣಿಯನ್ನು ಅವರ ಮಾತಿನಲ್ಲೇ ಓದುವುದು ಹೆಚ್ಚು ಸಮಂಜಸವಾಗಿರುತ್ತದೆ ಹಾಗೂ ಈ ಪುಸ್ತಕಕ್ಕೂ ಅದು ಸಂಪೂರ್ಣವಾಗಿ ಅನ್ವಯಿಸುತ್ತದೆ.

"ಎಲ್ಲಾ ಸಂಬಂಧಗಳಿಂದಲೂ ಒಂದು ಸಂಪೂರ್ಣ ಅಧ್ಯಯನವಾಗಿರುವಂತಹ ಪ್ರಾಕ್ಟಿಕಲ್ ಹಿಪ್ನಾಟಿಜಂ ಹಿಪ್ನಾಟಿಜಂ ವಿಜ್ಞಾನವನ್ನು ಸರಳ, ಶ್ರೇಷ್ಠ ಹಾಗೂ ಸ್ವಚ್ಛವಾದ ಭಾಷೆಯಲ್ಲಿ ವಿವರಿಸಲು ಇಚ್ಛಿಸುತ್ತದೆ. ಅದು ಪಶ್ಚಿಮದ ಆಡಂಬರದ ಚಿಂತನೆಗಳ ಮೇಲೆ ಸಮಗ್ರವಾದ ಅಧ್ಯಯನವನ್ನು ಮಾಡುವುದಲ್ಲದೆ ಭಾರತೀಯ ಗತಕಾಲದ ಬೆಲೆಕಟ್ಟಲಾಗದ ಆಲೋಚನೆಗಳ ಕಡೆಗೆ ಭಾರವಾದ ಗಮನವನ್ನು ಸೆಳೆಯುತ್ತದೆ. ಎರಡು ಶಕ್ತಿಯುತವಾದ ಪಾಂಡಿತ್ಯದ ಪ್ರಯಾಸಗಳ ಒಳ್ಳೆಯ ಒಗ್ಗೂಡುವಿಕೆಯ ಸಾಧನೆಯಿಂದಾಗಿ, ಈ ಪುಸ್ತಕವು ಓದುಗರ ಕೌಶಲ್ಯತೆಯ ಪ್ರಶಂಸೆಗೆ ಪಾತ್ರವಾಗುವುದು ಎಂದು ಉದ್ದೇಶಿಸಲಾಗಿದೆ.

ಈ ಪುಸ್ತಕದ ಬರಹಗಾರರನ್ನು ಈ ವಿಷಯದಲ್ಲಿ ಒಬ್ಬ ಅತ್ಯುತ್ತಮ ಅಧೀಕೃತವುಳ್ಳವರೆಂದು ವಿಶಾಲವಾಗಿ ಅಂಗೀಕೃತವಾಗಿದೆ. ಅವರ ಸ್ವಂತ ವೈಯಕ್ತಿಕ ಜೀವನದಲ್ಲಿ ಅವರು ಈ ವಿಜ್ಞಾನವನ್ನು ವೈವಿಧ್ಯರೀತಿಯ ಸಾಮಾಜಿಕವಾಗಿ ಒಳೆಯಾಗಿರುವಂತಹುದುದರ ಗುರಿಯಕಡೆ ಹಾಕಿದ್ದಾರೆಂದು ಸಹ ತಿಳಿದಿದೆ. ಪುಸ್ತಕದಲ್ಲಿ ಕೇವಲ ಒಂದು ನೋಟವು ಈ ಅಧ್ಯಯನವು ಕೇವಲ ಶೈಕ್ಷಣಿಕದ್ದಲ್ಲವೆನ್ನುವ ಸತ್ಯಾಂಶವನ್ನು ಅರ್ಥೈಸುತ್ತದೆ. ನಿಜವಾಗಿಯೂ ಅದು ಪರೀಕ್ಷಿಸಿರುವಂತಹ ಹಾಗೂ ಪ್ರಮಾಣೀಕರಿಸಿಯುವಂತಹುದರಲ್ಲಿ ಭಾಗವಹಿಸಿ ಎಲ್ಲಾ ವರ್ಗದ ಓದುಗರಿಗೂ ಸಂಗತವಾದ ಸಮಾನಾದ ಭರವಸೆಯನ್ನು ಕೊಡುತ್ತದೆ.

ಈ ಪುಸ್ತಕವು ಈ ವಿಜ್ಞಾನಕ್ಕೆ ಪಾಶ್ಚಿಮಾತ್ಯ ಕೊಡುಗೆಗಳ ಪ್ರಮುಖ ನಿಯಮಗಳನ್ನು ಚರ್ಚಿಸುತ್ತದೆ. ಇದು ಈ ಕ್ಷೇತ್ರದಲ್ಲಿ ಅಮೂಲ್ಯವಾದ ಭಾರತೀಯ ಒಳ ನೋಟಗಳನ್ನು ಹೊರಹಾಕಲು ಸಹ ಇಚ್ಛಿಸುತ್ತದೆ. ಮೇಲ್ನೋಟದಲ್ಲಿಯೇ ಓರ್ವನು ಇದು ಬಹಳ ಮಟ್ಟಿಗೆ ಜ್ಞಾನಕೋಶವೇ ಆಗಿದೆಯೆಂದು ತಿಳಿಯುವನು. ಭಾರತೀಯ ಸಾಧನೆಗಳ ಮತ್ತು ಸಿದ್ಧಿಗಳ ಅಪರೂಪದ ಚರ್ಚೆಯು ಪುಸ್ತಕವನ್ನು ವಿವಿಧ ಕೋನಗಳಿಂದ ಸಮೃದ್ಧಗೊಳಿಸಿದೆ. ಪುರಾತನ ಭಾರತೀಯ ಋಷಿಗಳ ಹಾಗೂ ಯಾಚಕರ ಅನುಭಾವ ತಿಳುವಳಿಕೆಗಳನ್ನು ಅಷ್ಟೊಂದು ಅಧೀಕೃತವಾಗಿ ಬಯಲಿಗೆ ತಂದಂತಹ ಲೇಖಕರಿಗೆ ನಾವು ನಿಜವಾಗಿಯೂ ಋಣಿಯಾಗಿದ್ದೇವೆ.

ಈ ಪುಸ್ತಕವು ಮುಂದಿಡುವಂತಹ ಸತ್ಯತೆಗಳು ಕಾಲ್ಪನಿಕದಷ್ಟೇ ಸತ್ಯವಾಗಿವೆ, ಆದ್ದರಿಂದ ಲೇಖಕರಾಗಲೀ ಪ್ರಕಾಶಕರಾಗಲೀ ಪುಸ್ತಕದಲ್ಲಿ ಉಲ್ಲೇಖಿಸಿರುವಂತಹ ಸತ್ಯತೆಗಳಿಗೆ ಅಥವಾ ಸಂಗತಿಗಳಿಗೆ ಯಾವುದೇ ಸತ್ಯವಾದಿತ್ವಗಳಿಗೆ ಅಥವಾ ಬೇರೆಯಾವುದೇ ರೀತಿಯಲ್ಲಿ ಜವಾಬ್ದಾರಿಯನ್ನು ಒಪ್ಪಿಕೊಳ್ಳುವುದಿಲ್ಲ.

ಮಿಸ್ಟರ್ ಹುರ್‌ಸನ್‌ರವರ ಮುನ್ನುಡಿಯ ಮೂಲಪ್ರತಿಯು ದೊರೆತಿಲ್ಲ. ನಾವು ಡಾ. ಶ್ರೀಮಾಲಿಯವರ ವಾಚನಾಲಯದಲ್ಲಿ ದೊರೆತಂತಹ ಮುದ್ರಿತ ಪ್ರತಿಯನ್ನು ಉಪಯೋಗಿಸಿದ್ದೇವೆ. ಆದ್ದರಿಂದ ಲೇಖಕರು ಹಾಗೂ ಪ್ರಕಾಶಕರು ಮಿಸ್ಟರ್ ಹುರ್‌ಸನ್‌ರವರ ಮುನ್ನುಡಿಯಲ್ಲಿ ತಿಳಿಸಿರುವಂತಹ ಅಂಶಗಳಿಗೆ ಹೇಗಾದರೂ ಜವಾಬ್ದಾರಿಯನ್ನು ಒಪ್ಪಿಕೊಳ್ಳುವುದಿಲ್ಲ. ಓದುಗರಿಗೆ ಈ ಮುನ್ನುಡಿಯು ಉಪಯೋಗವಾಗಬಹುದೆಂದು ನಾವು ಅದನ್ನು ಈ ಪುಸ್ತಕದಲ್ಲಿ ಕೂಡಿಸಿದ್ದೇವೆ.

ನಾವು ಈ ಪುಸ್ತಕವು ಪಂಡಿತರಿಗೂ ಹಾಗೂ ಸಾಮಾನ್ಯ ಓದುಗರಿಗೂ ಸಮಾನಾಗಿ ಉಪಯೋಗವಾಗಿ ಕಂಡುಬರುವುದೆನ್ನುವ ನಂಬಿಕೆಗೆ ಒರಗಿ ಕೊಂಡಿದ್ದೇವೆ. ಈ ಅಧ್ಯಯನವು ಕಿರಿಯ ಹಾಗೂ ಹಿರಿಯ ಪಂಡಿತರಿಗೆ ಈ ವಿಜ್ಞಾನದಲ್ಲಿ ಆಳವಾಗಿ ಇಳಿಯುವಲ್ಲಿ ಪ್ರೇರೇಪಿಸಿ ದೊಡ್ಡ ಮಹತ್ವಾದ ಕುಶಲತೆಯಿಂದ ಈಚೆಬಂದರೆ ನಮಗೆ ವಿಶದವಾಗಿ ಪ್ರತಿಫಲ ಸಿಕ್ಕಿದೆಯೆಂದು ಭಾವಿಸುತ್ತೇವೆ.

ಇದು ಮುಂದೆ ಅಂತಹದೇ ಶ್ರೇಷ್ಠತೆಯ ಹೆಚ್ಚಿನ ಅಧ್ಯಯನಗಳನ್ನು ಪ್ರಕಾಶಿಸುವುದಕ್ಕೆ ಅನುಕೂಲ ಮಾಡಿಕೊಡುತ್ತದೆ."

ಪ್ರಕಾಶಕ

# ಮುನ್ನುಡಿ

ಭಾರತದೇಶದಲ್ಲಿ ಸಮ್ಮೋಹನ (ಹಿಪ್ನಾಟಿಸಂ) ಅಥವಾ ಸಮ್ಮೋಹನ ಕಲೆ ಮತ್ತು ವಿಜ್ಞಾನವು ಖಚಿತವಾಗಿ ಹೇಳಬೇಕೆಂದರೆ ಒಂದು ಅಮೂಲ್ಯವಾದ ಆಸ್ತಿ. ನಿರಂತರ ಸಂಪ್ರದಾಯಗಳಿಂದ ಇದನ್ನು ಪಾವನಗೊಳಿಸಲಾಗಿದೆ. ಭಾರತದೇಶದಿಂದಲೇ ಜಗತ್ತಿನ ಇತರ ಭಾಗವು ಈ ಜ್ಞಾನವನ್ನು ಹೆಚ್ಚಾಗಿ ಕಲಿತು ಮತ್ತು ಅನುಸರಿಸಿ ಗ್ರಹಿಸಿಕೊಂಡಿದೆ. ಈ ಶಿಸ್ತಿನಲ್ಲಿ ಭಾರತದೇಶದಲ್ಲಿ ದಾಖಲಾಗಿರುವ ಪ್ರತ್ಯಕ್ಷ ಪ್ರಮುಖ ಮಹತ್ಕಾರ್ಯಗಳು, ಸಾಧನೆಗಳು ಹತ್ತಿರದಲ್ಲಿ,ದೂರದಲ್ಲಿ ಮೀರಿಸದೆ ಉಳಿದಿವೆ.

ಭಾರತ, ಈ ಸಮಯದಲ್ಲಿ, ವಿಚಿತ್ರವಾದ ಸಂಕಟಸಮಯದಲ್ಲಿ ಮುನ್ನಡೆದಿದೆ, ಹಾಗೆಯೇ ತನ್ನ ಸುತ್ತ ಅನಿಶ್ಚಿತ ದುಃಖದ ಅನುಭವ, ಸಮೃದ್ಧ ಕೋಟ್ಯಾಂತರ ಜನಗಳನ್ನು ಹಿಡಿದಿಟ್ಟುಕೊಂಡಿದೆ. ಪದೇ ಪದೇ ಸುಳಿಯುವಂತಹ ಅಭದ್ರತೆಯ ಅನುಭವವು ಭಾರತದ ಜನತೆಯನ್ನು ತನ್ನ ಕೆಟ್ಟ ಹಿಡಿತದಲ್ಲಿ ಹಿಡಿದಿಟ್ಟುಕೊಂಡಿರುವಹಾಗೆ ಕಾಣಿಸುತ್ತದೆ. ಬಹಳಷ್ಟು ಅನಿಶ್ಚಯ ಅಥವಾ ಪೂರ್ಣತೆಯ ಅಭಾವ ಮತ್ತು ವಸ್ತುಗಳ ಬರೀ ಅಪೂರ್ಣತೆಯನ್ನು ನೋಡಿ ನೀವು ಘೋರವಾಗಿ ಕುಗ್ಗುವಿರಿ. ನಾವು ಯಾವ ತರಹದ ಸಮಾಜವನ್ನು ಪಡೆಯೋಣವೆಂದು ಅದರ ನೋಟವನ್ನು ಕಂಡಿದ್ದೆವೋ ಅದು ನಮ್ಮನ್ನು ಜಾರಿ ಕೊಳ್ಳುತ್ತಿದೆ. ಅದರ ರಚನೆಯು ವಕ್ರವಾಗಿ ಹೋಗಿದೆ ಮತ್ತು ಅದರ ನಿರ್ಮಾಣ ಗುರಿತಪ್ಪಿರುದುದು ತಾಳಲಾರದ ದುಃಖವಾಗಿದೆ.

ಯಾರಾದರೂ ಏತಕ್ಕೆ ಅಂಜುವುದೆಂದರೆ, ಈ ಗಾಬರಿಪಡಿಸುವಂತಹ ಅಘಾತಕ್ಕೆ ಮುಖ್ಯಕಾರಣ ಭಾರತದ ಮೇಲೆ ಪಶ್ಚಿಮದ ಧಕ್ಕೆ. ಭಾರತದ ಜೀವನದ ಕ್ರಮವು ಯಾವಾಗಲೂ ಅವಲೋಕಿಸುವಂತಹುದು ಮತ್ತು ಒಳಮನಸ್ಸಿನಲ್ಲಿ ಪರಮಶ್ರೇಷ್ಠವಾದ ಸತ್ಯದ ಸಹಜಲಬ್ಧ ಹಿಡಿತವಿರುತ್ತದೆ. ಭಾರತದ ಪ್ರಯತ್ನವು, ಅಂತಹ ಅವಲೋಕನದ ಭಾಗವಾಗಿ, ಅದನ್ನು ಆಳವಾಗಿ ತೋಡಿ ಅಂಧಕಾರದ ಗುಪ್ತಸ್ಥಾನದಲ್ಲಿರುವ ಒಳಮನಸ್ಸು ಅಥವಾ ಒಳಆತ್ಮದ ಸಾಮರ್ಥ್ಯವು ಯಾವ ರೂಪದಲ್ಲೇ ಇರಲಿ ಎಷ್ಟೇ ಇರಲಿ ಅದನ್ನು ಅರಿಯುವುದು. ಭಾರತದ ಪುರಾತನ ಋಷಿಗಳು ವಾಸ್ತವಿಕ ಪ್ರಪಂಚದ ಪ್ರಾಯೋಗಿಕ ಆಯಕಟ್ಟುಗಳನ್ನು ಅಲಕ್ಷಿಸಿ ಹಿಂದಕ್ಕೆ ಸರಿದು ಏಕಾಂತವಾಸವನ್ನು ಆಯ್ದುಕೊಂಡುದುದರಲ್ಲಿ ಆಶ್ಚರ್ಯವಿಲ್ಲ. ಧ್ಯಾನದಿಂದ ಅವರು ಯಾವಾಗಲೂ ದೇವರು ಮಾನವಕುಲಕ್ಕೆ ಕರುಣಿಸಿರುವ ಮನುಷ್ಯನ ಆಕಾರವನ್ನು ನೋಡಲು, ತಿಳಿಯಲು ಮತ್ತು ಗುರುತಿಸಲು, ಮಾನವನ ಆಕಾರದಲ್ಲಿ ಹುದುಗಿರುವಂತಹ ಸಂಭವನೀಯ ಶಕ್ತಿಗಳನ್ನು ಕಂಡುಹಿಡಿಯಲು, ಯಾವಾಗಲೂ ಪ್ರಯತ್ನಿಸಿದ್ದಾರೆ. ಅವರು ದೇವರಿಗೆ ಸಂಪೂರ್ಣವಶವಾಗಿ ಮತ್ತು ಈ ಅಗಾಧವಾದ ಗೂಢತ್ವ ಮತ್ತು ಪಂಚಭೂತಗಳಲ್ಲಿ ಆಳವಾಗಿ ಹೋಗಿ ಅದರಿಂದ ಮಾನವನು ಸರ್ವೋತ್ತಮ ಗಾತ್ರದ ಸಂತೋಷ ಮತ್ತು ಹೆಚ್ಚಿನ ಶಕ್ತಿ ಮತ್ತು ಪರಿಸರವನ್ನು ವಿಸ್ತೀರ್ಣವಾದ ಚಿತ್ರಪಟಕ್ಕೆ ವಿಸ್ತಾರಗೊಳಿಸಬಹುದು ಎಂದು ತಿಳಿದರು. ವಿಪರ್ಯಾಸವಾಗಿ ಪಶ್ಚಿಮವು ಬಾಹ್ಯ ಪ್ರಪಂಚಕ್ಕೆ ಅಂಟಿಕೊಂಡೇ ಉಳಿಯಿತು. ಅಪರೂಪವಾಗಿ ಅದು ದೇಹ ಮತ್ತು ಆತ್ಮದ ಕ್ಲಿಷ್ಟ ಪ್ರಶ್ನೆಗಳ ಉತ್ತರಗಳಿಗೆ ಪ್ರಯತ್ನಿಸಿತು. ಪಶ್ಚಿಮವು ದೇಹ ಮತ್ತು ಆತ್ಮವು ಹೇಗೆ ಬಂದವು ಮತ್ತು ಮನುಷ್ಯನ ಪರಿಸರದ ಎಲ್ಲೆಗಳನ್ನು ವಿಸ್ತೀರ್ಣಗೊಳಿಸಲು ಏನನ್ನೆಲ್ಲಾ ಮಾಡಬಹುದು ಎಂದು ತಿಳಿದುಕೊಳ್ಳಲು ಅಪೂರ್ಣವಾಗಿ ತೊಂದರೆತೆಗೆದುಕೊಂಡಿತು. ಬದಲಾಗಿ ಅದು ಕೆಳಗೆ ಕೆಸರಿನಲ್ಲಿ ಸಿಕ್ಕಿ, ರೂಢಿಗಳು, ಬದುಕುವ ಕ್ರಮಗಳು, ತಿನ್ನುವ ಅಭ್ಯಾಸಗಳು, ಸಂಸ್ಕಾರ ಮತ್ತು ನಾಗರೀಕತೆ ಇಂತಹ ಬಾಹ್ಯ ಬಲೆಗಳಲ್ಲಿ ಇದೆ. ಪಶ್ಚಿಮವು ಅದರ ಕಾರ್ಯಗಳ ಪ್ರದರ್ಶನದಲ್ಲಿ ಮಾತ್ರ ಆಸಕ್ತವಾಗಿತ್ತು. ತನ್ನ ಪ್ರಾಧಾನ್ಯತೆಯನ್ನು

ತೋರಿಸಿಬಿಡುವುದರಲ್ಲಿಯೇ ಅದಕ್ಕೆ ಹೆಚ್ಚು ಆಸಕ್ತಿ ಇತ್ತು. ಪಶ್ಚಿಮದ ಅಭಿಪ್ರಾಯವು,ತಪ್ಪಿಲ್ಲದೆ,ಮನುಷ್ಯನು ತಾನು ಏನು ಆಗಬೇಕೆಂದಿರುವನೋ ಅದುವೇ ಆಗುವನು. ತಿಳಿದುಕೊಳ್ಳಬೇಕೆಂದರೆ, ವಾದ ನಡೆದಂತೆ, ಆಚೆಯಿರುವ ಶಕ್ತಿಗಳು, ಸೃಷ್ಟಿಕರ್ತ ಬ್ರಹ್ಮ ಮತ್ತು ಚಿರವ್ಯಾಪ್ತಿಯಾದ ಆತ್ಮದ ಶಕ್ತಿಯ ಮುಂದೆ ಮನುಷ್ಯನ ಪ್ರಯತ್ನವು ಹೇಗಾದರೂ ಏನೂ ಇಲ್ಲ.

ಈ ಒಂದು ಖಚಿತವಾದ ತಿಳುವಳಿಕೆಯಿಂದ ಪಶ್ಚಿಮವು ಮನುಷ್ಯನ ದೇಹದ ಬಾಹ್ಯ ಬಲೆಗಳನ್ನು ಮಾತ್ರ ಶ್ರೀಮಂತಗೊಳಿಸಲು ಪ್ರಯತ್ನಿಸಿತು. ಬರಿಯ ಭೌತಿಕ ಅನುಕೂಲತೆಗಳನ್ನು ಮತ್ತು ಬಿಡುವಿನ ಜೀವನದಿಂದ ಆವರಿಸಿಕೊಂಡಿದ್ದ ಪಶ್ಚಿಮವು ಸಂಪೂರ್ಣ ದೇಹದ ವಿಜ್ಞಾನ ಹಾಗೆಯೇ ಶೋಧನೆಗಳ ಶ್ರೇಣಿಯನ್ನೇ ಅಸ್ತಿತ್ವಕ್ಕೆ ತಂದಿತು. ಈ ವ್ಯಾಯಾಮವು ಮನುಷ್ಯ ಮಾಂಸದ ಇಂದ್ರಿಯ ಸುಖದಕಡೆ ವಾಲುವಿಕೆಗೆ ಮಾತ್ರ ದಾರಿ ತೋರಿಸಿತು.

ಪಶ್ಚಿಮ ಆವರಣದ ಪರಿಣಾಮವು ಮನುಷ್ಯನ ವಿಸ್ತೀರ್ಣವಾದ ಚಿತ್ರಪಟವು ಅವಸರದಿಂದ ಜಾರುವಿಕೆಗೆ ದಾರಿಮಾಡಿದೆಯೆಂದು ಹೇಳಬೇಕಾಗಿಲ್ಲ. ಪಶ್ಚಿಮದ ಮನುಷ್ಯನು ಯಾವಾಗ ಇಕ್ಕಟ್ಟಾದ ಸಂಬಂಧದಲ್ಲಿ ಇಳಿದುದನ್ನು ತನ್ನಷ್ಟಕ್ಕೇ ನೋಡಿಕೊಂಡಾಗ, ಈಚೆಗೆ ಅಣಿಯಾಗಿ, ಬೇರೆಯವರ ಮೇಲೆ ಪ್ರಭಾವತೋರಲು ವರ್ಗಗಳನ್ನು ಒಪ್ಪಿಕೊಂಡು, ತನ್ನ ಸಾಮ್ರಾಜ್ಯದ ಚಕ್ರಾಧಿಪತ್ಯವನ್ನು ಹುಡುಕುವುದರಲ್ಲಿ ಮತ್ತು ವಿಸ್ತೀರ್ಣಗೊಳಿಸುವುದರಲ್ಲಿ ತನ್ನ ಅನ್ವೇಷಣೆಯನ್ನು ಈಡೇರಿಸಿಕೊಂಡಿನು. ಏನಾದರೂ,ಬೇಗನೇ, ಈ ಸಂಪೂರ್ಣ ವ್ಯಾಯಾಮದ ಪರಿಣಾಮವನ್ನು ಅರಿತುಕೊಳ್ಳಲು ಒಂದು ಒಳ್ಳೆಯಕಾರಣ ಇತ್ತು,ಇದ್ದೇ ಇತ್ತು—ಆ ನಡುವಳಿಕೆ ಅಲ್ಲದೆ ಆ ಉದ್ದೇಶ—ಸಂಪೂರ್ಣ ನಿಷ್ಪ್ರಯೋಜಕತೆಯಲ್ಲಿ ಕೊನೆಗೊಂಡಿತು. ಏಕೆಂದರೆ ಎಷ್ಟೇ ಸಾಮ್ರಾಜ್ಯಗಳನ್ನು ಹೊಂದಿದ್ದರೂ, ಪ್ರಾಪಂಚಿಕ ಹೆಗ್ಗಳಿಕೆಗಳಿಸುವ ಯುಕ್ತಿಗಳನ್ನು ವಿಸ್ತೀರ್ಣಗೊಳಿಸಿದರೂ ಆಧ್ಯಾತ್ಮಿಕ ಶಾಂತಿಯು ನುಸುಳಿಕೊಳ್ಳುತ್ತಲೇ ಇದೆ ಎಂದು ಅವನು ಕಂಡುಕೊಂಡನು.

ವಿಜ್ಞಾನದ ಎಲ್ಲೆಗಳನ್ನು ವಿಸ್ತಾರಗೊಳಿಸುವುದು ಯಾವುದೇ ತರಹದ ಆಧ್ಯಾತ್ಮಿಕ ಶಾಂತಿಯ ಭರವಸೆಕೊಡಲಿಲ್ಲ, ಮತ್ತು ಒಳಗಿನ ಪರಮ ಸುಖವನ್ನು ಪಡೆಯದೆ, ಬೇರೆಯಾವುದೇ ವಸ್ತುವನ್ನು ಬೆನ್ನಟ್ಟುವುದು ನಿಷ್ಪ್ರಯೋಜಕ. ಆ ದೊಡ್ಡ ಸಾಮ್ರಾಜ್ಯ ಆ ಸೇವಕರ ಸೈನ್ಯ ಆ ಅನುಕೂಲತೆಗಳು ಮತ್ತು ಐಶ್ವರ್ಯಗಳು—ಈ ಇಷ್ಟರಲ್ಲಿ ಪ್ರತಿಯೊಂದುವೂ ನಿರರ್ಥಕದ ವ್ಯಾಯಾಮ, ಶಾಂತಿಗಾಗಿ—ಆ ಶಾಂತಿ ಅದು ಪುರಾತನ ತಿಳುವಳಿಕೆ—ಇನ್ನೂ ದೂರದ ಗುರಿಗೆ ಹಿಂತೆಗೆದು ಕೊಂಡಿತು. ನಿಜವಾಗಿಯೂ ಓರ್ವ ವಿಜ್ಞಾನಗಳನ್ನು ಹೆಚ್ಚು ಹಿಮ್ಮೆಟ್ಟಿದ ಹಾಗೆಲ್ಲಾ ಓರ್ವನು ಒಳಗಿನ ಏಕಾಂತತೆಯ ಕೊರತೆಗೆ ಬಹಿರಂಗವಾದುದು ಕಂಡನು.

ಅಲ್ಲದೆ ಪಶ್ಚಿಮದ ಶೋಧನೆಯು ಕಂಡು ಹಿಡಿದಿರುವಂತಹ ಇನ್ನೂ ಒಂದು ಗಮನಾರ್ಹವಾದ ವೈಶಿಷ್ಟ್ಯವೆಂದರೆ ಭಾರತ ಸಮಾಜವು ಸ್ವಪೂರ್ಣತೆಯನ್ನು ಸಾಧಿಸಿರುವಂತಹ ಒಂದು ಪ್ರಜ್ಞೆ. ಪಶ್ಚಿಮದಿಂದ ಮನುಷ್ಯರು ಯಾವಾಗ ಭಾರತದ ಅರಣ್ಯದ ಕತ್ತಲಿನಲ್ಲಿ, ಗಾಢವಾದ ಎಲೆಗಳ ಗುಂಪಿನಲ್ಲಿ ಮುಂದುವರೆದು ಅಲ್ಲಿ ಅಲ್ಪವಾಗಿ ಆಚ್ಛಾದಿತವಾದ ಸಾಧುಗಳನ್ನು ನೋಡಿದರೋ, ಯಾರಲ್ಲಿ ನಿಜವಾಗಿಯೂ, ಭೌತಿಕ ಸ್ವಂತಿಕೆಗಳು ಏನೂ ಇರಲಿಲ್ಲ, ಸಂಪತ್ತಿನ ಬಗ್ಗೆ ಮಾತನಾಡುವ ಹಾಗಿಲ್ಲ, ಆದರೂ ಅವರದೇ ಆದ ತೇಜಸ್ಸಿನಿಂದ ಥಳಥಳಿಸುತ್ತಿದ್ದರು. ಘನವಾದ ಸ್ವ-ಸಂಪೂರ್ಣತೆಯನ್ನು ಮತ್ತು ಗಮನಾರ್ಹವಾದ ಸಾಧನೆಯನ್ನು ಕೊಡುವಂತಹ, ಕಟ್ಟಕಡೆಗೆ, ಅದು ಎಂತಹ ಶಕ್ತಿಯನ್ನು ಅವರು ಸಂಪಾದಿಸಿಕೊಂಡಿದ್ದಾರೆಂದು ಅವರು ಆಶ್ಚರ್ಯಗೊಂಡರು.

ಈ ಶೋಧವೇ ಪಶ್ಚಿಮದ ಗಮನವನ್ನು ಪೂರ್ವಕ್ಕೆ ತಿರುಗುವಹಾಗೆ ಮಾಡಿದ್ದು, ನಿರ್ದಿಷ್ಟವಾಗಿ ಭಾರತದ ಕಡೆಗೆ. ಪಶ್ಚಿಮದಿಂದ ಮನುಷ್ಯರು ಈ ದೇಶದಲ್ಲಿ ಬಂದು ಇಳಿದರು ತಮ್ಮ ಪಷ್ಟಕ್ಕೆ ತಾವೇ ಭಾರತಕ್ಕೆ ನಿಷ್ಚಿತವಾದ ಪೂರ್ಣತೆಯನ್ನು ಕೊಟ್ಟು ವಿಷಯಗಳಲ್ಲಿ ಮತ್ತು ಗುಪ್ತವಿದ್ಯೆಗಳಲ್ಲಿ ಆಳವಾಗಿ ಮುಳುಗಿ ಹೋದರು. ಅಲ್ಲದೆ ಅವರು, ಆ ಜನರು ಭೌತಿಕವರ್ಗಗಳಲ್ಲಿ ಶ್ರೀಮಂತವಲ್ಲದಿದ್ದರೂ ಭಾರತಕ್ಕೆ ಈ ಒಳಶಕ್ತಿಯನ್ನು ಕೊಟ್ಟ ಮತ್ತು ಸೌಶೀಲ್ಯ ದೇಶಗಳಲ್ಲಿ ಒಂದು ತಿರುಗಾಣೆಯ ಸ್ಥಾನವನ್ನು ಕೊಟ್ಟಂತಹ ಕಾರಣಗಳನ್ನು ಪರಿಶೋಧಿಸಿ ನೋಡತೊಡಗಿದರು.

ಈಗ, ಮೊದಲಬಾರಿಗೆ, ನಾಗರೀಕತೆಯ ತೋರ್ವಿಕೆಯ ಬಾಹ್ಯ ಬಲಗಳಿಂದ ಶಾಂತಿ ಮತ್ತು ಸ್ಥೈರ್ಯಗಳು ಚಿಗುರೊಡೆಯುವುದಿಲ್ಲವೆಂದು ಪ್ರಪಂಚದ ಇತರ ಭಾಗದ ಜನರಿಗೆ ಅರಿವಾಯಿತು. ಅತಿಕ್ರೌರ್ಯದ ಶಕ್ತಿಯ ಪ್ರಬಲವಾದ ಏಕಾಗ್ರತೆ ಯಾವುದೇ ಆಕಾರದಲ್ಲಿ ಹೇಗಾದರೂ ಇರಲಿ ಅದರಿಂದಲೂ ಓರ್ವನಿಗೆ ಏನೂ ಸಿಗುವುದಿಲ್ಲ. ಶಾಂತಿ ಮತ್ತು ಸ್ಥೈರ್ಯಗಳು ಕೂಡಿಕೊಳ್ಳುತ್ತವೆ, ಆದರೆ ಕೇವಲ ಅಗೋಚರವಾದ ಒಂದು ಪದ್ಧತಿಯ ಭಾಗದ ಅವಲೋಕನದಿಂದ, ಅದು ಎಂತಹುದೆಂದರೆ, ಮನುಷ್ಯನ ದೈಹಿಕ ಮತ್ತು ಆಧ್ಯಾತ್ಮಿಕ ಗಡಿಗಳನ್ನು ವಿಚಾರಿಸುವಂತಹ ಒಂದು ಗುರುತನ್ನು ಅವಶ್ಯವಾಗಿ ಒಳಗೊಂಡಿರಬೇಕು.

ಭಾರತದ, ಈ, ಮಹತ್ಕಾರ್ಯದ ಅವಲೋಕನದಿಂದ ಪಶ್ಚಿಮವು ಮೊದಲಬಾರಿಗೆ, ಸಮಯ ಮತ್ತು ಅವಕಾಶಗಳ ಎಲ್ಲೆಗಳನ್ನು ದಾಟಿಹೋಗುವಂತಹ ಮನುಷ್ಯದೇಹದ ಆಧಾರಭೂತವಾದ ರಚನೆ ಒಂದು ನಿರ್ಧಾರಕ ಮೂಲವಸ್ತು ಮನಸ್ಸು ಎಂದು ಕಂಡುಹಿಡಿಯಿತು. ಬೇರೆ ಪದಗಳಲ್ಲಿ, ನಿಜವಾಗಿಯೂ ಮನುಷ್ಯನು ಶ್ರೇಷ್ಠಶಕ್ತಿಗಳಿಂದ ಸಂಪನ್ನನಾಗಿರುವನು, ಈ ದೇಹ ರಚನೆ ಇದರಿಂದ ಆಳಲ್ಪಟ್ಟಿದೆ ಎಂದು ಅವನ ಮನಸ್ಸಿನಲ್ಲಿ ಇದ್ದಾಗ ಮಾತ್ರ ಅದನ್ನು ಆ ಅವಸ್ಥೆಗೆ ಹೋಲಿಸಬಹುದು.

ಈ ಒಂದು ಸದ್ಗುಣ ಶಕ್ತಿಯಿಂದ ಮನುಷ್ಯನು ನಗುವುದು, ಅಳುವುದು, ಅನುಭವಿಸುವುದು ಮತ್ತು ಆನಂದವನ್ನು ಸೂಚಿಸುವುದು, ವರ್ತಮಾನದಲ್ಲಿ ಸುಸ್ಥಾಪಿತವಾಗಿಯೇ ಇರದಂತಹ ವಿಚಾರಗಳಿಗೆ ಒಂದು ಆಕಾರವನ್ನು ಸಹ ಕೊಡುತ್ತಾನೆ. ಪಶ್ಚಿಮವು, ಯಾವುದು, ಆಧಾರಭೂತವಾಗಿ ಭೌತಿಕತ್ವದಲ್ಲಿ ನಂಬುತ್ತದೊ, ಎಲ್ಲಿ ಮತ್ತು ಮನುಷ್ಯನ ದೇಹದ ಯಾವಭಾಗದಲ್ಲಿ ಮೂಲವಸ್ತುವಾದ ಮನಸ್ಸು ಅಥವಾ ಗೋಜನ ಮನುಷ್ಯನ ಆತ್ಮವೆಂದಿರುವುದು ಬೇರೂರಿದೆ ಎಂದು ಅದರ ನೆಲೆಯನ್ನು ಗೊತ್ತುಮಾಡಲು ಅನ್ವೇಶಿಸಿತು. ಈ ಕಾರಣದಿಂದಲೇ ಪಶ್ಚಿಮದ ಪಂಡಿತರು ಅಂಗಶೋಧನೆಯ ವಿದ್ಯೆಯ ಮೇಲೆ ಭಾರವಾಗಿ ಎಳೆದುಕೊಂಡರು ಮತ್ತು ಬಾಹ್ಯರೂಪದಲ್ಲಿ ಮನಸ್ಸಿನ ನೆಲೆಸುವ ಸ್ಥಾನವನ್ನು ಅದರ ವಾಸದ ಜಾಗವನ್ನು ಗೊತ್ತು ಮಾಡಲು ಮನುಷ್ಯನ ದೇಹವನ್ನು ತುಂಡುತುಂಡಾಗಿ ಕತ್ತರಿಸಿದರು. ಈ ಪಂಡಿತರ ಉದ್ದೇಶವು ಮನಸ್ಸನ್ನು ಹಿಡಿದುಬಿಡಲು, ಅವರು ತಿಳಿದಿದ್ದೇನೆಂದರೆ ಒಮ್ಮೆ ಮನಸ್ಸನ್ನು ಹಿಡಿದುಬಿಟ್ಟರೆ ಅದನ್ನು ತ್ವರೆಯಾಗಿ ವೃದ್ಧಿ ಮಾಡಿ ಮತ್ತು ಮನಸ್ಸಿನ ಕತ್ತಲ ಏಕಾಂತವನ್ನು ಆಳವಾಗಿ ಅಗೆಯುವುದರಲ್ಲಿ ಯಶಸ್ವಿಯಾಗಬಹುದೆಂದು. ಹೇಗಾದರಾಗಲಿ ಎಲ್ಲಾ ಛೇದನ ಪರೀಕ್ಷೆಗಳ ನಂತರ ಮತ್ತು ಅನುಸಂಧಾನಗಳ ನಂತರವೂ ಅವರು ಮನಸ್ಸಿನ ನೆಲೆ ಗೊತ್ತುಮಾಡುವುದರಲ್ಲಿ ವಿಫಲಗೊಂಡರು. ಈಗ ಅಂತೂ ಒಂದು ಒಂಟಿ ತೊಡಕಾದ ಮನಸ್ಸಿನ ಅಥವಾ ಆತ್ಮದ ರೀತಿಯನ್ನು ಯಾವುದೇ ರೂಪದಲ್ಲಿ ಅಥವಾ ವಿಧಾನದಲ್ಲಿ ಇರುವುದನ್ನು ಗುರುತಿಸುವುದು ವಿಫಲವಾಯಿತು.

ಆದರೆ ಯಾವುದೇ ಪರಿಸ್ಥಿತಿಯಲ್ಲಿ ಪಶ್ಚಿಮವು ಮನುಷ್ಯನ ದೇಹದಲ್ಲಿ ಮನಸ್ಸು ಹಾಗೆಯೇ ಹುದುಗಿಕೊಂಡಿದೆ ಎನ್ನುವ ದೃಷ್ಟಿಯನ್ನು ಅವಶ್ಯವಾಗಿ ಒಪ್ಪಿಕೊಳ್ಳಲೇಬೇಕು ಎಂದನ್ನಿಸಿತು. ಏಕೆಂದರೆ

ಅದೇ ಮನಸ್ಸು ಅಥವಾ ಆತ್ಮವು ಮನುಷ್ಯ ದೇಹದ ನಿಯಮಿತ ಕಾರ್ಯವನ್ನು ಆಳುವುದು. ಸಂಪೂರ್ಣ ಮನುಷ್ಯದೇಹವು ಮನಸ್ಸಿನ ಆಜ್ಞಾಪನೆಗಳಿಗೆ ಗೌಣವಾಗಿತ್ತು. ಯಾವುದೇ ವಿಧದಲ್ಲಿ ಮನುಷ್ಯನನ್ನು ಅಳುವಹಾಗೆ ಮತ್ತು ನಗುವಹಾಗೆ ರೋಷಗೊಳ್ಳುವಹಾಗೆ ಮತ್ತು ಹರ್ಷಿಸುವಹಾಗೆ ಮತ್ತು ಈ ಬಗೆಬಗೆಯ ಸಾಮರ್ಥ್ಯಗಳನ್ನು ವೃದ್ಧಿಮಾಡಲು ಸಹಾಯಮಾಡುವುದು ಮನಸ್ಸೇ.

ಈ ಒಂದು ಅರಿವು ಸಿಕ್ಕಾಗಲೇ ಪಶ್ಚಿಮದ ಮನುಷ್ಯನು ಮೊದಲಬಾರಿಗೆ, ಮನಸ್ಸು ದೇವರಿಗೆ ಮಾತ್ರವೇ ಎರಡನೆಯದಾಗಿತ್ತು ಎನ್ನುವ ದೃಷ್ಟಿಗೆ ಸುತ್ತುವರಿದು ಮನಸ್ಸನ್ನು ಬದಲಾಯಿಸಿಕೊಂಡನು. ಅದಲ್ಲದೆ ಆ ಸತ್ಯದಿಂದ ಚಿಗುರೊಡೆಯುವ ಅದರ ವಿಚಿತ್ರವಾದ ಪ್ರಾಮುಖ್ಯತೆಯೆಂದರೆ ಆ ಮನಸ್ಸು ದೇವತ್ವವನ್ನು ಹೊಂದಲು ದಾರಿ ಮಾಡುತ್ತದೆ, ಜಟಿಲವಾಗಿರದ ಬೆರಗುಗೊಳಿಸುವಂತಹ ಗೂಢತ್ವಗಳ ಬಗ್ಗೆ ಮಾತನಾಡುವುದಲ್ಲ. ಈ ಎಲ್ಲಾ ಗೂಢತ್ವಗಳ ಮೂಲಸ್ಥಾನದ ಉಗಮಗಳನ್ನು ಮುಟ್ಟಲು ವಿಜ್ಞಾನವು ಶತಮಾನಗಳನ್ನೇ ತೆಗೆದುಕೊಳ್ಳಬಹುದು. ಇದಕ್ಕೆ ವಿರುದ್ಧವಾಗಿ ಭಾರತದ ಋಷಿಗಳು ಆಗಲೇ ಈ ಎಲ್ಲಾ ಗೂಢತ್ವಗಳನ್ನು ತೊಡಕಿಲ್ಲದ ಹಾಗೆ ಗಂಟುಗಳನ್ನು ಬಿಡಿಸಿ ಮತ್ತು ಜೀವನವನ್ನು ಎಷ್ಟು ಇದೆಯೋ ಅಷ್ಟು ಆರಾಮವಾಗಿ ಮಾಡುವಂತಹ ಅಂಶಗಳನ್ನು ಬಹಳವಾಗಿ ಗುರುತಿಸಿದ್ದಾರೆ.

ನಿಜವಾಗಿಯೂ ಮನಸ್ಸಿನ ಶಕ್ತಿಯಲ್ಲಿ ಸ್ವಾಭಾವಿಕವಾಗಿರುವ ಶಕ್ತಿಯು ಏನೆಂದರೆ ಅದು ಅಸಾಧ್ಯವಾಗಿ ಕಾಣುವಂತಹುದನ್ನು ಸಾಧ್ಯಮಾಡುತ್ತದೆ. ಅದರ ವೇಗಕ್ಕೆ ಅಪ್ರತಿದ್ವಂದಿತ್ವ, ಅದರಲ್ಲಿ ಅದು ಸಮಯ ಮತ್ತು ಅಂತರಗಳ ಎಲ್ಲಾ ಅಡೆತಡೆಗಳನ್ನು ದಾಟಿಸುತ್ತದೆ.

ಋಷಿಗಳು ಮತ್ತು ದೇವಮನುಷ್ಯರು ಮನಸ್ಸು ಅಥವಾ ಚೇತನ ಎಂಬ ಮೂಲ ವಸ್ತುವನ್ನು ಪ್ರಯತ್ನಿಸಿ ಪರಿಶೋಧಿಸಿದ ಹಾಗೆಲ್ಲಾ ಮನಸ್ಸು ಎರಡು ಭಾಗಗಳನ್ನು ಹೊಂದಿದೆ—ಬಹಿರ್ಮನಸ್ಸು ಮತ್ತು ಅಂತರ್ಮನಸ್ಸು ಎಂದು ಕಂಡುಹಿಡಿಯಲು ಆಹ್ಲಾದಕರವಾದ ಆಶ್ಚರ್ಯವಾಗಿತ್ತು.

ಬಾಹ್ಯ ಪ್ರಪಂಚದ ದೈಹಿಕ ತೋರಿಕೆಗಳಿಗೆ ನಮ್ಮ ಪ್ರತಿಕ್ರಿಯೆಯನ್ನು ಪ್ರತಿ ನಿಮಿಷ ಬಾಹ್ಯ ಮನಸ್ಸು ನೋಡುತ್ತದೆ ಮತ್ತು ದಾಖಲಿಸುತ್ತದೆ. ಕೆಲಸಮಯದಲ್ಲಿ ಅದು ನಿರಾಸಕ್ತಿಯಕಡೆ ನಡೆದಾಗ ಉದಾ.ಮನುಷ್ಯ ನಿದ್ರೆ ಹೋದಾಗ ಬಾಹ್ಯ ಮನಸ್ಸಿಗೆ ಯಾವುದೇ ನಿರ್ದಿಷ್ಟ ಕೆಲಸವಿರುವುದಿಲ್ಲ. ಕಣ್ಣುಮುಚ್ಚಿಕೊಂಡು ನಿದ್ದೆ ಹೋದಾಗ ಬಾಹ್ಯ ಮನಸ್ಸು ಹೊರಗಿನ ಬಾಹ್ಯ ಪ್ರಪಂಚಕ್ಕೆ ಬಹಿರಂಗವಾಗಿರುವುದಿಲ್ಲ ಎಂದು ಹೇಳಬೇಕಾಗಿಲ್ಲ.

ಕೆಲಸಮಯದಲ್ಲಿ ಬಾಹ್ಯಮನಸ್ಸು ನಿರಾಸಕ್ತಿಯ ಕಡೆ ನಡೆದಾಗ ಸುಪ್ತಮನಸ್ಸು ತೀವ್ರವಾದ ಚಟುವಟಿಕೆಯ ಕಡೆ ಚಿಗುರೊಡೆಯುತ್ತದೆ. ಚುರುಕಾದ ಕಾರಣ ಅದು ಅರಿವಿನ ಹೆಚ್ಚಿನ ಸಮತಲವನ್ನು ಮುಟ್ಟಿ ಹಿಂದೆಂದೂ ನೋಡದಂತಹ ಅದ್ಭುತಗಳನ್ನು ನೋಡಲಿಚ್ಛಿಸುತ್ತದೆ. ಇಲ್ಲ ಎನ್ನುವುದಕ್ಕಿಂತ ಆಗಾಗ ಹಿಂದೆಂದೂ ನಡೆಯದಂತಹ ಘಟನೆ ಮತ್ತು ಅದ್ಭುತಗಳನ್ನೂ ಅದು ನೋಡುತ್ತದೆ. ಇಂತಹ ಅವಸ್ಥೆಗೆ ಕನಸು ಎಂದು ಕರೆಯಲಾಗಿದೆ.

ಈ ಪ್ರಕಾರವಾಗಿ ಮನುಷ್ಯನು ತನ್ನ ಸುಪ್ತ ಮನಸ್ಸಿನ ಮೂಲಕ ತನ್ನ ಭವಿಷ್ಯ ಸಂಗತಿಗಳನ್ನು ನೋಡುತ್ತಾನೆ. ಸುಪ್ತಮನಸ್ಸಿಗೆ ಅವಶ್ಯವಾಗಿ ಹಿಂದೆ ಹೋಗಿ ಭೂತಕಾಲವನ್ನು ನೋಡಲು ಅಥವಾ ಹನಿಕಿ ಹಾಕಿ ಭವಿಷ್ಯವನ್ನು ನೋಡಲು ಯಾವುದೇ ಕಷ್ಟವಾಗುವುದಿಲ್ಲ. ಕೆಲಸಮಯಗಳಲ್ಲಿ ಅವನು ಹಿಂದೆಂದೂ ಘಟಿಸದಂತಹ ವಿಷಯಗಳನ್ನು ನೋಡುತ್ತಾನೆ. ಹೇಗಾದರೂ, ಯಾವಾಗ, ಭವಿಷ್ಯದ ಒಂದು ನಿರ್ದಿಷ್ಟಕಾಲದಲ್ಲಿ ಅದೇ ಕನಸಿನ ಕ್ರಮಾನುಗತಿ ನಿಜಜೀವನದಲ್ಲಿ ವಾಸ್ತವಿಕತೆಗೆ ಬಂದಾಗ ಅವನ ಆಶ್ಚರ್ಯಕ್ಕೆ ಕೊನೆಯೇ ಇಲ್ಲ.

ಒಮ್ಮೆ ಯು.ಎಸ್.ಅಧ್ಯಕ್ಷ ಅಬ್ರಾಹಂ ಲಿಂಖನ್‌ನು ತನ್ನ ಕನಸಿನಲ್ಲಿ ತಾನು ಕೊಲೆಯಾದುದನ್ನು ಮತ್ತು ತನ್ನ ಶವವು ವೈಟ್ ಹೌಸ್‌ನಲ್ಲಿ ಬಿದ್ದುದನ್ನು ಕಂಡನು. ಆ ಶವವು ಒಂದು ಬಿಳಿಯ ಬಟ್ಟೆಯ ತುಂಡಿನಿಂದ ಮುಚ್ಚಲ್ಪಟ್ಟಿತ್ತು ಮತ್ತು ಆತನ ಹೆಂಡತಿ ಮತ್ತು ಆತನ ಸಂಸಾರದ ಸದಸ್ಯರು ಆ ಸಾವಿಗೆ ದುಃಖಿಸುತ್ತಿದ್ದರು. ಆ ಕನಸಿನಲ್ಲಿ ಅವನು ಕೊಲೆಗಾರನನ್ನು ನೋಡಿದ್ದನು. ವೈಟ್ ಹೌಸ್‌ನ ಒಂದು ನಿರ್ದಿಷ್ಟ ಜಾಗದಲ್ಲಿ ನಿಂತು ಮತ್ತು ತನ್ನನ್ನು ಅಂದರೆ ಲಿಂಕನ್‌ನನ್ನು ಕೊಲೆಮಾಡಲು ಮುಂದುವರಿದುದು ಮತ್ತು ತಾನು ಆ ಕೂಡಲೇ ಸತ್ತುಹೋದದ್ದು ಅವನು ಬರೆದಿಟ್ಟುಕೊಂಡಿದ್ದನು.

ಆ ಘೋರ ಕನಸು ಅವನನ್ನು ನಿದ್ರೆಯಿಂದ ಎಚ್ಚರಿಸಿತು. ಅವನು ತನ್ನ ದೇಹವು ಸಂಪೂರ್ಣವಾಗಿ ಬೆವರಿದ್ದನ್ನು ಕಂಡುಕೊಂಡನು. ಏನೇ ಆದರೂ ಕನಸಿನ ಪ್ರತಿ ನಿಮಿಷದ ಕ್ರಮವನ್ನು ತನ್ನ ವೈಯಕ್ತಿಕ ದಿನಚರಿಯಲ್ಲಿ ಲಕ್ಷ್ಯವಹಿಸಿ ಬರೆದಿಟ್ಟುಕೊಂಡನು. ಈ ಭಯಂಕರ ಕನಸಿನ ವಿವರಗಳನ್ನು ತನ್ನ ಹೆಂಡತಿಗೆ ತಿಳಿಸಲು ಮರೆಯಲಿಲ್ಲ. ಅವಳಿಗೆ ಕನಸಿನ ಕೊಲೆಯ ತಾರೀಖು ಮತ್ತು ಸಮಯವನ್ನು ಕೊಟ್ಟನು.

ಲಿಂಕನ್‌ನು ಕನಸಿನಲ್ಲಿ ಕಂಡಂತೆಯೇ ಅದೇ ತಾರೀಖು, ಅದೇ ಜಾಗ ಮತ್ತು ಅದೇ ಸಮಯದಲ್ಲಿ ಕೊಲೆಯಾದುದು ನಿಜವಾಗಿಯೂ ಬೆರಗು ಗೊಳಿಸುವಂತಹುದು.

ಕನಸುಗಳು ಭವಿಷ್ಯದ ಒಂದು ನಿರ್ದಿಷ್ಟಕಾಲದಲ್ಲಿ ನಿಜವಾಗುವುದು ಬಹಳ ಜನಗಳ ಅನುಭವವಾಗಿದೆ. ಇದು ಯಾವುದೇ ಕಾರಣಕ್ಕೆ ಹೊರಮನಸ್ಸು ನಿಶ್ಚಲವಾಗಿದ್ದಾಗ ಸುಪ್ತಮನಸ್ಸಿನ ಕಾರ್ಯ, ಅದು ಆಸಕ್ತಿಯುತವಾಗಿ ಹೊರನೋಟಕ್ಕೆ ಬಂದು ನಡೆಸುವ ಕಾರ್ಯವಲ್ಲದೆ ಬೇರೇನೂ ಅಲ್ಲ, ಮತ್ತು ಆಚೆಯ ಭವಿಷ್ಯವನ್ನು ನೋಡುತ್ತದೆ. ತಪ್ಪಿಲ್ಲದೆಯೇ ಸುಪ್ತ ಮನಸ್ಸು ಭವಿಷ್ಯದಲ್ಲಿ ಹಣಿಕಿ ಹಾಕಿ ನೋಡುವ ಸಾಮರ್ಥ್ಯವುಳ್ಳದ್ದು ಎಂದು ಇದು ಸೂಚಿಸುತ್ತದೆ. ಹೇಗಾದರೂ, ನಮಗೆ ಸುಪ್ತಮನಸ್ಸಿನ ಮೇಲೆ ಸಂಪೂರ್ಣ ಹತೋಟಿ ಇಲ್ಲದ ಕಾರಣ ನಾವು ಯಾವಾಗಲೂ ಕನಸುಗಳಲ್ಲಿ ನಮಗೆ ಕೊಟ್ಟ ಸಮಯದ ಸಂದರ್ಭಗಳನ್ನೇ ನೋಡಲಾಗುವುದಿಲ್ಲ. ಉದಾ.ನಾವು ಯಾರದದಾದರೂ ಸಾವಿನ ಜಾಗ, ತಾರೀಖು ಮತ್ತು ರೀತಿಗಳನ್ನು ಕಂಡು ಕೊಳ್ಳಬೇಕಾದರೆ ಸುಪ್ತ ಮನಸ್ಸನ್ನು ಸಂಪೂರ್ಣ ಹತೋಟಿಗೆ ತೆಗೆದುಕೊಂಡಾಗ ಮಾತ್ರ ನಾವು ಅದು ಆಗುವುದಕ್ಕಿಂತ ಬಹಳ ಮುಂಚಿತವಾಗಿಯೇ ನೋಡಬಹುದು.

ಈ ಒಂದು ಒಳದೃಷ್ಟಿಗಳು ಸಿಕ್ಕಾಗ ಮಾತ್ರ ಪಾಶ್ಚಾತ್ಯ ಮನಃಶಾಸ್ತ್ರಜ್ಞರು ಸೂಕ್ಷ್ಮಪ್ರಜ್ಞೆಯಲ್ಲಿ ಇನ್ನೂ ಆಳವಾಗಿ ಶೋಧಿಸಲು ಆಶ್ಚರೂಢರಾದರು. ಹಿಪ್ನಾಟಿಸಂ ಅಥವಾ ಮಸ್ಮೆರಿಜಂ ಈ ಒಂದು ಪ್ರಕೃತಿಯ ಸತ್ಯಾಂಶಗಳಿಗೆ ಸಂಬಂಧಿಸಿದ ನಿಯಮಗಳನ್ನು ಶೋಧಿಸುತ್ತದೆ.

ಆ ಪ್ರಕಾರವಾಗಿ ಮನಸ್ಸಿಗೆ ಎರಡು ಅಸ್ತಿತ್ವಗಳುಂಟು ಎಂದು ಅವರು ಕಂಡರು—ಬಾಹ್ಯಮನಸ್ಸು ಮತ್ತು ಸುಪ್ತ ಮನಸ್ಸು. ಬಾಹ್ಯಮನಸ್ಸು ಹೆಚ್ಚು ಚೇತನವುಳ್ಳದ್ದು ಮತ್ತು ಮನುಷ್ಯ ಏನನ್ನು ಮಾಡಿದ್ದು ಮತ್ತು ನೋಡಿದ್ದು ಅದು ದಾಖಲಿಸಿಕೊಳ್ಳುತ್ತದೆ, ಅದಕ್ಕೆ ಜ್ಞಾಪಕ ಎಂದೂ ಕರೆಯಲಾಗಿದೆ. ಈ ಒಂದು ಸದ್ಗುಣ ಸಾಮರ್ಥ್ಯದಿಂದಲೇ ಒಬ್ಬ ದೀರ್ಘವಾದ ಭೂತಕಾಲಕ್ಕೆ ರವಾನವಾಗಿರುವುದನ್ನು ಜ್ಞಾಪಿಸಿಕೊಳ್ಳುವುದು.

ಉದಾಹರಣೆಗೆ, ತಾನು ಯಾವಾಗ ಮದುವೆಯಾದನು ಎಂದು ಜ್ಞಾಪಕವಿರುತ್ತದೆ—ಮತ್ತು ಯಾರೊಡನೆ ತಾನು ಮದುವೆಯಾದ ಮತ್ತು ಯಾರ್ಯಾರು ಮದುವೆಯಲ್ಲಿ ಹಾಜರಿದ್ದರು. ಮದುವೆಯ ಸಂದರ್ಭದಲ್ಲಿ ಆತನ ಬಾಹ್ಯ ಮನಸ್ಸು ಚೇತನಯುಕ್ತವಾಗಿ ಸಂದರ್ಭವನ್ನು ದಾಖಲಿಸಿತು, ಈ ದಾಖಲೆ ಬಹಳ ವರ್ಷಗಳವರೆಗೆ ಉಳಿಯುತ್ತದೆ, ಮತ್ತು ಯಾವಾಗಲಾದರೂ ಭೂತಕಾಲದ ಸಂದರ್ಭವನ್ನು ಸ್ಮರಿಸಿಕೊಳ್ಳಬೇಕೆಂದುಕೊಂಡಾಗ ಅದನ್ನು ಜ್ಞಾಪಿಸಿಕೊಳ್ಳುತ್ತಾನೆ.

ಯಾವುದೇ ವಿಷಯದಲ್ಲಿ ಬಾಹ್ಯ ಮನಸ್ಸು ವರ್ತಮಾನದ ಕ್ಷಣಗಳನ್ನು ಮಾತ್ರ ದಾಖಲಿಸುತ್ತದೆ. ಅದಕ್ಕೆ ಭೂತಕಾಲಕ್ಕೆ ಹೋಗಲು ಅಥವಾ ಭವಿಷ್ಯವನ್ನು ಹಣಿಕಿ ಹಾಕಿ ನೋಡಲು ಸಾಮರ್ಥ್ಯವಿರುವುದಿಲ್ಲ.

ಸುಪ್ತಮನಸ್ಸನ್ನು ವೃದ್ಧಿಗೊಳಿಸಿದರೆ ಮಾತ್ರ ಒಬ್ಬ ತಾನು ಹಂಬಲಿಸುವಂತಹ ಯಶಸ್ಸನ್ನು ಪಡೆದುಕೊಳ್ಳಬಹುದು. ಅದಕ್ಕಾಗಿಯೇ ಸುಪ್ತ ಮನಸ್ಸನ್ನು ಶಕ್ತಿಯುತವಾಗಿ ಮತ್ತು ಆರೋಗ್ಯಕರವಾಗಿ ಮಾಡುವ ಅವಶ್ಯಕತೆ ಇದೆ ಇದರಿಂದ ಅದು ಹೆಚ್ಚಿನ ವೇಗದಲ್ಲಿ ಕೆಲಸ ಮಾಡುತ್ತದೆ. ಹಾಗೆ ಮಾಡಿದಲ್ಲಿ ಅದರಿಂದ ತಾನು ಒಪ್ಪಿಸುವಂತಹ ಕೆಲಸಗಳನ್ನು ಮಾಡಿಸಿಕೊಳ್ಳಬಹುದು ಅಥವಾ ತಾನು ನೋಡಬಯಸುವ ದೃಶ್ಯಗಳನ್ನು ತೋರಿಸಬಹುದು.

ಮನಸ್ಸು ವೈವಿಧ್ಯಮಯ ಕಲ್ಪನೆಗಳನ್ನು ಸೃಷ್ಟಿಸುತ್ತದೆ. ಆಧಾರ ಭೂತವಾಗಿ ಮನುಷ್ಯನು ಆಸೆಗಳಿಗೆ ದಾಸನಾಗಿರುವುದರಿಂದ, ಬಹಳ ತರಹದ ಆಸೆಗಳು ಅವನ ಸುತ್ತಲೂ ಕಿಕ್ಕಿರಿದಿವೆ. ಈ ಆಸೆಗಳನ್ನು ಪೂರ್ಣೈಸಲು ಅವನು ಬಹಳ ಕಷ್ಟ ಪಡುತ್ತಾನೆ. ಕಲ್ಪಿಸಿ, ತಾನು ಒಂದು ಮನೆಕಟ್ಟಬೇಕು, ಈ ಕಾರ್ಯಕ್ಕಾಗಿ ಆತನಿಗೆ ಹಣ ಬೇಕಾಗುತ್ತದೆ, ಇದರಿಂದ ಅದು ನ್ಯಾಯವಾಗಿಯೋ ಅಕ್ರಮವಾಗಿಯೋ ಅವನನ್ನು ಸತತವಾಗಿ ಪ್ರಯಾಸದಲ್ಲಿ ತೊಡಗಿಸುತ್ತದೆ.

ಒಂದೇ ಆಸೆಯು ಬಹಳ ಗೌಣ ಆಸೆಗಳಿಗೆ ಎಡೆಮಾಡುತ್ತದೆ. ಉದಾ.ಒಂದು ಮನೆ ಕಟ್ಟುವುದಾಗಿರುತ್ತದೆ. ಅದು ಬೇರೆ ಕೆಳಗಿನ ಬಹಳಷ್ಟು ಆಸೆಗಳಿಗೆ ಎಡೆಮಾಡಿಬಿಡುತ್ತದೆ. ಹಣವನ್ನು ಶೇಖರಿಸಿ ಮತ್ತು ತೆಗೆದಿಡುವುದು, ಸೂಕ್ತ ಭದ್ರತೆಗಳನ್ನು ಒಳಪಡಿಸಿ, ಮತ್ತು ಇತ್ಯಾದಿ ಇತ್ಯಾದಿ. ಆಸೆಗಳು ಮನುಷ್ಯನನ್ನು ಎಲ್ಲಾ ತರಹದ ಚಟುವಟಿಕೆಗಳಿಗೆ ಒಳಪಡಿಸುತ್ತದೆ. ಕೆಲವೊಂದು ಆಸೆಗಳು ಪೂರ್ಣಗೊಳ್ಳುತ್ತವೆ, ಕೆಲವು ಇಲ್ಲ. ಪೂರ್ಣಗೊಂಡ ಆಸೆಗಳು ಅವನನ್ನು ಸಂತೋಷಿಸುತ್ತವೆ, ಪೂರ್ಣಗೊಳ್ಳದಿರುವವು ಅವನನ್ನು ಹುಚ್ಚನನ್ನಾಗಿಸುತ್ತವೆ.

ಯಾವಾಗ ಮನಸ್ಸು ಎಲ್ಲಾ ತರಹದ ಆಸೆಗಳಿಂದ ಗೊಂದಲಮಯವಾಗುತ್ತದೋ, ಮನುಷ್ಯನು ಪ್ರತಿ ಆಸೆಯನ್ನು ಹತಾಶನಾಗಿ ಅದರ ಗುರಿಯ ಕಡೆ ಮುನ್ನುಗ್ಗಿಸುತ್ತಾನೆ. ಪರಿಣಾಮವಾಗಿ ಕೆಲವುಸಾರಿ ಆತನ ಪ್ರಯತ್ನವು ತುಂಡಾಗಿ ಆತನ ಶಕ್ತಿ ಮತ್ತು ಸಾಮರ್ಥ್ಯ ವಿಫಲವಾಗುತ್ತದೆ. ಸುಪ್ತಮನಸ್ಸು ತನ್ನ ವೇಗವನ್ನು ಕಳೆದುಕೊಳ್ಳುತ್ತದೆ ಮತ್ತು ಮನುಷ್ಯನು ಆ ಸುಪ್ತಮನಸ್ಸಿನ ಮೇಲೆ ಹತೋಟಿಯನ್ನು ಕಳೆದು ಕೊಳ್ಳುತ್ತಾನೆ.

ವಿಜ್ಞಾನಿಗಳು ಇದಕ್ಕೆ ಒಂದು ದಾರಿಯನ್ನು ಹುಡುಕಿದರು. ಅವರು ಬಯಕೆಗಳ ಸಂಖ್ಯೆಯಮೇಲೆ ತೀವ್ರವಾದ ತಗ್ಗುವಿಕೆಯನ್ನು ಶಿಫಾರಸು ಮಾಡಿದರು. ಇದು ಮನಸ್ಸಿನ ಮೇಲೆ ಶೇಖರಿಸುವಂತಹ ಒತ್ತಡವನ್ನು ಅನುರೂಪವಾಗಿ ತಗ್ಗಿಸುವುದು ಎಂದು ಅವರು ವಾದಿಸಿದರು. ಆ ಶಕ್ತಿಯ ಮೇಲೆ ಆಕ್ರಮಣ ಮಾಡಿ ಚಿಗುರೊಡೆಸುವುದು, ಅದು ಮನಸ್ಸಿನ ಕಾರ್ಯಗಳನ್ನು ಹೆಚ್ಚು ಪರಿಣಾಮವಾಗಿ ಮಾಡುವಹಾಗೆ ಭರವಸೆಯನ್ನೀಯುತ್ತದೆ. ಈ ಒಂದು ಸಂಗತಿಯಲ್ಲಿ ಮನಸ್ಸು ತನ್ನ ಭವಿಷ್ಯವನ್ನು ಹಣಿಕಿಹಾಕಿ ನೋಡುವುದಲ್ಲದೆ ಬೇರೆಯವರ ಭವಿಷ್ಯವನ್ನೂ ನೋಡುತ್ತದೆ.

ಈ ಒಂದು ಅವಸ್ಥೆಯನ್ನು ವಿಮರ್ಶಿಸಲು ಭಾರತದ ಮುನಿಗಳು ಒಂದು ಶೈಲಿಯನ್ನು ಉಪಯೋಗಿಸಿದ್ದಾರೆ—ಕಲ್ಪನೆಗಳಿಂದ ಮುಕ್ತವಾದ ಮನಸ್ಸು. ಒಂದು ನಿದರ್ಶನಕ್ಕೆ, ಎಲ್ಲಾ ಆಸೆಗಳನ್ನು ಮತ್ತು ಕಲ್ಪನೆಗಳನ್ನು ನಮ್ಮ ಮನಸ್ಸಿನಿಂದ ದೂರ ತಳ್ಳಿಬಿಡೋಣ. ಕಲ್ಪನೆ ಮತ್ತು ಆಸೆರಹಿತ ಮನಸ್ಸು ಗುಣಾತಗ್ಗದ ಮನಸ್ಸು. ಇಂತಹ ಒಂದು ಕುಶಲತೆಯ ಮನಸ್ಸೇ ನಮ್ಮ ಆಸೆಯ

ಪೂರ್ಣತೆಯನ್ನು ಗಳಿಸುತ್ತದೆ. ಏಕೆಂದರೆ ಬೇರ್ಪಡಿಸುವಂತಹ ಯಾವುದೇ ಬೇರೆ ಪೈಪೋಟಿ ಮಾಡುವಂತಹ ಬಯಕೆ ಇರುವುದಿಲ್ಲ. ಉದಾ.ಈ ಗುಣತಗ್ಗದ ಮನಸ್ಸಿಗೆ ನಾವು ಕೇಳಿದರೆ, ನಮ್ಮ ಮುಂಬರುವ ಹತ್ತು ದಿನದಲ್ಲಿ ಏನೇನು ತುಂಬಿದೆ ಎಂದು, ಅದು ತಪ್ಪದಯೇ ನಮ್ಮ ಕಣ್ಣ ಮುಂದೆ ಮುಂಬರುವ ಹತ್ತುದಿನದಲ್ಲಿ ಆಗಬಹುದಾದಂತಹ ವಿಷಯಗಳನ್ನು ತೋರಿಸುತ್ತದೆ. ಹೀಗೆ ಅದು ಮಾಡಲು ಕಾರಣ ಅದು ಯಾವುದೇ ತರಹದ ಬಯಕೆಗಳು ಅಥವಾ ಕಲ್ಪನೆಗಳಿಂದ ಗೊಂದಲಮಯವಾಗಿಲ್ಲ. ಆಚೆ ಅದು ತನ್ನ ವೇಗವನ್ನೂ ಕಳೆದುಕೊಂಡಿಲ್ಲ. ಈಚೆ ತನ್ನ ಶಕ್ತಿಯನ್ನೂ ಪೋಲಾಗಿ ಖರ್ಚು ಮಾಡಿಲ್ಲ. ನಾವು ಸೂಚಿಸಿದ ಹಾಗೆ ಪ್ರತಿಕ್ರಿಯಿಸುತ್ತದೆ.

ಮನಸ್ಸನ್ನು ಶುದ್ಧ ಮಾಡುವುದು ಅಷ್ಟು ಸುಲಭದ ಕೆಲಸವಲ್ಲ. ಕೆಲ ಪದ್ಧತಿ ಮತ್ತು ಕ್ರಿಯೆಗಳನ್ನು ಅದು ಒಳಗೊಂಡಿದೆ. ಈ ಒಂದು ಮಾಧ್ಯಮದಿಂದ ಮಾತ್ರ ಓರ್ವನು ವಿಚಾರಗಳು ಮತ್ತು ಆಸೆಗಳಿಂದ ಸ್ವತಂತ್ರವಾದ ಮನಸ್ಸನ್ನು ಪಡೆಯಬಲ್ಲನು.

ಮೊಟ್ಟಮೊದಲಿಗೆ ನಮಗೆ ಸ್ವಲ್ಪವೇ ಆದ ಕನಿಷ್ಠ ಆಸೆಗಳಿರಬೇಕು. ಅಲ್ಲದೆ ನಮ್ಮ ಜೀವನದ ರೀತಿ ಆಡಂಬರವಲ್ಲದ ಸರಳವಾಗಿರಬೇಕು.

ಎರಡನೆಯದಾಗಿ ನಮ್ಮ ಗಮನವನ್ನು ಸುಪ್ತಮನಸ್ಸಿನಮೇಲೆ ಕೇಂದ್ರೀಕರಿಸಬೇಕು. ಶಾಂತವಾಗಿ ಧ್ಯಾನದಲ್ಲಿ ಒಂದು ನಿಶ್ಶಬ್ದ ಸ್ಥಳದಲ್ಲಿ ಕೂತುಕೊಳ್ಳಬೇಕು. ಕಣ್ಣುಮುಚ್ಚಿಕೊಂಡು ನಮ್ಮ ಸಂಪೂರ್ಣ ತನುವನ್ನು ಅಂತರಂಗವಾಗಿಸಬೇಕು. ಬಾಹ್ಯ ವಾತಾವರಣದಿಂದ ನಮ್ಮನ್ನು ನಾವೇ ಪ್ರತ್ಯೇಕಿಸಿಕೊಳ್ಳಬೇಕು. ನಾವು ಹಾಗೆ ಮಾಡಿದ ಹಾಗೆಲ್ಲಾ ನಮ್ಮ ಸುಪ್ತಮನಸ್ಸಿನ ಆಳವಾದ ಏಕಾಂತಕ್ಕೆ ಇಳಿಯುತ್ತೇವೆ. ಅದು ನಮಗೆ ಒಳ ಬೆಳಕನ್ನು ಕೊಡುತ್ತದೆ ಮತ್ತು ನಮ್ಮ ಒಳವ್ಯಕ್ತಿತ್ವದ ಪ್ರಕಾಶಕ್ಕೆ ಬಾರದಂತಹ ವಿಷಯಗಳನ್ನು ನೋಡುತ್ತೇವೆ. ಪ್ರಾರಂಭದಲ್ಲಿ ಇದು ವ್ಯರ್ಥ ವ್ಯಾಯಾಮವೆಂದೆನಿಸುತ್ತದೆ, ನಿಧಾನವಾಗಿ ನಾವು ಈ ಕಷ್ಟವನ್ನು ದಾಟುತ್ತೇವೆ. ನಾವು ಏಕಾಗ್ರತೆಯನ್ನು ಒಂದು ವಸ್ತುವಿನಮೇಲೆ ಪಡೆದುಕೊಳ್ಳುವುದರಲ್ಲಿ ಯಶಸ್ವಿಯಾಗುತ್ತೇವೆ.

*ತ್ರಾಟಕ* ವು ಧ್ಯಾನದಲ್ಲಿ ಸಂಪೂರ್ಣ ಏಕಾಗ್ರತೆಯನ್ನು ಸಾಧಿಸಲು ಒಂದೇ ಸರಳ ಪದ್ಧತಿಯಾಗಿದೆ. ಪ್ರಧಾನ ಏಕಾಗ್ರತೆಯ ಭರವಸೆಯನ್ನು ಅದು ಕೊಡುತ್ತದೆ. ಎಲ್ಲಾ ವಿಚಾರಗಳು ಮತ್ತು ಆಸೆಗಳನ್ನು ದೂರಮಾಡಿ ನಾವು ಆಳವಾದ ಧ್ಯಾನದಲ್ಲಿ ಹೋಗುತ್ತೇವೆ. ಈ ವಿಧಾನದಲ್ಲಿ ಮಾನಸಿಕ ಚಟುವಟಿಕೆಯು ತ್ರಾಟಕದ ಒಂದೇ ಸ್ಥಾನದಲ್ಲಿ ಏಕೀಕೃತವಾಗುತ್ತದೆ ಇದರಿಂದ ನಮ್ಮ ಮನಸ್ಸು ವಿಚಾರ ಮತ್ತು ಆಸೆಗಳಿಂದ ಸ್ವತಂತ್ರವಾಗುತ್ತದೆ.

ನಿಜ, ನಾನು ವಿದೇಶಭೂಮಿಯಲ್ಲಿ ಹುಟ್ಟಿಬೆಳೆದಿದ್ದೆ ಆದರೆ ಆಧಾರಭೂತವಾಗಿ ನಾನು ಭಾರತೀಯನೆಂದೇ ಲೆಕ್ಕಕ್ಕೆ ತೆಗೆದುಕೊಳ್ಳುವೆ. ನಾನು ಹುಟ್ಟಿದಾಗಿನಿಂದಲೂ ಭಾರತಕ್ಕಾಗಿ ಹಂಬಲಿಸುತ್ತಿದ್ದೆ, ಭಾರತದಲ್ಲಿಯೇ ಇರಬೇಕೆಂದಿದ್ದೆ. ಎಲ್ಲದಕ್ಕಿಂತಲೂ ಹೆಚ್ಚಾಗಿ ಭಾರತದ ಆಳವಾದ ಜ್ಞಾನದಲ್ಲಿ ಮತ್ತು ಪಿತ್ರಾರ್ಜಿತ ಕೊನೆಯಿಲ್ಲದ ಆಧ್ಯಾತ್ಮಿಕತೆಯಲ್ಲಿ ಭಾಗವಹಿಸಬೇಕೆಂದಿದ್ದೆ.

'ಒಂದು ದಿನ ನಾನು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕನ ಕೆಲಸದಲ್ಲಿದ್ದುದನ್ನು ಕಂಡುಕೊಂಡೆ. ಅಂದುಕೊಳ್ಳದೆಯೇ ನನಗೆ ಸನ್ಮಾನಗಳು ಒದಗಿದವು. ನನ್ನ ಕೆಲಸ ಎಲ್ಲಕಡೆಯಿಂದಲೂ ಪ್ರಶಂಸೆಗಳನ್ನು ಗಳಿಸಿತು. ಕೇವಲ ಪ್ರಧಾನವಾದ ಕಾಲಾವಧಿಯಲ್ಲೇ ನಾನು ಏನೇನು ಬಯಸಿದ್ದೆನೋ ಅದೆಲ್ಲವೂ ಸಿಕ್ಕಿತು. ಏನೇ ಆದರೂ ಒಂದು ನಿರರ್ಥಕವು ನನ್ನ ಜೀವನದ ಪ್ರತಿನಿಮಿಷವೂ ನನ್ನನ್ನು ಅಶಾಂತ ಮಾಡಿತ್ತು.

ತದನಂತರದಲ್ಲಿ ನನಗೆ ಸಮ್ಮೋಹನದ ಪರಿಚಯವಾಯಿತು. ಈ ಒಂದು ಮನೋಹರವಾದ ಶಿಸ್ತಿನಲ್ಲಿ ಬಹಳಷ್ಟು ಸಾಹಿತ್ಯವನ್ನು ನನ್ನ ಸ್ಥಳೀಯ ಭೂಮಿಯಲ್ಲಿ ಓದಿದೆ. ಹಾಗೆಯೇ ಅದು ನನ್ನ ಕುತೂಹಲದ ಹಸಿವನ್ನು ಹೆಚ್ಚಿಸುತ್ತಾ ಮುಂದುವರಿಯಿತು. ಬೇಗನೇ ನನಗೆ ಸಿಕ್ಕಿದ ಸಾಹಿತ್ಯ ಪೂರ್ಣಕ್ಕೆ ಅಭಾವವಿದೆ ಎಂದು ನನಗೆ ಅನ್ನಿಸಿತು ಮತ್ತು ಈ ಒಂದು ಶಿಸ್ತಿನ ಸಂಬಂಧದಲ್ಲಿ ಪ್ರಾಯೋಗಿಕ ಜ್ಞಾನ ನಿಜವಾಗಿಯೂ ಬಹಳವೇ ಕಡಿಮೆ ಇದ್ದಿತು.

ಆ ಪ್ರಕಾರವಾಗಿ ಈ ಜ್ಞಾನದಲ್ಲಿ ಆಳವಾಗಿ ಮುಳುಗಿದ ನಾನು ಸಮ್ಮೋಹನ ವಿಜ್ಞಾನವು ಈ ಆಧುನಿಕ ಜೀವನದಲ್ಲಿ ನಮ್ಮ ಹರಕು ಪ್ರಪಂಚದಲ್ಲಿ ಬಹಳ ಫಲವತ್ತಾಗಿವೆ, ನಮ್ಮ ಆತ್ಮಕ್ಕೆ ಶಾಂತಿಯ ಭರವಸೆಯನ್ನೂ ಕೊಡುತ್ತದೆ, ಅಲ್ಲದೆ ಆರೋಗ್ಯಕರವಾದ ಮತ್ತು ಸರಿಸಮಾನವಾದ ಮನಸ್ಸು ಮತ್ತು ಸುಪ್ತಮನಸ್ಸಿನ ಬೆಳವಣಿಗೆಗೆ ಸಹಾಯ ಮಾಡುತ್ತದೆ ಎಂಬುದನ್ನು ಕಂಡುಕೊಂಡೆ.

ನಿಜಹೇಳಬೇಕೆಂದರೆ ನಾನು ನನ್ನ ದೇಶದಲ್ಲಿ ಈ ಕ್ಷೇತ್ರದ ಕೆಲವು ಪ್ರಾಯೋಗಿಕ ಪಾಠಗಳ ವ್ಯವಸ್ಥೆಯನ್ನು ಪ್ರಾರಂಭಿಸಿದ್ದೆ. ಸತ್ಯವಾಗಿ ನನಗೆ ಸ್ವಲ್ಪ ಮಟ್ಟಿಗೆ ಯಶಸ್ಸುಕೂಡ ದೊರೆಯಿತು, ಆದರೆ ಅದು ತಳವಿಲ್ಲದ ಸಮುದ್ರದಲ್ಲಿ ಒಂದು ಹನಿ ಆಗಿತ್ತು.

ಆಗಿನ ಕೆಲದಿನಗಳಲ್ಲಿ ಪ್ರಖ್ಯಾತ ಬ್ರಿಟಿಶ್ ಸಮ್ಮೋಹಕ (ಹಿಪ್ನಾಟಿಸ್ಟ್) ಮಿ.ಹೆದ್ರೆನ್‌ರವರನ್ನು ಭೆಟ್ಟಿಯಾಗುವ ಅವಕಾಶ ಸಿಕ್ಕಿತು. ಒಂದು ವಿಶೇಷ ಕೆಲಸದಮೇಲೆ ಆತ ನನ್ನ ದೇಶಕ್ಕೆ ಬರುವವನಿದ್ದ. ಈ ಒಂದು ವಿಜ್ಞಾನದ ಜ್ಞಾನವನ್ನು ಆತನು ಪ್ರಸಿದ್ಧ ಪ್ರಿಸಮ್‌ಹಾಲ್‌ನಲ್ಲಿ ಪ್ರದರ್ಶಿಸಿದ, ನಾನು ಉತ್ಕಟವಾಗಿ ಮೋಹಗೊಂಡೆನು. ಹಾಲ್‌ನಲ್ಲಿ ಕೂತುಕೊಂಡೇ ನಾನು ಪ್ರತಿಕ್ರಿಯಿಸುತ್ತಿದ್ದೆ ಮತ್ತು ಆ ಪ್ರದರ್ಶನದ ಸೂಕ್ಷ್ಮತೆಗಳಲ್ಲಿ ಹೆಚ್ಚೆಚ್ಚು ಸಮಾವೇಶ ಗೊಳ್ಳುತ್ತಿದ್ದೆ, ವಿಶ್ವವಿದ್ಯಾನಿಲಯದ ಕೆಲಸವನ್ನು ಶಾಶ್ವತವಾಗಿ ಬಿಟ್ಟುಬಿಡಲು ಮತ್ತು ನನ್ನ ಉಳಿದ ಜೀವನವನ್ನು ಸಮ್ಮೋಹನ ವಿದ್ಯಾರ್ಥಿಯಾಗಿ ಸಮರ್ಪಿಸಲು ನಾನು ನಿರ್ಧರಿಸಿದೆ.

ಮರುದಿನ ನಾನು ಮಿ.ಹೆದ್ರೆನ್‌ರವರನ್ನು ಕಂಡಾಗ, ಅವರು ಸಮ್ಮೋಹನದ ಬಗ್ಗೆ ಬಹಳಷ್ಟು ಹೇಳಿದರು ಮತ್ತು ವಿಜ್ಞಾನಿಗಳಿಗೆ ಎಟುಕದಂತಹ ಕೆಲಕ್ಷೇತ್ರಗಳಲ್ಲಿ ಸಮಾಜಕ್ಕೆ ಲಾಭದಾಯಕವಾಗಿದೆ ಎಂದು ಅಭಿಪ್ರಾಯಪಟ್ಟರು. ಸಮ್ಮೋಹನವು ಬೇರೆಲ್ಲಾ ವಿಜ್ಞಾನಗಳನ್ನು ಸುಲಭವಾಗಿ ಹಿಮ್ಮೆಟ್ಟಿ ಅದು ವರ್ಷಗಟ್ಟಲೆ ಮನುಷ್ಯನ ಪ್ರಯತ್ನಕ್ಕೆ ಮತ್ತು ವಿಜ್ಞಾನಿಗಳಿಗೆ ಎಟುಕದಂತಹ ಕೆಲಕ್ಷೇತ್ರಗಳಲ್ಲಿ ಸಮಾಜಕ್ಕೆ ಲಾಭದಾಯಕವಾಗಿದೆ ಎಂದು ಅಭಿಪ್ರಾಯ ಪಟ್ಟರು. ಸಮ್ಮೋಹನವು, ಮಿ.ಹೆದ್ರೆನ್ ವಾದಿಸಿದರು, ನಿಯಂತ್ರಿಸಲಾಗದ ಬಹಳ ಸಮಸ್ಯೆಗಳೆಲ್ಲವನ್ನೂ ಒಂದು ಕ್ಷಣದಲ್ಲಿ ಬಗೆಹರಿಸಿದೆ. ಅದೇ ವಿಜ್ಞಾನವು ಅಂತಹದೇ ತದ್ರೂಪ ಸಮಸ್ಯೆಯನ್ನು ಬಿಡಿಸುವುದಕ್ಕೆ ಮಿತಿಮೀರಿದ ಸಮಯವನ್ನು ತೆಗೆದುಕೊಳ್ಳುತ್ತದೆ. ಕೆಲವೊಂದು ಪ್ರಾಯೋಗಿಕ ಉದಾಹರಣೆಗಳನ್ನು ಸಮರ್ಪಿಸುವ ಮೂಲಕ ಅವರು ತಮ್ಮ ವಾದಕ್ಕೆ ಉತ್ತೇಜನ ಕೊಟ್ಟರು, ಕಟ್ಟಕಡೆಗೆ ಅವು ನನ್ನನ್ನು ಮೂಕನನ್ನಾಗಿಸಿದವು. ಬ್ರಿಟನ್ನಿನಲ್ಲೆಲ್ಲಾ ಅವರು ಒಬ್ಬ ಸಮ್ಮೋಹನದ ಪ್ರಮುಖ ವಿಜ್ಞಾನಿ ಎಂದು ಪ್ರಖ್ಯಾತರಾಗಿದ್ದರು. ನಾವು ಬೀಳ್ಕೊಡುವಾಗ ಅವರು ನನ್ನನ್ನು ಯು.ಕೆ.ಗೆ ಬರಲು ಆಹ್ವಾನಿಸಿದರು.

ಬೇಗನೇ ನಾನು ರಾಜೀನಾಮೆ ಕೊಟ್ಟು ಯು.ಕೆ.ಗೆ ಹೋದೆ. ಅಲ್ಲಿ ಮೂರು ವರ್ಷಗಳ ಕಾಲ ತಂಗಿದ್ದೆ ಮತ್ತು ನಾನಾಗಿಯೇ ಪ್ರತಿಷ್ಠಿತ ಹಿಪ್ನಾಟಿಸಂ ಅಕ್ಯಾಡೆಮಿಯ ಆಸಕ್ತ ಸದಸ್ಯನಾಗಿ ನೇಮಕಗೊಂಡೆ. ನಾನು ಅಲ್ಲಿದ್ದಾಗ ಬಹಳಷ್ಟು ಸಮ್ಮೋಹಕರನ್ನು ಕಂಡೆ. ಅವರು ಈ ಶಿಸ್ತಿನ ತುದಿಯನ್ನು ಮಾತ್ರ ಸ್ಪರ್ಶಿಸಿರುವುದನ್ನು ನಾನು ನೋಡಲಾರಂಭಿಸಿದೆ. ಪಶ್ಚಿಮದಲ್ಲಿ ಮರುಮಾತಿಲ್ಲದೆ ಈ ವಿಜ್ಞಾನವು

ಚಮತ್ಕಾರಯುಕ್ತ ದಾಪುಗಾಲನ್ನು ಹಾಕಿದ್ದರೂ ಮತ್ತು ಹೆಚ್ಚುಹೆಚ್ಚಾಗಿ ಮಾನಸಿಕ ಮತ್ತು ಇತರೆ ರೋಗಗಳಲ್ಲಿ ಸಮರ್ಥಿಸಿ ಕೊಂಡಿದ್ದರೂ ಇದರ ಆಕಾರದ ಮೇಲೆ ಅಥವಾ ಅದರ ಒಳಅತ್ಮದ ವಿಷಯವಾಗಿ ಅವರು ತಿಳಿದುಕೊಳ್ಳದೇ ಇರುವುದು ಸ್ಪಷ್ಟವಾಗಿತ್ತು. ಕೆಲವೊಮ್ಮೆ ಫಲಿತಾಂಶದ ಎಣಿಕೆಗಳು ಶ್ಲಾಘನೀಯವಾಗಿದ್ದವು. ಆದರೂ ಈ ವಿಜ್ಞಾನದ ಪೂರ್ವಾದಿಮುಖವು ಇನ್ನೂ ತಪ್ಪಿಸಿಕೊಳ್ಳುತ್ತಲೇ ಇದೆ ಎಂದು ಒಬ್ಬವಾದಿಸಬಹುದು. ಪಶ್ಚಿಮದಲ್ಲಿ ಈ ವಿಜ್ಞಾನವನ್ನು ಲೌಕಿಕವಾಗಿ ಉಪಯೋಗಿಸುವುದರ ಆಚೆಗೆ ಏನಿದೆ ಎಂದು ತಿಳಿದುಕೊಳ್ಳುವ ಅವಶ್ಯಕತೆ ಇದೆ.

ನಾನು ಇಂಗ್ಲೆಂಡ್‌ನಲ್ಲಿದ್ದಾಗ ಶ್ರೀಹೆಡ್ರೆನ್ ಅಲ್ಲದೆ ಈ ಜ್ಞಾನದ ಕ್ಷೇತ್ರದಲ್ಲಿ ನಂಬಲರ್ಹವಾದ ನುರಿತವರೆಂದು ಹೆಸರುವಾಸಿಯಾಗಿರುವ ಪ್ರಮುಖ ಸಮ್ಮೋಹಕರಾದ ಶ್ರೀಪ್ರೆಟಕಾವೊನ್, ಶ್ರೀಬರ್‌ಹಂಗ್ ಮತ್ತು ಕುಮಾರಿ ಕ್ಲೆಟೊ ಇವರನ್ನು ಬೆಟ್ಟಿಯಾದೆ. ನಿಜ, ಅವರಿಂದಲೂ ಬಹಳಷ್ಟು ಕಲಿತೆ, ಆದರೂ ಅವರಲ್ಲಿ ಸಮ್ಮೋಹನದ ಮೂಲತತ್ವ ಕೈತಪ್ಪಿದೆ ಎಂಬುದನ್ನು ಕಂಗುಕೊಂಡೆ. ನಾನು ಈ ವಿಜ್ಞಾನದ ಸತ್ವವನ್ನು ತಿಳಿದುಕೊಳ್ಳಲು ಇತ್ಯರ್ಥ ಮಾಡಿಕೊಂಡೆ.

ಮೂರು ವರ್ಷಗಳಲ್ಲಿ ನಾನು ಸ್ವದೇಶಕ್ಕೆ ಹಿಂದಿರುಗಿ ಸಮ್ಮೋಹನ ಮತ್ತು ಗುಪ್ತವಿದ್ಯೆಗಳ ವಿದ್ವಾಂಸರ ಸಭೆ(ಅಕ್ಕಾಡೆಮಿ)ಯನ್ನು ಕಂಡುಕೊಂಡೆ. ಸಭೆಯ ಅಪೂರ್ವ ಮಹತ್ಕಾರ್ಯಗಳು ಸುತ್ತಮುತ್ತಲೂ ಹಬ್ಬಿಕೊಂಡಿತ್ತು ಏಕೆಂದರೆ ಅದು ವಿಶ್ವದಲ್ಲಿಯೇ ಅಂಗೀಕಾರವನ್ನು ಗಳಿಸಿಕೊಂಡಿತ್ತು. ಈ ಸಭೆಯ ಸಾಧನೆಗಳು ನನಗೆ ನನ್ನ ದೇಶದ ಉತ್ಕೃಷ್ಟವಾದ ಪಾರಿತೋಷಕಗಳನ್ನು ಗಳಿಸಿಕೊಟ್ಟಿತು. ವಿದ್ವಾಂಸರ ಸಭೆಯ ನಿರ್ದೇಶಕನಾದ ಕಾರಣ ನಾನು ಇಂಗ್ಲೆಂಡ್, ಕೆನಡ, ಜಪಾನ್, ಪಶ್ಚಿಮ ಜರ್ಮನಿ ಮತ್ತು U.S.S.R.ಇಂತಹ ದೇಶಗಳಿಗೆ ಹೋಗಬೇಕಿತ್ತು. ಈ ಅವಕಾಶವನ್ನು ಉಪಯೋಗಿಸಿಕೊಂಡು ನಾನು ಈ ಕ್ಷೇತ್ರದಲ್ಲಿ ಆದಂತಹ ಬೆಳೆವಣಿಗೆಗಳನ್ನು ಅಧ್ಯಯನ ಮಾಡಿದೆ. ಅಮೇರಿಕೆಯು ಸಮ್ಮೋಹನವನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ಉಪಯೋಗಿಸಿಕೊಳ್ಳುವುದರಲ್ಲಿ ಶ್ರೇಷ್ಠವಾದ ಯಶಸ್ಸನ್ನು ಪಡೆದಿತ್ತು ಎನ್ನುವುದರಲ್ಲಿ ಅನುಮಾನವಿಲ್ಲ. ಆದರೂ ಅಮೆರಿಕೆಯ ಸಾಧನೆಯು ಸಂಪೂರ್ಣವಾಗಿಲ್ಲ ಎಂಬುದನ್ನು ನಾನು ತಿಳಿದುಕೊಳ್ಳಲಾರಂಭಿಸಿದೆ. ಈ ಮಟ್ಟದಲ್ಲೂ ಸಹ ಈ ವಿಜ್ಞಾನದಲ್ಲಿ ಇನ್ನೂ ವಿಶಾಲವಾದ ಸಾಮರ್ಥ್ಯವಿತ್ತು, ನಾವು ಇದರ ಸಂಪೂರ್ಣ ಸಾಮರ್ಥ್ಯ ತಿಳಿಯದ ಹೊರತು, ಇದರಲ್ಲಿ ಒಂದು ಪೂರ್ಣತೆ ಇಲ್ಲದೆ ಪದೇ ಪದೇ ಏಳುವಂತಹ ಪ್ರಶ್ನೆಗಳ ಸಂಬಂಧದಲ್ಲಿ ಒಂದು ಸಹಾಯ ಹಸ್ತವನ್ನು ಕೊಡದೆ ಅದು ಕೇವಲ ಮುರುಕ ವಿಜ್ಞಾನವಾಗಿಯೇ ಉಳಿಯುವುದು.

ಒಮ್ಮೆ ನಾನು ಸಮ್ಮೋಹನದ ಮೇಲೆ ಒಂದು ಸರಣಿ ಭಾಷಣಗಳನ್ನು ಕೊಡಲು ಕೆನಡಾಕ್ಕೆ ಹೋದೆ. ಈ ಒಂದು ಸಂದರ್ಭವು ನನಗೆ ಈ ವಿಜ್ಞಾನದಲ್ಲಿ ಹಲವಾರು ನೋಟಗಳ ಮೇಲೆ ಮಾತನಾಡುವ ಅವಕಾಶವನ್ನು ಒದಗಿಸಿ ಕೊಟ್ಟಿತು. ಅದು ನನಗೆ ಪಾಶ್ಚಿಮಾತ್ಯ ಜಗತ್ತಿನಲ್ಲಿ ಸಮ್ಮೋಹನ ಪಿತನೆಂದು ಹೆಸರುವಾಸಿಯಾದ ಓರ್ವ ಪ್ರಖ್ಯಾತ ವ್ಯಕ್ತಿಯನ್ನು ಕಾಣಲು ಸಹ ಒಂದು ಸುವರ್ಣಾವಕಾಶವನ್ನು ಕೊಟ್ಟಿತು. ಆತನದು ಯಾವುದೇ ದೊಡ್ಡ ಕಛೇರಿಯಿರಲಿಲ್ಲ, ಈಕಡೆ ಆತನ ಹೆಸರು ಯಾವುದೇ ಬಿರುದು, ಗೌರವ ಅಥವಾ ಪಾರಿತೋಷಕಗಳಿಗೆ ಸಂಬಂಧಿತವಾಗಿರಲಿಲ್ಲ. ಆತನು ಶ್ರೀಒಕಾಸನಾಗಿದ್ದನು.

ನಾನು ಒಂದು ವಾರದವರೆಗೆ ಶ್ರೀಒಕಾಸರವರ ಅತಿಥಿಯಾಗಿದ್ದೆ. ಈ ಒಂದು ಕೆಲಸದ ಪ್ರಾಯೋಗಿಕ ಸಂಬಂಧದಲ್ಲಿ, ದಕ್ಷತೆಯನ್ನು ಪಡೆಯಲು ಹೊರಟಂತಹ ಆತನು ಹೊಂದಿದ್ದ ಜ್ಞಾನವು ನಿಜವಾಗಿಯೂ ನಿರಂಕುಶವಾಗಿ ಬಹು ಶ್ರೇಷ್ಠವಾಗಿತ್ತು.

ನನ್ನ ಒಂದು ವಾರದ ತಂಗುವಿಕೆಯಲ್ಲಿ ನನಗೆ ಅವರು ಸಮ್ಮೋಹನದ ಮೇಲೆ ಹೇಳಿದುದರಲ್ಲಿ

ಅವರ ಆಳವಾದ ಒಳದೃಷ್ಟಿಯು ಬಹಳ ಸಮಯದಿಂದ ಇದೇ ಕ್ಷೇತ್ರದಲ್ಲಿರುವ ನಮ್ಮಂತಹವರ ಜ್ಞಾನವನ್ನು ಕುಬ್ಜವಾಗಿಸಿತು.

ಮುಂಚಿತವಾಗಿ ಶ್ರಿಒಕಾಸರವರಿಗೆ ಸೈನ್ಯದಲ್ಲಿ ಕೆಲಸವಿತ್ತು ಮತ್ತು ಹತ್ತೊಂಬತ್ತನೆಯ ಶತಮಾನದ ಮೊದಲನೆಯ ದಶಕದಲ್ಲಿ ಅವರನ್ನು ಭಾರತದಲ್ಲಿಯ ರಕ್ಷಣಾ ಕಛೇರಿಯಲ್ಲಿರಿಸಲಾಗಿತ್ತು. ಅವರು ಭಾರತದಲ್ಲಿ, ಈ ವಿಜ್ಞಾನವನ್ನು ಕಲಿಸಿದಂತಹ ಒಬ್ಬ ಯೋಗಿಯ ಸಂಪರ್ಕದಲ್ಲಿ ಬಂದರು. ಸಮ್ಮೋಹನದ ಕೆಲವು ಸೂಕ್ಷ್ಮ ಸತ್ಯಗಳನ್ನು ಬೋಧಿಸಿದಂತಹ ಆ ಯೋಗಿಯೊಡನೆ ಅವರು ಬಹುಬೇಗನೇ ಆಕರ್ಷಕ ವಾತ್ಸಲ್ಯಪೂರಕವಾದ ಸಂಬಂಧವನ್ನು ಬೆಳೆಸಿದರು.

ಸೈನ್ಯದಿಂದ ನಿವೃತ್ತಿ ಹೊಂದಿದ ನಂತರವೂ ಶ್ರಿಒಕಾಸರವರು ಆ ಯೋಗಿಯೊಡನೆ ಸಂಪರ್ಕವಿಟ್ಟುಕೊಂಡು ಭಾರತಕ್ಕೆ ಐದಾರುಸಲ ಭೇಟಿಕೊಟ್ಟರು. ಎಲ್ಲಿಯತನಕ ಈ ಸಮ್ಮೋಹನ ವಿಜ್ಞಾನವನ್ನು ಭಾರತದ ತತ್ವಜ್ಞಾನದೊಡನೆ ಒಗ್ಗೂಡಿಸುವುದಿಲ್ಲವೋ ಮತ್ತು ಎಲ್ಲಿಯವರೆಗೆ ಈ ವಿಜ್ಞಾನದೊಡನೆ ಭಾರತದ ತತ್ವ ಜ್ಞಾನದ ಪ್ರಾಯೋಗಿಕ ನೋಟಕ್ಕೆ ಜೋಡಣೆಯನ್ನು ಸಾಧಿಸುವುದಿಲ್ಲವೋ ಈ ಒಂದು ವಿಜ್ಞಾನದ ಪೂರ್ಣತೆಯನ್ನು ನಾವು ಸಾಧಿಸುವುದಿಲ್ಲ ಎಂದು ಶ್ರಿಒಕಾಸರವರು ಹೇಳಿದರು. ಕಠಿಣ ಮತ್ತು ಕ್ಲಿಷ್ಟವೆಂದು ಒಪ್ಪಿಕೊಳ್ಳುವಂತಹ ಈ ವಿಜ್ಞಾನದ ಆಧಾರ ಭೂತವಾದ ಪ್ರಮುಖತೆ ಎಂದರೆ ಪ್ರತಿಬಿಂಬರಹಿತ ಸುಪ್ತ ಚೇತನ ಮತ್ತು ವಿಚಾರ ರಹಿತ ಮನಸ್ಸು ಎಂದು ಅವರು ಮುಂದುವರೆದು ವಿಮರ್ಶಿಸಿದರು. ಯಾವುದೇ ತರಹದ ಮಾರ್ಗದರ್ಶನವನ್ನು ಯಾರೊಬ್ಬರಾದರೂ ಆಶಿಸಿದಲ್ಲಿ ಅದು ಭಾರತದಲ್ಲಿ ಮಾತ್ರ ಎಂದು ಅವರಿಗೆ ಅನ್ನಿಸಿತು, ಏಕೆಂದರೆ ಭಾರತದ ಋಷಿಗಳೊಬ್ಬರೇ ಪ್ರಯೋಗಿಕ ಸಮ್ಮೋಹನಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ವಿಚಾರಮುಕ್ತ ಮನಸ್ಸು ಮಾತ್ರ ಈ ವಿಜ್ಞಾನಕ್ಕೆ ಅದರ ಸಮಗ್ರತೆಯನ್ನು ಕೊಡುವುದಕ್ಕೆ ನಿಯಮಿಸಿರುವಂತಹುದು ಎಂದು ಅವರು ವಾದಿಸಿದರು. ಪಶ್ಚಿಮವು ಸಮ್ಮೋಹನವನ್ನು ಮನಶ್ಶಾಸ್ತ್ರ ಮತ್ತು ಇತರೆ ವೈಜ್ಞಾನಿಕ ಸಮಸ್ಯೆಗಳಲ್ಲಿ ಹೆಚ್ಚಾಗಿ ದುಡಿಸಿಕೊಳ್ಳುವುದರಲ್ಲಿ ಆಸಕ್ತವಿದ್ದಾಗ ಭಾರತೀಯ ಋಷಿಗಳು ಶ್ರೇಷ್ಠವಾದ ಆಧ್ಯಾತ್ಮಿಕ ವಿಷಯದಲ್ಲಿ ಮತ್ತು ಆರೋಗ್ಯವಾದ, ಮಧುರವಾದ ಮತ್ತು ಸಂಪೂರ್ಣವಾದ ಜೀವನಕ್ಕೆ ಎಡೆಮಾಡಿಕೊಡುವಂತಹುದರ ಕಡೆಗೆ ವೃದ್ಧಿಸಿದರು.

ಚರ್ಚೆ ನಡೆದಾಗಲೆಲ್ಲ ಶ್ರಿಒಕಾಸರವರು ಭಾರತದ ಬಗ್ಗೆ ಉಲ್ಲೇಖಿಸಿದಾಗಲೆಲ್ಲ ಘೋರವಾಗಿ ಆಧೀನರಾಗಿಬಿಟ್ಟಹಾಗೆ ಕಾಣುತ್ತಿದ್ದರು. ಹಲವಾರು ಸಂದರ್ಭಗಳಲ್ಲಿ ಭಾರತದ ಮೇಲೆ ಅವರಿಗಿದ್ದ ಪ್ರೀತಿ ಮತ್ತು ಭಕ್ತಿಯನ್ನು ಅವರು ವ್ಯಕ್ತಪಡಿಸುತ್ತಿದ್ದರು. ನಾನು ಭಾರತಕ್ಕೆ ಯಾವಾಗಲಾದರೂ ಭೇಟಿಕೊಟ್ಟರೆ ನನಗೆ ಸಹಾಯ ಮಾಡಬಹುದಾದಂತಹ ಅದ್ವಿತೀಯ ಯೋಗಿಗಳು ಮತ್ತು ಸಾಧುಗಳು ಅಲ್ಲಿ ಇರುವರು ಎಂದು ಅವರು ತಿಳಿಸಿದರು.

ಈ ಒಂದು ವಿಜ್ಞಾನದ ಪೂರ್ಣತೆಯ ಜ್ಞಾನವನ್ನು ಒದಗಿಸುವಂತಹ ಯಾರಾದರೂ ಅವರ ದೃಷ್ಟಿಯಲ್ಲಿ ಇದ್ದಾರೆಯೇ ಎಂದು ಅವರನ್ನು ಕೇಳಿದೆ. ಶ್ರಿಒಕಾಸರವರು ಕಿಂಚಿತ್ತೂ ಕಣ್ಣುಮಿಟುಕಿಸದೆಯೇ ಈ ಕ್ಷೇತ್ರದಲ್ಲಿ ಅಂತಹ ವ್ಯಕ್ತಿ ಡಾ.ಶ್ರೀಮಾಲಿ ಎಂದು ಹೆಸರಿಸಿದರು. ತಾವೇ ಅವರಿಗಿಂತಲೂ ಹಿರಿಯರಾಗಿದ್ದರೂ ಡಾ.ಶ್ರೀಮಾಲಿಯವರನ್ನು ತಮ್ಮ ಗುರು ಎಂದು ಗೌರವಿಸಿದರು. ಮುಂದುವರೆದು ಅವರು ಡಾ.ಶ್ರೀಮಾಲಿಯವರ ಸಮುದ್ರದಂತಹ ಜ್ಞಾನದ ಮುಂದೆ ತಮ್ಮ ಸಮ್ಮೋಹನದ ಜ್ಞಾನ ಒಂದು ಹನಿಗಿಂತಲೂ ಹೆಚ್ಚಾಗಲಾರದು ಎಂದು ಹೇಳಿದರು. ಅಡೆತಡೆಯಿಲ್ಲದ ಇಪ್ಪತ್ತೈದು ಜನ್ಮಾಂತರದ ಉಪಾಸನೆಯ ನಂತರವೂ ಡಾ.ಶ್ರೀಮಾಲಿಯವರ ತಳ ಇಲ್ಲದ ಹಳ್ಳದ ಆಳದ ಜ್ಞಾನಕ್ಕೆ ತಾವು ಹೋಗಲಿಕ್ಕಿಲ್ಲ ಎಂದು ಅವರು ದಿಗಿಲುಗೊಂಡರು.

ಉಜ್ವಲವಾದ ಆಶಾಕಿರಣವನ್ನು ನಾನು ನೋಡಲಾರಂಭಿಸಿದೆ. ಶ್ರೀಒಕಾಸರವರು ಪ್ರಪಂಚದ ಎಲ್ಲಾ ಸಮ್ಮೋಹಕರಲ್ಲಿ ಸುಲಭವಾಗಿ ಎತ್ತರದವರು ಎಂದು ನಾನು ತಿಳಿದುಕೊಂಡಿದ್ದೆ. ಅಂತಹ ಪ್ರಮುಖ ಸಮ್ಮೋಹಕನೇ ಬೇರೊಬ್ಬರ ಶ್ರೇಷ್ಠತೆಯನ್ನು ಅಂಗೀಕರಿಸಿದಾಗ ಹೀಗೆ ಜಯಘೋಷಗೊಂಡ ವ್ಯಕ್ತಿಯ ಮಹೋನ್ನತದ ವೃದ್ಧೀಕರಣಕ್ಕೆ ಯಾವುದೇ ಚಕಾರವಿರಲಿಕ್ಕಿಲ್ಲ.

ವಿಮಾನ ನಿಲ್ದಾಣದಲ್ಲಿ ನಾನು ವಿಮಾನಹತ್ತುವ ತಯಾರಿಯಲ್ಲಿದ್ದಾಗ, ಸ್ಪಷ್ಟ ಉದ್ವೇಗದಲ್ಲಿ ಅವರು ನನ್ನ ಕೈಗಳನ್ನು ಹಿಡಿದು ತಾವು ಸೈನ್ಯದಲ್ಲಿ ಇದ್ದುದಾಗಿ ಮತ್ತು ತಾವು ಮನುಷ್ಯನ ನ್ಯೂನ್ಯತೆಯ ಬಗ್ಗೆ ಖಚಿತವಾಗಿ ಪ್ರಾಯೋಗಿಕ ತರಹದಲ್ಲಿ ಏನೂ ಇಲ್ಲ, ಆದರೂ ಅವರು ಡಾ.ಶ್ರೀಮಾಲಿಯವರನ್ನು ವಂದಿಸುವುದು ಗುರು ಎಂದು ಕಂಡಿಮುದಕ್ಕೋಸ್ಕರವಲ್ಲ ಆದರೆ ಪಕ್ಷಪಾತರಹಿತ ರೀತಿಯಲ್ಲಿ ಮಾತಾಡಬೇಕೆಂದರೆ ಮತ್ತು ಆರೋಗ್ಯಕರವಾದ ಕಾರಣವೆಂದರೆ ಅವರ (ಡಾ.ಶ್ರೀಮಾಲಿಯವರ) ಈ ಕ್ಷೇತ್ರದಲ್ಲಿಯ ಜ್ಞಾನವು ಯಾವುದೇ ವರ್ಗದಲ್ಲಿ ಅನುಪಮವಾಗಿದೆಯೆಂದು ಹೇಳಿ, ನಮ್ಮ ಪೀಳಿಗೆಯು ಅದ್ವಿತೀಯವಾಗಿ ಅದೃಷ್ಟಶಾಲಿಯಾಗಿದೆ ಏಕೆಂದರೆ ಅವರು ಈಗಲೂ ನಮ್ಮನಡುವೆ ಇದ್ದಾರೆ ಎಂದು ಶ್ರೀಒಕಾಸರವರು ಮುಂದುವರೆದು ಹೇಳಿದರು. ಅವರು ಸ್ಪಷ್ಟಪಡಿಸಿದಹಾಗೆ ಅವರು ಅವರನ್ನು ಗುರು ಎಂದು ಒಪ್ಪಿಕೊಂಡುದುದು ಭಾವನಾವಶದಲ್ಲಲ್ಲ. ಅವರು ಅವರನ್ನು ಹಲವಾರು ಸಂದರ್ಭಗಳಲ್ಲಿ ಬಹಳ ಕಷ್ಟಕರ ರೀತಿಯಲ್ಲಿ ಪರೀಕ್ಷಿಸಿದ್ದರು. ಅವರು ತಮ್ಮ ಜೀವನದಲ್ಲಿ ಲೆಕ್ಕವಿಲ್ಲದಷ್ಟು ಸಾಧುಗಳು ಮತ್ತು ಯೋಗಿಗಳನ್ನು ಕಂಡಿದ್ದರು. ಬಹಳ ಉಚ್ಚವರ್ಗದ ಯೋಗಿಗಳ ಜೊತೆ ಅವರ ಬಹಳವೇ ಸಂಬಂಧವಿತ್ತು. ಯಾರೊಬ್ಬ ಪ್ರಸಿದ್ಧ ಅಥವಾ ಪ್ರಖ್ಯಾತ ಸಮ್ಮೋಹಕನು ಪ್ರಪಂಚದ ನಾಲ್ಕೂ ಮೂಲೆಗಳಲ್ಲಿ ಎಲ್ಲೇ ನೆಲೆಸಿದ್ದರೂ ಅವರ ವೈಯಕ್ತಿಕ ಗಮನದಿಂದ ನುಸುಳಿದುದೇ ಇಲ್ಲ, ಅವರು ಹಿಂಜರಿಯದೇ, ಡಾ.ಶ್ರೀಮಾಲಿಯವರನ್ನು ಹೋಲಿಸಿದರೆ ಬೇರೆಯವರೆಲ್ಲರೂ ಕೇವಲ ಗುಜ್ಜಾರಿಗಳು ಎಂದು ದೃಢಪಡಿಸಿದರು. ಯಾರೊಬ್ಬರಾದರೂ ಮೊದಲಬಾರಿಗೆ ಅವರನ್ನು ಸಂದರ್ಶಿಸಿದಾಗ ಅವರ ಹೆಗ್ಗಳಿಕೆಯ ತಿಳುವಳಿಕೆಯು ಆವರಿಗಾಗಲಿಕ್ಕಿಲ್ಲ. ಅವರ ಶ್ರೇಷ್ಠತೆಯನ್ನು ನಿಶ್ಚಯಿಸಲು ಯಾರೊಬ್ಬರಿಗಾದರೂ ತಾಳ್ಮೆ ಬೇಕು. ಸಮುದ್ರದ ಬಾಹ್ಯನೋಟವು ಅದರ ಗರ್ಭಾಶಯದಲ್ಲಿ ಯಾವ ಅನರ್ಘ್ಯವಾದ ಮುತ್ತುಗಳು ಅಡಗಿವೆ ಎಂದು ಸಂಕೇತಿಸಲಿಲ್ಲ. ಆ ಮುತ್ತುಗಳನ್ನು ಹಿಡಿಯಲು ಯಾರೊಬ್ಬರಾದರೂ ಆಳವಾಗಿ ಮುಳುಗಬೇಕು. ಬರಿಯ ಕಾಲ್ಪನಿಕ ನೀರಿನಲ್ಲಿ ಈಜುವುದರಿಂದ ಯಾರಿಗಾದರೂ ಬಹಳವೆಂದರೆ ಕೇವಲ ಕಪ್ಪೆಚಿಪ್ಪುಗಳು ಸಿಗಬಹುದು.

ಅವರಿಂದ ಕಲಿಯಲು ಪ್ರಯತ್ನ ಪಡಿರಿ ಆಗದಿದ್ದ ಪಕ್ಷದಲ್ಲಿ ಕನಿಷ್ಠ ಅವರನ್ನು ಕಂಡು ಮಾತನಾಡಲು ಪ್ರಯತ್ನಮಾಡಿ ಎಂದು ಶ್ರೀಒಕಾಸರವರು ತೀರ್ಮಾನಿಸಿ ಹೇಳಿದರು.

ನಾನು ನನ್ನ ದೇಶಕ್ಕೆ ಹಿಂದಿರುಗಿದೆ. ಶ್ರೀಒಕಾಸರವರ ಮಾತುಗಳು ನನ್ನ ಕಿವಿಯಲ್ಲಿ ಗುಂಯ್‌ಗುಟ್ಟುತ್ತಲೇ ಇದ್ದವು. ನಾನು ಆಗಾಗ ಬೆಳ್ಳಗಿರುವುದೆಲ್ಲಾ ಹಾಲಲ್ಲ ಎಂದು ಕೊಂಡಿದ್ದರೆ, ನಿಜವಾಗಿಯೂ ಅದರಲ್ಲಿ ಇಲ್ಲಿಯವರೆಗೆ ತಪ್ಪುಕಲ್ಲುಗಳನ್ನು ನಿಜವಾದ ವಜ್ರಗಳೆಂದು ತಿಳಿದುಕೊಂಡಿದ್ದ ಆಳವಾದ ವೇದನೆಯ ಅನುಭವವು ನನ್ನಲ್ಲಿ ಹಠಾತ್ತಾಗಿ ಬಂದಿತು. ನನ್ನ ಗುರಿ ಏನು ಮತ್ತು ಯಾವದಿಕ್ಕಿನಲ್ಲಿ ನಾನು ಪ್ರಯತ್ನಿಸಬೇಕು ಎಂದು ನನ್ನ ಕಣ್ಣುಗಳು ಮೊದಲಬಾರಿಗೆ ತೆರೆದುಕೊಂಡಹಾಗೆ ನಾನು ನೋಡಲಾರಂಭಿಸಿದೆ.

ನಾನು ಭಾರತಕ್ಕೆ ಹೋಗಲು ಹಂಬಲಿಸಿದೆ. ಆದರೆ ನನಗೆ ಒಂದು ವರ್ಷದೊಳಗೆ ಅವಕಾಶ ಸಿಕ್ಕಿತು. ಒಂದು ದಿನ ದಿನಪತ್ರಿಕೆಯಲ್ಲಿ, ಅಂತರಾಷ್ಟ್ರೀಯ ಸಮ್ಮೋಹಕರ ಸಮ್ಮೇಳನವು ಭವ್‌ಸಾರಿ

(ಗುಜರಾತ್, ಭಾರತ)ಯಲ್ಲಿ ನಡೆಯುತ್ತದೆ ಮತ್ತು ವಿಶ್ಲೇಸುವಂತಹ ಡಾ.ಶ್ರೀಮಾಲಿಯವರು ಅದರಲ್ಲಿ ಭಾಗವಹಿಸುತ್ತಿದ್ದಾರೆ ಎಂದು ಓದುವ ಯೋಗ ಸಿಕ್ಕಿತು.

ನಾನು ಅಸಂತೋಷಕರವಾದ ಅಂತಹ ಬಹಳ ಸಮ್ಮೇಳನಗಳಲ್ಲಿ ಭಾಗವಹಿಸಿದ್ದರೂ ಈ ಸಮ್ಮೇಳನದಲ್ಲಿ ಭಾಗವಹಿಸಲು ಕೂಡಲೇ ನಿರ್ಧರಿಸಿದೆ. ನನ್ನ ತೀರ್ಮಾನವನ್ನು ಇತ್ಯರ್ಥಮಾಡುವ ಒಂದು ಅದ್ವಿತೀಯ ಕಾರಣವೆಂದರೆ ಯಾರ ಹೆಸರು ನಾನು ಕೇಳಿದಾಗಿನಿಂದ ನನ್ನ ಕಿವಿಯಲ್ಲಿ ಗುಂಯ್‌ಗುಟ್ಟುತ್ತಲೇ ಇತ್ತೋ ಅಂತಹ ಡಾ.ಶ್ರೀಮಾಲಿಯವರ ಅದರಲ್ಲಿ ಸಂಭವನೀಯ ಭಾಗವಹಿಸುವಿಕೆ. ಅದೇ ದಿನ ರಾತ್ರಿ ನಾನು ಭಾರತದಲ್ಲಿನ ಒಬ್ಬ ಸ್ನೇಹಿತನಿಗೆ ದೂರವಾಣಿ ಮೂಲಕ ಸಂಪರ್ಕಿಸಿದೆ. ಒಂದು ವಾರದೊಳಗೆ ನನಗೆ ಸಮ್ಮೇಳನದಲ್ಲಿ ಭಾಗವಹಿಸಲು ಔಪಚಾರಿಕ ಆಹ್ವಾನ ಪತ್ರಿಕೆಯು ಬಂದಿತು.

ಯೋಚನೆಗಳ ಗುಂಡಿನಮಳೆಯು ನನ್ನನ್ನು ಪೀಡಿಸುತ್ತಲೇ ಇತ್ತು. ಡಾ.ಶ್ರೀಮಾಲಿಯವರು ಈ ಕ್ಷೇತ್ರದಲ್ಲಿ ಅತೀ ಶ್ರೇಷ್ಠ ಪಂಡಿತರು ಎಂದು ನನಗೆ ಒಪ್ಪಿಗೆಯಾಗಿಲ್ಲವೆಂದಲ್ಲ. (ಶ್ರೀ)ಒಕಾಸರವರು ಧ್ಯಾನಯೋಗದ ಪ್ರಾಯೋಗಿಕ ನೋಟಗಳನ್ನೆಲ್ಲಾ ನನಗೆ ವಿಮರ್ಶಿಸಿದ್ದರು. ಶ್ರೀಮಾಲಿಯವರು ಯೋಗದ ಮೇಲೆ ಸರ್ವೋತ್ತಮವಾದ ಸ್ವಾಧೀನವುಳ್ಳವರು ಎಂದು ಸಹ ಅವರು ಹೇಳಿದ್ದರು. ಆದರೂ ನಾನು ಡಾ.ಶ್ರೀಮಾಲಿಯವರು ಹಾಗೆಯೇ ಇರಬಹುದೇ ಎಂದು ಕಂಪಿಸಿದೆ. ಅವರಿಂದ ಕಲಿಯುವ ನನ್ನ ಇಚ್ಛೆಯನ್ನು ನನ್ನಿಂದ ಒಪ್ಪಿಸಲಾಗುವುದೇ ಎಂದು ಕೌತುಕನಾದೆ. ಅವರು ನನಗೆ ಕಲಿಸುವರೇ? ಖಚಿತವಾಗಿ, ವಿಶ್ವಾದಾದ್ಯಂತ ಮಹತ್ಕಾರ್ಯವನ್ನು ಸಾಧಿಸಿರುವಂತಹ ಅವರು ಸರಳ ಮತ್ತು ಸ್ವಚ್ಛ ಮನುಷ್ಯರಾಗಿರಲೇ ಬೇಕು. ಈ ಒಂದು ವರ್ಷದಲ್ಲಿ ನಾನು ಈ ಕ್ಷೇತ್ರದಲ್ಲಿ ಬಹಳಷ್ಟು ಪಂಡಿತರನ್ನು ಕಂಡಿದ್ದೆ. ಈ ಕ್ಷೇತ್ರದಲ್ಲಿ ಡಾ.ಶ್ರೀಮಾಲಿಯವರ ರೇತಸ್ಸಿನ ಕೊಡುಗೆಯನ್ನು ಯಾರನ್ನೂ ಹೊರತಾಗಿಸದೇ ಪ್ರತಿಯೊಬ್ಬರೂ ದೃಢಪಡಿಸಿದ್ದರು.

ಸಮ್ಮೇಳನದ ಒಂದು ವಾರ ಮುಂಚಿತವಾಗಿ ನಾನು ಭಾರತಕ್ಕೆ ಹೊರಟೆ. ನಾನು ನವದೆಹಲಿಯಲ್ಲಿ ಕೆಲ ದಿನಗಳನ್ನು ಕಳೆದು ಅಲ್ಲಿ ನನ್ನ ಸ್ನೇಹಿತರಿಂದಲೂ ಮತ್ತು ರಾಯಭಾರ ಅಧಿಕಾರಿಗಳಿಂದಲೂ ಡಾ.ಶ್ರೀಮಾಲಿಯವರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಪಡೆಯಲು ಯೋಜಿಸಿದ್ದೆ. ನಾನು ಸಮ್ಮೇಳನದ ಪ್ರಾರಂಭೋತ್ಸವದ ಒಂದು ದಿನ ಮುಂಚಿತವಾಗಿ ಕಾರ್ಯಕ್ಷೇತ್ರವಾದ ಭವ್‌ಸಾರಿಯನ್ನು ತಲುಪಿದೆ. ಸಮ್ಮೇಳನದ ವ್ಯವಸ್ಥೆಗಳ ರೀತಿಯನ್ನು ನೋಡುತ್ತಾ ನನಗೆ ಇಲ್ಲಾಗುವ ಚಿಂತನೆಗಳು ಈ ಒಂದು ಶಿಸ್ತಿನ ಕಪ್ಪುಕಲೆಗಳ ಮೇಲೆ ಬೆಳಕು ಚೆಲ್ಲುವುದರಲ್ಲಿ ಅನುಮಾನವೇ ಉಳಿಯಲಿಲ್ಲ.

ಭಾರತದಿಂದ ಹಲವಾರು ಪಂಡಿತರಲ್ಲದೆ ಅಂತರಾಷ್ಟ್ರೀಯವಾಗಿ ಹೆಸರು ಪಡೆದಂತಹ ಪಂಡಿತರಾದ ಶ್ರೀ ಭ್ರೊಷೆ, ಶ್ರೀಕೆಲ್‌ಹೇನ್ ಹರ್ಗ್, ಶ್ರೀಪಿಂಟೊ ಮತ್ತು ಶ್ರೀಗರ್ಲ್ಡೆನ್‌ರವರು ಸಹ ಸಮ್ಮೇಳನದಲ್ಲಿ ಭಾಗವಹಿಸಲು ಬಂದಿದ್ದರು.

ನನ್ನ ವೈಯಕ್ತಿಕ ಶಕ್ತ್ಯಾನುಸಾರ ಭಾಗೀದಾರರಾದ ಒಂದು ಆಯ್ದ ಗುಂಪನ್ನು ರಾತ್ರಿಯ ಊಟಕ್ಕೆ ಆಹ್ವಾನಿಸಿದೆ. ನಾವು ಸಮ್ಮೋಹನಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಚರ್ಚಿಸಿದವು. ಅದು ನಮ್ಮ ಅನುಭವ ವಿಚಾರಗಳ ಮುಕ್ತ ವಿನಿಮಯವಾಗಿತ್ತು. ನಾನು ನಿಜ ಹೇಳಬೇಕೆಂದರೆ ಉದ್ದೇಶಪೂರ್ವಕವಾಗಿಯೇ ಡಾ.ಶ್ರೀಮಾಲಿಯವರ ಕೊಡುಗೆಗಳನ್ನು ಉಲ್ಲೇಖಿಸಿದೆನು. ಅವರಲ್ಲಿ ಬಹಳಷ್ಟು ಜನರು ಡಾ.ಶ್ರೀಮಾಲಿಯವರನ್ನು ವೈಯಕ್ತಿಕವಾಗಿ ಬಲ್ಲವರಾಗಿದ್ದುದು ನಾನು ಕಂಡುಕೊಂಡೆ ಮತ್ತು ಪ್ರತಿಯೊಬ್ಬರೂ ಡಾ.ಶ್ರೀಮಾಲಿಯವರನ್ನು ಆದಷ್ಟು ಬೇಗ ನೋಡಲು ಹಂಬಲಿಸುತ್ತಿದ್ದರು.

ಶ್ರೀಭ್ರೂಷೆಯವರು ಡಾ.ಶ್ರೀಮಾಲಿಯವರೊಡನೆ ಸುಮಾರು ನಾಲ್ಕು ತಿಂಗಳು ಇದ್ದುದು ನನಗೆ ಗೊತ್ತಾಯಿತು. ಡಾ.ಶ್ರೀಮಾಲಿಯವರ ಬಗ್ಗೆ ಅವರಿಂದ ಬಹಳಷ್ಟು ತಿಳಿಯಬಹುದು ಎಂದುಕೊಂಡೆ.

ಊಟ ಮುಗಿಯುತ್ತಿರುವಾಗ ನಾನು ಶ್ರೀಭ್ರೂಷೆಯವರನ್ನು ಸ್ವಲ್ಪಹೊತ್ತು ಉಳಿದುಕೊಳ್ಳಲು ಕೋರಿಕೊಂಡೆ. ಡಾ.ಶ್ರೀಮಾಲಿಯವರ ಬಗ್ಗೆ ಸಮೀಪ ನೋಟ ಬೇಕಾಗಿದೆ ಎಂದು ಸ್ವಲ್ಪಮಟ್ಟಿಗೆ ಸ್ಪಷ್ಟವಾಗಿಯೇ ನಾನವರಿಗೆ ಹೇಳಿದೆ. ಶ್ರೀಒಕಾಸರವರು ಡಾ.ಶ್ರೀಮಾಲಿಯವರನ್ನು ಗುರು ಎಂದು ಕಂಡಿರುವ ವಿಷಯವನ್ನೂ ಅವರ ಗಮನಕ್ಕೆ ತಂದೆ.

ಶ್ರೀ ಭ್ರೂಷೆರವರು ಬಹಳಷ್ಟು ಜನ ಸಮ್ಮೋಹನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆಂದು ವಿಮರ್ಷಿಸಿದರು. ಕಳೆದ ಎರಡು ದಶಕಗಳಿಂದಲೂ ಪ್ರಪಂಚದಾದ್ಯಂತ ಹಲವಾರು ಅನ್ವೇಷಣೆಗಳು ನಡೆಯುತ್ತಿವೆ, ಆದರೆ ಡಾ.ಶ್ರೀಮಾಲಿಯವರ ಒಬ್ಬಂಟಿಗರ ಕೊಡುಗೆಯು ಮೀರಿಸದೆಯೇ ಉಳಿದಿದೆ ಎಂದು ಹೇಳಿದುದಲ್ಲದೆ ಈ ಎಲ್ಲಾ ಅನ್ವೇಷಣೆಗಳನ್ನು ಒಗ್ಗೂಡಿಸಿದರೂ ಒಬ್ಬ ಶೋಧಕನ ಒಳದೃಷ್ಟಿಗಳಿಗೆ ಸಮಾನಾಗುವುದಿಲ್ಲ ಎಂದು ಸಹ ಹೇಳಿದರು.

ವೈಯಕ್ತಿಕವಾಗಿ ಹೇಳಬೇಕೆಂದರೆ ಶ್ರೀಭ್ರೂಷೆರವರು ಡಾ.ಶ್ರೀಮಾಲಿಯವರಿಗೆ ಆಳವಾದ ಕೃತಜ್ಞತೆಗಳನ್ನು ಅಂಗೀಕರಿಸಿದರು. ಅವರು ನಾಲ್ಕು ತಿಂಗಳುಗಳಕಾಲ ಡಾ.ಶ್ರೀಮಾಲಿಯವರನ್ನು ಹತ್ತಿರದಿಂದ ನೋಡಿದುದರಲ್ಲಿ ಅವರ ಸಮ್ಮೋಹನದ ಜ್ಞಾನವು ಎಲ್ಲೆ ಇಲ್ಲದುದು ಎಂದು ಮನವೊಲಿಸಿತ್ತು. ಅವರು ಏನೆಂದರೆ ಒಬ್ಬ ಸರಳ ಮತ್ತು ಸೌಮ್ಯ ಮನುಷ್ಯರು, ಸಂಪೂರ್ಣ ವಿದ್ಯಾಲಯದ ಸಾಹಸ ಕೆಲಸಗಳಿಗಿಂತಲೂ ಹೆಚ್ಚಾಗಿ ಒಬ್ಬಂಟಿಗರಾಗಿಯೇ ಸಾಧಿಸಿದ್ದರು. ಶ್ರೀಭ್ರೂಷೆರವರು ಯಾರನ್ನೂ ಯಾವತ್ತೂ ಎಷ್ಟೇ ದೊಡ್ಡವರಾಗಿರಲಿ ಗುರು ಎಂದು ಒಪ್ಪಿದ್ದಿಲ್ಲ. ಆದಾಗ್ಯೂ ಡಾ.ಶ್ರೀಮಾಲಿಯವರನ್ನು ಅವರ ಅಪ್ಪಟವಾದ ಗುರು ಎಂದು ನೋಡಿದ್ದರು. ಪ್ರತಿಯೊಂದು ಶಬ್ದದ ಅರ್ಥದಲ್ಲಿಯೂ ಅವರು ಸರ್ವಶ್ರೇಷ್ಠರಾಗಿದ್ದರು.

ಡಾ.ಶ್ರೀಮಾಲಿಯವರು ಬಹಳವೇ ಸರಳ ಮನುಷ್ಯರು ಮತ್ತು ಎಳ್ಳಷ್ಟೂ ಅಹಂಕಾರವಿಲ್ಲದವರು ಎಂದು ಭ್ರೂಷೆರವರು ಮುಂದುವರೆದು ಹೇಳಿದರು. ಅವರು ಪಂಡಿತರಹಾಗೆ ಕಾಣುವುದೂ ಇಲ್ಲ. ಇಷ್ಟರಿಂದ ಅವರನ್ನು ಕಾಣಲು ಸಂಪೂರ್ಣ ಸಜ್ಜಾಗಿದ್ದೇನೆ ಎಂದೆನಿಸಿತು. ಈ ಚರ್ಚೆಯು ನನಗೆ ಬಹಳವೇ ಅವಶ್ಯವಾದಂತಹ ಒಂದು ಸಾಧಾರಣ ಅಡಿಪಾಯವನ್ನು ಕೊಟ್ಟಿತು. ಮೊದಲೇ ನಿರ್ಧರಿಸಿದಹಾಗೆ ಸ್ವಲ್ಪ ಹೊತ್ತಿನಲ್ಲೇ ಸಮ್ಮೇಳನವು ಪ್ರಾರಂಭವಾಯಿತು. ಭಾರತದಿಂದ 60 ಜನರಿಗಿಂತಲೂ ಹೆಚ್ಚು ಪಂಡಿತರು ಬಂದರು. ಇನ್ನುಳಿದ 30 ಜನ ಪರದೇಶದಿಂದ ಬಂದರು.

ಸಮ್ಮೇಳನ ಪ್ರಾರಂಭವಾಗುವುದರಲ್ಲಿದ್ದಾಗ ಚಿಂತನೆಗಳಿಗೆ ಅಧ್ಯಕ್ಷತೆಯನ್ನು ಯಾರು ವಹಿಸಬೇಕು ಎಂದು ಏಕಾಭಿಪ್ರಾಯವನ್ನು ಪಡೆಯಲು ವಿಧ್ಯುಕ್ತವಲ್ಲದ ಚರ್ಚೆಯು ಅನುಕರಿಸಿತು. ಭಾಗೀದಾರರಲ್ಲಿ ಒಬ್ಬರಾದ ಶ್ರೀಗೆಲ್ಡೆನ್‌ರವರು ಡಾ.ಶ್ರೀಮಾಲಿಯವರ ಯೋಗ್ಯಹಾಜರಿಯು ಇದೆ ಎಂದು ಸಮೂಹದ ಗಮನ ಸೆಳೆದರು. ಈ ಒಂದು ಕೆಲಸಕ್ಕಾಗಿ ಬೇರೆಯಾವುದೇ ಹೆಸರನ್ನು ಚರ್ಚಿಸುವುದು ವ್ಯರ್ಥವೆಂದು ಅಭಿಪ್ರಾಯಪಟ್ಟರು. ಶ್ರೀಗೆಲ್ಡೆನ್‌ರವರ ಪ್ರಸ್ತಾಪವನ್ನು ಗುಡಿಗಿನಂತಹ ಚಪ್ಪಾಳೆಗಳ ಜಯಕಾರವು ಸ್ವಾಗತಿಸಿತು ಮತ್ತು ಡಾ.ಶ್ರೀಮಾಲಿಯವರು ಐತಿಹಾಸಿಕ ಸಮ್ಮೇಳನದ ಸಭಾಧ್ಯಕ್ಷರಾಗಿ ಚುನಾಯಿತರಾದರು.

ಅವರು ಅಧ್ಯಕ್ಷತೆಯನ್ನುವಹಿಸಲು ನಿಲ್ಲುತ್ತಿದ್ದಹಾಗೆಯೇ ಅವರ ಮೊಟ್ಟ ಮೊದಲನೆಯ ದರ್ಶನವು ನನಗಾಯಿತು. ಅವರಲ್ಲಿ ಶಾಂತತೆ ಮತ್ತು ಶುದ್ಧತೆಯ ಅಚ್ಚುಕಟ್ಟಾದ ಒಗ್ಗೂಡುಕೆಯು

ಹೊರಸೂಸುತ್ತಿತ್ತು, ಒಬ್ಬ ಎತ್ತರ ಮತ್ತು ದೃಢಕಾಯ ಮನುಷ್ಯರಾದ ಅವರು ಬಹಳ ಸರಳ ಆದರೂ ಅದ್ವಿತೀಯವಾಗಿ ಆಕರ್ಷಣೀಯವಾಗಿದ್ದರು. ಅವರ ಋಷಿ ತರಹದ ಅಸ್ತಿತ್ವಕ್ಕೆ ಅವರ ಕಾಂತಿಯುಕ್ತವಾದ ಕಣ್ಣುಗಳು ಪ್ರಕಾಶಿಸುವಂತಹ ಭವ್ಯತೆಯನ್ನು ಕೊಟ್ಟಿದ್ದವು.

ಡಾ.ಶ್ರೀಮಾಲಿಯವರು ಅಧ್ಯಕ್ಷರಾಗಿ ಪ್ರಾರಂಭಿಸುತ್ತಾ ಎಲ್ಲರಿಗೂ ಕೃತಜ್ಞತೆಯನ್ನು ಸಲ್ಲಿಸಿದರು ಮತ್ತು ಕಾರ್ಯದ ನಿಯಮಗಳಲ್ಲದೆ ಸಮ್ಮೇಳನದ ಉದ್ದೇಶಗಳನ್ನು ಸಂಕ್ಷಿಪ್ತವಾಗಿ ತಿಳಿಸಿದರು.

ಈಗಿನ ದಿನದ ತೊಂದರೆಯ ಸಮಯದಲ್ಲಿ ಶಾಂತಿಯನ್ನು ನೀಡಲು ಹಿಪ್ನಾಟಿಸಂಗೆ ಮಾತ್ರ ಆಂತರಿಕ ತಾಕತ್ತು ಇದೆ ಎಂದು ಆಯೋಜಕರು ವಾದಿಸಿದರು.

ಸಮ್ಮೋಹನದ ಕ್ಷೇತ್ರದಲ್ಲಿ ಮತ್ತು ಇತರೆ ಜೀವನದ ಹಾದಿಗಳಲ್ಲಿ ಹೋಲಿಸಿ ಬೆಲೆಯನ್ನು ನಿಷ್ಕರ್ಷೆ ಮಾಡಿ ಏಳ್ಗೆಯನ್ನು ದಾಖಲಿಸಿರುವುದನ್ನು ನಿವೇದಿಸಲು, ಸಮ್ಮೋಹನ ಕ್ಷೇತ್ರದಲ್ಲಿ ಹೆಚ್ಚಿನ ಒಂದು ಏಳ್ಗೆಯನ್ನು ಸಾಧಿಸಿಲ್ಲ ಎಂದು ತಿಳಿದುಕೊಳ್ಳಲಾಯಿತು. ಸಮ್ಮೋಹನಕ್ಕೆ ನಿವೇದಿಸಿರುವಂತಹ ಪಂಡಿತರ ಕೊಡುಗೆಗಳು ಆಳದಲ್ಲಿ ಬಹಳವಾಗಿ ಅಭಾವ ಹೊಂದಿದ್ದವು. ಈ ಒಂದು ಶಿಸ್ತಿನಲ್ಲಿ ಪ್ರಚಂಡವಾದ ಸಾಮರ್ಥ್ಯದಲ್ಲಿ ಆಳವಾಗಿ ಹೋಗಲು ಪುನಃ ಸಮಯ ಬೇಕಾಗಿದೆ ಎಂದು ಭಾಷಣಕಾರರು ಒತ್ತಿ ಹೇಳಿದರು ಮತ್ತು ಅನುಸರಿಸಬೇಕಾದ ಪದ್ಧತಿಗಳನ್ನು ಗುರುತಿಸಬೇಕಾಗಿದೆ ಏಕೆಂದರೆ ಮುಂದೆ ಸತತ ಹಾದಿಯಲ್ಲಿ ಸಮರಸವಾದ ದೈಹಿಕ ಮತ್ತು ಮಾನಸಿಕ ಏಳ್ಗೆಗೆ ಬಹಳ ಪರಿಣಾಮಕಾರಿಯಾದ ಕೆಲಸವನ್ನು ನಿರ್ವಹಿಸುತ್ತಿದೆ.

ಈಗ ಭಾರತೀಯ ಅಭ್ಯರ್ಥಿಗಳು ಮಾತನಾಡಿದರು. ತಮ್ಮ ವೈಯಕ್ತಿಕ ಒಳದೃಷ್ಟಿ ಮತ್ತು ಅನ್ವೇಷಣೆಗಳಿಂದ ಸಮ್ಮೇಳನದ ಬೆಲೆಯನ್ನು ನಿಷ್ಕರ್ಷಿಸಲು ಅಪೇಕ್ಷಿಸಿದರು. ನನ್ನ ಸುಸ್ಪಷ್ಟವಾದ ಜ್ಞಾಪಕದಲ್ಲಿರುವ ಒಬ್ಬ ಬಿಹಾರದ ಪಂಡಿತನು ಶ್ರೀಚಕ್ರಾಧರ, ಮಾನವತ್ವಕ್ಕೆ ಉಪಯೋಗಕರವಾದ ಕೆಲವು ನವೀನ ಪದ್ಧತಿಗಳನ್ನು ಕಂಡುಹಿಡಿದುದಾಗಿ ತಿಳಿಸಿದನು. ಆಳವಾದ ಏಕಾಗ್ರತೆಯನ್ನು ತರುವಂತಹ ಒಂದು ವಿಶೇಷ ಕಲೆಯನ್ನು ಸಮ್ಮೇಳನದಲ್ಲಿ ಪ್ರದರ್ಶಿಸಿದನು. ಒಬ್ಬ ಜರ್ಮನಿಯ ಅಭ್ಯರ್ಥಿ, ಶ್ರೀಗ್ಲೆಡೆನ್ , ಸುಪ್ತ ಮನಸ್ಸು ಒಂದು ತಾಕಲಾಟದ ಇರುವಿಕೆಯು, ಮತ್ತು ಸ್ಪಷ್ಟವಾದ ಪದ್ಧತಿಗಳನ್ನು ಅನುಸರಿಸುವುದರಿಂದ ಯಾರೊಬ್ಬರಾದರೂ ಭೌತಿಕ ಮತ್ತು ಸುಪ್ತಮನಸ್ಸುಗಳನ್ನು ಸೇರಿಸುವಿಕೆಯನ್ನು ಸಾಧಿಸಬಹುದು ಎಂದು ವಾದಿಸಿದರು. ಶ್ರೀಗ್ಲೆಡೆನ್ ತಮ್ಮ ವಾದವನ್ನು ಮುಂದುವರಿಸಿ ಸುಪ್ತಮನಸ್ಸು ಬಾಹ್ಯಮನಸ್ಸಿನ ತಾಕಲಾಟವನ್ನು ಹೇಗಿದೆಯೋ ಹಾಗೆಯೇ ಸ್ವೀಕರಿಸುತ್ತದೆ,ಸಾಧಾರಣವಾಗಿ ಯಾರೊಬ್ಬರಿಗೂ ಈ ಒಂದು ಒಗ್ಗೂಡುಕೆಯ ಅರಿವು ಯಾವಮಟ್ಟಕ್ಕೂ ಅರಿವಾಗುವುದಿಲ್ಲ, ಎಂದರು.

ಸುಮಾರು ಇಪ್ಪತ್ತು ಅಭ್ಯರ್ಥಿಗಳು ಈ ಒಂದು ಚರ್ಚೆಯಾಗುತ್ತಿರುವ ವಿಷಯದ ಮೇಲೆ ಮಾತನಾಡಿದರು.

ಹೇಗಾದರಾಗಲಿ, ಬಹಳಷ್ಟು ಜನ ಅಭ್ಯರ್ಥಿಗಳು ಡಾ.ಶ್ರೀಮಾಲಿಯವರ ಭಾಷಣವನ್ನು ಕೇಳಲು ಕೌತುಕರಾಗಿದ್ದರು. ನನ್ನ ಒಂದು ವಿಷಯದ ಅವಸ್ಥೆಯು ಸ್ವಲ್ಪಬೇರೆಯಾಗಿದ್ದಿತು ಏಕೆಂದರೆ ನಾನು ಅಷ್ಟುದೂರದಿಂದ ಬಂದಿರುವುದು ಬರಿಯ ಭಾಷಣ ಕೇಳಿ ಹೋಗಲಿಕ್ಕಲ್ಲ ಆದರೆ ಅವರೊಡನೆ ನಾನು ವೈಯಕ್ತಿಕವಾಗಿ ಭೇಟಿಯಾಗಲಿಕ್ಕೆ. ನಾನು ಅವರಿಂದ ವೈಯಕ್ತಿಕ ದರ್ಶನಾನುಗ್ರಹವನ್ನು ಪಡೆಯಲು ಅಷ್ಟು ಸುಲಭಕೆಲಸವಲ್ಲ ಎಂಬುದನ್ನು ನೋಡಿದೆ. ಏಕೆಂದರೆ ಅವರು ಆಗಿನದಿನದಲ್ಲಿ ಮೊದಲೇ ಬಹಳ ಭಾರದ ಕೆಲಸದಲ್ಲಿರುತ್ತಿದ್ದರು.

ಹೇಗಾದರೂ ನಾನು ಅವರನ್ನು ನೆರಳಿನಂತೆ ಹಿಂಬಾಲಿಸಿದೆ ಮತ್ತು ಕೆಲವು ಪ್ರಾಸಂಗಿಕವಾದ ಔಪಚಾರಿಕವಾಗಿ ಎದುರುಗೊಳ್ಳುವುದನ್ನು ಬಿಟ್ಟರೆ ಬೇರೆಯಾವ ಪ್ರಯೋಜನಕರವಾದ ಏಳ್ಗೆಯನ್ನು ಮಾಡಲಿಲ್ಲ.

ಮರುದಿನ ಬೆಳಿಗ್ಗೆ 10 ಗಂಟೆಗೆ ನಾನು ಅವರ ನಿವಾಸಸ್ಥಾನವನ್ನು ತಲುಪಿದೆ ಅವರನ್ನು ವೈಯಕ್ತಿಕವಾಗಿ ಭೆಟ್ಟಿಯಾಗಲು ಹಲವಾರು ಆಸಕ್ತ ಜನರು ಗುಂಪುಕಟ್ಟಿ ಕೊಂಡುದುದು ಕಂಡು ನನಗೆ 10 ರಿಂದ 15 ನಿಮಿಷಗಳು ಮಾತ್ರ ಸಿಗುವುದು ಎಂದು ಲೆಕ್ಕ ಹಾಕಿದ್ದರೂ ನನ್ನ ಕರೆಚೀಟಿಯನ್ನು ಒಳಗೆ ಕಳುಹಿಸಿದೆ.

ಅದಕ್ಕಾಗಿ, ಗಂಭೀರವಾಗಿ ಆಶಿಸುತ್ತಾ ನನ್ನ ಭಾರತಕ್ಕೆ ಬರುವಿಕೆಯ ಪ್ರತ್ಯೇಕ ನಿರ್ಬಂಧ ಪಡಿಸುವಂತಹ ಕಾರಣಗಳನ್ನು ನನ್ನ *ಲೆಟರ್ ಪ್ಯಾಡ್* ಮೇಲೆ ಸಂಕ್ಷಿಪ್ತವಾಗಿ ಬರೆದೆ. ಶ್ರೀಒಕಾಸರವರ ಹೆಸರನ್ನು ಉಲ್ಲೇಖಿಸಲು ಸರಿಯಾದ ಎಚ್ಚರಿಕೆಯನ್ನು ತೆಗೆದುಕೊಂಡು ಮತ್ತು ಡಾ.ಶ್ರೀಮಾಲಿಯವರಿಗೆ ನನಗೆ ಒಂದು ಗಂಟೆಯಿಂದ ಎರಡು ಗಂಟೆಯವರೆಗಿನ ಸ್ವಲ್ಪ ಹೆಚ್ಚಿನ ಸಮಯವನ್ನು ಅನುಗ್ರಹ ಮಾಡಲು ಪ್ರಾರ್ಥಿಸಿಕೊಂಡೆ. ಈ ಚೀಟಿಯನ್ನು ನಾನು ಒಳಗೆ ಕಳುಹಿಸಿಕೊಟ್ಟೆ. ಅದೇ ರಾತ್ರಿ 10 ಕ್ಕೆ ಕಾಣುವುದು ಉತ್ತಮವೆಂದು ಸಮಯೋಚಿತವಾದ ಉತ್ತರ ಬಂದಿತು.

ಸಮ್ಮೇಳನದ ಅಧಿವೇಶನಗಳಲ್ಲಿ ವಿದೇಶೀ ಪ್ರತಿನಿಧಿಗಳು ಹೆಚ್ಚಾಗಿ ತಮ್ಮ ಅನ್ವೇಷಣೆಗಳ ಬಗ್ಗೆ ಮತ್ತು ಸಮ್ಮೋಹನ ಕ್ಷೇತ್ರದಲ್ಲಿ ತಮ್ಮ ಪ್ರಯೋಗಗಳ ಬಗ್ಗೆ ಸಹ ಮಾತಾಡಿದರು. ಆದಿನ ಸಂಪೂರ್ಣ ನಾನು ಸಮ್ಮೇಳನದಲ್ಲೇ ಇದ್ದೆ.

ಆರಾತ್ರಿ ಹತ್ತಕ್ಕೆ ಡಾ.ಶ್ರೀಮಾಲಿಯವರನ್ನು ಅವರ ಕೊಠಡಿಯಲ್ಲಿ ಸಂದರ್ಶಿಸಿದೆ. ಅವರು ಆದಿನ ಸಂಪೂರ್ಣ ಕಾರ್ಯನಿರತರಾಗಿದ್ದರೂ ಕಿಂಚಿತ್ತೂ ಸುಸ್ತಾಗಿರುವ ಹಾಗೆ ಕಾಣಲಿಲ್ಲ, ಅವರು ಸಂತೋಷ ಮತ್ತು ಪ್ರಸನ್ನರಾಗಿ ಕಾಣುತ್ತಿದ್ದರು. ನನ್ನನ್ನು ಕೂಡಲೇ ಅವರ ವಶಕ್ಕೆ ತೆಗೆದುಕೊಂತ ಪ್ರೀತಿಯು ಅವರ ತೇಜೋಮಯವಾದ ಕಣ್ಣಿನಿಂದ ಹೊರಗೆ ಹರಿದು ಬರುತ್ತಿತ್ತು. ಕೆಲವೇ ಪ್ರಯತ್ನಗಳಲ್ಲಿ ನನ್ನನ್ನು ನಾನು ಪರಿಚಯಿಸಿಕೊಂಡೆ. ನಾನು ಮೊದಲಬಾರಿಗೆ ಅವರನ್ನು ಕಾಣುತ್ತಿದ್ದರೂ ಹಿಪ್ನಾಟಿಜಂಗೆ ನನ್ನ ಎಲ್ಲಾ ಕೊಡುಗೆಗಳು ಮತ್ತು ಅದರ ಉದ್ದೇಶಗಳನ್ನು ಹೇಗೆ ಬೆಳೆಸಿದ್ದೇನೆ ಎನ್ನುವುದು ತಮಗೆ ಗೊತ್ತಿದೆ ಎಂದು ಅವರು ತಿಳಿಸಿದರು.

ಅವರಿಗೆ ವೈಯಕ್ತಿಕವಾಗಿ ಪರಿಚಯವಿಲ್ಲದ ವ್ಯಕ್ತಿಗಳ ಬಗ್ಗೆಯೂ ಅವರ ಆವತ್ತಿನ ವರೆಗಿನ ಕೆಲಸಗಳ ಬಗ್ಗೆ ತಿಳಿದುಕೊಳ್ಳುವ ಅವರ ಆಳವಾದ ಆಸಕ್ತಿ ಇರುವುದು ನಿಜವಾಗಿಯೂ ಬೆರಗುಗೊಳಿಸುವಂತಹುದು. ಹೇಗಾದರೂ ಈ ಕ್ಷೇತ್ರದಲ್ಲಿ ನಾನು ಮಾಡಿರುವಂತಹ ಸ್ವಲ್ಪವೇ ಸಾಧನೆಯಿಂದ ನನಗೆ ಏನೇನೂ ತೃಪ್ತಿಯೇ ಆಗಿಲ್ಲ ಎಂದು ತಿಳಿಸಿದೆ. ಈ ಒಂದು ವಿಷಯದಲ್ಲಿ ನಾನು ಆಳವಾದ ಅಧ್ಯಯನವನ್ನು ಮಾಡಬೇಕೆಂದಿದ್ದೇನೆ ಅದಕ್ಕಾಗಿ ನನಗೆ ಅವರ ಮಾರ್ಗದರ್ಶನ ಬೇಕಾಗಿದೆ. ಸಮ್ಮೋಹನಕ್ಕೆ ಅವರ ಕೊಡುಗೆಯು ಸರಿಸಾಟಿ ಇಲ್ಲದ್ದು ಅದಕ್ಕಾಗಿ ಅವರಲ್ಲಿ ಭರವಸೆಯನ್ನಿಡಲು ಪೂರ್ಣವಾಗಿ ನಿರ್ದೋಷಹೊಂದಿದ್ದೆನು. ಅವರು ಪೋಷಕರಾಗಿ ಮಾರ್ಗದರ್ಶನ ಮಾಡಿದರಾದರೆ ನಾನು ಅದೃಷ್ಟಶಾಲಿ ಎನಿಸುವುದು ಎಂದು ನಾನು ಅವರಿಗೆ ಹೇಳಿದೆ.

ಒಂದು ನಿಮಿಷ ಡಾ.ಶ್ರೀಮಾಲಿಯವರು ನನ್ನನ್ನು ದಿಟ್ಟಿಸುವುದನ್ನು ಬಿಟ್ಟರೆ ಏನನ್ನೂ ಮಾತಾಡಲಿಲ್ಲ. ಅವರ ಭೇದಿಸುವಂತಹ ನೋಟವು ನನ್ನ ಸುಪ್ತಮನಸ್ಸಿನ ಆಳವಾದ ಕತ್ತಲೆಗಳಲ್ಲಿ ಪ್ರವೇಶಿಸುತ್ತಿದೆ ಎಂದು ನನಗೆ ಅನ್ನಿಸಿತು. ಬಹುಶಃ ಅವರ ದೃಷ್ಟಿಯನ್ನು ನನ್ನ ಮೇಲೆ ನೆಟ್ಟಹಾಗೆಯೇ ನನ್ನನ್ನು

ನಿಷ್ಕರ್ಷಿಸುತ್ತಿದ್ದರು ಸಹ. ಯಾವುದೇ ಸ್ಥಿತಿಯಲ್ಲಿ ನನ್ನ ಅಪ್ಪಟತನ, ಅಧಿರತ ಪ್ರಯತ್ನ ಮತ್ತು ಅನುಸರಿಸುವಿಕೆಗಳನ್ನು ಅವರು ಶ್ಲಾಘಿಸಿದರು. ಮತ್ತು ಈ ಸದ್ಗುಣಗಳಿಂದ ನನ್ನ ಜೀವನದ ಉಚ್ಚಗುರಿಯನ್ನು ನಾನು ಖಚಿತವಾಗಿ ಮುಟ್ಟಬಲ್ಲೆನೆಂದರು.

ಅವರ ಶಬ್ದಗಳು ನನಗೆ ಆಶೀರ್ವಾದದ ತರಹ ಬಂದವು. ಡಾ.ಶ್ರೀಮಾಲಿಯಂತಹ ನಿಲುವಿನ ಒಬ್ಬ ವ್ಯಕ್ತಿಯು ನನ್ನ ಅವಶ್ಯಕತೆಯ ಅಪ್ಪಟತನವನ್ನು ಹೊಗಳಿದರೆ ನಾನು ಖಚಿತವಾಗಿ ಸಾರ್ಥಕವಾಗುವಂತಹುದನ್ನು ಸಾಧಿಸ ಬಲ್ಲೆ ಎಂದು ನಾನು ತಿಳಿದುಕೊಂಡೆ. ಅವರಿಗೆ ಧನ್ಯವಾದಗಳನ್ನು ಹೇಳಿ ಅವರೊಂದಿಗೆ ಜೋಧಪುರದಲ್ಲಿ ಇರಲು ಅವಕಾಶಮಾಡಿಕೊಡಲು ಬೇಡಿದೆ. ಅವರು ಒಪ್ಪಿದರು. ಅಲ್ಲಿಗೆ ನಾನು ಅಷ್ಟುದೂರದಿಂದ ಭಾರತಕ್ಕೆ ಬಂದಂತಹ ಕೆಲಸದ ಮುಖ್ಯಭಾಗದ ಸಾಧನೆಯಾಯಿತು. ಮರುದಿನ ಸಮ್ಮೇಳನದ ಸಮಾಪ್ತಿಯ ಸಂಕೇತವಾಯಿತು. ಸಭಾಂಗಣವು ಆಸಕ್ತ ಜನರಿಂದ, ಡಾ.ಶ್ರೀಮಾಲಿಯವರ ಬೀಳ್ಕೊಡುಗೆಯ ಭಾಷಣವನ್ನು ಕೇಳಲು ಅದರ ವಿಸ್ತಾರಕ್ಕೆ ಮೀರಿ ಕಿಕ್ಕಿರಿದು ಹೋಗಿತ್ತು.

ಡಾ.ಶ್ರೀಮಾಲಿಯವರು ಸಮ್ಮೋಹನ ವಿಜ್ಞಾನದ ಏಳ್ಗೆ ಮತ್ತು ವೃದ್ಧಿಗಾಗಿ ಹಲವಾರು ಸ್ಥಳಗಳಲ್ಲಿ ಹಲವಾರು ಪ್ರಯತ್ನಗಳನ್ನು ನಡೆಸುತ್ತಿರುವುದರ ಮೇಲೆ ಬೆಳಕನ್ನು ಚೆಲ್ಲುತ್ತಾ ಪ್ರಾರಂಭಿಸಿದರು. ಮನುಷ್ಯನು ಕೇವಲ ತನ್ನ ಬಾಹ್ಯ ಚಟುವಟಿಕೆಗಳಲ್ಲಿ ಮತ್ತು ವೈಜ್ಞಾನಿಕ ಏಳ್ಗೆಯಲ್ಲಿ ಅವಲಂಬಿತನಾದರೆ ಖಚಿತವಾಗಿ ತನ್ನ ಪೂರ್ಣತೆಯನ್ನು ಸಾಧಿಸಲಾರನೆಂದು ಇಡೀ ವಿಶ್ವವು ಸುತ್ತುವರೆದು ಒಂದು ದೃಷ್ಟಿಗೆ ಹೇಗೆ ಬಂದಿದೆ ಎಂಬುದನ್ನು ಸ್ವರಭಾರ ಹಾಕಿದರು. ತನ್ನತನವನ್ನು ಅರ್ಥಮಾಡಿಕೊಳ್ಳುವುದರ ಮೂಲಕ ಮಾತ್ರವೇ ಯಾರೊಬ್ಬರಾದರೂ ವಿಶ್ವವನ್ನು ಸರ್ವಶ್ರೇಷ್ಠವಾಗಿ ವೃದ್ಧಿಸಿ ಮತ್ತು ಖಚಿತವಾಗಿ ಆನಂದಮಯವಾಗಿ ಮಾಡಲು ಉದ್ದೇಶಿಸಬಹುದು. ಮತ್ತು ಇದು ಒಬ್ಬರ ಸುಪ್ತಮನಸ್ಸಿನ ಆಳವಾದ ತಿಳುವಳಿಕೆಯನ್ನು ಒಳಗೊಂಡಿದೆ ಎಂದು ವಾದಿಸಿದರು. ಇಂದು ವಿಶ್ವವು ಹತ್ತಿರವಾಗುತ್ತಿರುವ ಪ್ರಪಂಚದ ಮಹಾಯುದ್ಧದಿಂದ ಬರುವ ಮತ್ತು ಅಲ್ಲಿಂದ ಉಗಮಿಸಬಹುದಾದಂತಹ ಭಯಂಕರವಾದ ಕಗ್ಗೊಲೆಯ ಭೀತಿಯಿಂದ ಪರಿಪೂರ್ಣವಾಗಿತ್ತು. ಹೆಚ್ಚೆಚ್ಚು ವೈಜ್ಞಾನಿಕ ಉನ್ನತಿಯು ಹಿಂದೆಂದೂ ಇಲ್ಲದ ಹೆಚ್ಚಿನ ಭಯ ಮತ್ತು ಕ್ಲೇಶದಲ್ಲಿ ಆಳವಡಿಸಲ್ಪಟ್ಟು ಖಚಿತವಾಗಿ ಅವನತಿ ಹೊಂದಿದ ಮತ್ತು ಅಪಾಯಕರವಾದ ಸಾವಿಗೆ ತನ್ನಷ್ಟಕ್ಕೆ ಹತ್ತಿರವಾಗುತ್ತಿರುವ ಮನುಷ್ಯನ ದುಃಖವು ಹೆಚ್ಚು ದಯಾಪಾತ್ರವಾಗಿತ್ತು.

ತಾನು ಶಾಂತಿಗಾಗಿ ತಡಕಾಡುತ್ತಿರುವಾಗ ಇಂತಹ ಸಮಯದಲ್ಲಿ ಅವನಿಗೆ ಮತ್ತು ಅವನ ಸಮಾಜಕ್ಕೆ, ಅವನ ದೇಶಕ್ಕೆ ಮತ್ತು ವಿಶಾಲವಾಗಿ ಇಡೀ ವಿಶ್ವಕ್ಕೆ ಅಂದು ಕೊಂಡಹಾಗೆ ಸೂಕ್ತವಾದ ಭದ್ರತೆಯನ್ನು ಕೊಡಬಹುದಾದಂತಹ, ಮನುಷ್ಯನು ತನ್ನ ಎಲ್ಲಾ ವೈಜ್ಞಾನಿಕ ದಾಪುಗಾಲಿನಲ್ಲಿ ಖಚಿತವಾಗಿ ಕ್ರಿಯಾತ್ಮಕ ವಿಜ್ಞಾನವಾಗಿ ಉದ್ಭವಿಸಿರುವ ಯಾವುದೇ ಬಗೆಯಲ್ಲಿ ವಿಧ್ವಂಸಕವಾಗಿಲ್ಲದ ಹಿಪ್ನಾಟಿಜಂನ ನೆರವಿಗೆ ಬಾರದೆ ಬೇರೆ ಆಯ್ಕೆ ಇಲ್ಲ.

ಹಿಪ್ನಾಟಿಜಂ ಮಾತ್ರವೇ, ಅವರು ವಾದಿಸಿದರು, ಮನುಷ್ಯತ್ವಕ್ಕೆ ಶಾಂತಿ ಮತ್ತು ಭದ್ರತೆಯ ಭರವಸೆಯನ್ನು ಕೊಡಬಲ್ಲದು. ಅದು ಕ್ರಿಯಾತ್ಮಕ ವಿಜ್ಞಾನವಾಗಿತ್ತು, ಅದು ಮನುಷ್ಯನಿಗೆ ಶಾಂತಿಯನ್ನು ನೀಡಲು ಶ್ರುತಿಗೂಡಿದೆ. ಮನುಷ್ಯನ ನಡುವಳಿಕೆಗಳನ್ನು ರಕ್ಷಿಸಿ ಮತ್ತು ಮಾರ್ಗದರ್ಶನ ತೋರಿಸುವಂತಹ ಸುಪ್ತತನದ ವಿಜ್ಞಾನವಾಗಿತ್ತು.

ಸುಪ್ತಮನಸ್ಸನ್ನು ಅರ್ಥ ಮಾಡಿಕೊಳ್ಳುವುದೇ, ಡಾ.ಶ್ರೀಮಾಲಿಯವರೆಂದರು, ಈ ವಿಜ್ಞಾನದ

ಸಂಕೇತವಾಗಿದೆ. ಮತ್ತು ಇದು ಖಚಿತವಾಗಿ ಸುಲಭದ ಕೆಲಸವಲ್ಲ ಏಕೆಂದರೆ ಸುಪ್ತಮನಸ್ಸು ಪಾದರಸದ • ಹಾಗೆ ಉಳಿದು ಮತ್ತು ಬಹಳವಾಗಿ ಏಕಾ ಏಕಿ ಬದಲಾಗುತ್ತಲೇ ಇರುತ್ತದೆ. ಬೇರೆಯವರ ಬಗ್ಗೆ ಹೇಳುವುದೇನು, ಭಾರತದ ಯೋಗಿಗಳಿಗೂ ಮನಸ್ಸಿನ ಮೇಲೆ ಹತೋಟಿಯನ್ನು ಸಂಪಾದಿಸಲು ಕಷ್ಟವಾಗುತ್ತಿತ್ತು. ಯಾರೊಬ್ಬರು ತಮ್ಮ ಮನಸ್ಸಿನ ಮೇಲೆ ಹತೋಟಿಯನ್ನು ಸಂಪಾದಿಸಿದರೋ ಅವರು ಸರ್ವಶಕ್ತನೊಡನೆ ಒಂದಾದರು.

ಪಾದರಸದಂತಹ ಮನಸ್ಸಿನಮೇಲೆ ಹತೋಟಿಯನ್ನು ಸಂಪಾದಿಸಲು ವರ್ತಮಾನದಲ್ಲಿ ಎಷ್ಟು ಕಠಿಣವಾಗಿದೆಯೋ ಹಿಂದೆಯೂ ಹಾಗೆಯೇ ಇತ್ತು. ಕೆಲವು ಕ್ಷಣಗಳಲ್ಲಿ ತಮ್ಮ ಮನಸ್ಸಿನಮೇಲೆ ಹತೋಟಿಯನ್ನು ಪಡೆಯಲು ಸಮ್ಮೋಹಕರಿಗೆ *ಕ್ರಿಯಾಯೋಗವು* ಸಹಾಯಕವಾಗಿರುವುದನ್ನು ಕಂಡು ಕೊಳ್ಳಲಾಗಿದೆ. *ಕ್ರಿಯಯೋಗದಿಂದ* ಮನುಷ್ಯನ ಪರಿಮಿತಿಗೆ ಮೀರಿದ ವ್ಯಕ್ತಿತ್ವದ ನೋಟಗಳನ್ನು ಸಹ ವಶಪಡಿಸಿಕೊಳ್ಳಬಹುದು. *ಕ್ರಿಯಾಯೋಗವು* ಕೆಲವು ಅಭ್ಯಾಸಗಳನ್ನು ಒಳಗೊಂಡಿದ್ದರೂ ಸಹ ಮನುಷ್ಯನಿಗೆ ಸುಪ್ತ ಮನಸ್ಸಿನ ಮೇಲೆ ಹತೋಟಿಯನ್ನು ಕೊಡುವಂತಹ ಒಂದು ನವೀನ ಸಂಕ್ಷಿಪ್ತತೆಯನ್ನು ಕೊಟ್ಟಿದೆ.

ಮನುಷ್ಯನ ಮನಸ್ಸಿಗೆ ಎರಡು ಭಿನ್ನ ಅಸ್ತಿತ್ವಗಳು ಇವೆ ಎಂದು ತಿಳಿದುಕೊಳ್ಳಲಾಗಿತ್ತು ಬಾಹ್ಯ ಮತ್ತು ಸುಪ್ತ ಮನಸ್ಸು. ಮನುಷ್ಯನು ಎಚ್ಚೆತ್ತು ಕೊಂಡಿರುವವರೆಗೂ ಬಾಹ್ಯ ಮನಸ್ಸು ಕಾರ್ಯನಿರ್ವಹಿಸಿ ಅದು ನೋಡಿದ್ದನ್ನೆಲ್ಲಾ ದಾಖಲಿಸಿತು. ಈ ಒಂದು ಸಾಮರ್ಥ್ಯದಿಂದ ಬಹಳ ಸಮಯದ ನಂತರವೂ ತಾನು ನೋಡಿದ್ದನ್ನು ಮತ್ತು ಕೇಳಿದ್ದನ್ನು ಮರುಕಳಿಸುತ್ತಾನೆ. ಜ್ಞಾಪಕವೆಂದರೆ ದಾಖಲಿಸುವುದು ಬಿಟ್ಟರೆ ಬೇರೇನೂ ಇಲ್ಲ ಮತ್ತು ಅದರ ಸಲಕರಣೆಯು ಬಾಹ್ಯ ಮನಸ್ಸು. ಮನಸ್ಸಿನಲ್ಲಿ ಏನೇನು ದಾಖಲಾಗುತ್ತದೋ ಅದು ಶಾಶ್ವತವಾಗಿ ಹುದುಗಿಕೊಂಡು ಉಳಿದು ಮತ್ತು 20 ರಿಂದ 25 ವರ್ಷಗಳು ಗತಿಸಿದಾಗಲೂ ಮರುಕಳಿಸಿಕೊಳ್ಳಬಹುದು. ಯಾರಾದರೂ ಉದಾ:ಬಹಳ ಬಹಳ ಹಿಂದೆಯೇ ಕಂಡಂತಹ ವಿಪತ್ತು ಅಥವಾ ಅಪಘಾತವನ್ನು ಜ್ಞಾಪಿಸಿಕೊಳ್ಳಬಹುದು.

ಈ ಮೊದಲು ಬಹಿರ್ಮನವು ಅದರಷ್ಟಕ್ಕೇ ಸ್ವತಂತ್ರವಾಗಿದೆ ಮತ್ತು ಅದಕ್ಕೆ ಅಂತರ್ಮನಸ್ಸಿನ ಜೊತೆ ಸಂಪೂರ್ಣವಾದ ಸಂಬಂಧವಿಲ್ಲ ಎಂದು ಹೇಳಲಾಗಿತ್ತು. ಬಹಿರ್ಮನಸ್ಸು ಇನ್ನೇನು ಚಟುವಟಿಕೆರಹಿತವಾದಾಗ, ಅಂದರೆ ನಿದ್ರೆಯಲ್ಲಿ, ಅಂತರ್ಮನಸ್ಸು—ಹೀಗೆ ತರ್ಕವು ಹೋಗುತ್ತದೆ.— ಕಾರ್ಯ ನಿರ್ವಹಿಸಲು ಮತ್ತು ಅನುಭವಗಳನ್ನು ದಾಖಲಿಸಲು ಪ್ರಾರಂಭಿಸುತ್ತದೆ. ವಾಸ್ತವದಲ್ಲಿ ಅಂತರ್ಮನಸ್ಸು ಸಮಯವನ್ನು ದಾಟಿ ಹೋಗಿ ಬಹಿರ್ಮನಸ್ಸಿಗಿಂತಲೂ ಸೂಕ್ಷ್ಮವಾಗಿತ್ತು. ಅದಕ್ಕಾಗಿಯೇ ಅದು ಭೂತಕಾಲವನ್ನು ಹಣಿಕಿಹಾಕಿನೋಡುವುದಲ್ಲದೆ ಭವಿಷ್ಯವನ್ನೂ ಸಮನಾದ ತತ್ಪರತೆಯಿಂದ ನೋಡಬಹುದು. ಯಾರೊಬ್ಬರು ನಿದ್ರಿಸುತ್ತಿರುವಾಗ ಅವರ ಬಹಿರ್ಮನಸ್ಸು ಕೆಲಸ ಮಾಡಲಿಲ್ಲ. ಈ ಒಂದು ಅವಸ್ಥೆಯಲ್ಲಿ ಒಬ್ಬರ ಅಂತರ್ಮನಸ್ಸುವು ಹೆಚ್ಚು ಚಟುವಟಿಕೆವುಳ್ಳದ್ದಾಗಿ ಎಲ್ಲಾ ತರಹದ ನಡತೆಗಳನ್ನು ದಾಖಲಿಸಿತು. ಇದನ್ನೇ ನಾವು ಕನಸು ಎಂದು ಕರೆದೆವು. ಸಾಧಾರಣವಾಗಿ ಕನಸುಗಳ ಮೂಲಕ ಕಳೆದುಹೋದ ಘಟನೆಗಳಿಗೆ ತೆರೆದುಕೊಳ್ಳುತ್ತೇವೆ. ಕೆಲವುಸಲ ಈ ಮಾಧ್ಯಮವು ಬಹಳ ಬಹಳ ಹಿಂದೆ ಸಂಭವಿಸಿದಂತಹ ತುಂಬಾ ಘಟನೆಗಳನ್ನೂ ಕನಸುಗಳ ಮೂಲಕ ಕಲ್ಪಿಸಿಕೊಳ್ಳುತ್ತದೆ. ಭವಿಷ್ಯದ ಒಂದು ಕಾಲದಲ್ಲಿ ಒಬ್ಬ ಕಂಡರಿತಹ ಕನಸುಗಳ ಘಟನೆಗಳು ನಿಜವಾಗುತ್ತಿರುವಾಗ ಕೆಲವುಸಾರಿ ಘೋರವಾಗಿ ಹೃದಯ ಸ್ಪಂದನವೇ ನಿಂತುಹೋದಹಾಗಾಗುತ್ತದೆ. ಅದರ ಬಗ್ಗೆ ನಿಶ್ಚಯವಾಗಿ ಯಾವುದೇ ಚಮತ್ಕಾರವಿಲ್ಲ. ಏಕೆಂದರೆ ಈ ಒಂದು ಕಾರ್ಯವಿಧಾನವು, ಅಂತರ್ಮನಸ್ಸು ರೆಕ್ಕೆಗಳನ್ನು ಪಡೆದುಕೊಂಡು ಭವಿಷ್ಯದ ಗರ್ಭದಲ್ಲಿ ವಾಸವಾಗುವುದಲ್ಲದೆ ಭವಿಷ್ಯದ

ಕ್ಷಣಗಳನ್ನು ಗುರುತಿಸುವುದನ್ನು ಮಾತನಾಡುತ್ತದೆ. ಕನಸುಗಳ ಮಾಧ್ಯಮದಿಂದ ಈ ಒಂದು ಗತಿಯ ಮುನ್ನೋಟವನ್ನು ಸಾಧ್ಯಮಾಡಲಾಗಿತ್ತು.

ಬಹಿರ್ಮನಸ್ಸು ಮತ್ತು ಅಂತರ್ಮನಸ್ಸುಗಳು, ತಾತ್ಪರ್ಯ ಮತ್ತು ಸ್ವರೂಪದ ಸ್ಥಿತಿಗೆ ಅಭಿಪ್ರಾಯವಾಗಿತ್ತು, ಎರಡು ವಿಭಿನ್ನ ಅಸ್ತಿತ್ವವಾಗಿದ್ದವು. ಒಂದು ಕಾರ್ಯಗತಮಾಡುತ್ತಿದ್ದಾಗ ಇನ್ನೊಂದು ಮಾಡಲಿಲ್ಲ.

ಹೇಗಾದರೂ, ಡಾ.ಶ್ರೀಮಾಲಿಯವರು, ಈ ಶಾಸ್ತ್ರವು ಅದರ ಅಡಿಯಲ್ಲಿ ಸಂಪೂರ್ಣವಾಗಿ ತಪ್ಪಾಗಿದೆ ಎಂದು ವಿಮರ್ಶಿಸಿದರು. ಏಕೆಂದರೆ ಮನುಷ್ಯನ ಮನಸ್ಸು ಕೇವಲ ಎರಡು ಭಾಗಗಳಾಗಿ ವಿಂಗಡಿಸಲಾಗಿತ್ತು. ಈ ಎರಡು ಮನಸ್ಸುಗಳು—ಒಳಗಿನ ಮತ್ತು ಹೊರಗಿನ—ಒಂದೇ ಕಲ್ಪನೆಯ ನೋಟಗಳಾಗಿದ್ದವು. ಖಚಿತವಾಗಿ ಇವೆರಡೂ ವಿಭಿನ್ನ ಅಸ್ತಿತ್ವಗಳಲ್ಲ. ವಾಸ್ತವಿಕೆಯಲ್ಲಿ ಅವೆರಡೂ ಅಖಂಡವಾಗಿ ಸಂಪೂರ್ಣಮಾಡುತ್ತವೆ. ಬಹಿರ್ಮನಸ್ಸು ದಾಖಲು ಮಾಡಿದುದನ್ನೆಲ್ಲಾ ಅಂತರ್ಮನಸ್ಸಿಗೆ ಕಳುಹಿಸಿಕೊಡುತ್ತದೆ. ತನ್ನ ತಿರುವಿನಲ್ಲಿ ಹೀಗೆ ಕಳುಹಿಸಿಕೊಟ್ಟಂತಹ ಸಂಗತಿಗಳನ್ನು ಸಂರಕ್ಷಿಸುತ್ತದೆ. ಬಹಳವಾಗಿ ಅದೇ ರೀತಿಯಲ್ಲಿ ಅಂತರ್ಮನಸ್ಸು ಸಂಗತಿಗಳನ್ನು ಅಥವಾ ಸಂದರ್ಭಗಳನ್ನು ದಾಖಲಿಸಿದಾಗ ಬಹಿರ್ಮನಸ್ಸೂ ಸಹ ಅಂತಹ ಸಂಗತಿಗಳು ಅಥವಾ ಸಂದರ್ಭಗಳ ಜೊತೆಗೆ ಸಮಗ್ರ ಒಳನಡತೆಯಲ್ಲಿ ಕಾರ್ಯನಡೆಸಿತ್ತು.

ನಿದರ್ಶನಕ್ಕೆ, ಯಾರೊಬ್ಬರಾದರೂ ಒಂದು ಭಯಂಕರವಾದ ಕನಸನ್ನು ನೋಡಿದರೆ, ಅವನು ಹಾಸಿಗೆ ಇಂದ ಎಸೆಯಲ್ಪಡುತ್ತಾನೆ. ಸಂಪೂರ್ಣವಾಗಿ ತನ್ನ ದೇಹದಲ್ಲೆಲ್ಲಾ ಬೆವರಲು ಪ್ರಾರಂಭಿಸುತ್ತಾನೆ. ಅವನ ನಾಡಿ ಬಡಿತವು ಗಾಭರಿಪಡಿಸುವಂತದ್ದಾಗುತ್ತದೆ. ಅದು ಅಂತರ್ಮನಸ್ಸು ಏನೇನನ್ನು ಸ್ವೀಕರಿಸುತ್ತಿದೆಯೋ ಅದೆಲ್ಲವೂ ಬಹಿರ್ಮನಸ್ಸಿಗೂ ಕಳುಹಿಸುತ್ತದೆ ಎಂದು ಸರಳವಾಗಿ ಅರ್ಥಕೊಡುತ್ತದೆ. ಬಹಿರ್ಮನಸ್ಸಿಗೆ ತನಗೆ ಕಳುಹಿಸಿದಂತಹ ಸಂಗತಿಗಳಿಂದ ಅತೀ ಪ್ರಯಾಸವೆನಿಸಿದಾಗ ಅದು ಚುರುಕಾಯಿತು ಮತ್ತು ಅದು ಚುರುಕಾದ ಕ್ಷಣದಲ್ಲೇ ಈ ಮನುಷ್ಯ ಏಳುತ್ತಾನೆ.

ಇದಲ್ಲದೆ, ಅಂತರ್ಮನಸ್ಸು ದಾಖಲಿಸುದುದೆಲ್ಲಾ ಬಹಿರ್ಮನಸ್ಸಿನಲ್ಲೂ ದಾಖಲಾಗಿತ್ತು, ಮತ್ತು ನಿಖರವಾಗಿ ಈ ಕಾರಣಕ್ಕಾಗಿಯೇ ಸಂಬಂಧಪಟ್ಟ ಮನುಷ್ಯನು ಕನಸನ್ನು ಅದರ ಮೂಲ ಲಕ್ಷಣದಲ್ಲಿ ಮರುಕಳಿಸಿಕೊಳ್ಳುತ್ತಾನೆ.

ಈ ಒಂದು ನಿಬಂಧನೆಯ ಕಾರಣದಿಂದ ಸಮ್ಮೋಹಕರು ಒಂದೇ ಸಾರಿಗೆ ಎರಡೂ ಮನಸ್ಸುಗಳನ್ನು ಹತೋಟಿಗೆ ತರಲು ವಿಫಲರಾದರು. ಈ ಕಾರಣದಿಂದಲೇ, ಮತ್ತೆ, ಅವರಿಗೆ ಗುರುತಿಸಲು ಮತ್ತು ಭೇದಿಸಲು ಬೇಕಾದಂತಹ ಸತ್ಯತೆಗಳು ಅಥವಾ ವಿಸ್ತೀರ್ಣಗಳ ಮೇಲೆ ಕೈಹಾಕಲು ವಿಫಲರಾದರು.

ಧ್ಯಾನದಿಂದ ಬಹಿರ್ಮನಸ್ಸನ್ನು ಹತೋಟಿಗೆ ತರಲು ಸಾಧ್ಯವಿದೆ, ಆದರೆ ಅಂತರ್ಮನಸ್ಸನ್ನು ಹತೋಟಿಗೆ ತರಲು ಅಸಾಧ್ಯವಲ್ಲದಿದ್ದರೂ ಬಹಳವೇ ಕಷ್ಟಕರವಾಗಿದೆ ಎಂದು ಅವರು ಅಭಿಪ್ರಾಯ ಪಟ್ಟರು. ಏಕೆಂದರೆ ಕನಸುಗಾರ ಎಚ್ಚೆತ್ತು ಕೊಂಡಾಗ ಅಂತರ್ಮನಸ್ಸಿನಲ್ಲಿ ಸ್ವಲ್ಪವೂ ಚೇತನವಿರಲಿಲ್ಲ ಮತ್ತು ಅದಕ್ಕಾಗಿ ಅದು ಚೇತನವಿಲ್ಲದ ಕಾರಣ ಅದರ ಮೇಲೆ ಹತೋಟಿಯನ್ನು ಪಡೆಯಲು ಸಾಧ್ಯವಿಲ್ಲ.

*ಕ್ರಿಯಾಯೋಗದಿಂದ* ಮಾತ್ರವೇ ನಾವು ಬಹಿರ್ಮನಸ್ಸನ್ನು ಮತ್ತು ಅಂತರ್ಮನಸ್ಸು ಇವೆರಡನ್ನೂ ಒಗ್ಗೂಡಿಸಬಹುದು ಮತ್ತು ಹೀಗೆ ಇವೆರಡರ ಮಧ್ಯೆ ಇರುವ ಭಾಗವನ್ನು ನಿರ್ಮೂಲಗೊಳಿಸಬಹುದು ಎಂದರು ಡಾ.ಶ್ರೀಮಾಲಿಯವರು. ನಮ್ಮ ಅಭ್ಯಾಸವು ಬಹಿರ್ಮನಸ್ಸನ್ನು ಧ್ಯಾನದ ಮೂಲಕ ನಿದ್ರೆಗೆ

ಇಳಿಸುವುದಾಗಿದೆ. *ಕ್ರಿಯಾಯೋಗದ* ಪದ್ಧತಿಯನ್ನು ಅನುಸರಿಸಿ ಮತ್ತು ಕೆಲವು ಮೂರು ಆಳವಾಗಿ ಹೋಗಿ ಅಂತರ್ಮನಸ್ಸನ್ನೂ ಸಹ ಅಂತಹದೇ ನಿದ್ರೆಯ ಅವಸ್ಥೆಗೆ ಇಳಿಸಬಹುದು. ಎರಡನ್ನೂ ನಿಯಂತ್ರಿಸಬಹುದು ಮತ್ತು ಎಲ್ಲವನ್ನೂ ಒಂದೇ ಸಮಯದಲ್ಲಿ ಅಚೇತನಯುಕ್ತ ಮಾಡಬಹುದು ಎಂದು ಅವರು ವಾದಿಸಿದರು. ಎರಡೂ ಮನಸ್ಸುಗಳನ್ನು ಒಂದೇ ಸಮಯದಲ್ಲಿ ನಿಯಂತ್ರಿಸುವ ಪದ್ಧತಿಗೆ *ಧ್ಯಾನಯೋಗ* ಎಂದು ತಿಳಿಯಲಾಗಿತ್ತು. ಗೀತೆಯಲ್ಲಿ ಈ ಪದ್ಧತಿಗೆ *ಅಖಂಡ ಸಮಾಧಿ* ಅಥವಾ *ಚೈತನ್ಯ ಸಮಾಧಿ*[1] ಎಂದು ಕರೆಯಲಾಗಿದೆ.

ಓರ್ವರು ಈ ಒಂದು ಅವಸ್ಥೆಯ ಇರುವಿಕೆಯಲ್ಲಿ ಬದುಕಿದ್ದರೂ ಬಹಳವಾಗಿ ನಿರ್ಜೀವಿಯಾಗಿ ಕಾಣಿಸುವರು. ಮನುಷ್ಯನು ದೈಹಿಕ ಅವಶ್ಯಕತೆಗಳಾದ ಹಸಿವು ಮತ್ತು ಬಾಯಾರಿಕೆ ಅಥವಾ ಬಿಸಿ ಅಥವಾ ತಂಪು ಎನ್ನುವ ಸಹಜ ತೋರಿಕೆಗಳ ದೈಹಿಕ ಭೇದ್ಯತೆಗಳಿಂದ ಅಪ್ರಭಾವಿತನಾಗಿ ತನ್ನ ಸಮಾಧಿಯ ನೆಲೆಗೊಂಡು ವರ್ಷಾನುಗಟ್ಟಲೆ ಏನೇಆಗಲಿ ಯಾವುದೇ ನಷ್ಟವಿಲ್ಲದೆ ಮುಂದುವರಿದನು.

ರೇತಸ್ಸಿನ ಕೊಡುಗೆಗೆ ಪ್ರಖ್ಯಾತಗೊಂಡ ಅವರ ಭಾಷಣದಲ್ಲಿ ಡಾ.ಶ್ರೀಮಾಲಿಯವರು ಈ ಕ್ಷೇತ್ರದಲ್ಲಿ ಭಾರತೀಯ ಜ್ಞಾನದ ಉಜ್ವಲವಾದ ವಿಸ್ತೀರ್ಣಗಳ ಮುಖ್ಯ ಅಂಶಗಳನ್ನು ಹೇಳಿದರು. ಭಾರತೀಯ ಋಷಿಗಳಿಗೆ *ತ್ರಿಕಾಲಜ್ಞ*[2] ಎಂದು ಕರೆಯಲಾಗಿತ್ತು. ಕೊಟ್ಟ ಕ್ಷಣದಲ್ಲಿ ಅವರು ಯಾವುದೇ ಮನುಷ್ಯನ ಭೂತಕಾಲವನ್ನು ಸ್ಮರಿಸಿ ಭವಿಷ್ಯವನ್ನು ಸಹ ಕರೆಯಿಸಿದರು. ಈ ಅದ್ವಿತೀಯ ಶಕ್ತಿಯ ಒಂದೇ ಆಧಾರವೆಂದರೆ ಆ ಸಂಬಂಧಪಟ್ಟ ಮನುಷ್ಯನ ಅಂತರ್ಮನದಲ್ಲಿ ಆಳವಾಗಿ ಮುಳುಗಿ ಎರಡೂ ಮನಸ್ಸುಗಳನ್ನು ಸಂಪೂರ್ಣವಾಗಿ ಗುರುತಿಸುವುದನ್ನು ಸಾಧಿಸುವ ಅವರ ಸಾಮರ್ಥ್ಯ.

ಓರ್ವನು ಎಣಿಕೆಮಾಡುವಂತಹ ಜೀವನ ಕಾಲವು ಹುಟ್ಟಿನಿಂದ ಸಾವಿನವರೆಗಿನದು ಓರ್ವನ ಸಂಪೂರ್ಣ ಜೀವನವಲ್ಲ. ಜೀವನವೆಂದು ತಿಳಿದಿರುವ ಅದು ಸತ್ಯದ ಒಂದು ಭಾಗವಾಗಿತ್ತು. ಸತ್ಯವಾಗಿ ಬಹಳ ಜೀವನಗಳು—ಭೂತ ವರ್ತಮಾನ ಮತ್ತು ಭವಿಷ್ಯ—ಒಂದು ಸರಪಣಿ ಓರ್ವನ ಜೀವನವೆಂದು ಗುರುತಿಸಲಾಗುವುದು. *ಕ್ರಿಯಾಯೋಗದ* ಸದ್ಗುಣದಿಂದ ಭಾರತದ ಋಷಿಗಳು ಈಗಿನ ಜೀವನದ ಭೂತಕಾಲವನ್ನು ನೋಡುವುದಲ್ಲದೆ ಮುಂದಾಗಿ ಬಂದಂತಹ ಓರ್ವನ 5 ರಿಂದ 7 ಜೀವನಗಳನ್ನು ನೋಡಬಲ್ಲವರಾಗಿದ್ದರು ಮುಂಬರುವ ಐದು ವರ್ಷಗಳ ಜೀವನದ ಮೇಲೂ ಅವರಿಂದ ದೃಷ್ಟಿ ಹಾಕಲಾಗುತ್ತಿತ್ತು.

ಸಮ್ಮೋಹನ ವಿಜ್ಞಾನದ ಅದ್ವಿತೀಯ ಮಹತ್ಕಾರ್ಯವೆಂದರೆ ನೀವು ನಿಮ್ಮ ಹಿಂದಿನ ಭೂತಕಾಲವನ್ನು ನೋಡುವುದಲ್ಲದೆ ಓರ್ವನ ಮುಂದೆ ಬಂದಿರುವ ಹಲವಾರು ಜೀವನಗಳನ್ನು ನೋಡುವ ಸಾಮರ್ಥ್ಯ ಎಂದು ಡಾ.ಶ್ರೀಮಾಲಿಯವರು ವಾದಿಸಿದರು. ಭವಿಷ್ಯವೆಂಬ ಪದವು ಈ ಜೀವನದ ಭವಿಷ್ಯವನ್ನು ಅನುಪೂರ್ವ ಜೀವನಗಳನ್ನೂ ಸೂಚಿಸುತ್ತದೆ. ಈ ಒಂದು ಸದ್ಗುಣದಿಂದ ಸಾಮರ್ಥ್ಯದಿಂದಲೇ ಸಮ್ಮೋಹಕರು ಓರ್ವರು ಪೂರ್ಣತೆಯನ್ನು ಅವರ ನಿಶ್ಚಿತಾ ಮತ್ತು ಅನಿಶ್ಚಿತೆಗಳ ನೋಟಗಳೊಡನೆ ತಿಳಿಯಬಲ್ಲರು.

ಮನಸ್ಸು ತನ್ನ ಹೆಜ್ಜೆದಾಪುವಿನಲ್ಲಿ ಸಾಟಿಯಿಲ್ಲದ ವೇಗದಲ್ಲಿ ಪಯಣಿಸಿತು. ಅದಕ್ಕಾಗಿಯೇ ಅದು ಸ್ವಲ್ಪವೇ ಸಮಯದಲ್ಲಿ ಭವಿಷ್ಯವನ್ನಲ್ಲದೆ ಭೂತಕಾಲವನ್ನೂ ಪ್ರಕಟಿಸಿತು. ಅದರ ಮೇಲೆ ನಮಗೆ

---

1.- ಸಮಾಧಿ ಅಂದರೆ ತನ್ನನ್ನು ತಾನೇ ಮರೆಯುವಂತಹ ಆಧ್ಯಾತ್ಮಿಕ ಧ್ಯಾನ, ಅದರಲ್ಲಿ ಧ್ಯಾನಿಸುವವರು ಅವನ ಅಥವಾ ಅವಳ ಅಸ್ತಿತ್ವವನ್ನು ಮರೆತು ಅನಂತತೆಯಲ್ಲಿ ಒಂದಾಗುವುದು.

2. ತ್ರಿಕಾಲಜ್ಞ: ಭೂತಕಾಲ ಭವಿಷ್ಯಕಾಲ ಹಾಗೂ ವರ್ತಮಾನ ಕಾಲ- ಈ ಮೂರೂ ಕಾಲಗಳನ್ನೂ ತಿಳಿದಿಯುವಂತಹವನು.

ಹತೋಟಿಯಿಲ್ಲದ ಕಾರಣ ಅದು ನಮ್ಮಿಂದ ಅಷ್ಟು ದೂರ ಜಾರಿಕೊಂಡಿದೆ. ಅದನ್ನು ನಿಯಂತ್ರಿಸದ ಕಾರಣ ಕೆಲವುಬಾರಿ ಮನಸ್ಸು ಕನಸುಗಳ ಮಾಧ್ಯಮದಿಂದ ನಮ್ಮ ಭವಿಷ್ಯವನ್ನು ಸೂಚಿಸಿತು. ಈ ಜೀವನವು ಒಂದು ಸಣ್ಣಭಾಗ ಮಾತ್ರವಾಗಿರುವ ಸಂಪೂರ್ಣ ಅನುಕ್ರಮವನ್ನು ಒಳಗೊಂಡಿದ್ದ ಸಂಪೂರ್ಣವಾಗಿ ನಿಯಂತ್ರಿಸಲಾಗಿರುವ ಮನಸ್ಸು ಕರೆದಂತಹ ಎಲ್ಲಾ ಸತ್ಯತೆಗಳನ್ನು ಪ್ರಕಟಿಸಿತು ಅದು ಈ ಕೊನೆಯಿಂದ ಆ ಕೊನೆಗೆ ಚಲಿಸುವಂತಹ ಸಹಜವಾದ ಪ್ರವೃತ್ತಿಯಿಂದ ಹೀಗೆ ಮಾಡಿತು.

*ಕ್ರಿಯಾಯೋಗ* ¹ದ ಸದ್ಗುಣದಿಂದ ಮೊದಲಬಾರಿಗೆ ಓರ್ವರು ಸುಪ್ತಪ್ರಜ್ಞೆಯ ಮೇಲೆ ಹತೋಟಿಯನ್ನು ಗಳಿಸಬಹುದು ಎಂದು ಡಾ.ಶ್ರೀಮಾಲಿಯವರು ವಿಮರ್ಶಿಸಿದರು. ಈ ತರಹದ ಸಾಮರ್ಥ್ಯವನ್ನು ಸಾಧಿಸಲಾಶಿಸುವ ವ್ಯಕ್ತಿಯು ಬಾಹ್ಯತನಗಳಿಂದ ದೂರವಿರುವನು. ಅವನು ಹೆಚ್ಚಾಗಿ ತನ್ನಷ್ಟಕ್ಕೇ ಒಳನೋಡುವನು ಮತ್ತು ತನ್ನ ಸುಪ್ತತನದ ಆಳವಾದ ಕತ್ತಲೆಗಳಲ್ಲಿ ಪ್ರವೇಶಿಸುವನು. ಈ ವಿಧಾನದಿಂದ ಅವನು ಬಹಿರ್ಮನಸ್ಸಿನ ಶಾಂತಿಯನ್ನು ಸಾಧಿಸುವನು ಮತ್ತು ಅದರದೇ ಸ್ವಂತ ತಿರುವಿನಲ್ಲಿ ಅಂತರ್ಮನಸ್ಸಿನ ಶಾಂತಿಯನ್ನು ಸಾಧಿಸುವನು.

ಹೇಗಾದರೂ ಡಾ.ಶ್ರೀಮಾಲಿಯವರು, ಓರ್ವನು ತನ್ನ ಸುಪ್ತತನದ ಮೇಲೆ ಹತೋಟಿಯನ್ನು *ವಿಚಾರ ಮುಕ್ತ* ಮನಸ್ಸನ್ನು ಸಾಧಿಸಿದ ನಂತರವೇ ಗಳಿಸಬಹುದೆಂದು ಹೇಳಿ ಸಂಕಲಿಸಿದರು. ಸಾಧಾರಣವಾಗಿ ಮನಸ್ಸು ವಿಚಾರಗಳಿಂದ ಮುಕ್ತವಾಗಿರುವುದಿಲ್ಲ. ಪ್ರತಿಕ್ಷಣದಲ್ಲೂ ವಿಚಾರಗಳು ಜನ್ಮಿಸುತ್ತವೆ ಮತ್ತು ಬಂದ ವೇಗದಲ್ಲಿಯೇ ಮರೆಯಾಗುತ್ತವೆ. ಓರ್ವನು ಮನೆಯಲ್ಲಿ ಪುಸ್ತಕ ಓದುತ್ತಿರಬಹುದು ಅಥವಾ ಕಛೇರಿಯಲ್ಲಿ ಕೆಲಸಮಾಡುತ್ತಿರಬಹುದು ಬಹಿರ್ಮನಸ್ಸು ವಿಚಾರಮಯವಾಗಿಯೇ ಇರುವುದು. ಅದಲ್ಲದೆ ಮನುಷ್ಯನು ಬಯಕೆಗಳ ದಾಸನಾಗಿದ್ದನು. ತನ್ನ ಬಯಕೆಗಳನ್ನು ತೃಪ್ತಿಪಡಿಸಲು ಆತನು ಸತತವಾಗಿ ಶ್ರಮಿಸುವನು. ನಿಜ, ಅವನ ಕೆಲ ಬಯಕೆಗಳು ಪೂರ್ಣಗೊಂಡವು—ಅದು ಹೇಗಾದರೂ, ಬಹಳವೇ ಅಪೂರ್ಣವಾದವು. ಪೂರ್ಣಗೊಂಡ ಬಯಕೆಗಳು ಅವನನ್ನು ವಿಶದವಾಗಿ ಹರ್ಷಿಸಿದಾಗ ಅಪೂರ್ಣಗೊಂಡ ಬಯಕೆಗಳು ಅವನನ್ನು ದುಃಖಕ್ಕೆ ಎಡೆಮಾಡಿದವು. ಡಾ.ಶ್ರೀಮಾಲಿಯವರು ಕೋಟ್ಯಾಧಿಪತಿಯಾಗಿ ಹೊರಬರಲು ಹಂಬಲಿಸುತ್ತಿದ್ದ ಓರ್ವನ ಉದಾಹರಣೆಯನ್ನು ಕೊಟ್ಟರು. ಈ ಬಯಕೆಯನ್ನು ಅರ್ಥೈಸಲು ಅವನು ಬಹಳವೇ ಅತಿಯಾಗಿ ಕಾರ್ಯಗೈದನು. ನೋವಿನ ಅಪಾಯದಲ್ಲೂ ಹಣಕೂಡುವಿಕೆಯಲ್ಲಿ ಸಾಗಿದನು. ಹಣವನ್ನು ರಾಶಿಗಳಾಗಿ ಕೂಡಿಸಿದ ನಂತರ ಅದರ ರಕ್ಷಣೆಯ ಬಗ್ಗೆ ಯೋಚಿಸಿದನು ಏಕೆಂದರೆ ಕಳ್ಳತನದ ಭಯವು ಅವನಲ್ಲಿ ಸಂಚಾರಮಾಡಿತ್ತು. ಒಂದೇ ಒಂದು ಬಯಕೆಯ ಪ್ರತಿಯಾಗಿ ತುಂಬಾ ಹೆಚ್ಚಾಗಿ ಒಂದಾದನಂತರ ಇನ್ನೊಂದು ಬಯಕೆಯ ಸರಪಣಿಗೇ ಈಡು ಮಾಡಿತು. ಬಯಕೆಗಳ ಗುಂಪು ಮನಸ್ಸನ್ನು ವಿಶ್ರಾಮರಹಿತವನ್ನಾಗಿಸಲು ಪರಿಮಿತಿಗೊಳಿಸಿತು ಮತ್ತು ವಿಶ್ರಾಮರಹಿತ ಮನಸ್ಸನ್ನು ಯಾವತ್ತಿಗೂ ಹತೋಟಿಗೆ ತರಲಾಗುವುದಿಲ್ಲ.

ಅದಕ್ಕಾಗಿಯೇ ಮನಸ್ಸನ್ನು ವಿಚಾರಗಳಿಂದ ಮತ್ತು ಬಯಕೆಗಳಿಂದ ಮುಕ್ತ ಮಾಡಲು ಅತ್ಯಗತ್ಯವಾಗಿತ್ತು. ಬಹಿರ್ಮನಸ್ಸಿನ ಬಯಕೆಗಳು ಅಂತರ್ಮನಸ್ಸಿಗೂ ಡಿಕ್ಕಿ ಹೊಡೆದವು, ಅಂತರ್ಮನಸ್ಸೂ ಸಹ ವಿಚಾರಗಳಿಂದ ಮತ್ತು ಬಯಕೆಗಳಿಂದ ಸಂಪೂರ್ಣವಾಗಿಮುಕ್ತವಾಗಿರಲಿಲ್ಲ. ಯಾರೊಬ್ಬನಲ್ಲಾದರೂ ಕೋಟ್ಯಾಧಿಪತಿಯಾಗುವ ಬಯಕೆಯು ಸುಳಿದಾಗ ಅವನು ತನ್ನಷ್ಟಕ್ಕೆ ತಾನೇ ಕನಸುಗಳ ರಾಜನಾದುದನ್ನು ಕಂಡು ಮತ್ತು ನಿಜವಾಗಿಯೂ ತಾನು ತನ್ನ ಪ್ರಜೆಗಳ ಮೇಲೆ ಆಡಳಿತವನ್ನೂ ಮಾಡಿ, ಬಂಗಾರದ

---

1. *ಕ್ರಿಯಾ ಯೋಗ* ದೈವೀಕ ವ್ಯಕ್ತಿಯಿಂದು ಖಚಿತ ಪಡಿಸುವಂತಹ ಒಂದು ಯೋಗಿಕ ಕಾರ್ಯನಿರ್ವಹಣೆ, ಒಂದು ತನ್ನಲ್ಲಿ ತಾನೇ ಲೀನವಾಗುವಂತಹುದು.

ದಿಬ್ಬದ ಮೇಲೆ ಕೂತು ಅಥವಾ ಏಕಾ ಏಕಿ ರೂಪಾಯಿಗಳಿಂದ ತುಂಬಿದ ಪೆಟ್ಟಿಗೆಯನ್ನು ಕಂಡನು. ಈ ಕನಸುಗಳು ಅವನ ಅಪೂರ್ಣಗೊಂಡ ಬಯಕೆಗಳ ಮತ್ತು ಸಂಬಂಧಪಟ್ಟ, ಮನುಷ್ಯನ ಅಂತರ್ಮನಸ್ಸು ಬಯಕೆಗಳ ಪ್ರವಾಹದಿಂದ ಒಬ್ಬಾಟದ ಸೂಚಕವು.

ಆದಕ್ಕಾಗಿಯೇ ಎರಡೂ ಮನಸ್ಸುಗಳನ್ನು—ಬಾಹ್ಯ ಮತ್ತು ಒಳಗಿನ—ಬಯಕೆಗಳಿಂದ ಮುಕ್ತ ಮಾಡುವ ಅವಶ್ಯಕತೆ ಇತ್ತು. ಬೇರೆ ಯಾವುದೇ ಸಂದರ್ಭದಲ್ಲಿ ಮನಸ್ಸನ್ನು ಹತೋಟಿಗೆ ತರಲಾಗುವುದಿಲ್ಲ ಎಂದು ಡಾ.ಶ್ರೀಮಾಲಿಯವರು ಒತ್ತಿ ಹೇಳಿದರು.

ಡಾ.ಶ್ರೀಮಾಲಿಯವರು ಅವರ ಒಂದು ಪದ್ಧತಿಯನ್ನು ಕಂಡು ಹಿಡಿದಿದ್ದರು ಅದಕ್ಕೆ *ಕ್ರಿಯಾಯೋಗವೆಂದು* ಕರೆಯಲಾಗಿತ್ತು. ಈ ಒಂದು ಮಾಧ್ಯಮದಿಂದ ಮಾತ್ರವೇ ನಾವು ಬಯಕೆಗಳು ಮತ್ತು ವಿಚಾರಗಳಿಂದ ಮುಕ್ತವಾದ ಮನಸ್ಸನ್ನು ಸಾಧಿಸಬಹುದು. ಅದು ಅವಶ್ಯವಾಗಿ ಸ್ವಲ್ಪಮಟ್ಟಿನ ಅಭ್ಯಾಸವನ್ನು ಒಳಗೊಂಡಿದೆ. ಈ ಒಂದು ಅಭ್ಯಾಸದ ಮೂಲಕ ಮಾತ್ರ ಭೂತ ಮತ್ತು ಭವಿಷ್ಯಗಳ ಅನ್ವೇಷಣೆಗಳ ಕಡೆಗೆ ಎಡೆಮಾಡಿಕೊಡುವ ದಾರಿಗೆ ಹೊರಹೊಮ್ಮಬಹುದು.

ಅವರ ಭಾಷಣದ ಕೊನೆಯಲ್ಲಿ *ಕ್ರಿಯಾಯೋಗದ* ಪ್ರಯೋಗಿಕ ಪಕ್ಷವನ್ನು ಪ್ರದರ್ಶಿಸಿದರು ಮತ್ತು ಅವರ ಅಂತರ್ಮನಸ್ಸಿನ ಮೇಲೆ ಸಂಪೂರ್ಣವಾದ ಹತೋಟಿಯನ್ನು ಸಾಧಿಸಿದ ನಂತರ ಪ್ರೇಕ್ಷಕರ ಸಮೂಹದ ಹಲವಾರು ಅಭ್ಯರ್ಥಿಗಳ ಕಳೆದ ಜೀವನವನ್ನಲ್ಲದೆ ಹಿಂದಿನ ಜನ್ಮದ ಜೀವನಗಳನ್ನೂ ಬಿಡುಗಡೆಮಾಡಿದರು.

ಡಾ.ಶ್ರೀಮಾಲಿಯವರ ಭಾಷಣವನ್ನು ಬಹಳ ಹೊತ್ತು ಮುಂದುವರಿದಂತಹ ಗುಡುಗಿನಂತಹ ಪ್ರಶಂಸೆಯೊಡನೆ ಸ್ವಾಗತಿಸಲಾಯಿತು. ಅವರಿಗೆ ಸಿಕ್ಕಂತಹ ಉಗ್ಗಡನೆ ಮತ್ತು ಮರ್ಯಾದೆ ನನಗೆ ಮಾತ್ರವಲ್ಲ ಸಮ್ಮೋಹನದ ಎಲ್ಲಾ ಪಂಡಿತರಿಗೆ ಈರ್ಷ್ಯೆ ಪಡುವಂತದಾಗಿತ್ತು.

ಅವರ ಮೂರು-ಗಂಟೆಯ ಉದ್ದ ಭಾಷಣದಲ್ಲಿ ಡಾ.ಶ್ರೀಮಾಲಿಯವರು ಈವತ್ತಿನವರೆಗೆ ಅರಿಯದಂತಹ ಸಮ್ಮೋಹನದ ಎಲ್ಲಾ ನೋಟಗಳನ್ನೂ ಉಚ್ಚರಿಸಿದರು. ಸಮ್ಮೋಹನ ಕ್ಷೇತ್ರದಲ್ಲಿ ಅವರು ಕಂಡು ಹಿಡಿದಂತಹ ನವೀನ ಕಲೆಯಾದ *ಕ್ರಿಯಾಯೋಗವು* ನಿಜವಾಗಿಯೂ ದಿಗ್ಭ್ರಮೆಗೊಳಿಸುವಂತಹುದು. ಈ ನವೀನ ಕಲೆಯು ಹೊಸದಾರಿಯನ್ನು ಪ್ರಜ್ವಲಿಸಿ ಮತ್ತು ನಮ್ಮ ಆಲೋಚನೆಗೆ ಮೀರಿದಂತಹ ಫಲಿತಾಂಶಗಳನ್ನು ಕೊಡುವುದೆಂದು ವಿಶಾಲವಾಗಿ ಅಂಗೀಕೃತವಾಗಿತ್ತು. ಭೂತಕಾಲವನ್ನೂ ಮತ್ತು ಭವಿಷ್ಯವನ್ನೂ ನೋಡಲು *ಕ್ರಿಯಾಯೋಗವನ್ನು* ಅವರು ನಂಬಲರ್ಹವಾದ ಆಯುಧದ ತರಹ ವೃದ್ಧಿಸಿದ್ದರು. ಈ ಮಾಧ್ಯಮದಿಂದ ಓರ್ವನು ಜೀವನಕ್ಕೆ ಕೇಡುತರುವಂತಹ ಅಪಾಯಗಳನ್ನು ನೋಡಿ ಮುಂಜಾಗ್ರತೆಯ ಕ್ರಮವನ್ನು ಸಹ ಉಚಿತ ಸಮಯದಲ್ಲೇ ತೆಗೆದುಕೊಳ್ಳಬಹುದು.

*ಕ್ರಿಯಾಯೋಗವು* ಈಗಾಗಲೇ ವೈದ್ಯಕೀಯ ವಿಜ್ಞಾನದ ಕ್ಷೇತ್ರದಲ್ಲಿ ಬೆರಗುಗೊಳಿಸುವಂತಹ ಫಲಿತಾಂಶಗಳನ್ನು ಕೊಟ್ಟಿದೆ. ನಿಜಸಂಗತಿಗಳು ಸಿದ್ಧಪಡಿಸಿದ ಹಾಗೆ ಮಾನಸಿಕ ಉದ್ವೇಗ, ನಿದ್ರೆರಹಿತವು, ಹೃದಯನೋವುಗಳಿಂದ ಮೃತರ ಪ್ರಮಾಣವು ಇತ್ತೀಚೆಗೆ ಗಾಬರಿಪಡಿಸುವ ಹಾಗೆ ಹೆಚ್ಚಾಗಿವೆ. ಸೂಕ್ಷ್ಮವಾದ ಹೃದಯದ ಭಾಗದಲ್ಲಿ ಪ್ರೇರೇಪಿಸುವ ವಿಚಾರಗಳ ಒತ್ತಡದಿಂದ ಉಂಟಾದ ಮಾನಸಿಕ ಉದ್ವೇಗ, ನಿದ್ರೆ ಇಲ್ಲದಿರುವಿಕೆ ಮತ್ತು ಹೃದಯರೋಗಗಳು, ಹೆಚ್ಚಾಗಿ ಮಾನಸಿಕ ಎನ್ನುವುದರಲ್ಲಿ ಸಂಶಯವಿಲ್ಲ. ಒಮ್ಮೆ ನಾವು ಬಯಕೆಗಳ ಮೇಲೆ ಸಮೃದ್ಧವಾದ ಹತೋಟಿಯನ್ನು ಪಡೆದನಂತರ ಒತ್ತಡವನ್ನೂ ಮತ್ತು ಎಲ್ಲಾ ಪರಿಣಾಮದ ನೋವುಗಳನ್ನೂ ಆಗದಂತೆ ಮಾಡಬಹುದು.

ಮನುಷ್ಯನ ಜೀವನವು ಇಂದು ಮಾನಸಿಕ ಉದ್ವೇಗದಿಂದ ಕೆಟ್ಟು ಹೋಗಿದೆ. ಅವನು ವಿಶ್ರಾಮರಹಿತನಾಗಿದ್ದಾನೆ. ಅವನ ಬಯಕೆಗಳ ಅಪೂರ್ಣತೆಗೆ ಅವನು ಗಾಬರಿಯಾಗಿದ್ದಾನೆ. ಮನುಷ್ಯನು ಈ ದಿನ ಪ್ರತಿ ಗುಡಿ, ಮಸೀದಿ, ಚರ್ಚ್‌ಗಳಿಗೆ ಹೋಗಿ ತನ್ನ ಶೋಕದುಃಖಗಳನ್ನು ತೋಡಿಕೊಂಡು, ತನ್ನ ಬಯಕೆಗಳನ್ನು ಪೂರ್ಣಮಾಡಲು ಸಹಾಯವಾಗಬಹುದೆಂದು ಅವನು ತಿಳಿಯುವ ಭೂಮಿಯಲ್ಲಿರುವ ಎಲ್ಲರ ಹತ್ತಿರವೂ ಹೋಗಿ. ಅವನು ಪ್ರಪಂಚವನ್ನು ಬಿಟ್ಟೋಡಿ ಅಡವಿಗಳಲ್ಲಿ ಆಶ್ರಯವನ್ನು ಪಡೆದಂತಹ ಉದಾಹರಣೆಗಳು ಬೇಕಾಗಿಲ್ಲ. ಕೆಲವು ಸಾರಿ ಅವನು ಆತ್ಮಹತ್ಯೆ ಮಾಡಿಕೊಳ್ಳಲು ಯೋಚಿಸುತ್ತಾನೆ. ಅವನು ಹೆಚ್ಚಾಗಿ ಬಯಕೆಗಳನ್ನು ಓಡಿಸಲು ಪ್ರಯತ್ನಿಸಿದ ಹಾಗೆಲ್ಲಾ ಅವು ಹೆಚ್ಚು ಸಂಚಾರ ಮಾಡುತ್ತವೆ. ಪ್ರೇಮ ಸಂಬಂಧದಲ್ಲಿ ಅಥವಾ ವ್ಯಾಪಾರದಲ್ಲಿ ವಿಫಲತೆ ಅವನನ್ನು ಆತ್ಮಹತ್ಯೆ ಮಾಡಿಕೊಳ್ಳಲು ಎಡೆಮಾಡುತ್ತದೆ, ಏಕೆಂದರೆ ಆಘಾತವು ಮಿತಿಮೀರಿದ ಸಾಬೀತಾಗುತ್ತದೆ. ಕೊನೆಗೆ ಅವನ ಬಯಕೆಗಳ ಸಲುವಾಗಿ ಅವನ ಜೀವನವನ್ನೇ ತ್ಯಾಗಮಾಡುತ್ತಾನೆ.

ಈ ವಿಷಮ ಪರಿಸ್ಥಿತಿಯಲ್ಲಿ ಡಾ.ಶ್ರೀಮಾಲಿಯವರ ಅನ್ವೇಷಣೆಯೊಂದೇ ಆರೋಗ್ಯಕರವಾದ ಸ್ಪರ್ಷವಾಗಿ ಬಂದಿದೆ. ಈ ಒಂದು ಮಾಧ್ಯಮದಿಂದ ಮಾತ್ರ ಮನುಷ್ಯನು ಮನಸ್ಸನ್ನು ಬಯಕೆಗಳಿಂದ ಮತ್ತು ಅದಕ್ಕೆ ಸಂಬಂಧಪಟ್ಟ ವಿಚಾರಗಳಿಂದ ಮುಕ್ತವಾಗಿಸಬಲ್ಲನು. ಒಮ್ಮೆ ಅವನು ಈ ತರಹ ಮಾಡಿದರೆ ಸಂತೋಷಕರವಾದ ಮತ್ತು ಅನುಕೂಲಕರವಾದ ಜೀವನವನ್ನು ಸಾಗಿಸಲು ನಿಯಮಿಸಿದಂತಾಗುತ್ತದೆ.

ಭಾಷಣ ಮತ್ತು ನವೀನ ಪದ್ಧತಿಯ ಪ್ರಾಯೋಗಿಕ ಪ್ರದರ್ಶನದ ನಂತರ, ಉಲ್ಲಾಸದ ಅಲೆಯು ಪ್ರೇಕ್ಷಕರನ್ನು ಹಿಡಿದಿಟ್ಟಹಾಗೆ ಕಾಣಿಸಿತು. ಪ್ರತಿಯೊಬ್ಬ ಸದಸ್ಯನೂ ತನಗೆ ಬೇಕಾದದ್ದು ಎಲ್ಲವೂ ಸಿಕ್ಕಹಾಗೆ ಹರ್ಷಗೊಂಡಿದ್ದನು. ಪ್ರತಿನಿಧಿಗಳು ವೇದಿಕೆಯನ್ನು ಏರಿ ಡಾ.ಶ್ರೀಮಾಲಿಯವರನ್ನು ಎಲ್ಲಾ ಕಡೆಯಿಂದಲೂ ಸುತ್ತುವರಿದರು. ಪ್ರಶಂಸಕರ ದೆಸೆಗೆಟ್ಟ ಓಟದಿಂದ ಗಣನೀಯವಾದ ಕಷ್ಟದಿಂದ ಅವರು ಬಿಡಿಸಿಕೊಂಡರು. ಶ್ಲಾಘಕರಲ್ಲಿ ಗುರುತಿಸುವಂತಹ ಸಮ್ಮೋಹನ ಪಂಡಿತರು ಮತ್ತು ಸಮ್ಮೇಳನದ ಇತರೆ ಪ್ರತಿನಿಧಿಗಳೂ ಒಳಗೊಂಡಿದ್ದರು.

ಅವರ ಗೌರವದಲ್ಲಿ ಬಂದಂತಹ ಸಾಯಂಕಾಲದ ನಗರದ ಸತ್ಕಾರದಲ್ಲಿ ಡಾ.ಶ್ರೀಮಾಲಿಯವರು ಮತ್ತೊಮ್ಮೆ *ಕ್ರಿಯಾಯೋಗ*ದ ಪ್ರಾಯೋಗಿಕ ನೋಟಗಳನ್ನು ಪ್ರದರ್ಶಿಸಿದರು. ಎಲ್ಲಾ ತರಹದ ವಿನಯಶೀಲತೆಯಲ್ಲಿ ಅವರು ಈ ಗೌರವವನ್ನು ತಮಗೆ ಕೊಡುತ್ತಿಲ್ಲ, ನಿಜವಾಗಿಯೂ ಸಮ್ಮೇಳನದಲ್ಲಿ ಭಾಗವಹಿಸಲು ಬಂದಂತಹ ಎಲ್ಲಾ ಪಂಡಿತರಿಗೂ ಗೌರವಿಸಲಾಗುತ್ತಿದೆ ಎಂದು ಉಗ್ಗಡಿಸಿದರು. ಈ ಪಂಡಿತರು ತಮ್ಮ ಸಂಪೂರ್ಣ ಜೀವನವನ್ನು ದುಃಖ-ತಪ್ತವಾದ ಮಾನವತ್ವಕ್ಕೆ ಪರಿಹಾರವನ್ನು ಒದಗಿಸಲು ಸಂಪೂರ್ಣವಾಗಿ ಈಗ ಅಣೆಯಾಗಿರುವ ಸಮ್ಮೋಹನ ವಿಜ್ಞಾನಕ್ಕಾಗಿ ಸಮರ್ಪಿಸಿದ್ದಾರೆ. ಮನುಷ್ಯನು ಈ ದಿನ ತಾನೇ ತಯಾರಿಸಿರುವ ಇಲಿಬಿಲದಲ್ಲಿ ಬಂಧಿತನಾಗಿದ್ದಾನೆ. ತನ್ನ ರಕ್ಷಣೆಯ ಭಯದಲ್ಲಿ ಮತ್ತು ಈ ಸಮಾಜದ ಅಸ್ತಿತ್ವದಲ್ಲೇ ಅವನು ಸುತ್ತಿಕೊಂಡಿದ್ದಾನೆ. ಬಹಳ ಮಟ್ಟಿಗೆ ತನ್ನ ಜೀವನದ ಪ್ರತಿಕ್ಷಣವೂ ಅಪಾಯದ ಕತ್ತಲೆಯ ಪರಮಾಣು ಅಸ್ತ್ರಗಳವಲಯಕ್ಕೆ ಹತ್ತಿರವಾಗುತ್ತಿರುವುದು ಅವನಿಗೆ ಅರಿವಾಗುತ್ತಲೇ ಇತ್ತು.

ಎಷ್ಟೋ ಸಂಖ್ಯೆಯಲ್ಲಿ ಆದೇಶಾಧಿಕಾರಗಳ *(ಕಮಿಷನ್‌ಗಳ)*ನ್ನು ನೇಮಿಸಿರಬಹುದು. ಎಷ್ಟೋ ಸಂಖ್ಯೆಯಲ್ಲಿ ಆಕ್ರಮಣ-ವಿಲ್ಲದ ಕರಾರುಗಳನ್ನು ತೀರ್ಮಾನಿಸಿರಬಹುದು. ಇವೆಲ್ಲವೂ ನಿಷ್ಪ್ರಯೋಜಕವಾದ ಅಭ್ಯಾಸಗಳು ಏಕೆಂದರೆ ನಿಜವಾದ ಅಪಾಯವು ಒಬ್ಬ ವ್ಯಕ್ತಿಯ ಅಂತರ್ಮನದಿಂದ

ಬಂದಿದುದು. ಅದಕ್ಕಾಗಿ ಅಂತರ್ತನವನ್ನು ಭಯ ಮತ್ತು ದಿಗಿಲುಗಳಿಂದ ಬಿಡಿಸಬೇಕು. ಮನುಷ್ಯನು ಇಂದು ಹೆದರಿದ್ದನು. ಅವನು ನಿಷ್ಕಾರಣವಾದ ಭಯದಲ್ಲಿದ್ದನು. ಅವನು ತನ್ನ ಅಸ್ತಿತ್ವಕ್ಕೇ ಖಚಿತವಾದ ಬೆದರಿಕೆಯನ್ನು ನೋಡುತ್ತಿದ್ದನು. ಅವನು ಬೇರೆಯವರನ್ನು ಅನುಮಾನದಿಂದ ನೋಡುವುದರಲ್ಲಿ ಆಶ್ಚರ್ಯವೇನಿಲ್ಲ.

ಮನಸ್ಸನ್ನು ನಾವು ಭಯ ಮತ್ತು ದಿಗಿಲುಗಳಿಂದ ಮುಕ್ತಗೊಳಿಸದ ಹೊರತು ಯುದ್ಧದ ಮತ್ತು ಸಾವಿನ ಭೀತಿಯಿಂದ ಮೇಲೇಳಲಾಗುವುದಿಲ್ಲ. ಸಮ್ಮೋಹನ ವಿಜ್ಞಾನವು ಈ ಒಂದು ಕೆಲಸವನ್ನು ಸುಲಭವಾಗಿ ನಿರ್ವಹಿಸಬಲ್ಲದು. ಏಕೆಂದರೆ ಇದು ಆಧಾರಭೂತವಾಗಿ ಮಾನಸಿಕ ವಿಜ್ಞಾನವು. ತಳವನ್ನು ಹತೋಟಿಗೆ ತರಲಾಗುತ್ತದಾದರೆ, ಬೇರೆಲ್ಲವೂ ಅನುಸರಿಸುವುದು. ಈರ್ಷ್ಯೆ, ಬಯಕೆ ಮತ್ತು ಮೋಸದಿಂದ ಮುಕ್ತನಾದ ಮನುಷ್ಯನು ತನ್ನಷ್ಟಕ್ಕೇ ತನ್ನ ಹತೋಟಿಗೆ ಸಮರ್ಥಿಸಿಕೊಳ್ಳುವನು. ಯಾವಾಗ ಮನುಷ್ಯನನ್ನು ಭಯ, ಮಾನಸಿಕ ಉದ್ವೇಗ, ದ್ವೇಷ ಮತ್ತು ಈರ್ಷ್ಯೆಗಳು ಬಾಧಿಸುವುದಿಲ್ಲವೋ ಆಗ ಒಂದು ಹೊಸಯುಗವು ಉದಯಿಸುವುದು.

ಕಳೆದ ಹಲವಾರು ವರ್ಷಗಳಿಂದಲೂ ಸಮ್ಮೋಹನದ ಪಂಡಿತರು ಮೊದಲಿಗೆ ವಿಚಾರಗಳಿಂದ ಮುಕ್ತ ಮಾಡುವ ದೃಷ್ಟಿಯಿಂದ ನಂತರದಲ್ಲಿ ಸಮಾಜಕ್ಕೆ ಒಳ್ಳೆಯದಾಗಲು ಅವಶ್ಯಕತೆಯಿರುವ ವಿಚಾರಗಳೇ ಪ್ರವೇಶಕ್ಕೆ ಸಮ್ಮತಿಸಲು ಅದರ ಮೇಲೆ ಹತೋಟಿಯನ್ನು ಸಂಪಾದಿಸಲು ಪ್ರಯತ್ನಿಸುತ್ತಿದ್ದಾರೆ. ಸ್ಪಷ್ಟವಾಗಿ ಈ ಒಂದು ಕೊನೆಯನ್ನು ತಲುಪಲು *ಕರ್ಮಯೋಗ*ದಿಂದ ಸಾಧ್ಯವಿದೆ.

ಈಗ ಶ್ರೀ ಜಸ್ಟೀಸ್ ಕೆಲ್‌ಟನ್ ರವರು ವೇದಿಕೆಯ ಮೇಲೆ ಬಂದರು. ಆಧುನಿಕ ಮನುಷ್ಯನು ತನ್ನ ಎಲ್ಲಾ ಶಾಂತಿಯನ್ನು ಕಳೆದುಕೊಂಡು ದಿಗಿಲುಗೊಂಡ ಅವಸ್ಥೆಯಲ್ಲಿ ಬದುಕುತ್ತಿದ್ದಾನೆ ಎನ್ನುವುದನ್ನು ಒಪ್ಪಿಕೊಂಡರು. ಕಳೆದ 50 ವರ್ಷಗಳಿಂದಲೂ ಹತ್ಯೆಗಳು, ಕಳ್ಳತನಗಳೂ, ಹೆದ್ದಾರಿಯ ದರೋಡೆಗಳೂ, ಬಲತ್ಕಾರ ಮತ್ತು ಸಮಾಜ ವಿರೋಧ ಅಪರಾಧಗಳ ಸಂಖ್ಯೆಯಲ್ಲಿ ವಿಪರೀತವಾದ ಏರಿಕೆಯಾಗಿದೆ. ಅಪರಾಧಗಳ ಸಂಖ್ಯೆಯ ಈ ಒಂದು ಮೊತ್ತ ಪುಟಿತಕ್ಕೆ ಮೂಲ ಕಾರಣ ಪರಕೀಯ ಭಾವನೆಯ ಒಂದು ಅನುಭವವು. ಅವನು ತನ್ನಷ್ಟಕ್ಕೆ ಹೆಚ್ಚಾಗುತ್ತಿರುವ ಅಭದ್ರತೆಯನ್ನು ಕಾಣಲು ಬಂದಿದ್ದಾನೆ. ಹಾಸ್ಯಾಸ್ಪದವಾಗಿ ಅವನು ಹಿಂಸೆಯಲ್ಲಿ ಭದ್ರತೆಯನ್ನು ಕಂಡನು ಪರಿಣಾಮವಾಗಿ ಅವನು ಲಗ್ಗೆಬಿದ್ದ ಹಿಂಸೆಯ ದಾರಿಗೆ ಬಲಿಯಾದನು.

ಅನುಭವದಲ್ಲಿ ನ್ಯಾಯಾಧೀಶರ ಸಮೂಹ ಹೆಚ್ಚಾದಂತೆಲ್ಲ ಅನುಕ್ರಮವಾಗಿ ಕಾನೂನಿನ ವ್ಯಾಜ್ಯಗಳ ಸಂಖ್ಯೆಯಲ್ಲಿ, ಅಥವಾ ಬೇರೆ ಪದಗಳಲ್ಲಿ ಬರಿಯ ಕಾನೂನಿನ ದಾವೆಗಳ ಸಂಖ್ಯೆಯು ಎಷ್ಟರಮಟ್ಟಿಗೆ ಹೆಚ್ಚಾದವು ಎಂದರೆ ಅವುಗಳನ್ನು ಸರಿಯಾದ ಸಮಯಕ್ಕೆ ನಿರ್ವಹಿಸಲು ಸಾಧ್ಯವಾಗುತ್ತಿರಲಿಲ್ಲ. ತೀರ್ಪಿನಲ್ಲಿ ವಿಳಂಬವು ಮತ್ತು ವ್ಯಾಜ್ಯದ ಖರ್ಚಿನ ಪುಟಿತವು ಹಿಂಬಾಲಿಸಿತು. ಪೋಲೀಸರ ಮತ್ತು ರಕ್ಷಣಾ ಸಿಬ್ಬಂದಿಯ ಬಲದ ಹೆಚ್ಚಳಿಕೆಯಿಂದಲೂ ಅಪರಾಧಗಳ ಸಂಖ್ಯೆಯನ್ನು ಹತೋಟಿಗೆ ತರಲು ವಿಫಲವಾಯಿತು.

ಶ್ರೀ ಜಸ್ಟೀಸ್‌ಕೆಲ್ಟನ್‌ರವರು ಡಾ.ಶ್ರೀಮಾಲಿಯವರು ಮನುಷ್ಯನನ್ನು ಭಯದಿಂದ ಮುಕ್ತಮಾಡಲು ಬೇರೆ ಎಲ್ಲಕ್ಕಿಂತಲೂ ಮುಖ್ಯವಾಗಿದೆ ಎಂದು ವಾದಿಸಿದುದು ಸರಿಯಾಗಿಯೇ ಇದೆ ಎಂದು ನಿಶ್ಚಯಪೂರ್ವಕವಾಗಿ ಹೇಳಿದರು. ಭಯದಿಂದ ಮುಕ್ತನಾದ ಮನುಷ್ಯನು ರಚನಾತ್ಮಕ ವಿಚಾರಗಳಿಗೆ ಮಾತ್ರ ಅವನ ಮನಸ್ಸಿನಲ್ಲಿ ಆಶ್ರಯಕೊಡುವನು. ಅವನು ಅಪರಾಧ ಮತ್ತು ಸಮಾಜಿಕ ವಿರೋಧಗಳನ್ನು ವರ್ಜಿಸುವುದಲ್ಲದೆ ದ್ವೇಷಿಸುವನು ಕೂಡ.

ಡಾ.ಶ್ರೀಮಾಲಿಯವರ *ಕ್ರಿಯಾಯೋಗದ* ಇತ್ತೀಚಿನ ಅನ್ವೇಷಣೆಗಳು ನಿಜವಾಗಿ ಪ್ರಾಮಾಣಿಕವಾಗಿರುವವು ಏಕೆಂದರೆ ಅವರು ಪ್ರದರ್ಶನದ ಮೂಲಕ ತೋರಿಸುದುದರಿಂದ ಮನಸ್ಸನ್ನು ವಿಚಾರಗಳಿಂದ ಬಿಡುಗಡೆಮಾಡಬಹುದು ಎಂದು ಅವರು ಮುಂದುವರೆದು ಹೇಳಿದರು. ಅಪರಾಧದ ಇಚ್ಛೆಯಿಂದ ಮುಕ್ತವಾದ ಮನಸ್ಸು ಹೊಸರಾದ ವಿಧಾನಕ್ಕೆ ತರ್ಕಬದ್ಧವಾಗಿ ಹೊರಸೂಸುವುದು. ಮನುಷ್ಯಜೀವನದ ಗುಣವನ್ನು ಸುಧಾರಿಸುವ ದಾರಿಗಳನ್ನೂ ಮತ್ತು ಬಗೆಗಳನ್ನೂ ಕಂಡು ಹಿಡಿಯುದಕ್ಕೋಸ್ಕರ ಈಗಿನ ಜನಾಂಗವು ಅವರಿಗೆ ಆಭಾರಿಯಾಗಿರುವುದಲ್ಲದೆ ಮುಂದಿನ ಪೀಳಿಗೆಯೂ ಸಹ ಈ ಒಂದು ಸುಖ ಮತ್ತು ಶಾಂತಿಯ ದಾರಿಯ ಈ ಒಂದು ನವೀನ ಮತ್ತು ಆದರೂ ಖಚಿತವಾದ ತೆರದ ಹಾದಿಗೆ ಚಿರಋಣಿಯಾಗುವುದು.

ನಂತರ ಸಾಯಂಕಾಲದಲ್ಲಿ ಡಾ.ಶ್ರೀಮಾಲಿಯವರು ಪತ್ರಿಕಾ ಸಮ್ಮೇಳನದಲ್ಲಿ ಮಾತನಾಡಿದರು ಅಲ್ಲಿ ಅವರು ಸ್ವಲ್ಪಮಟ್ಟಿಗೆ *ಕ್ರಿಯಾಯೋಗದ* ಎರಡೂ ತಾತ್ವಿಕ ಮತ್ತು ಪ್ರಾಯೋಗಿಕ ನೋಟಗಳನ್ನು ವಿಮರ್ಶಿಸಿದರು.

ನಿಜವಾಗಿಯೂ ಸಮ್ಮೋಹನ ಸಮ್ಮೇಳನವು ಅಬ್ಬರದ ಯಶಸ್ವಿಯಾಗಿತ್ತು. ಅದರಲ್ಲಿಯೂ ಅದು ಡಾ.ಶ್ರೀಮಾಲಿಯವರ *ಕ್ರಿಯಾಯೋಗದ* ಕ್ರಾಂತಿಕಾರಕ ಪ್ರಾರಂಭದ ಪ್ರಮುಖತೆಯಿಂದ. ಡಾ.ಶ್ರೀಮಾಲಿಯವರ ಭಾಷಣದ ನಂತರ ಆದ ವಿವರವಾದ ಚರ್ಚೆಗಳಿಂದ ಓರ್ವನ ಮನಸ್ಸಿನ ಹತೋಟಿಯ ದಾರಿಯಲ್ಲಿ ನಿಲ್ಲುವಂತಹ ಒಳ್ಳೆಬಗೆಯ ಸಂದೇಹಾರ್ಥಗಳು ವರ್ಗೀಕರಿಸಿದವು. ಅದು ಯಾವುದೇ ಪ್ರಮಾಣಗಳಲ್ಲಿಯೂ ಸಾಧಾರಣ ಮಹತ್ಕಾರ್ಯವಾಗಿರಲಿಲ್ಲ.

ಮರುದಿನ ಡಾ.ಶ್ರೀಮಾಲಿಯವರು ಮನೆಗೆ ಹೊರಡುತ್ತಿದ್ದಾರೆ ಎಂಬುದನ್ನು ನಾನು ತಿಳಿದುಕೊಂಡೆ. ಈವತ್ತಿನವರೆಗೂ ತಿಳಿಯದಂತಹ ಹಿಪ್ನಾಟಿಸಂನ ಕಲೆಗಳನ್ನು ಕಲಿಯದೇ ನನ್ನ ದೇಶಕ್ಕೆ ಹಿಂದಿರುಗುವುದು ಸಾರ್ಥಕವಾದೀತೇ ಎಂದು ನಾನು ವಿಸ್ಮಯಗೊಂಡೆ. ಅದಕ್ಕಾಗಿ ಅವರೊಡನೆ, ಇನ್ನೂ ಸ್ವಲ್ಪ ಸಮಯ, ನನ್ನ ಇರುವಿಕೆಯು ಒಳಗೊಂಡಿದೆ ಎಂದು ಅರಿತುಕೊಂಡೆ, ನನ್ನ ದೇಶದಲ್ಲಿ ನಾನು ತುರ್ತಾಗಿ ಬೇಕಾಗಿದ್ದೇನೆ ಎಂದು ಸಂದೇಶದೊರಕಿದ್ದರೂ ನಾನು ಬೇರೆಯೇ ನಿರ್ಧರಿಸಿಕೊಂಡಿದ್ದೆ.

ಸ್ವಲ್ಪಮಟ್ಟಿನ ಕಂಪನದೊಡನೆ ನಾನು ಡಾ.ಶ್ರೀಮಾಲಿಯವರಿಗೆ ಅವರೊಡನೆ ಇದ್ದು ಇನ್ನೂ ಸ್ವಲ್ಪಸಮಯ ಅವರೊಡನೆ ತಂಗ ಬಹುದೇ ಎಂದು ಕೇಳಿದೆ. ಅವರು ಒಂದು ಕ್ಷಣ ಆಲೋಚಿಸಿದರು. ಅವರು ಒಪ್ಪಿದರು. ನಾನು ಶಬ್ದಗಳಿಗೆ ಮೀರಿ ಹರ್ಷಗೊಂಡಿದ್ದೆ. ನಾನು ಬಹಳ ದೊಡ್ಡದನ್ನು ಗೆದ್ದಿದ್ದೇನೆ ಎಂದು ತಿಳಿದೆ. ಈಗ ಅವರೊಡನೆ ನನ್ನ ಇರುವಿಕೆಯು ನನ್ನ ಭಾರತದಲ್ಲಿಯ ಇರುವಿಕೆಯ ಸಮಯವನ್ನು ಶ್ರೇಷ್ಠವಾದ ಉಪಯೋಗವನ್ನು ಮಾಡಿಕೊಳ್ಳಲು ಒಂದು ಅವಕಾಶವನ್ನು ಒದಗಿಸಿತು.

ನಾನು ಡಾ.ಶ್ರೀಮಾಲಿಯವರ ಜೊತೆಗೆ ಭವ್‌ಸಾರಿಯಿಂದ ಹೊರಟೆ. ನಾನು ಜೋಧಪುರವನ್ನು ತಲುಪಿದ ನಂತರ ಅದು ಶಾಂತವಾದ ಮತ್ತು ಆಹ್ಲಾದಕರವಾದ ಸ್ಥಳವೆಂದು ಕಂಡುಕೊಂಡೆ. ನಾನು ಡಾ.ಶ್ರೀಮಾಲಿಯವರೊಡನೆ ಅವರ ಮನೆಯಲ್ಲಿ ಸುಮಾರು ಒಂದು ತಿಂಗಳು ತಂಗಿದ್ದೆ. ಅವರ ಮನೆಯು ಬೇರೆ ಎಲ್ಲರ ಮನೆಗಳಿಗೂ ಒಂದು ಮಾದರಿಯಾಗಬೇಕು. ಆ ಮನೆಯ ಅಲಂಕಾರ, ಆ ಛಾಯೆ ಮತ್ತು ಆ ವಾತಾವರಣವು ಸಂತೋಷ ಮತ್ತು ಶಾಂತಿಯೊಡನೆ ಗುರುತಿಸಲಾಗಿತ್ತು. ಅವರ ಒಂದು ಸಂಸಾರವು ಒಬ್ಬರೊಬ್ಬರ ಸಮಸ್ಯೆಗಳನ್ನು ಆಸಕ್ತಿಯಿಂದ ಗಮನಿಸಿ ಸೇರಿಕೊಂಡು ಚಲಿಸುತ್ತಿರುವುದಾಗಿತ್ತು, ಪರಿಹಾರಗಳನ್ನು ಅವರು ಸಾಂಘಿಕವಾಗಿ ಕಂಡುಕೊಂಡರು.

ನಾನು ಅವರೊಡನೆ ಇರುವ ಒಂದೇ ಒಂದು ಉದ್ದೇಶವೆಂದರೆ ಅವರ ಸಾಧಾರಣ ಕಾರ್ಯಗಳು ಮತ್ತು ಅದರಲ್ಲೂ ವಿಶಿಷ್ಟವಾಗಿ ಸಮ್ಮೋಹನ ಕ್ಷೇತ್ರದಲ್ಲಿ ಅವರ ಅನ್ವೇಷಣೆಗಳನ್ನು ಹತ್ತಿರದಿಂದ ಅಧ್ಯಯನ ಮಾಡಲು.

ಕೆಲವು ಸಾರಿ ನಾನು ಡಾ.ಶ್ರೀಮಾಲಿಯವರು ಊರಹೊರಗೆ ಇದ್ದಾಗಲೇ ತುಂಬಾ ಪೂರ್ವಾಕ್ರಮಣದಲ್ಲಿ ಇರುವವರು ಎಂದು ತಿಳಿದಿದ್ದೆ. ಇಲ್ಲ, ನಾನು ತಪ್ಪಾಗಿದ್ದೆ. ಅವರು ಮನೆಯಲ್ಲಿ ಹೆಚ್ಚು ಕಾರ್ಯಮಗ್ನರಾಗಿದ್ದರು. ಪ್ರತಿಗಂಟೆಗೂ ಸಂದರ್ಶಕರ ಗುಂಪು ಅವರೊಡನೆ ವೈಯಕ್ತಿಕವಾಗಿ ಕಾಣಲು ಒತ್ತಾಯ ಮಾಡುತ್ತಿದ್ದರು. ಅವರ ಸಹನ ಶಕ್ತಿಯು ಉದ್ರೇಕಗೊಳಿಸುವಂತಹುದಾಗಿತ್ತು. ಅವರು ಈಕಡೆ ಆಲಸಿಯೂ ಅಲ್ಲ. ಅವರನ್ನು ನಾನು ಒಮ್ಮೆಯೂ ಬಳಲಿದ ಹಾಗೆ ಕಾಣಲಿಲ್ಲ. ಯಾವಾಗಲೂ ಅದೇ ಮುಖ ತೇಜಸ್ಸಿನ ಮುಗುಳುನಗೆ ಮತ್ತು ಅದೇ ಪ್ರಕಾಶದಿಂದ ಮೋಹ ಗೊಳ್ಳುವಂತಹ ಆಕರ್ಷಣೆ.

ಡಾ.ಶ್ರೀಮಾಲಿಯವರು ಕೇವಲ ಸಮ್ಮೋಹಕರೆಂದು ತಿಳಿದಿದ್ದೆ. ಈಗ ಅವರು ಮುಖ್ಯವಾಗಿ ಜ್ಯೋತಿಷ್ಯಜ್ಞರು ಎಂಬುದನ್ನು ತಿಳಿದೆ. ಅಪರಿಚಿತ ವಿಷಯಗಳಾದ ಜ್ಯೋತಿಷ್ಯ, ಸಂಖ್ಯಾಶಾಸ್ತ್ರ ಮತ್ತು ಹಸ್ತಸಾಮುದ್ರಿಕೆ ನಂತಹ ಅವರ ಹಲವಾರು ಪುಸ್ತಕಗಳು ಸಾಮಾನ್ಯ ಮನುಷ್ಯನ ಸುಲಭ ನಿಲುಕುವಿನಲ್ಲಿದ್ದವು. ಅವರು *ತಾಂತ್ರಿಕ*[1] ಎಂದು ಸಹ ಪ್ರಖ್ಯಾತರಾಗಿದ್ದರು. *ಮಂತ್ರ* ವಿಜ್ಞಾನದ ಮೇಲೆ ಅವರು ಹಲವಾರು ಪುಸ್ತಕಗಳನ್ನು ಬರೆದದ್ದರು. ಅವರ ಅಧ್ಯಯನಗಳಲ್ಲಿ ಪಿತ್ರಾರ್ಜಿತ ಭಾರತ ಸಾಂಸ್ಕೃತಿಕದ ಸತ್ವವನ್ನು ಎಲ್ಲಾ ಕಾಳಜಿಯಿಂದ ಕಾಪಾಡುವುದರ ಜೊತೆಗೆ ತಮ್ಮ ಪುಸ್ತಕಗಳಲ್ಲಿ ತಮಗೆ ಅಭೂತಪೂರ್ವ ಖ್ಯಾತಿಯನ್ನು ಯೋಗ್ಯವಾಗಿ ಗಳಿಸಿದಂತಹ ತುಂಬಾ ಹೊಸ ಪದ್ಧತಿಗಳನ್ನು ಪರಿಚಯಿಸಲು ಅವಶ್ಯಕತೆ ಇದೆ ಎಂದು ಭಾವಿಸಿದರು.

ಅವರ ದಿನವೆಲ್ಲಾ ಪೂರ್ವಾಕ್ರಮಣಗಳನ್ನು ನೋಡುತ್ತಾ ಅವರಿಗೆ ಅಂತಹ ವಿಶಾಲ ತರಹದ ವಿಷಯಗಳ ಮೇಲೆ ಬರೆಯಲು ಸಮಯವೆಲ್ಲಿ ಸಿಗುವುದು ಎಂದು ಕೆಲವುಬಾರಿ ಚಕಿತಗೊಂಡೆ. ಅವರ ಪ್ರತಿದಿನದ ನಿಯಮಿತ ಕ್ರಮವು ಅವರ ನೋಟವನ್ನು ಸಂಬಂಧಿಸಿದೆ ಎಂದು ನನಗೆ ಅನ್ನಿಸುತ್ತದೆ.

ಅವರು ಬೆಳಗ್ಗೆ ನಾಲ್ಕಕ್ಕೆ ಎದ್ದು ಏಳರವರೆಗೆ ಧ್ಯಾನಿಸುವರು. ಧ್ಯಾನದ ಕೂಡಲೇ ಇಬ್ಬರೂ ಭಾರತೀಯ ಮತ್ತು ವಿದೇಶೀ ಸಂದರ್ಶಕರಾದ ಸಾಮಾಜಿಕ ಹಾಸುಗೆಯ ಒಂದು ವಿಶಾಲವಾದ ವರ್ಣಪಂಕ್ತಿಯನ್ನು ಪ್ರತಿನಿಧಿಸುವ ಹಾಗೆ ರಾಜಕೀಯ ನಾಯಕರು, ಸಿನಿಮಾ ಕಲಾವಿದರು, ಶ್ರೀಮಂತ ಉದ್ಯಮಶೀಲರು, ಕೆಲಸಗಾರರು ಮತ್ತು ಸಾಮಾನ್ಯ ಜನರನ್ನು ಅವರು ಎದುರುಗೊಳ್ಳುವರು. ತಮ್ಮನ್ನು ಹಿಂಡುವಂತ ಸಮಸ್ಯೆಗಳನ್ನು *ತಂತ್ರ*, *ಮಂತ್ರ*, ಹಿಪ್ನಾಟಿಜಂ ಮತ್ತು ಇತರೆ ಸಂಬಂಧಪಟ್ಟ ಶಿಸ್ತುಗಳಿಂದ ಅವರು ಪರಿಹಾರ ಮಾಡ ಬಯಸುವರು. ಮಧ್ಯಾಹ್ನ ಒಂದಕ್ಕೆ ಅವರು ಊಟಕ್ಕೆ ತೆರಳುವರು. ಸ್ವಲ್ಪ ಹೊತ್ತು ವಿರಾಮಿಸಿದ ನಂತರ ಗುಪ್ತ ವಿಜ್ಞಾನಗಳ ಕಲಾಕೌಶಲ್ಯವನ್ನು ಕಲಿಯಲು ಬಂದಂತಹ ಸಾಧುಗಳನ್ನು ಒಳಗೊಂಡ ಜ್ಞಾನಿಗಳ ಸಭೆಗಳನ್ನು ಪ್ರವೇಶಿಸುವರು.

ಸಾಯಂಕಾಲದಲ್ಲಿ ತಮ್ಮನ್ನು ಕಾಣಲು 3 ರಿಂದ 4 ದಿನ ಅವರ ತಿರುವನ್ನು ನಿರೀಕ್ಷಿಸಿರುವಂತಹ ಜನರನ್ನು ಮಾತ್ರ ಸಂದರ್ಶಿಸುವರು.

ಕೆಲರೋಗಿಗಳಿಗೆ ಚಿಕಿತ್ಸೆಯನ್ನು ಕೊಡುತ್ತಾ, ಕೆಲ ವಿಷಯಗಳಲ್ಲಿ ಅವರು ಔಷಧಿಗಳನ್ನು

1. *ತಾಂತ್ರಿಕ*: ಧಾರ್ಮಿಕ ಪೂಜೆಯ ರಹಸ್ಯಾರ್ಥವುಳ್ಳ ಧರ್ಮಪಂಥ ಆರಾಧನೆ ಪದ್ಧತಿಯಲ್ಲಿ ಮತ್ತು ಗೋಪ್ಯತೆಯಲ್ಲಿ ಪೂಜಿಸುವಂತಹವನು.

ಅಳವಡಿಸುವರು. ಹೇಗಾದರೂ, ಔಷಧಿಗಳ ಗುರುತನ್ನು ಗುಟ್ಟಾಗಿಡುತ್ತಿದ್ದರು. ವಾಸಿ ಆಗದಂತಿರುವ ರೋಗಗಳನ್ನೂ ಸಹ ಅವರು ಅಮೂಲ್ಯವಾದ ರತ್ನಗಳಿಂದಲೂ ಮತ್ತು ಬೇರೆ ಕಲ್ಲುಗಳ ಸಹಾಯದಿಂದಲೂ ಚಿಕಿತ್ಸೆಕೊಡುತ್ತಿದ್ದರು. ಸಾಧಕರಾಗಿ ನಿರ್ದಿಷ್ಟವಾಗಿ ಅವರಷ್ಟಕ್ಕೆ ಅವರೇ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ತಿರುಗಾಡುತ್ತಿರುವಾಗ ಅವರು ಕೆಲ ಸನ್ಯಾಸಿಗಳನ್ನು ಕಂಡಿದ್ದರು, ಆ ಸನ್ಯಾಸಿಗಳೇ ಅವರಿಗೆ ದೀರ್ಘಕಾಲದ ರೋಗಗಳನ್ನೂ ಅನುಮಾನವಿಲ್ಲದ ಶಕ್ಯತಾದರ್ಶಕದೊಂದಿಗೆ ವಾಸಿಮಾಡುವಂತಹ ಅಪರೂಪದ ಗಿಡಮೂಲಿಕೆಗಳ ಬಗ್ಗೆ ತಿಳಿಹೇಳಿದ್ದರು.

ಸಂಜೆಯಲ್ಲಿ ಅವರನ್ನು ನೋಡಿದಂತಹ ರೋಗಿಗಳಲ್ಲಿ ಎಲ್ಲಾ ಭರವಸೆಗಳನ್ನು ಬಿಟ್ಟಂತಹವರೂ ಒಳಗೊಂಡಿದ್ದರು. ಒಂದು ಹಾದಿಯಲ್ಲಿ ಆ ಜನರು ಮಾನಸಿಕವಾಗಿ ಒಂದಾನೊಂದು ಕ್ಷಣದಲ್ಲಿ ತಮ್ಮಷ್ಟಕ್ಕೆ ತಾವೇ ಸಾವನ್ನು ಎದುರಿಸಲು ತಯಾರಾಗಿರುವಂತಹವರು. ನಿಜವೆಂದರೆ ಅವರಿಗೆ ಪರಿಣಾಮಕರವಾದ ಚಿಕಿತ್ಸೆಯು ಎಲ್ಲಿಯೂ ದೊರಕಲಿಲ್ಲ. ಅಂತಹ ರೋಗಿಗಳೇ ಡಾ.ಶ್ರೀಮಾಲಿಯವರ ಕಡೆಗೆ ಕೊನೆಯ ಅವಲಂಬನೆಯಾಗಿ ಬರುತ್ತಿದ್ದರು. ಅಂತಹ ರೋಗಿಗಳು ಅವರ ಅಗ್ರಮಾನ ಗಮನವನ್ನು ಆಹ್ವಾನಿಸುವರು. ಅವರು ಔಷಧಿಗಳನ್ನು ಉಚಿತವಾಗಿ ಕೊಡುವರು. ಊಟವನ್ನೂ ಸಹ ಉಚಿತವಾಗಿಯೇ ನೀಡುವರು. ಕೊಡುಗೆಗಳನ್ನು ಅವರು ಒಪ್ಪುವುದಿಲ್ಲ.

ಬಹಳ ಮುಖ್ಯವಾಗಿ ಒಬ್ಬರನ್ನು ತಡಕುವುದೇನೆಂದರೆ ಕೆಲಸದ ಮತ್ತು ರೋಗಿಗಳ ಕಡೆಗೆ ಡಾ.ಶ್ರೀಮಾಲಿಯವರ ಮನೋವೃತ್ತಿ. ಅವರು ತಮ್ಮ ಸ್ವಂತ ಮಹತ್ಕಾರ್ಯಗಳನ್ನು ಹೊಗಳಿಕೊಳ್ಳುವುದನ್ನಾಗಲಿ, ಸಾರಿ ಹೇಳುವುದನ್ನಾಗಲೀ ಮಾಡುತ್ತಾ ಹೋಗುವುದಿಲ್ಲ. ಅವರ ಪ್ರಕಾರ ತಾವು ಮಾಡುವಂತಹ ಸೇವೆಯು ಪೂರ್ವಕಾಲದ ಋಷಿಗಳು ಮತ್ತು ಸನ್ಯಾಸಿಗಳು ಅವರಿಗೆ ಒಪ್ಪಿಸಿಕೊಟ್ಟಂತಹ ಸಾಧನಗಳನ್ನು ಹಂಚುವುದು ಮಾತ್ರ. ತಾವು ಆರಿಸಿ ಹಾಕುವ ಹಂಚಿಕೆಯಲ್ಲಿ ಆಗಾಗ, ಅವರ ಬಾಗಿಲಿಗೆ ದೀರ್ಘಕಾಲದ ರೋಗಿಗಳು ತಮ್ಮ ಸಂರಕ್ಷಕರೆಂದು ಮತ್ತು ಕಟ್ಟಕಡೆಯ ಜೀವ ಉಳಿತದ ಪರಿಹಾರಕರೆಂದು ಬರುವರು.

ಅವರ ಚಮತ್ಕಾರಿಕವಾದ ಚಿಕಿತ್ಸೆಯನ್ನು ನೋಡುತ್ತಾ ಒಬ್ಬರೋಗಿಯು ತನ್ನ ನಿಶ್ಚಿತಸಾವಿನ ಕೆಲವು ಕ್ಷಣಗಳ ಮುಂಚೆ ಭೇಟಿಕೊಟ್ಟರೂ ಅವರನ್ನು ಆರೋಗ್ಯಕ್ಕೆ ಪುನಶ್ಚೇತನ ಗೊಳಿಸುವರು ಎಂಬ ಬಲವಾದ ನಂಬಿಕೆ ನನ್ನಲ್ಲಿ ಬೇರೂರಿತು.

ಸಾಯಂಕಾಲದಲ್ಲಿ ಅವರ ಪರಿವಾರದ ಇತರೆ ಸದಸ್ಯರೊಡನೆ ಪೂಜೆ ಮಾಡುವರು. ಅವರ ಪೂರ್ಣ ಪರಿವಾರವು ಅತಿಜಾಗರೂಕತೆಯಿಂದ ಎಲ್ಲಾ ಶಾಸ್ತ್ರವಿಧಿಗಳನ್ನು ಈ ಒಂದು ಶೋಭೆಯ ಆಧ್ಯಾತ್ಮಿಕ ಅವಸರಕ್ಕೆ ಯುಕ್ತವಾಗಿ ಅನುಸರಿಸುತ್ತಾ ಪೂಜೆಯಲ್ಲಿ ಕೂಡುವುದು.

ಸಂಜೆಯ ಪೂಜೆಯನಂತರ ಯಾರನ್ನು ಅವರು ಬಹಳ ಪ್ರೀತಿಸುವರೋ ಅಂತಹ ಹತ್ತಿರದ ಅತಿಥಿಗಳೊಡನೆ ಅಥವಾ ಅವರ ಮನೆಯಲ್ಲಿ ವಾಸಿಸುವರೊಡನೆ ಕೂಡುವರು.

ರಾತ್ರಿ ಹತ್ತಕ್ಕೆ ಅವರ ಪರಿವಾರದೊಡನೆ ಮತ್ತು ವೈಯಕ್ತಿಕ ಅತಿಥಿಗಳೊಡನೆ ಅವರು ಊಟ ಮಾಡುವರು. ಸುಮಾರು ಒಂದು ಗಂಟೆಯೊಳಗೆ ಅವರು ತಮ್ಮ ಧ್ಯಾನದ ಕೋಣೆಯಲ್ಲಿ ಪ್ರವೇಶಿಸುವರು. ಪ್ರತಿದಿನ ಬೆಳಿಗ್ಗೆ ಸರಿಯಾಗಿ ನಾಲ್ಕಕ್ಕೆ ತಮ್ಮ ಮುಂಜಾನೆಯ ಚಿಕ್ಕಕೆಲಸಗಳನ್ನು ಮಾಡುವುದು ನೋಡಬಹುದು. ಈ ಮಧ್ಯದಲ್ಲಿ ಅವರಿಗೆ ನಿದ್ರಿಸಲು ಯಾವಾಗ ಸಮಯ ಸಿಗುವುದು ಮತ್ತು ಎಷ್ಟೊತ್ತು ನಿದ್ರಿಸುವರು ಎಂಬುದು ನಿಜವಾಗಿಯೂ ಒಳ್ಳೆ ಗಾಬರಿಪಡಿಸುವಂತಹುದು.

ನಾನು ಡಾ.ಶ್ರೀಮಾಲಿಯವರನ್ನು ಮತ್ತು ಅವರ ಪರಿವಾರವನ್ನು ಎಷ್ಟು ಹತ್ತಿರದಿಂದ ನೋಡಿದೆನೋ ಯಾರನ್ನೂ ಪೂಜ್ಯ ಭಾವನೆಯಿಂದ ಮಾತಾಜಿ ಎಂದು ಕರೆಯಲಾಗಿತ್ತೋ ಅಂತಹ ಡಾ.ಶ್ರೀಮಾಲಿಯವರ ಹೆಂಡತಿಗೆ ಹೆಚ್ಚಿನ ಗಣ್ಯತೆಯನ್ನು ಕೊಡಬೇಕೆಂಬುದು ನನ್ನ ದೃಢಸಂಕಲ್ಪ ಅಚಲವಾಗಿ ಬೆಳೆಯಿತು. ಡಾ.ಶ್ರೀಮಾಲಿಯವರ ವ್ಯಕ್ತಿತ್ವವನ್ನು ರೂಪಗೊಳಿಸುವುದರಲ್ಲಿ ಅವರು ನಿರ್ಧಾರಕ ಪಾತ್ರವಹಿಸುದುದು ಶಂಕೆಯಾಚೆಯದು. ಹೀಗೆಯೇ ಮಾತಾಜಿಯವರು ಸಂದರ್ಶಕರನ್ನು ಕಾಣುವುದರಲ್ಲಿ ಕಾರ್ಯಮಗ್ನರಾಗಿರುವರು ಮತ್ತು ಈಗ ಯಾರ ಸಂಖ್ಯೆಯು ಪ್ರತಿದಿನ ಹದಿನೈದರಿಂದ ಇಪ್ಪತ್ತಕ್ಕೆ ಸುಲಭವಾಗಿ ಏರುವುದೋ ಅಂತಹ ಅತಿಥಿಗಳ ನಿರ್ದಿಷ್ಟ ಅವಶ್ಯಕತೆಗಳಿಗೆ ಹಾಜರಾಗಿರುವುದರಲ್ಲಿ ಕಾರ್ಯನಿರತರಾಗಿರುವರು. ರಾತ್ರಿ ಹನ್ನೊಂದಕ್ಕೆ ಅವರು ನಿದ್ರೆಗೆ ತೆರಳಿ ಬೆಳಿಗ್ಗೆ ಬಹಳ ಬೇಗನೇ ಎದ್ದು ಅತಿಥಿಗಳಿಗೆ ಸೇವೆ ಮಾಡುವರು ಮತ್ತು ಅವರಿಗೆ ಅಡಿಗೆ ಮಾಡುವರು, ಧ್ಯಾನಿಸಿ ಮತ್ತು ಪೂಜಿಸಿ, ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಡಾ.ಶ್ರೀಮಾಲಿಯವರ ನಿರ್ದಿಷ್ಟ ಅವಶ್ಯಕತೆಗಳನ್ನು ನೋಡುವುದು. ಅತಿಥಿಗಳಿಂದಲೂ ಮತ್ತು ಹಾಗೆಯೇ ಬೇರೆಯವರಿಂದಲೂ ಅವರು ಮಾತ ಎಂದೇ ಪರಿಗಣಿಸಲ್ಪಟ್ಟಿದ್ದರು.

ಡಾ.ಶ್ರೀಮಾಲಿಯವರ ಮನೆಯಲ್ಲಿಯತರಹ ನಾನು ಯಾವ ಸಮಯದಲ್ಲೂ ಒಂದು ಹೆಚ್ಚಿನ ಆಹ್ಲಾದಕರವಾದ ಮತ್ತು ತೃಪ್ತಿಕರವಾದ ಸಮಯವನ್ನು ಕಳೆದಹಾಗೆ ನನಗೆ ಜ್ಞಾಪಕದಲ್ಲಿಲ್ಲ. ನಾನು ವಿಶ್ವದ ಎಲ್ಲಾ ಸ್ಥಳಗಳಿಗೂ ಹೋಗಿದ್ದೆ. ನಾನು ಎಷ್ಟೋ ಸ್ಥಳಗಳಲ್ಲಿ ಬಹಳ ದೊಡ್ಡವರ ಜೊತೆಗೆ ತಂಗಿದ್ದೆ. ಆದರೆ ಡಾ.ಶ್ರೀಮಾಲಿಯವರ ಮನೆಯಲ್ಲಿ ದೊರೆತಂತಹ ಶುದ್ಧವಾದ ಸಂತೋಷವು ಎಲ್ಲಾ ವರ್ಗಗಳಲ್ಲಿಯೂ ಉತ್ಕೃಷ್ಟವಾಗಿತ್ತು. ನಾನು ಎಲ್ಲಿಯೂ ಕಾಣದ ಸಂಪೂರ್ಣ ವಾತಾವರಣವು, ಸಂತೋಷ ಮತ್ತು ಶಾಂತಿಯಿಂದ, ಆ ಮನೆಯಲ್ಲಿ ತುಂಬಿತ್ತು.

ನನ್ನ ಸಂಪೂರ್ಣ ಜೀವನವನ್ನು ಡಾ.ಶ್ರೀಮಾಲಿಯವರ ಘನವಾದ ಜೊತೆಯಲ್ಲಿ ಕಳೆಯಲು ಹೇಗೆ ನಾನು ಬಯಸಿದೆ. ಹಾಗೆಯೇ ಒಂದು ತಿಂಗಳಕಾಲ ಅವರ ಜೊತೆಯಲ್ಲಿ ಕಳೆದುದು ನನ್ನ ಹಿಂದಿನ ಜನ್ಮದ ಪುಣ್ಯವು ಈ ಜನ್ಮದಲ್ಲಿ ಫಲಿಸುದುದು.

ಹೇಗಾದರೂ, ಡಾ.ಶ್ರೀಮಾಲಿಯವರಿಂದ ಸಮ್ಮೋಹನ ವಿಶೇಷವಾಗಿ, ಅವರ ಸ್ವಂತ ಅನ್ವೇಷಣೆ, *ಕ್ರಿಯಾಯೋಗ*ಗಳ ತಂತ್ರಗಳನ್ನು ಕಲಿಯುವುದರ ಮೂಲಕ ನನ್ನ ದೃಷ್ಟಿಗಳಿಗೆ ತರಬೇತಿ ಸಿಕ್ಕಿತು. ನನ್ನನ್ನು ಯಾವಾಗಲೂ ಮುಂದೆ ಹಾಕುತ್ತಿದ್ದುದ್ದೇನೆಂದರೆ ಅವರ ಪ್ರತಿದಿನದ ಕೆಲಸಗಳ ತಪ್ಪಿಲ್ಲುಗಳಲ್ಲಿ ಕಾರ್ಯನಿರತತೆ. ನನ್ನ ಮೊದಲನೆಯ ಐದು ದಿನಗಳ ತಂಗುವಿಕೆಯ ಸಂದರ್ಭದಲ್ಲಿ ನಾನು ಅವರೊಡನೆ ಬರಿಯ ಹದಿನೈದು ನಿಮಿಷಗಳೂ ಸಹ ಮಾತನಾಡಲಾಗಲಿಲ್ಲ. ಅವರು *ಮಾತಾಜಿ* ಯವರ ಹತ್ತಿರ ಸಹ ಬರಿಯ ಐದು ನಿಮಿಷಗಳನ್ನೂ ಹೊರತಾಗಿಸಲಿಲ್ಲ. ನಾನು ಒಮ್ಮೆ ಮಾತಾಜಿಯವರಿಗೆ ಹೇಳಿದೆ:"ಮಾತಾಜಿ ಶ್ರೀಮಾಲಿಜಿ ಅವರ ಜೊತೆಗೆ ನಿಮಗೆ ಮಾತನಾಡಲು ಅವಕಾಶವಿಲ್ಲದ್ದನ್ನು ಗಮನಿಸಿದ್ದೇನೆ. ಅದರ ಬಗ್ಗೆ ನಿಮಗೇನನ್ನಿಸುತ್ತದೆ?"

ಅವರು ಮುಗುಳ್ನಕ್ಕು ಹೇಳಿದರು "ಈಗ ನಾವು ಮದುವೆಯಾಗಿ ಬಹಳ ಸಮಾಯ ಕಳೆದಿದೆ. ಪ್ರಸಕ್ತ ಪರಿಸ್ಥಿತಿಯಲ್ಲಿ ಆ ಒಂದು ಧರ್ಮದ ಅರಿವೇ ನನಗಿಲ್ಲ."

ನಾನು ಡಾ.ಶ್ರೀಮಾಲಿಯವರೊಡನೆಯೇ ಒಂದು ಮಾತನ್ನು ಹೇಳೋಣವೆಂದು ಅಂದುಕೊಂಡೆ. ನಾನು ಅವರಲ್ಲಿಗೆ ಹೋಗಿ ಹೇಳಿದೆ "ತಮ್ಮ ಮನೆಯಲ್ಲಿ ತಮ್ಮ ಜೊತೆಯಲ್ಲಿ ತಂಗಲು ಅವಕಾಶ ಮಾಡಿ ಕೊಟ್ಟುದುದು ನನ್ನ ಅದೃಷ್ಟವೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ನೀವು ಎಷ್ಟು

ಅವಿಶ್ರಾಂತಿಯಲ್ಲಿದ್ದೀರೆಂದರೆ ನಿಮ್ಮೊಡನೆ ಮಾತನಾಡುವ ಯಾವುದೇ ಸಾಧ್ಯತೆಗಳು ಕಾಣುತ್ತಿಲ್ಲ. ನಿಮ್ಮನ್ನು ಕಾಣುವುದೂ ಅಪರೂಪವಾಗಿದೆ. ನಾನು ಇಲ್ಲಿ ಬಂದಿರುವ ಮುಖ್ಯ ಉದ್ದೇಶ ನಿಮ್ಮಿಂದ *ಕ್ರಿಯಾಯೋಗ*ವನ್ನು ಕಲಿಯಲು. ಹಾಗೆಯೇ ಸಮ್ಮೋಹನ ಕ್ಷೇತ್ರದಲ್ಲಿ ನೀವು ಯಾವುದಾದರೂ ವಿಶೇಷ ಜ್ಞಾನವನ್ನು ಕೊಡುವಿರಾದರೆ ನನ್ನಷ್ಟಕ್ಕೆ ನಾನೇ ಅತೀ ಅದೃಷ್ಟಶಾಲಿಯೆಂದು ಪರಿಗಣಿಸುವೆ."

ಡಾ.ಶ್ರೀಮಾಲಿಯವರು ನನ್ನ ವ್ಯಾಕುಲತೆಯಲ್ಲಿ ಭಾಗೀದಾರರಾಗಿ ಮರುದಿನ ತಾವು ನಿರ್ದಿಷ್ಟವಾದ ವಚನಬದ್ಧತೆಯನ್ನು ಕೊಡುವುದಾಗಿ ಭರವಸೆಕೊಟ್ಟರು. ಮರುದಿನ ನಾನು ಅವರನ್ನು ಕಂಡಾಗ ಅವರ ಮಧ್ಯಾಹ್ನದ ವಿರಾಮವನ್ನು ನನಗೋಸ್ಕರ ತ್ಯಾಗಮಾಡಲು ಒಪ್ಪಿದರು, ಅವರಿಗೆ ಬಿಟ್ಟುಕೊಡಲು ಬೇರೆಯಾವ ಸಮಯವಿಲ್ಲವೆಂದು ಅವರು ಹೇಳಿದರು, ಮತ್ತು ಅವರ ವಿರಾಮಕ್ಕೆ ಉಪಯೋಗಿಸುವ ಆ ಮಧ್ಯಾಹ್ನದ ಒಂದು ಗಂಟೆ ಈಗ ನನ್ನ ವಿನಯೋಗದಲ್ಲಿ ಇರುವುದು.

ಒಂದು ಮಟ್ಟಿನ ತೊಡಕಿನಿಂದ ಈ ವ್ಯವಸ್ಥೆಗೆ ನಾನು ಸಮ್ಮತಿಸಿದೆ. ಅವರ ಯೋಗ್ಯ ಅರ್ಹತೆಯ ವಿರಾಮವನ್ನು ನಾನು ಆಕ್ರಮಿಸುತ್ತಿದ್ದೇನೆಂದು ಬಲ್ಲವನಾಗಿದ್ದೆ ಮತ್ತು ಆದರೂ ಅವರಿಂದ ನನಗೆ ಸಿಕ್ಕುದುದು ನನ್ನ ಸ್ವಂತ ಆಸಕ್ತಿಯಲ್ಲೇ.

ಮರುದಿನ ನಿಶ್ಚಯಿಸಿದ ಸಮಯಕ್ಕೆ ನನ್ನನ್ನು ಕರೆಯಲಾಯಿತು. ಈಗ ಅರಿಯದ ಸಮ್ಮೋಹನ ನೋಟಗಳನ್ನೆಲ್ಲಾ ಕಲಿಯಲು ಪ್ರಾರಂಭಿಸಿದೆ. ನನ್ನನ್ನೇ ಒಬ್ಬ ಅದ್ವಿತೀಯ ಸಮ್ಮೋಹನ ಪ್ರವೀಣನೆಂದು ನಂಬಲಾಗಿತ್ತು. ನಿಜವೆಂದರೆ, ಪ್ರದರ್ಶನಗಳ ಮೂಲಕ,ಯಾರನ್ನಾದರೂ ಕೇವಲ ಮೂರು ಕ್ಷಣಗಳಲ್ಲಿ ಸಮ್ಮೋಹನ ವಶಕ್ಕೆ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಸ್ಥಾಪಿಸಿದ್ದೆ. ಆದರೆ ಬೇಗನೇ ಡಾ.ಶ್ರೀಮಾಲಿಯವರೊಡನೆ ಕೆಲವೇ ಅಧ್ಯಯನಗಳ ನಂತರ ನಾನು ಹುಯಿಲ್ಲದ ನೀರಿನಲ್ಲಿದ್ದೆ ಎಂಬುವುದರಲ್ಲಿ ನನಗೆ ಅನುಮಾನವಿಲ್ಲವಾಯಿತು ಮತ್ತು ಡಾ.ಶ್ರೀಮಾಲಿಯವರ ಜ್ಞಾನವು ಆಳನೋಡಲು ಸಾಧ್ಯವಾಗದಂತಹ ಸಮುದ್ರ.

ಡಾ.ಶ್ರೀಮಾಲಿಯವರ ಮುಖ್ಯ ಒತ್ತಡವೆಂದರೆ ಸಮ್ಮೋಹನದ ಪ್ರಾಯೋಗಿಕ ನೋಟ, ಮನಸ್ಸನ್ನು ಹತೋಟಿಗೆ ತರಲು ಸಾಧನದ ಮೂಲಕ ಮಾತ್ರ ಸಾಧ್ಯ ಮತ್ತು ತ್ರಾಟಕವು ಅತ್ಯವಶ್ಯಕವಾದ ಒಂದು ತಂತ್ರವೆಂದು ಅವರು ಹೇಳಿದರು. ಹಾಗಿದ್ದರೂ ಈ ತಂತ್ರ ಎಷ್ಟೇ ಉಪಯೋಗಕರವಾಗಿದ್ದರೂ ಪೂರ್ಣತೆಯಲ್ಲಿ ಅಭಾವಹೊಂದಿತ್ತು. ಏಕೆಂದರೆ ಅದು ಕೇವಲ ಒಂದೇ ಅಂಗಕ್ಕೆ ಚೈತನ್ಯ ಕೊಟ್ಟಿತು, ಅವೆಂದರೆ ಕಣ್ಣುಗಳು ಅಥವಾ ಬೆರಳುಗಳು. ಅಪೇಕ್ಷಣೀಯವಾದುದ್ದೇನೆಂದರೆ ನಮ್ಮ ಯಾವುದೇ ಅಂಗದಿಂದ ಜನರನ್ನು ವಶೀಕರಣಕ್ಕೆ ತೆಗೆದುಕೊಳ್ಳುವ ಶಕ್ತಿ ನಮಗಿರಬೇಕು.

ನನ್ನ ಅನುಭವದಲ್ಲಿ ಬರಿಯ ಕಣ್ಣುಗಳು ಮತ್ತು ಕೈಗಳ ಬೆರಳುಗಳು ಮಾತ್ರ ಸಮ್ಮೋಹಕ ಪ್ರಭಾವವನ್ನು ಬೀರುತ್ತವೆ ಎನ್ನುವುದಾಗಿತ್ತು. ಹೇಗಾದರೂ ಡಾ.ಶ್ರೀಮಾಲಿಯವರು ದೇಹದ ಇವೆರಡೂ ಭಾಗಗಳು ಇತರ ಭಾಗಗಳಷ್ಟು ಪರಿಣಾಮಕಾರಿಯಾಗಿರುವುದಿಲ್ಲ ಎಂದು ಎತ್ತಿ ಹಿಡಿದರು.

ಅವರು ವಿಮರ್ಶಿಸಿದಹಾಗೆ ಅದು *ಕ್ರಿಯಾಯೋಗ* ಮತ್ತು *ಧ್ಯಾನಯೋಗ*ದ ಮೂಲಕ ಓರ್ವರು ಓರ್ವರ ದೇಹದ ಮೇಲೆ ಸಂಪೂರ್ಣ ಹತೋಟಿಯನ್ನು ಪಡೆಯಬಹುದು, ಒಳಕ್ಕೆ ಹೋಗಿ, ಮತ್ತು ಎರಡೂ ಮನಸ್ಸುಗಳ ಸಂಪೂರ್ಣ ಗುರುತನ್ನು ಪಡೆದನಂತರ ಆ ಮನುಷ್ಯನನ್ನು ಸಮ್ಮೋಹನಗೊಳಿಸಬಹುದು. ಈ ಅವಸ್ಥೆಯನ್ನು ಪಡೆದ ನಂತರ ನಮಗೆ ಬಹಿರ್ಮನಸ್ಸನ್ನು ವಿಚಾರ ಬಯಕೆಗಳಿಂದ ಮುಕ್ತ ಮಾಡಲಾಗುತ್ತದೆ. ಒಂದು ವಿಚಾರಮುಕ್ತ ಬಹಿರ್ಮನಸ್ಸು ಅಂತರ್ಮನಸ್ಸಿನ ಮೇಲೆ ನೇರ ಪರಿಣಾಮವನ್ನು ಬೀರುವ ಸಾಧ್ಯತೆಗಳುಂಟು, ಅದೂ ಸಹ ಬಹಿರ್ಮನಸ್ಸಿನ ಹಾಗೆ

ವಿಚಾರಮುಕ್ತವಾಗುವುದು. ಇವೆರಡರ ಮಧ್ಯದ ಪರಸ್ಪರ ಕಾರ್ಯದ ಪರಿಣಾಮವಾಗಿ, ಆ ಮೆದುಳು ತನ್ನಷ್ಟಕ್ಕೆ ವಿಚಾರಮುಕ್ತವಾಗುವುದು. *ಯೋಗದ* ಅಭ್ಯಾಸದಲ್ಲಿ ಈ ಒಂದು ಅವಸ್ಥೆಗೆ *ಬ್ರಹ್ಮ* ಎಂದು ಗುರುತಿಸಲಾಗಿತ್ತು.

ಪ್ರಾರಂಭದಲ್ಲಿ ಈ ಅಭ್ಯಾಸವು ಸ್ವಲ್ಪ ಗಾಬರಿಗೊಳಿಸುವಂತಹದಾಗಿತ್ತು. ಹೇಗಾದರೂ, ಎರಡು ದಿವಸಗಳ ನಿರಂತರ ಧ್ಯಾನವನ್ನು ಅನುಸರಿಸಿದನಂತರ ಈ ಒಂದು ಆಕಾರದ ಮೇಲೆ ಹತೋಟಿಯನ್ನು ಸಂಪಾದಿಸಿದೆ. ಯಾವಾಗ, *ಕ್ರಿಯಾಯೋಗವನ್ನು* ಅನುಸರಿಸಿ ಬಹಿರ್ಮನಸ್ಸನ್ನು ಮೊದಲಸಾರಿಗೆ ವಿಚಾರ ರಹಿತವನ್ನಾಗಿ ಸಾಧಿಸಿದೆನೋ, ನನ್ನಷ್ಟಕ್ಕೆ ನಾನೇ ಸುಮಾರಾಗಿ ಹಗುರುತೂಕವಾದ ಹಾಗೆ ಅನ್ನಿಸಿತು ಮತ್ತು ಮೆದುಳಿನಲ್ಲಿ ಪ್ರಚಂಡವಾದ ಪ್ರಶಾಂತತೆ ಸಿಕ್ಕಿತು. ಅದು ಮೆದುಳಿನಿಂದ ಎಲ್ಲಾ ಬಿಗುವನ್ನೂ ಅಥವಾ ಅಸಮತೋಲತೆಯನ್ನೂ ಹೊರಗೆ ನೂಕಿತು. ಈ ಅವಸ್ಥೆಗಿಂತಲೂ ನಾನು ಆಚೆಗೆ ಹೋಗುತ್ತಿದ್ದೇನೆ ಎಂದೆನಿಸಿತು. ನಾನು ನನ್ನ ಅಂತರಾಳದಲ್ಲಿ ಹೆಚ್ಚು ಆಳವಾಗಿ ಮತ್ತು ಹೆಚ್ಚು ಆಳವಾಗಿ ಹೋಗುತ್ತಿದ್ದೆ. ಅದು ನಾನು ಇಳಿಯುತ್ತಿದ್ದಂತಹ ತಳವಿಲ್ಲದ ಆಳವಾಗಿತ್ತು. ನಾನು ಒಂದು ದಿವ್ಯವಾದ ಅಥವಾ ಸ್ವರ್ಗೀಯವಾದ ಬೆಳಕನ್ನು ಹೊಂದಿದೆ ಮತ್ತು ನಾನು ಹಿಂದೆಂದೂ ಅನುಭವಿಸದಂತಹ ನಿಜವಾದ ಆಹ್ಲಾದತೆ ಸಿಕ್ಕಿತು.

ನಾನು ನನ್ನನ್ನೇ ಕಂಡ ಸ್ಥಳವು ದಿವ್ಯವಾಗಿತ್ತು, ಅತಿ ತೇಜಸ್ಸಿನ ಬೆಳಕು ಎಲ್ಲವನ್ನೂ ಹೆಚ್ಚು ಕಾಂತಿಯುತವಾಗಿ ಮಾಡುತ್ತಿತ್ತು. ದೈವೀಕ ಬೆಳಕು ನಾನು ಬಹಳ ಹಿಂದೆ ನೋಡಿದಂತಹ ಎಲ್ಲಾ ಅಂತಹ ನೋಟಗಳನ್ನು ನನ್ನಲ್ಲಿಗೆ ಬಹಿರಂಗಪಡಿಸಿತು. ಆ ಉಂಡೆಯ ರಾಶಿಯಾದ ಬೆಳಕನ್ನು ಯಾವಾಗ ನಾನು ಮೊದಲಸಾರಿ ತಿಳಿದೆನೋ ನನ್ನ ಸಂಪೂರ್ಣ ದೇಹ ಒಂದು ವಿಚಿತ್ರ ಮತ್ತು ಆದರೂ ಸಂತೋಷದ ಹೆಚ್ಚಳಿಕೆ ಮತ್ತು ಪರಿಷ್ಕವಾದ ಶಾಂತತೆಯನ್ನು ಅನುಭವಿಸಲು ಪ್ರಾರಂಭಿಸಿದೆ.

ತದನಂತರದಲ್ಲಿ ಡಾ.ಶ್ರೀಮಾಲಿಯವರು ಆ ಉಂಡೆಯ ರಾಶಿಯಾದ ಬೆಳಕು ನಾನು ಸ್ಪರ್ಷಿಸಿರುವಂತಹ ನನ್ನ ಅಂತರ್ಮನವೆಂದು ವಿಮರ್ಶಿಸಿದರು. ಈ ಉಂಡೆ ಹೊರಸೂಸುತ್ತಿದ್ದ ಬೆಳಕು ಸಮ್ಮೋಹಕನಿಗೆ ಎಲ್ಲವನ್ನೂ ತೋರಿಸಿತು—ಕಂಡಿರುವುದು ಮತ್ತು ಕಾಣದಿರುವುದು ಮತ್ತು ಗೊತ್ತಿರುವುದು ಹಾಗೂ ಗೊತ್ತಿಲ್ಲದಿರುವುದು.

ನಿಧಾನವಾಗಿ ನಾನು ದಿವ್ಯವಾದ ಉಂಡೆಯ ಬೆಳಕಿನಲ್ಲಿ ಒಂದಾದಂತೆಲ್ಲಾ ಪ್ರಪಂಚವನ್ನೆಲ್ಲಾ ನೋಡಲಾರಂಭಿಸಿದೆ. ಇಲ್ಲಿ ಕೂತುಕೊಂಡು ನನ್ನ ಮನೆಯನ್ನು ನೋಡಿದೆ, ನನ್ನ ಹೆಂಡತಿ, ಮನೆಯಲ್ಲಿಯ ನನ್ನ ಮಕ್ಕಳು, ಮನೆಯಲ್ಲಿ ಹೇಗೆ ಜಗಿಯುತ್ತಿದ್ದಾರೆ ಎಂದು ಗಮನಿಸಿದೆ ಹಾಗೂ ಅವರು ನನ್ನ ಎದುರಿನಲ್ಲೇ ನೆಲೆಯಾಗಿರುವರು ಎನಿಸಿತು. ಆವಾಗ ನನ್ನ ಕಡೆಗೆ ನಾನು ನೋಡಿಕೊಂಡೆ ನೀಲಿ ಆಕಾಶದ ಶೂನ್ಯತೆಯಲ್ಲಿ ಮೇಲೆ ಎತ್ತರದಲ್ಲಿ ಹಾರುತ್ತಿರುವುದು ಕಂಡೆ. ನನಗೆ ಅಗೋಚರವಾದ ನನ್ನ ಜೀವನದ ಎಲ್ಲಾ ನೋಟಗಳನ್ನೂ ನಾನು ನೋಡಲಾರಂಭಿಸಿದೆ. ಸಮಯವು ಬಹಳವೇ ವೇಗದಲ್ಲಿ ಬದಲಾಗುತ್ತಿರುವುದನ್ನು ನಾನು ಗುರುತಿಸುತ್ತಿದ್ದೆ. ಅಲ್ಲದೆ ನನ್ನ ಜೀವನವೂ ಸಹ ಪ್ರತಿಕ್ಷಣ ಬದಲಾಗುತ್ತಿತ್ತು. ನನ್ನ ಸ್ವಂತಮಗ ಮದುವೆ ಆಗುತ್ತಿರುವುದನ್ನು ಕಂಡೆ. ನಾನು ಸ್ಪಷ್ಟವಾಗಿ ಮದುಮಗಳನ್ನು ನೋಡಿದೆ. ಸಮ್ಮೋಹನ ಕ್ಷೇತ್ರದಲ್ಲಿ ನನ್ನ ಯಶಸ್ಸಿಯ ಗುರುತಾಗಿ ನನ್ನ ದೇಶದಲ್ಲಿ ಉತ್ಕೃಷ್ಟವಾದ ಪಾರಿತೋಷಕಗಳನ್ನು ನನಗೆ ಕೊಡುತ್ತಿರುವುದನ್ನು ಕಂಡೆ. ಈಗ ನನ್ನ ಜೀವನದ ಕೊನೆಯನ್ನು ಕಂಡೆ. ಆ ಕೊನೆಯ ಕ್ಷಣವೂ ಬಂದಿದೆ. ನಾನು ಸಾಯುತ್ತಿರುವುದನ್ನು ನೋಡಿದೆ. ಇದು ಕಥೆಯ ಕೊನೆ ಅಲ್ಲವೆಂಬುದನ್ನೂ ನೋಡಿದೆ. ಒಂದು ನಿರ್ದಿಷ್ಟ ಪರಿವಾರದಲ್ಲಿ ನಾನು ಹುಟ್ಟುತ್ತಿರುವುದನ್ನು ನೋಡಿದೆ, ನಾನು ಬೆಳೆಯಲಾರಂಭಿಸಿದ್ದೆ, ನಾನು ಮದುವೆಯಾಗುತ್ತಿದ್ದೆ. ಆ

ನಿರ್ದಿಷ್ಟ ಆಕಾಂಕ್ಷೆಯ ಕ್ಷೇತ್ರದಲ್ಲಿ ನಾನು ಕಾರ್ಯನಿರತನಾಗುತ್ತಿದ್ದೆ. ಹೀಗೆ ಈ ಜೀವನದ ಅಂತ್ಯವನ್ನು ನೋಡಿದ್ದಲ್ಲದೆ ಆಚೆಗೂ ನೋಡಿದೆ.

ಎಲ್ಲಾ ನೋಟಗಳೂ ಒಮ್ಮೆಲೇ ಮುಕ್ತಾಯ ಗೊಂಡವು. ನನ್ನ ಧ್ಯಾನದಲ್ಲಿಯ ನೋಟಗಳ ಶ್ರೇಣಿಗಳು ಕೊನೆಗೊಂಡು ನಿಂತವು. ನಾನು ನನ್ನ ಕಣ್ಣುಗಳನ್ನು ತೆರೆದೆ. ನಾನು ಕೂತುಕೊಂಡಿದ್ದೆ. ಅದೇ ಕೋಣೆಯಲ್ಲಿ ನನ್ನ ಪೂಜ್ಯಗುರುಗಳು ತಮ್ಮ ಮುಖದ ಮೇಲೆ ದಯಾಮಯವಾದ ಮುಗುಳ್ನಗೆಯೊಂದಿಗೆ ನನ್ನ ಕಡೆ ನೋಡುತ್ತಿರುವುದನ್ನು ಕಂಡೆ.

ಡಾ.ಶ್ರೀಮಾಲಿಯವರು ಕೇಳಿದರು"ನೀವು ಏನನ್ನು ಕಂಡಿರಿ?"ನಾನು ಘೋರವಾಗಿ ಐಕ್ಯವಾಗಿಹೋದಹಾಗನ್ನಿಸಿತು. ನನ್ನ ಕಣ್ಣುಗಳಿಂದ ಧಾರಾಕಾರವಾಗಿ ಹರಿಯುವ ಕಂಬನಿಗಳನ್ನು ನಿಲ್ಲಿಸದವನಾಗಿದ್ದೆ. ವಾಸ್ತವವಾಗಿ ಡಾ.ಶ್ರೀಮಾಲಿಯವರ ಪಾದಗಳನ್ನು ಗಟ್ಟಿಯಾಗಿ ಹಿಡಿದೆ ಮತ್ತು ನನ್ನ ತಲೆಯನ್ನು ಅವರ ಪಾದದಲ್ಲಿ ಇಟ್ಟೆ.

ಅವರ ಮನವೂ ಕರಗಿತು. ಹೇಗಾದರೂ, ಬೇಗನೇ ಅವರ ಉದ್ವೇಗಗಳನ್ನು ನಿಗ್ರಹಿಸಿದರು. ಅವರು ಹೇಳಿದರು ನೀವು ಈ ಜೀವನದ ಕೊನೆ ಅಲ್ಲದೆ ಮುಂಬರುವ ಜೀವನವನ್ನೂ ನೋಡಿದ್ದೀರಿ ಈ ಜೀವನದ ಸಾವಿನ ನಂತರದ ಜಾಗಕ್ಕೆ ನೀವು ಹೋಗಿದ್ದಿರಿ. ನೀವು ಮುಂಬರುವ ಜೀವನವನ್ನು ಹೇಗೆ ನೋಡಿದಿರೋ ಹಾಗೆಯೇ ಹಿಂದೆ ಇದ್ದ ಜೀವನವನ್ನು ನೋಡುವಿರಿ. ನೀವು ಹಿಂದಿನ ಜೀವನವನ್ನು ನೋಡಿದಾಗ ಅಲ್ಲಿ ಏನಾದರೂ ನ್ಯೂನತೆಗಳು ಇದ್ದಲ್ಲಿ ನಿಮಗೆ ಗೊತ್ತಾಗುವುದು. ಪ್ರಾಯಶಃ ಕಳೆದ ಜೀವನದ ನ್ಯೂನತೆಗಳಿಂದ ಹೇಗೆ ಪಾರಾಗಬೇಕು ಎನ್ನುವುದು ಗೊತ್ತಾಗುವುದು.

ನಾನು ಹೊಂದಿದಂತಹ ಆ ಅವಸ್ಥೆಯು ಸಾಧನದಲ್ಲಿ ಮೇಲ್ಮಟ್ಟದ ಸ್ಥಿತಿಯೆಂದು ಕರೆಯಲಾಗಿದೆ ಎಂದು ಡಾ.ಶ್ರೀಮಾಲಿಯವರು ವಿವರಿಸಿದರು. ಈ ಸ್ಥಿತಿಗೆ ಎಡೆಮಾಡಿಕೊಡುವ ಒಂದೇ ಮಾರ್ಗವೆಂದರೆ ಕ್ರಿಯಾಯೋಗ ಮತ್ತು ಧ್ಯಾನಯೋಗ. ಈ ತರಹದ ಒಂದು ಧ್ಯಾನವು ಗಂಡಸು ಮತ್ತು ಹೆಂಗಸಿನಲ್ಲಿ ಯಾವುದೇ ಭೇದ ಭಾವ ಮಾಡಲಿಲ್ಲ.

ನಾನು ಈ ಯೋಗವನ್ನು ಪ್ರತಿದಿನ ಒಂದು ಗಂಟೆ ಡಾ.ಶ್ರೀಮಾಲಿಯವರ ವಿಚಾರಣೆಯಲ್ಲಿ ಅಭ್ಯಾಸ ಮಾಡುತ್ತಿದ್ದೆ. ನಿಜವಾಗಿಯೂ ಈ ಒಂದು ಅಭ್ಯಾಸದಿಂದ ನಾನು ಏನೇನೆಲ್ಲಾ ನೆರವೇರಿಸಿಕೊಂಡೆನೋ ಮತ್ತು ಡಾ.ಶ್ರೀಮಾಲಿಯವರ ಜೊತೆಗೆ ತದನಂತರದ ಚರ್ಚೆಗಳಿಂದಲೂ ಸಹ ನನಗೆ ನೂತನ ಹೊಸ ನೋಟವು ತೆರೆಯಿತು. ಸಮ್ಮೋಹನ ವಿಜ್ಞಾನವು ಇಷ್ಟೊಂದು ಆಳವಾಗಿದೆಯೆಂದು ನನಗೆ ಯಾವತ್ತೂ ಅನ್ನಿಸಿರಲಿಲ್ಲ. ಈಗಿನವರೆಗೆ ನಾವು ಬರಿಯ ಬಾಹ್ಯ ರೂಪವನ್ನು ಮಾತ್ರ ಮುಟ್ಟಿದ್ದೆವು, ಈ ಹುರುಳಿಲ್ಲದ ಜ್ಞಾನವನ್ನು ಈ ವಿಜ್ಞಾನದ ಸಂಪೂರ್ಣತೆ ಎಂದು ತೆಗೆದುಕೊಂಡಿದ್ದೆವು. ಈಗ ನಿಜವಾದ ಜ್ಞಾನವು ನಮ್ಮ ಅನುಭೂತಿಯ ಹುರುಳಿಲ್ಲದ ಜ್ಞಾನದಾಚೆ ಇದೆ ಎಂದು ಈಗ ನನಗೆ ಅರ್ಥವಾಗಲು ಪ್ರಾರಂಭಿಸಿತು.

ಸಮ್ಮೋಹನದ ಬೆಲೆಯು ಪ್ರಪಂಚಕ್ಕೆ ಗೊತ್ತಾದ ದಿನದಂದು ಅದರ ಒಂದು ಪದ್ಧತಿಯಲ್ಲಿ ನಾವು ಯಾವುದೇ ಅಭಾವ ಅಥವಾ ನ್ಯೂನತೆಗಳನ್ನು ನೋಡುವುದಿಲ್ಲವೆಂದು ನಾನು ಅರ್ಥಮಾಡಿಕೊಳ್ಳಲಾರಂಭಿಸಿದೆ. ಸಮ್ಮೋಹನವು ಒಂದು ಕಡೆ ಮನುಷ್ಯನ ಸ್ಮೃತಿಗತಿಗೆ ಮೊನಚಾದ ಒಳನೋಟವನ್ನು ಪೂಣೈಸುತ್ತದೆ ಮತ್ತು ಇನ್ನೊಂದು ಕಡೆ ಮನುಷ್ಯ ಜೀವನದ ಜೀವನೋಪಾಯಗಳ ಅಭಾವಗಳನ್ನು ಮತ್ತು ಇತರ ಕಷ್ಟಗಳನ್ನು ಪರಿಹರಿಸುತ್ತದೆ.

ವೈದ್ಯಕೀಯ ಕ್ಷೇತ್ರದಲ್ಲಿ ಈ ವಿಜ್ಞಾದಲ್ಲಿ ಗಣನೆಕೆಯಾಗಿರುವಂತಹ ಯಶಸ್ಸಿಯು ವಿಶಾಲವಾಗಿ ಅಂಗೀಕೃತವಾಗಿದೆ ಮತ್ತು ಆದರೂ ಅದರ ಸಂಭವನೀಯ ಶಬ್ದಗಳಲ್ಲಿ ಅದಕ್ಕೆ ಪ್ರಾಮುಖ್ಯತೆ ಇಲ್ಲ.

ವೈದ್ಯಕೀಯ ವಿಜ್ಞಾನವು ಸಮ್ಮೋಹನವನ್ನು ಸಂಪೂರ್ಣವಾಗಿ ಪರಿಶೋಧಿಸುವಲ್ಲಿ ಯಶಸ್ವಿಯಾದ ದಿನದಂದು ನಾವು ಖಚಿತವಾಗಿ ಮಹತ್ವದ ಬದಲಾವಣೆಗಳನ್ನು ನೋಡುತ್ತೇವೆ ಮತ್ತು ಮನುಷ್ಯನು ಬಹಳವೇ ದೀರ್ಘಕಾಲದ ರೋಗಗಳಿಂದ ಮುಕ್ತನಾಗುವನು.

ತಲೆ ಕೆಟ್ಟವರಿಗೆ ಮತ್ತು ಮಾನಸಿಕವಾಗಿ ಅಸ್ವಸ್ಥತೆಹೊಂದಿದ ಮನುಷ್ಯರಿಗಂತೂ ಸಮ್ಮೋಹನವು ಒಂದು ಅದ್ವಿತೀಯ ವರವಾಗಿದೆ. ವಿರೋಧಾತ್ಮಕವಾದ ವಿಚಾರಗಳ ಅಥವಾ ಅಕಸ್ಮಾತ್ ಆಘಾತಗಳ ಸಂಘರ್ಷಣೆಗಳ ಮಧ್ಯೆ ಮೆದುಳು ತನ್ನ ಸಮತೋಲನೆಯನ್ನು ಕಳೆದು ಕೊಳ್ಳುತ್ತದೆ ಮತ್ತು ಸಂಬಂಧಪಟ್ಟ ಮನುಷ್ಯನು ಬುದ್ಧಿಹೀನನಾಗುತ್ತಾನೆ. ಈ ಒಂದು ಸಂಬಂಧದಲ್ಲಿ ಮನಸ್ಸನ್ನು ವಿಚಾರಮುಕ್ತ ಮಾಡಿ ಮತ್ತು ಹೀಗೆ ಮೆದುಳನ್ನು ವಾಸ್ತವ ಸ್ಥಿತಿಗೆ ಹಿಂದಕ್ಕೆ ತರುವಂತಹ ಸಮ್ಮೋಹನದಷ್ಟು ಬೇರೆ ಯಾವುದೇ ವಿಜ್ಞಾನವು ಪರಿಣಾಮಕಾರಿಯಾಗುವುದಿಲ್ಲ.

ಪಶ್ಚಿಮದಲ್ಲಿ ಅಂತಹ ರೋಗಿಗಳಿಗೆ ಯಾವುದೇ ಔಷಧೋಪಚಾರಗಳನ್ನು ಮಾಡುವುದಿಲ್ಲ. ಮಾನಸಿಕ ಚಿಕಿತ್ಸೆಯ ಸಹಾಯದಿಂದ ರೋಗಿಯ ಮಾನಸಿಕ ಅಸಮತೋಲನೆಗೆ ಕಾರಣವಾದ ಚಿಂತನೆಗಳನ್ನು ಗುರುತಿಸಲಾಗುವುದು. ಅಂತಹ ಚಿಂತನೆಗಳನ್ನು ಅವನ ಮನಸ್ಸಿನಿಂದ ತೆಗೆದುಬಿಟ್ಟು ಮತ್ತು ಭವಿಷ್ಯದಲ್ಲಿ ಅಂತಹ ಚಿಂತೆಗಳು ಅವನನ್ನು ಬಾಧಿಸುವುದಿಲ್ಲವೆಂದು ಭರವಸೆ ಕೊಡಲಾಗುತ್ತದೆ. ಹೀಗೆ ಅವನು ಗುಣಹೊಂದುವನು.

ಆ, ಮತ್ತೆ, ಯೋಚನೆಗಳೇ ಹೃದಯವನ್ನು ಆಕ್ರಮಿಸುವುದು. ಒಬ್ಬ ಮನುಷ್ಯನಿಗೆ ಇದ್ದಕ್ಕಿದ್ದ ಹಾಗೆ ಒಂದು ಮರಂತದ ಘಟನೆಯ ಬಗ್ಗೆ ತಿಳಿದಾಗ ಹೃದಯವು ನಿಂತು ಹೋಗುವುದು ಮತ್ತು ಸರಿಯಾದ ಚಿಕಿತ್ಸೆಯನ್ನು ಕೊಡದಿದ್ದಲ್ಲಿ ಸಾವಿಗೀಡಾಗುವನು. ಸಮ್ಮೋಹಕನು ಅಂತಹ ಮನುಷ್ಯನನ್ನು ಮುಂಚಿತವಾಗಿಯೇ ಅಣಿಮಾಡುವನು. ಅಂತಹ ಸದೃಶ ದುಃಖದ ಘಟನೆಯು ಹಾಗೆಯೇ ಇದ್ದಕ್ಕಿದ್ದ ಹಾಗೆ ತಿಳಿಸಿದಲ್ಲಿ ಆತನಿಗೆ ಗಾಬರಿಯಾಗುವುದಿಲ್ಲವೆಂದು ತಿಳಿಸಲಾಗುವುದು.

ಕೆಲ ಕೃಶವಾದ ಜ್ಞಾಪಕಶಕ್ತಿ ಇರುವ ಮಕ್ಕಳು ತಮ್ಮ ಸಮತೋಲತೆಯನ್ನು ಕಳೆದುಕೊಂಡು ಓದಿನಲ್ಲಿ ಹಿಂದೆ ಬೀಳುವರು. ಪರಿಹಾರವು, ಈ ವಿಷಯದಲ್ಲೂ ಸಹ, ಸಮ್ಮೋಹನದಲ್ಲಿದೆ, ಕೆಲ ಮಕ್ಕಳು ಹುಟ್ಟಿದಾಗಿನಿಂದಲೂ ಏಕಾಂತವಾಗಿ ಮತ್ತು ನಿರಾಶರಾಗಿ ಉಳಿಯುವರು. ಅವರಿಗೆ ಯಾವುದೇ ಔಷಧಿಗಳನ್ನು ಕೊಡಲಾಗುವುದಿಲ್ಲ. ಅವರ ಮೇಲೆ ಸಮ್ಮೋಹನ ಸಲಹೆಗಳನ್ನು ಮಾತ್ರ ನೆಡಲಾಗುವುದು. ಅವರು ಬೇಗನೇ ಗುಣಹೊಂದುವರು. ಸಮ್ಮೋಹಕ ಚಿಕಿತ್ಸೆಯು ದ್ವಿಗುಣವಾಗಿ ಮಂಗಳಾತ್ಮಕ ಏಕೆಂದರೆ ಅದರಿಂದ ಬೇರೆಯಾವುದೇ ವಿರುದ್ಧವಾದ ದುಷ್ಪರಿಣಾಮವಾಗುವುದಿಲ್ಲ. ಈಕಡೆ ದುಬಾರಿಯೂ ಅಲ್ಲ.

ಹೆಂಗಸರಿಗೆ ಸಮ್ಮೋಹನವು ಪರಿಣಾಮಕಾರಿಯಾದ ಚಿಕಿತ್ಸೆ. ಅವರು ಮೂಲದಲ್ಲಿ ಭಾವನಾತ್ಮಕರು. ಒಬ್ಬ ಹೆಂಗಸಿಗೆ ಹೃದಯವು ಒಂದು ಸಣ್ಣ ಆಘಾತ ಅಥವಾ ಅಡಚಣೆಗೆ ಛೇದ್ಯವಾಗುವುದು. ಸಮ್ಮೋಹಕ ಚಿಕಿತ್ಸೆಯು ಇಂತಹ ಸಂಗತಿಗಳಲ್ಲಿ ಬಹಳ ಪರಿಣಾಮಕಾರಿಯಾಗಿರುವುದು ಸಾಬೀತಾಗಿದೆ.

ಹೆಂಗಸಿಗೆ ಹೆರಿಗೆಯು ಒಂದು ವರ. ಹಾಗೆಯೇ ಶಾಪವೂ ಆಗಬಹುದು. ಭಾರತೀಯ ಸಿದ್ಧಾಂತದ ಪ್ರಕಾರ ಒಬ್ಬ ಹೆಂಗಸಿಗೆ ಯಶಸ್ವಿಯಾಗಿ ಪ್ರಸವವಾದರೆ ಅವಳಿಗೆ ಎರಡನೆಯ ಜನ್ಮಸಿಕ್ಕಹಾಗೆ ಎಂದು ಹೇಳುತ್ತಾರೆ.

ಹೆರಿಗೆಯು ಇನ್ನು ಮುಂದೆ ನೋವಿನದಲ್ಲ. ಹೆಂಗಸು ಮಗುವನ್ನು ಸಮ್ಮೋಹನ ನಿದ್ರೆಯಲ್ಲಿ ಪ್ರಸವಿಸಿದಳಾದರೆ ನೋವಿಲ್ಲದೆಯೇ ಮಗುವಿನ ಜನ್ಮ ಸಾಧ್ಯವಿದೆ.

ಸಮ್ಮೋಹನದ ಸಹಾಯದಿಂದ ಕುಟುಂಬಯೋಜನೆಯೂ ಬಹಳ ಪರಿಣಾಮಕಾರಿಯಾದುದು ಕಾಣಲಾಗಿದೆ. ಆ ಹೆಂಗಸಿಗೆ ಇನ್ನೊಂದು ಮಗು ಆಗುವುದಿಲ್ಲ ಅಥವಾ ಇನ್ನೊಂದು ಮಗು ಕುಟುಂಬದ ಒಳತಿನಲ್ಲಿ ಇಲ್ಲವೆಂದು ಈ ವಿಷಯಕ್ಕೆ ಸಂಬಂಧಿಸಿದ ಹೆಂಗಸು ಅಥವಾ ಗಂಡಸಿನಲ್ಲಿ ಭಾವನೆಯನ್ನು ನೆಡಬಹುದು. ಈ ತರಹದ ಒಂದು ಸಮ್ಮೋಹನ ಆಜ್ಞೆ ಬಹಳ ಪರಿಣಾಮಕಾರಿಯಾಗುವುದಲ್ಲದೆ ಖಚಿತವಾಗಿ ಸಂಖ್ಯೆಗಳನ್ನು ನಿಲ್ಲಿಸುವುದು. ಈ ತರಹದ ಪದ್ಧತಿಯನ್ನು ಅನುಸರಿಸಿ ಸರ್ಕಾರಗಳು ಅವು ಖರ್ಚು ಮಾಡುತ್ತಿರುವಂತಹ ಅಷ್ಟೊಂದು ಪರಿಣಾಮಕಾರಿ ಅಲ್ಲದ ಕುಟುಂಬಯೋಜನೆಯ ಆಂದೋಲನೆಗಳಿಗೆ ವಿಪರೀತ ಬಂಡವಾಳಗಳನ್ನು ಉತ್ತಮ ಉಪಯೋಗಗಳಿಗೆ ಉಳಿಸಬಹುದು.

ಅವಲ್ಲದೆ ಮನುಷ್ಯನನ್ನು ಆಳವಾಗಿ ಬಾಧಿಸುವಂತಹ ನೂರಾರು ಸಮಸ್ಯೆಗಳು ಇರುವವು. ಮಾನಸಿಕ ಉದ್ವೇಗದಿಂದ ಹೊರಬರಲು ಯಾವುದೇ ವೈದ್ಯಕೀಯ ವಿಜ್ಞಾನದಲ್ಲಿ ಪರಿಹಾರ ಮದ್ದು ಇಲ್ಲ. ಈ ವಿಷಯದಲ್ಲಿ ಪರಿಹಾರವೆಂದರೆ ಸಮ್ಮೋಹನವೊಂದೇ. ಅದೊಂದೇ ಮನುಷ್ಯನನ್ನು ಮಾನಸಿಕ ಉದ್ವೇಗದಿಂದ ನೆಮ್ಮದಿ ಕೊಟ್ಟು ಮತ್ತು ಆತನ ಜೀವನವನ್ನು ಸಮತೋಲನೆ ಮತ್ತು ಸಂತೋಷಕ್ಕೆ ಹಿಂದಿರುಗಿಸಬಹುದು.

ಎಲ್ಲಕ್ಕಿಂತ ಹೆಚ್ಚಾಗಿ ಸಮ್ಮೋಹನದ ಸಹಾಯದಿಂದ ಮನುಷ್ಯನು ತನ್ನನ್ನು ತಾನೇ ಗುರುತಿಸಿಕೊಳ್ಳುವನು. ಎಣಿಕೆ ಇಲ್ಲದಷ್ಟು ಬಯಕೆಗಳ ದಾಸನಾಗಿ ಅವನು ಯಾವಾಗಲೂ ದುಃಖದಲ್ಲಿ ಮತ್ತು ಉದ್ವೇಗದಲ್ಲಿ ಉಳಿಯುವನು. ಅವನ ಬಯಕೆಗಳು ಪೂರ್ಣಗೊಂಡಾಗ ಒಂದು ಹೊಸಾಗುಂಪಿನ ಬಯಕೆಗಳು ಉದಯಿಸುವವು. ಒಂದು ತೃಪ್ತಿಯಾದ ಬಯಕೆಯು ತಕ್ಷಣವೇ ಬಹಳವೇ ಹೆಚ್ಚಿನ ಬಯಕೆಗಳಿಗೆ ಎಡೆಮಾಡುತ್ತದೆ. ಪರಿಣಾಮವಾಗಿ ಒಬ್ಬ ವ್ಯಕ್ತಿಯು ಒಂದು ಕೆಟ್ಟವೃತ್ತದೊಳಗೆ ಸಿಕ್ಕಿ ಹಾಕಿಕೊಳ್ಳುವನು. ಓರ್ವರು ಬಯಕೆಗಳನ್ನು ಕಡಿಮೆಮಾಡಿ ಅದರ ಮೇಲೆ ಹತೋಟಿಯನ್ನು ಸಂಪಾದಿಸದ ಹೊರತು, ಓರ್ವರಿಗೆ ಶಾಂತಿ ಇಲ್ಲ. ಶಾಂತಿ ಇಲ್ಲದ ಮನುಷ್ಯನಿಗೆ ಯಾವತ್ತೂ ಸಂತೋಷ ಅನ್ನಿಸುವುದಿಲ್ಲ.

ಬಹಳ ಮುಖ್ಯವಾಗಿ ಈ ವಿಜ್ಞಾನವು ನಮಗೆ ಭೂತಕಾಲವನ್ನೂ ಮತ್ತು ಭವಿಷ್ಯವನ್ನೂ ತಿಳಿಸುವುದು. ಈಗಿನ ಕ್ಷಣದಿಂದ ನಮ್ಮ ಹಿಂದಿನ ಜನ್ಮಗಳನ್ನು ನೋಡಬಹುದು ಮತ್ತು ಈ ಜನ್ಮದ ನಮ್ಮ ಏಳ್ಗೆಯನ್ನು ನಿರ್ಬಂಧಿಸಿರುವಂತಹ ಸೀಮೆಗಳನ್ನು ಖಚಿತಪಡಿಸಿಕೊಳ್ಳಬಹುದು. ನಾವು ಭವಿಷ್ಯಕಾಲದಲ್ಲಿಯೂ ಹಣಿಕಿಹಾಕಬಹುದು ಮತ್ತು ಎದುರಿಸಬಹುದಾದಂತಹ ಸಮಸ್ಯೆಗಳನ್ನು ಅಥವಾ ತೊಂದರೆಗಳನ್ನೂ ಸಚೇತನಗೊಳಿಸಬಹುದು. ಒಮ್ಮೆ ನಮ್ಮ ಭವಿಷ್ಯ ಜೀವನದ ಅರಿವಾದಾಗ, ನಾವು ಪರಿಹಾರಕ ಹೆಜ್ಜೆಗಳನ್ನು ತೆಗೆದುಕೊಂಡು ಮತ್ತು ಮುಂದಿನ ಜೀವನವನ್ನು ಸಮಸ್ಯೆಗಳಿಂದ ಮತ್ತು ತೊಂದರೆಗಳಿಂದ ಮುಕ್ತಗೊಳಿಸಬಹುದು.

ಹಸ್ತಸಾಮುದ್ರಿಕೆ ಮತ್ತು ಜ್ಯೋತಿಷ್ಯಾಸ್ತ್ರವು ನಮ್ಮ ಗತಿಸಿದ ಮತ್ತು ಭವಿಷ್ಯವನ್ನು ಹೇಳಿದರೂ, ಈ ವಿಜ್ಞಾನಗಳು ಅವುಗಳಲ್ಲೇ ಪೂರ್ಣವಾಗಿಲ್ಲ. ಈ ವಿಜ್ಞಾನಗಳಲ್ಲಿ ಅನ್ವೇಷಣೆಗಳಿಗೆ ಇನ್ನೂ ಹೆಚ್ಚಿನ ಅವಕಾಶವುಂಟು. ಈ ವಿಜ್ಞಾನಗಳು ಅವುಗಳಲ್ಲೇ ಸಂಪೂರ್ಣಗೊಂಡು ಬಯಲಿಗೆ ಬರುವವರೆಗೂ ನಾವು ಎರಡೂ ವಿಷಯಗಳಲ್ಲಿ ಸಮಗ್ರ ಅಧ್ಯಯನ ಮಾಡಲು ಇಚ್ಛಿಸಲಾಗುವುದಿಲ್ಲ. ಆದರೆ ಈ ವಿಜ್ಞಾನಗಳಿಗಿಂತ ಬಹಳ ಹಿಂದೆಯೇ ಸಮ್ಮೋಹನವು ಕಳೆದುಹೋದ ಮತ್ತು ಭವಿಷ್ಯವನ್ನು ತಿಳಿಯಲು ಈಗಾಗಲೇ ಸಾಬೀತಾಗಿರುವ ತನ್ನ ಸಾಮರ್ಥ್ಯವನ್ನು ಹೊಂದಿದೆ. ನಮ್ಮ ಹಿಂದಿನದನ್ನೂ ಮತ್ತು ಭವಿಷ್ಯವನ್ನೂ ತಿಳಿದುಕೊಳ್ಳುವುದರ ಮೂಲಕ ನಾವು ನಮ್ಮ ವರ್ತಮಾನವನ್ನು ರೂಪಿಸಿಕೊಳ್ಳುವುದಕ್ಕೆ ಉತ್ತಮ ಅವಸ್ಥೆಯಲ್ಲಿದ್ದೇವೆ. ನಿಜವಾಗಿಯೂ ಈ ಒಂದು ಸಾಧನೆಯು ಮಾನವತ್ವದ ಆಧ್ಯಾತ್ಮಿಕ ಶೋಧನೆಯಲ್ಲಿ ಹೆಚ್ಚಿನ ವಿಶಿಷ್ಟ ಚಿಹ್ನೆಯಾಗಿ ಇಳಿಯಬೇಕು.

ಹೆಚ್ಚಿನ ನಿಯಮಿತವಾಗಿ ನಾನು ಡಾ.ಶ್ರೀಮಾಲಿಯವರಿಂದ ಕ್ರಿಯಾಯೋಗದ ಪಾಠಗಳನ್ನು ತೆಗೆದುಕೊಳ್ಳುವೆ. ನನ್ನ ಹೆಚ್ಚಿನಸಮಯದಲ್ಲಿ ಈ ವಿಜ್ಞಾನದ ಬೇರೆ ನೋಟಗಳನ್ನು ನಾನು ಅಧ್ಯಯನ ಮಾಡಿದ್ದರೂ ಸಹ, *ಕ್ರಿಯಾಯೋಗವು*, ನಾನು ನೋಡಲಾರಂಭಿಸಿದ, ನನ್ನ ಸಮಯದಲ್ಲಿ ದೊಡ್ಡ ಹಕ್ಕುಸಾಧಿಸಿತ್ತು. ಈ ಪದ್ಧತಿಯನ್ನು ನಾನು ಹೆಚ್ಚು ಅಧ್ಯಯನ ಮಾಡಿದಂತೆಲ್ಲ, ಇನ್ನೂ ಆಳವಾಗಿ ಅದರ ಮಹತ್ವವನ್ನು ಸ್ಪಷ್ಟವಾಗಿ ಗ್ರಹಿಸಿಕೊಂಡೆ. ಪ್ರತಿಯೊಬ್ಬರೂ *ಕ್ರಿಯಾಯೋಗವನ್ನು* ಅಭ್ಯಸಿಸಬೇಕು ಎಂದು ನನಗೆ ವೈಯಕ್ತಿಕವಾಗಿ ಅನ್ನಿಸಿತು. ಅದೊಂದೇ ಬಿಗುವು ಇಲ್ಲದ ಜೀವನದ ಭರವಸೆಯನ್ನು ಕೊಡುವುದು. ಯಾರಾದರೂ ಅದನ್ನು ಅಭ್ಯಸಿಸಬಹುದು, ಆದರೆ ಓರ್ವನಿಗೆ ಗುರುವಿನ ಅವಶ್ಯಕತೆ ಇರುತ್ತದೆ. ಗುರು ಇಲ್ಲದೆ *ಕ್ರಿಯಾಯೋಗವನ್ನು* ಪರಿಣಾಮಕಾರಿಯಾಗಿ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಲಿಂಗ, ವಯಸ್ಸು, ವರ್ಣ—ಅದರ ದಾರಿಯಲ್ಲಿ ಯಾವುದೂ ನಿಲ್ಲುವುದಿಲ್ಲ. ಈ ಪದ್ಧತಿಯು ಎಷ್ಟು ಸರಳವಾಗಿದೆ ಎಂದರೆ ಯಾರೊಬ್ಬರಾದರೂ ಕೆಲದಿನಗಳ ಅಭ್ಯಾಸದಲ್ಲಿ ನಿಪುಣರಾಗಬಹುದು. ತುಂಬಾ ಕಾರ್ಯನಿರತನಾಗಿರುವ ಮನುಷ್ಯನೂಸಹ ಅದನ್ನು ಬೆಳಿಗ್ಗೆ ಮತ್ತು ರಾತ್ರಿ ನಿಯಮಿತವಾಗಿ ಅಭ್ಯಸಿಸಿದರೆ ಅದರಿಂದ ಲಾಭಪಡೆಯಬಹುದು. ಅವನಿಗೆ ಉತ್ಸಾಹ ಮತ್ತು ಸಂತೋಷ ಅನ್ನಿಸುವುದು.

ನಿಜ, ಪ್ರಾರಂಭದಲ್ಲಿ ಸ್ವಲ್ಪಮಟ್ಟಿಗೆ ತಲೆಕೆಳಗಾದ ಹಾಗೆ ಅನ್ನಿಸಬಹುದು, ಏಕೆಂದರೆ ಆತನು ಪದೇ ಪದೇ ಪ್ರಯತ್ನಿಸಿದ ನಂತರವೂ ಮನಸ್ಸಿನ ಏಕಾಗ್ರತೆಯನ್ನು ತಂದುಕೊಳ್ಳಲು ವಿಫಲನಾಗುತ್ತಾನೆ. ಅವನು ಈ ಅಭ್ಯಾಸಮಾಡಲು ಕಣ್ಣು ಮುಚ್ಚಿಕೊಂಡು ಕೂತುಕೊಂಡಾಗ ವಿಭಿನ್ನ ವಿಚಾರಗಳ ಗುಂಪು ಏಕಾಗ್ರತೆಯನ್ನು ಚೂರುಚೂರು ಮಾಡುತ್ತವೆ. ಏಕಾಗ್ರತೆಯನ್ನು ಸಾಧಿಸಲು ಅತ್ಯುತ್ತಮವಾದ ಮತ್ತು ಅತೀ ಸರಳವಾದ ಮಾರ್ಗವೆಂದರೆ *ತ್ರಾಟಕವು*, ಅದನ್ನು ಈ ಪುಸ್ತಕದಲ್ಲಿ ಸ್ವಲ್ಪವಿವರಣೆಯೊಂದಿಗೆ ಚರ್ಚಿಸಲಾಗಿದೆ. ಮನುಷ್ಯನು ಅವನ ಧ್ಯಾನದ ಏಕಾಗ್ರತೆಯಲ್ಲಿ ಯಶಸ್ವಿಗೊಂಡಾಗ ಅವನು ಅದನ್ನು ಒಂದು ವಿಶೇಷ ತಂತ್ರದ ಸಹಾಯದಿಂದ ಒಳಗಾಗಿಸಬೇಕು. ಅದು ದುರ್ಬಲಿತ ಮನಸ್ಸಿನ ಮೇಲೆ ಒಂದು ನಿರ್ಬಂಧನೆಯನ್ನು ಅಭ್ಯಸಿಸುವುದು. ಆ ಧ್ಯಾನದ ಮೇಲೆ ಒಂದು ನಿರ್ಬಂಧನೆಯನ್ನು ತಂದು ಮತ್ತು ಒಳಗಾಗಿಸಲು ಸಹಾಯ ಮಾಡುವಂತಹ ಈ ಕಲಾಕೌಶಲ್ಯವನ್ನು *ದಿವ್ಯಸಾಧನ* [1] ಎಂದು ತಿಳಿಯಲಾಗಿದೆ. ಈ *ಸಾಧನವು* ಬಹಳವಾಗಿ *ಯೋಗಿಗಳಲ್ಲಿ* ಪ್ರಖ್ಯಾತವಾಗಿದೆ. ಅದು ದೇಹವನ್ನು ಲಘುಮಾಡಿ ಮತ್ತು ನಮ್ಮ ಮೇಲೆ ಹತೋಟಿಯನ್ನು ಸಾಧಿಸಲು ಸಹಾಯಮಾಡುತ್ತದೆ.

*ದಿವ್ಯಸಾಧನದ* ಅತಿಸರಳ ಅಭ್ಯಾಸದಲ್ಲಿ ಉತ್ತೀರ್ಣರಾಗಲು ಓರ್ವರು ಕೆಲವು *ಯೋಗಗಳನ್ನೂ* ಮತ್ತು *ಆಸನಗಳನ್ನೂ* ನಿಯಮಿತವಾಗಿ ಅಭ್ಯಸಿಸಬೇಕು. ಎಂಟು *ಆಸನಗಳವೆ* ಅವುಗಳನ್ನು ಓರ್ವನು ನಿಯಮಿತ ಕ್ರಮದಲ್ಲಿ ಅಭ್ಯಾಸಮಾಡಬೇಕು. *ದಿವ್ಯಸಾಧನ* ಎಂದು ಕರೆಯಲಾದುದನ್ನು ಸಾಧಿಸಲು ಅದು ಸಹಾಯ ಮಾಡುತ್ತದೆ.

*ದಿವ್ಯಸಾಧನೆಯಲ್ಲಿ* ದೃಢವಾದ ನೈಪುಣ್ಯತೆಯನ್ನು ಸಾಧಿಸಿದ ನಂತರ ಓರ್ವರು ಆಳವಾಗಿ ಒಳಗೆ ಹೋಗುವ ಶಕ್ತಿಯನ್ನು ಮತ್ತು ತಮ್ಮ ಒಳ ಆತ್ಮವನ್ನು ಗುರುತಿಸಲು ಸಹಾಯವಾಗುವ ಶಕ್ತಿಯನ್ನು ವೃದ್ಧಿಸಿಕೊಳ್ಳುವರು.

ಬೇಗನೇ *ದಿವ್ಯಸಾಧನೆಯು* ಸಹಾಯದಿಂದ ಅವನು ವಿಚಾರರಹಿತ ಬಹಿರ್ಮನಸ್ಸನ್ನು ಪಡೆಯಲು

---

1. ದಿವ್ಯ ಸಾಧನ: ಆಕಾಶ ಅಥವಾ ಇಂದ್ರಿಯಾತೀತವಾದ ದೃಷ್ಟಿ ಇರುವಂತಹ ಸಾಧನೆ.

ಪ್ರಯತ್ನಿಸುವನು. ನಿಧಾನವಾಗಿ ಅವನು ಶಾಂತತೆಯನ್ನೂ ಮತ್ತು ಲಘುತ್ವವನ್ನೂ ತಿಳಿಯಲು ಪ್ರಾರಂಭಿಸುವನು. ಆದರೆ ಬಹಿರ್ಮನಸ್ಸು ಅಂತರ್ಮನಸ್ಸಿಗೆ ಕೂಡುತ್ತಿರುವಾಗ ಓರ್ವರು ಕಷ್ಟವನ್ನು ಎದುರಿಸುವರು. ಏಕೆಂದರೆ ಎರಡೂ ಬೇರೆ ಅಸ್ತಿತ್ವವುಳ್ಳವವು ಮತ್ತು ಯಾವುದೇ ರೀತಿಯಲ್ಲಿ ಪರಸ್ಪರ ಸಂಬಂಧವಿಲ್ಲದವು. ಅದು ವಿಶೇಷ ತಂತ್ರದ ತಾತ್ವಿಕತೆಯಿಂದ ಮಾತ್ರ ಬಹಿರ್ಮನಸ್ಸು ಅಂತರ್ಮನಸ್ಸಿನ ಜೊತೆಗೆ ಹೊಂದಿಕೆಯನ್ನು ಸ್ಥಾಪಿಸುವುದು. ಒಮ್ಮೆ ಈ ಜೋಡಣೆ ಸ್ಥಾಪನೆಯಾದ ನಂತರ ಅತ್ಯಗತ್ಯವಾಗಿ ಈ ಜೋಡಣೆ ಹಾನಿಯಾಗದೇ ಉಳಿಯುವುದು.

ಜೋಡಣೆಯು ಸ್ಥಾಪಿತಗೊಂಡಾಗ ಅದು ಒಂದು ವಿಶೇಷ ತಂತ್ರಕ್ಕೆ ಸಂಬಂಧಿಸಿದ ಒಂದು ವಿಚಾರ ಮುಕ್ತ ಮನಸ್ಸನ್ನು ಪಡೆಯುವ ಕಾರ್ಯವಿಧಾನವು ಪ್ರಾರಂಭಿಸುವುದು. ಈ ವಿಧಾನದಲ್ಲಿ ತಟಸ್ಥ ಇರಬೇಕಾದದ್ದೇನೆಂದರೆ ಬಹಿರ್ಮನಸ್ಸಿಗೆ ದೊರೆತ ತಾಕಲಾಟ. ಈ ವಿಧಾನವು ಸ್ವಲ್ಪಮಟ್ಟಿಗೆ ಕಷ್ಟ ಎನ್ನುವುದರಲ್ಲಿ ಅನುಮಾನವಿಲ್ಲ, ಆದರೆ ಒಮ್ಮೆ ನಾವು ಬಹಿರ್ಮನಸ್ಸಿನ ಮೇಲೆ ಹತೋಟಿಯನ್ನು ಪಡೆದ ಮೇಲೆ ಅಂತರ್ಮನಸ್ಸಿನ ಮೇಲೆ ಹತೋಟಿಯನ್ನು ಪಡೆಯಲು ಕಷ್ಟವಾಗುವುದಿಲ್ಲ.

ಅಂತರ್ಮನಸ್ಸನ್ನು ವಿಚಾರಗಳಿಲ್ಲದ ಹಾಗೆ ಮಾಡಿದಾಗ, ಅದು ಬಹಿರ್ಮನಸ್ಸಿನ ಮೇಲೆ ಜೋಡಣೆಯಾಗಲು ಪ್ರಾರಂಭಿಸುತ್ತದೆ. ಈ ಜೋಡಣೆಗೆ *ಕ್ರಿಯಾಯೋಗ*ವೆನ್ನುವರು. ಬಹಳ ಇತರೆ ಕೃತ್ಯಗಳನ್ನು ಒಳಗೊಂಡ ಅಪರೂಪದ ಅನುಭವಗಳಾದ ಸಮಚಿತ್ತ, ಸಂತೋಷ, ಬಯಕೆ ಇಲ್ಲದಿರುವಿಕೆ ಮತ್ತು ಮೋಹ ಆಸೆಬುರುಕತನ, ಸಿಟ್ಟು,ದ್ವೇಷ ಮತ್ತು ಹಾಗಿರುವ ನಕಾರಾತ್ಮಕ ಮನೋಭಾವಗಳಿಂದ ವಿಘಟನೆ. ಇಂತಹ ಒಂದು ಅವಸ್ಥೆಯ ಇರುವಿಕೆಯು ಒಬ್ಬ ಮನುಷ್ಯನನ್ನು *ಸಂತ*ನನ್ನಾಗಿಸುತ್ತದೆ.

ಮನುಷ್ಯನು ಇಂತಹ ಒಂದು ಸ್ಥಿತಿಯನ್ನು ತಲುಪಿದಾಗ ಯಾವುದೇ ಹೊರ ಮೂಲಸ್ಥಾನಗಳಿಂದಲೂ ಹೊರಹೊರಡುವಂತಹ, ಆದರೆ ತನ್ನ ಅಂತರ್ತನದಿಂದ, ದಿವ್ಯವಾದ ಬೆಳಕನ್ನು ಅನುಭವಿಸುವನು. ಅಲ್ಲಿಯವರೆಗೆ ಅಂತರ್ಮನವು ನಿಬಿಡವಾದ ದಟ್ಟ ಬಯಕೆಗಳಿಂದ ಮುಚ್ಚಿಕೊಂಡೇ ಉಳಿಯುವುದು. ಒಮ್ಮೆ ಈ ಬಯಕೆಗಳನ್ನು ಹೊರಹಾಕಿದರೆ ಆ ಬೆಳಕು ತನ್ನಷ್ಟಕ್ಕೆ ತಾನೇ ಹೊರಬರುವುದು.

ಈ ಒಂದು ದಿವ್ಯವಾದ ಬೆಳಕನ್ನು ಸಾಧಿಸಿದ ನಂತರವೇ ಓರ್ವನು ತನ್ನ *ಕ್ರಿಯಾಯೋಗ*ವು ಯಶಸ್ವಿಯಾಗಿದೆಯೆಂದು ತಿಳಿಯಬೇಕು. *ಕ್ರಿಯಾಯೋಗ*ವು ಕೊನೆಗೊಂಡಲ್ಲಿ *ಧ್ಯಾನಯೋಗ*ವು ಪ್ರಾರಂಭವಾಗುವುದು. *ಧ್ಯಾನಯೋಗ*ವು ಅತ್ಯಗತ್ಯವಾಗಿಲ್ಲದಿದ್ದರೂ, ಓರ್ವನು *ಕ್ರಿಯಾಯೋಗ*ವು ಅದರಲ್ಲಿಯೇ ಸಂಪೂರ್ಣವಾಗಿಲ್ಲವೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. *ಧ್ಯಾನಯೋಗ*ವಿಲ್ಲದೆ ಓರ್ವನು ಆಶಿಸಿರುವಂತಹ ಪರಿಣಾಮವನ್ನು ನಿರೀಕ್ಷಿಸಲಾಗುವುದಿಲ್ಲ.

ಸಾಧಕನು ತನ್ನ ಅಂತರ್ತನದಲ್ಲಿ ಆಳವಾಗಿ ಮುಳುಗಿದಾಗ ಪ್ರಾರಂಭದಲ್ಲಿ ಅವನು ಬೆಳಕಿನ ಒಂದು ಬಿಂದುವನ್ನು ಕಾಣುವನು. ನಿಧಾನವಾಗಿ ಆ ಬೆಳಕುಗಳ ಸುತ್ತಳತೆಯು ಹೆಚ್ಚಾಗುವುದು. ಓರ್ವನು ಬೆಳಕಿನ ನೀಲಿ ಪ್ರತಿಬಿಂಬವನ್ನು ಕಾಣಲು ಪ್ರಾರಂಭಿಸುವನು. ನಾವು ಅಂತರ್ಮನಸ್ಸಿನ ಅತ್ಯಂತ ಒಳಗಿನ ಕತ್ತಲೆಯನ್ನು ತಲುಪಲಾರಂಭಿಸಿದಾಗ ಒಂದು ಉಜ್ವಲವಾದ ಬೆಳಕನ್ನು ನೋಡಲಾರಂಭಿಸುವೆವು ಮತ್ತು ಅದರ ಸುತ್ತಳತೆಯೂ ಸಹ ಹೆಚ್ಚಾಗುವುದು.

ಸ್ವಲ್ಪ ಸಮಯದ ನಂತರ ನೀಲಿ ಪ್ರತಿಬಿಂಬಗಳು ಅಳಿಸುವವು. ವರ್ತುಲಾಕಾರದ ಬಿಂದುವಿನ ಸುತ್ತಲಿನಿಂದ ಹೊರಸೂಸುತ್ತಿರುವ ಬೆಳಕು ಬಹಳ ವರ್ಣಗಳನ್ನು ವಹಿಸುವುದು. ಎಲ್ಲಾ ಏಳು ಬಣ್ಣಗಳು. ಈ ವಿವಿಧ ಬಣ್ಣಗಳ ಬೆಳಕನ್ನು ಮನುಷ್ಯನು ನೋಡಿದಾಗ ತನ್ನ *ಧ್ಯಾನಯೋಗ*ವನ್ನು ಪೂರ್ಣಗೊಳಿಸಿಕೊಂಡಿದ್ದೇನೆ ಎಂದು ಭಾವಿಸಬಹುದು.

ಆ ವ್ಯಕ್ತಿಯು ಈ ಅಭ್ಯಾಸವನ್ನು ಸ್ವಲ್ಪಕಾಲದವರೆಗೆ ಮುಂದುವರಿಸಬೇಕು. ಬೇಗನೇ ವಿವಿಧ ವರ್ಣಗಳ ನೋಟವನ್ನು ನೋಡುವುದು ನಿಲ್ಲಿಸುವನು. ಅವನು ಕೂಡಲೇ ಕೇವಲ ಉಜ್ವಲವಾದ ದಿವ್ಯವಾದ ಬೆಳಕಿನ ಉಂಡೆಯನ್ನು ನೋಡುವನು. ಅವನು ಈ ಉಂಡೆಯ ಸಹಾಯದಿಂದ ತನ್ನ ಅಂತರ್ತನವು ಉಜ್ವಲವಾಗಿ ಹತ್ತಿಕೊಂಡಿರುವುದನ್ನು ನೋಡುವನು. ಈ ಬೆಳಕಿಗೆ ಯಾವುದೇ ಇತಿಮಿತಿ ಇರುವುದಿಲ್ಲ.

*ಸಾಧಕನು* ಯಾವುದನ್ನು ಸರಳವಾಗಿ ಅಲಕ್ಷಿಸಬಾರದೆಂದರೆ ಈ ಒಂದು ಸ್ಥಿತಿಗೆ ಅವನು ತಲುಪಬೇಕಾಗಿದ್ದರೆ ತನ್ನ ಇರುವಿಕೆಯ ತೀಕ್ಷ್ಣವಾದ ಅರಿವಿನಲ್ಲಿ ಇರಬೇಕು. ಅವನು ತನ್ನಷ್ಟಕ್ಕೆ ತಾನೇ ಕೇಳುತ್ತಾ ಇರಬೇಕು. ನಾನು ಯಾರು? ನಾನು ಈ *ಸಾಧನವನ್ನು* ಏಕೆ ಮಾಡುತ್ತಿದ್ದೇನೆ? ನಾನು ಈ *ಸಾಧನಕ್ಕೆ* ಏಕೆ ಕೂತುಕೊಳ್ಳುವೆ? ನಾನು ಈ *ಸಾಧನೆಯ* ಮೂಲಕ ಏನನ್ನು ನೋಡಬೇಕಾಗಿದೆ? ನಾನು ಈ *ಸಾಧನದಿಂದ* ಏನನ್ನು ಗಳಿಸಬೇಕಾಗಿದೆ?

ಆತನು ಈ ಅನಂತವಾದ ಬೆಳಕನ್ನು ನೋಡಲಾರಂಭಿಸಿದಾಗ, *ಸಾಧಕನು* ಹಿಂದೆ ನಡೆದ ಮತ್ತು ಭವಿಷ್ಯವನ್ನು ತನ್ನ ದೃಷ್ಟಿಗೆ ಕೊಡುವಂತಹ ತನ್ನ ಮೂರನೆಯ ಕಣ್ಣು ತೆರೆದಿರುವುದನ್ನು ಕಾಣುವನು. ಒಂದು ನಿರ್ದಿಷ್ಟವಾದ ಘಟನೆ ಪೂರ್ವದಲ್ಲಿ ಯಾವಾಗ ನಡೆಯಿತು ಮತ್ತು ಮುಂದೆ ಏನು ಆಗುತ್ತಲಿದೆ ಮತ್ತು ಯಾವಾಗ ಎಂದು ತಿಳಿದುಕೊಳ್ಳಲು ಅವನಿಗೆ ಬಹಳ ಸುಲಭವಾಗಿರಬೇಕು.

ಯಾವುದೇ ಸ್ಥಿತಿಯಲ್ಲಿ ಇದು *ಧ್ಯಾನಯೋಗದ* ಸ್ತಬ್ಧ ಕೊನೆ ಎಂದು ಪರಿಗಣಿಸಬಾರದು. ಇನ್ನು ಸ್ವಲ್ಪ ಹೆಚ್ಚಿನ ಅಭ್ಯಾಸ ಅಥವಾ ಒಂದು ವಿಶೇಷ ಸ್ಪಷ್ಟ ಅಭ್ಯಾಸದ ಅನುಕರಣೆಯಿಂದ *ಸಾಧಕನು* ಈ ಬೆಳಕಿನ ಎಲ್ಲೆಗಳನ್ನು ಬಹಳವೇ ತುಂಬಾ ವಿಸ್ತೀರ್ಣತೆಯಲ್ಲಿ ಪಡೆಯುವನು ಮತ್ತು ಬಹಳವೇ ಹಿಂದಿನ ಜೀವನಗಳ ಅವ್ಯಕ್ತವಾದ ಮೂಲೆಗಳು ಸಂಪೂರ್ಣವಾಗಿ ಸಜೀವವಾಗಿ ಬರುವವು. ಸಂಪೂರ್ಣ ಕಾಲಾನುಸಾರ ಕ್ರಮದಲ್ಲಿ, ಸ್ಥಳ ಮತ್ತು ಹುಟ್ಟಿದ ಸಮಯ, ಬೆಳವಣಿಗೆ ಮತ್ತು ಶಿಥಿಲತೆ, ಜೀವನದ ಗುಣ ಮತ್ತು ಈ ತರಹದ ಬೇರೆ ಜೀವನದ ಸತ್ಯತೆಗಳು ಕಳೆದುಹೋದ ಘಟನೆಗಳು ತಮ್ಮಷ್ಟಕ್ಕೆ ತಾವೇ ವೀಕ್ಷಕನ ಸಂಪೂರ್ಣ ಉಗ್ರದೃಷ್ಟಿಗೆ ಗೋಚರವಾಗುವವು. ಬಹಳ ಮುಖ್ಯವಾದದ್ದೇನೆಂದರೆ ಹೀಗೆ ಗಳಿಸಿದಂತಹ ಜ್ಞಾನವು *ಸಾಧಕನಿಗೆ* ಅವನ ಸ್ವಂತ ಯೋಚನೆ, ತನ್ನ ಸ್ವಂತ ಅರಿವುತನ ಮತ್ತು ಅವನ ಸ್ವಂತ ಈ ಜೀವನದ ಮಾನಸಿಕ ಅವಸ್ಥೆ ಏನು ಮತ್ತು ಅದು ಯಾಕೆ ಎಂದು ಹೇಳುತ್ತದೆ.

ಆತನು ಆಚೆಗೆ ನೋಡಬಯಸಿದಲ್ಲಿ ಹೆಚ್ಚಾಗಿ ಇದೇ ರೀತಿಯಲ್ಲಿ ಈಗಿನ ಜೀವನದ ನಂತರ ಮುಂಬರುವ ಜೀವನವೂ ಸಜೀವವಾಗಿ ಬರುವುದು. ತನ್ನ ಮರಣದ ನಿಶ್ಚಿತವಾದ ದಿನಾಂಕ ಅಲ್ಲದೆ ಅದರ ಕಾರಣಗಳು ಮತ್ತು ಅಲ್ಲಿ ಬಂದಿರುವ ಸನ್ನಿವೇಶಗಳೊಂದಿಗೆ ಒಂದು ನಿಶ್ಚಿತವಾದ ಜ್ಞಾನದಿಂದ ಹೊರ ಬರುವನು, ಹೇಗೆ ತನ್ನನ್ನು ಬೆಳಸಲಾಗುವುದು ಮತ್ತು ಯಾವ ಸನ್ನಿವೇಶಗಳು ಆತನ ಮುಂದಿನ ಜನ್ಮಕ್ಕೆ ಗುಣಾರೋಪಣೆ ಮಾಡುವವು ಎನ್ನುವುದನ್ನೂ ಸಹ ಆತನು ನೋಡುವನು.

*ಧ್ಯಾನಯೋಗದಿಂದ* *ಸಾಧಕನು* ಸ್ವಂತ ಗತಿಸಿದ ಮತ್ತು ಭವಿಷ್ಯವನ್ನು ತಿಳಿಯಬಹುದಲ್ಲದೆ ಹಲವಾರು ಜೀವಿಗಳ ಕಳೆದ ಮತ್ತು ಭವಿಷ್ಯಗಳ ಆಗುಹೋಗುಗಳನ್ನು ಬೇರೆ ವ್ಯಕ್ತಿಗಳ ಎರಡೂ ಕಳೆದುಹೋದ ಮತ್ತು ಕೈಗೂಡುವುದನ್ನೂ ಸಹ ಪ್ರತಿನಿತ್ಯದ *ಧ್ಯಾನಯೋಗದ* *ಸಾಧನೆಯಲ್ಲಿ* ಸ್ವಲ್ಪಹೊತ್ತಿನವರೆಗೆ ಅಂತಹ ಆಗುಹೋಗುಗಳನ್ನು ಆವಾಹನ ಮಾಡಲು ಧ್ಯಾನಿಸಿದರೆ ತಿಳಿಯಬಹುದು.

ನಿಯಮಿತವಾದ ಮತ್ತು ದೀರ್ಘಕಾಲದ ಅಭ್ಯಾಸವು ಕಳೆದುಹೋದ ಮತ್ತು ವರ್ತಮಾನದ ಎಲ್ಲವನ್ನೂ ತಿಳಿಯಲು ಓರ್ವನು ಸಾಧಾರಣವಾಗಿ 8 ರಿಂದ 9 ಪದಗಳಿರುವ ಒಂದು ಮುದ್ರಿಸಿದ ಸಾಲನ್ನು ಓದಲು ಎಷ್ಟುಸಮಯ ತೆಗೆದುಕೊಳ್ಳುವನೋ ಅದರಲ್ಲಿ ಒಂದರ ನೂರನೆಯ

ಭಾಗಕ್ಕಿಂತಲೂ ಕಡಿಮೆ ಸಮಯದಲ್ಲಿ ತಿಳಿಯಲು ಸಮರ್ಥಗೊಳಿಸುವುದು. ಪ್ರಮುಖವಾಗಿ ಅವನು ಅಂತರ್ತನದಿಂದ ಹೊರಬಂದಾಗ ಮತ್ತು ತನ್ನ ಬಹಿರ್ಮನಸ್ಸಿನ ಅರಿವಿಗೆ ಮರಳಿದಾಗ ಆತನು ಎಲ್ಲಾ ಸನ್ನಿವೇಶಗಳನ್ನು ಮತ್ತು ನೋಟಗಳನ್ನು ಗತಿಸಿದ ಸಮಯದ ಜೊತೆಗೆ ಜ್ಞಾಪಿಸಿಕೊಳ್ಳುವನು.

*ಕ್ರಿಯಾಯೋಗ* ಮತ್ತು *ಧ್ಯಾನಯೋಗ*ದ ಅಭ್ಯಾಸವನ್ನು ಕಡಿಮೆ ಅಲ್ಲದ ಕೀರ್ತಿಶಾಲಿಯಾದ ಡಾ.ಶ್ರೀಮಾಲಿಯವರಂತಹ ವೈಯಕ್ತಿಕ ಆಶ್ರಯದಲ್ಲಿ ಕಲಿತದ್ದಕ್ಕೆ ನನ್ನಷ್ಟಕ್ಕೆ ನಾನೇ ಅಸಾಧಾರಣ ಅದೃಷ್ಟಶಾಲಿಯೆಂದು ನೋಡಿಕೊಂಡೆ ಮತ್ತು ನಂಬಿಕೆಗೆ ಮೀರಿದ ಹಾಗೆ ಈ ಒಂದು ಕಲಾಕೌಶಲ್ಯದಲ್ಲಿ ಕೇವಲ 16 ದಿನಗಳಲ್ಲಿ ಪಾರಂಗತನಾದೆ. ಪ್ರಾರಂಭದಲ್ಲಿ ಅದು ಸ್ವಲ್ಪ ಕಷ್ಟಕರವಾಗಿ ಕಾಣಿಸಿತು, ಆದರೆ ಎರಡನೆಯ ಅಥವಾ ಮೂರನೆಯ ದಿನದಂದು ನಾನು ಹೆಚ್ಚಿನ ಕಷ್ಟವನ್ನು ಎದುರುಗೊಳ್ಳಲಿಲ್ಲ ಮತ್ತು ಈ *ಸಾಧನೆ*ಯಲ್ಲಿ ಯಶಸ್ವಿಯಾದೆ.

ಹಿಂದಿನ ಸಾಲುಗಳಲ್ಲಿ ನಾನು *ಕ್ರಿಯಾಯೋಗ* ಮತ್ತು *ಧ್ಯಾನಯೋಗ*ದ ಅಭ್ಯಾಸದ ಮೇಲೆ ವಿವರವಾದ ವರದಿಯನ್ನು ಕೊಡಲು ಕಾರಣವೇನೆಂದರೆ ಇತರೆ *ಸಾಧಕರು* ಸ್ವಲ್ಪ ಮಟ್ಟಿನ ದೀರ್ಘ ಪ್ರಯತ್ನ ಮತ್ತು ಶ್ರದ್ಧೆವಹಿಸಿದಲ್ಲಿ ಅವರೂ ಸಹ *ಸಾಧನೆ*ಯಲ್ಲಿ ಯಶಸ್ವಿಹೊಂದುವರು ಎಂದು ಮನವೊಲಿಸುವದಕ್ಕೋಸ್ಕರವಲ್ಲದೆ ಬೇರೆ ಯಾವ ಉದ್ದೇಶವೂ ಇಲ್ಲ.

ಮುಂಬರುವ *ಸಾಧಕ*ನಿಗೆ ಪ್ರಾರಂಭದಲ್ಲಿ ಈ ಒಂದು ಅಭ್ಯಾಸವು ಒಳ್ಳೆಯ ಗಾಬರಿಗೊಳಿಸುವಂತದ್ದಾಗ ಬಹುದು, ಹೇಗಾದರೂ ದೀರ್ಘಕಾಲದ ಅಭ್ಯಾಸವನ್ನು ಅನುಸರಿಸಿ ಅವನು *ಕ್ರಿಯಾಯೋಗ*ದಿಂದ *ಧ್ಯಾನಯೋಗ*ಕ್ಕೆ ಪ್ರಯಾಣಿಸಬಹುದು. ಹಿಂದೆ ಆದದ್ದನ್ನೂ ಮತ್ತು ಭವಿಷ್ಯವನ್ನು ಅವಲೋಕಿಸಿದ ನಂತರ ತನ್ನ ಸ್ವಂತ ಅರಿವಿಗೆ ಅವನು ಹಿಂದಿರುಗಬಹುದು. ಈ ಸಂಪೂರ್ಣ ವ್ಯಾಯಾಮವು 3 ನಿಮಿಷಗಳಿಗಿಂತ ಹೆಚ್ಚು ತೆಗೆದುಕೊಳ್ಳುವುದಿಲ್ಲ.

ಡಾ.ಶ್ರೀಮಾಲಿಯವರು ಈ ತರಹದ ಒಂದು ಪ್ರಜ್ಞೆಗೆ 30 ಕ್ಷಣಗಳಲ್ಲಿ ಹಿಂದಿರುಗುವುದನ್ನು ನಾನು ನೋಡಿದ್ದೇನೆ.

ನಿಜವಾಗಿಯೂ ಇವೆರಡು *ಕ್ರಿಯೆಗಳೂ* ಸಮ್ಮೋಹನ ಕ್ಷೇತ್ರದಲ್ಲಿ ಚಮತ್ಕಾರಗಳಾಗಿದ್ದಾವೆ. ಅವುಗಳು ಸಮ್ಮೋಹನಕ್ಕೆ ಒಂದು ಮಟ್ಟಿನ ಪೂರ್ಣತೆಯನ್ನು ಒದಗಿಸುತ್ತವೆ.

ಡಾ.ಶ್ರೀಮಾಲಿಯವರೊಡನೆ ನನ್ನ ಇರುವಿಕೆಯಲ್ಲಿ ಬಹಳಷ್ಟು ಜನ ಸಂದರ್ಶಕರೊಡನೆ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಳ್ಳುವ ಮತ್ತು ಅವರಿಗೆ ಬರೆದಂತಹ ಬಹಳ ಪತ್ರಗಳನ್ನು ಓದುವ ಅವಕಾಶಗಳು ಸಿಕ್ಕಿದವು. ನಾನು ಸಮ್ಮೋಹನ ಕ್ಷೇತ್ರದಲ್ಲಿ ಅಂತಹ ವಿನಿಮಯಗಳಿಂದ ಗಳಿಸಿದಂತಹ ಜ್ಞಾನದ ಸಂಕ್ಷಿಪ್ತ ವರದಿಯನ್ನು ಕೊಡಲು ಬಯಸುವೆ. ಸಮ್ಮೋಹನದ ಸಹಾಯದಿಂದ ತಮ್ಮ ಸಮಸ್ಯೆಗಳನ್ನು ಕರಗಿಸಿಕೊಂಡಿರುವಂತಹ ವ್ಯಕ್ತಿಗಳೂ ಅವರಲ್ಲಿ ಒಳಗೊಂಡಿದ್ದಾರೆ. ಡಾ.ಶ್ರೀಮಾಲಿಯವರು *ಕ್ರಿಯಾಯೋಗ* ಮತ್ತು *ಧ್ಯಾನಯೋಗ*ದ ಸಾಧನಗಳಿಂದ ಅವರಿಗೆ ಲಾಭದಾಯಕವಾಗುವಹಾಗೆ ಮಾಡಿದ್ದಾರೆ.

ಡಾ.ಶ್ರೀಮಾಲಿಯವರೊಡನೆ ಇರಲು 30 ದಿನಗಳಿಗಿಂತ ಹೆಚ್ಚು ನನಗೆ ಸಾಧ್ಯವಾಗದಿದ್ದರೂ ಸಹ, *ಸಾಧಕ*ರನ್ನು ಒಳಗೊಂಡ, ದೀರ್ಘಕಾಲದ ವ್ಯಾಧಿಗಳಿಂದ ಬಳಲುತ್ತಿರುವ ವ್ಯಕ್ತಿಗಳು ಮತ್ತು ಸಂಪೂರ್ಣವಾಗಿ ಆಸೆಯನ್ನು ತೊರೆದು ಸಾವಿನ ಅಂಚಿನಲ್ಲಿರುವಂತಹ ವಿಶಾಲವಾದ ವರ್ಣಪಂಕ್ತಿಯ ಹಾಗೆ ಜನರನ್ನು ನಾನು ಕಂಡೆ. ಕೆಲ ನಿಜವಾದ ಜಿಜ್ಞಾಸೆಯ ಜನರು ಸಮ್ಮೋಹನ ಸಮ್ಮೇಳನದ

ಬಗ್ಗೆ ತಿಳಿದುಕೊಳ್ಳಲು ಸಹ ಭೇಟಿಕೊಟ್ಟರು. ಹಿಮಾಲಯದ ಅವ್ಯಕ್ತವಾದ ಗುಹೆಗಳಲ್ಲಿ ವಾಸಮಾಡುತ್ತಿರುವಂತಹವರು ಆಗಾಗ ಅವರಲ್ಲಿಗೆ ಭೇಟಿಕೊಡುತ್ತಿದ್ದರು.

ಮಾತುಕತೆಯಿಂದಲೂ ಮತ್ತು ಅನುರೂಪತೆಯಿಂದಲೂ ಹೇಗೆ ಡಾ.ಶ್ರೀಮಾಲಿಯವರು ಪರಿಣಾಮಕಾರಿಯಾಗಿ ಸಹಾಯ ಮಾಡಿದ್ದಾರೆನ್ನುವುದರ ಮೇಲೆ ಬೆಳಕನ್ನು ಚೆಲ್ಲುತ್ತದೆ. ಡಾ.ಶ್ರೀಮಾಲಿಯವರು ಸಮಾನ ಸ್ಪಂದವಲ್ಲದ ಸಮ್ಮೋಹಕ ಮತ್ತು ಅವರು ಈ ಜ್ಞಾನವನ್ನು ಅನುಗುಣವಾಗಿ ಮಾನವಪತ್ಯದ ಒಳ್ಳೆಯದಕ್ಕೆ ಉಪಯೋಗಿಸಿದ್ದಾರೆಂಬುದು ಸಾರ್ವತ್ರಿಕವಾಗಿ ಗುರುತಿಸಲ್ಪಟ್ಟಿವೆ ಎನ್ನುವುದು ಸಾಕ್ಷೀಭೂತವಾದ ಸತ್ಯವಾಗಿದೆ. ಅವಶ್ಯಕತೆ ಇರುವ ಜನರಿಗೆ ಅವರು ಸಲ್ಲಿಸಿರುವ ಸಹಾಯವು ಈಕಡೆ ಯಾವುದೇ ಖರ್ಚನ್ನು ಒಳಗೊಂಡಿಲ್ಲ, ಆಕತೆ ಯಾವುದೇ ಪ್ರತಿಕೂಲವಾದ ದುಷ್ಪರಿಣಾಮಗಳಿಗೂ ಎಡೆಮಾಡುವುದೂ ಇಲ್ಲ. ಕೊನೆಯದಾಗಿ ಮನುಷ್ಯ ಜೀವನದಲ್ಲಿ ಅಭೂತಪೂರ್ವವಾದ ಉಪಯುಕ್ತತೆ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಡಾ.ಹರ್ಗೋಲಿಯ, ಒಬ್ಬ ಪ್ರಖ್ಯಾತ ನರರೋಗ ಶಾಸ್ತ್ರಜ್ಞ, 40 ವಯಸ್ಸಿನ ಒಬ್ಬ ಶ್ರೀಮಂತ ಹೆಂಗಸಿನ ಮೂರ್ಛೆರೋಗ ಮತ್ತು ಅದನ್ನು ಅನುಸರಿಸಿದ ತಾಳಲಾರದ ನೋವನ್ನು ವಾಸಿಮಾಡಲು ಪ್ರಯತ್ನಿಸಿದುದಾಗಿ ವರದಿಮಾಡಿದರು, ಅವರು ಆಕೆಗೆ ಯಾವ ಪರಿಣಾಮವಿಲ್ಲದೇ ಆರು ತಿಂಗಳುಗಳ ಕಾಲ ಚಿಕಿತ್ಸೆಕೊಟ್ಟರು. ರೋಗಿಗೆ ಮಕ್ಕಳಿರಲಿಲ್ಲ. ಅದಕ್ಕಾಗಿ ಈ ಅಪೂರ್ಣತೆಯು ಆಕೆಯನ್ನು ಕೆಟ್ಟದ್ದಾಗಿ ತೊಂದರೆ ಕೊಟ್ಟಿತ್ತು.

ಅವರು ಎಲ್ಲಾ ಭರವಸೆಗಳನ್ನೂ ಬಿಟ್ಟುಬಿಟ್ಟಾಗ ಆ ರೋಗಿಯನ್ನು ಡಾ.ಶ್ರೀಮಾಲಿಯವರಿಗೆ ನಿರ್ದೇಶಿಸಬಹುದೆಂದು ಯಾರೋ ಸೂಚಿಸಿದರು. ದೂರವಾಣಿ ಮೂಲಕ ನೇಮಕಾತಿಯನ್ನು ಸ್ಥಿರಪಡಿಸಿಕೊಂಡು ರೋಗಿಯನ್ನು ಜೋಧಪುರಕ್ಕೆ ಕರೆದುಕೊಂಡು ಬಂದರು.

ಡಾ.ಶ್ರೀಮಾಲಿಯವರು ರೋಗಿಯೊಡನೆ 5 ರಿಂದ 7 ನಿಮಿಷಗಳವರೆಗೆ ಮಾತನಾಡಿದರು. ತದನಂತರದಲ್ಲಿ ರೋಗಿಯು ಮೂರ್ಛೆಹೋದಳು. ಆ ಹೆಂಗಸು ಉಗ್ರವಾಗಿ ಒದ್ದಾಡಿದಳು. ಸಾಧಾರಣವಾಗಿ ಅಂತಹ ಮೂರ್ಛೆರೋಗದ ನಡುಗುವಿಕೆಯಲ್ಲಿ ನಾನು ಆಕೆಗೆ ಒಂದು ನಿರ್ದಿಷ್ಟವಾದ ಔಷಧಿಯನ್ನು ಚುಚ್ಚುತ್ತಿದ್ದೆ ಏಕೆಂದರೆ ಆಕೆ ತನ್ನ ಪ್ರಜ್ಞೆ ಹಿಂದಿರುಗಿಸಿಕೊಳ್ಳಲಿ ಎಂದು. ಆದರೆ ಡಾ.ಶ್ರೀಮಾಲಿಯವರು ಹಾಗೆ ಮಾಡದಿರಲು ಹೇಳಿದರು.

ಸುಮಾರು 6 ರಿಂದ 7 ನಿಮಿಷದಲ್ಲಿ ರೋಗಿಯ ಪ್ರಜ್ಞೆಯು ಮರುಕಳಿಸಿತು. ಡಾ.ಶ್ರೀಮಾಲಿಯವರು ಆಕೆಯನ್ನು ತಮ್ಮ ಎದುರಿಗೆ ಕೂತುಕೊಳ್ಳಲು ಹೇಳಿ ಮತ್ತು ಹೀಗೆ ಹೇಳಿದರು: "ನೋಡಿ, ನಾನು ನಿಮ್ಮ ಎದುರಿಗೆ ಕೂತುಕೊಂಡಿದ್ದೇನೆ. ಈಗ ನೀವು ನನ್ನ ಕಣ್ಣುಗಳಲ್ಲಿ ನೋಡಿರಿ. ನನ್ನ ಕಣ್ಣುಗಳಲ್ಲಿ ನೀವು ಏನನ್ನು ನೋಡುವಿರೀ?"

ರೋಗಿಯು ಆಕೆಗೆ ನಿರ್ದೇಶಿಸಿದ ಹಾಗೆ ಕೂತುಕೊಂಡಳು. ಈಗ ಡಾ.ಶ್ರೀಮಾಲಿಯವರು ಅವಳ ಕಣ್ಣುಗಳಲ್ಲಿ ಸ್ವಲ್ಪಹೊತ್ತು ನೋಡಿ ಹೇಳಿದರು:"ನಿಮ್ಮನ್ನು ಸಮ್ಮೋಹನಗೊಳಿಸಲಾಗಿದೆ. ನಿಮ್ಮ ವೇದನಕ್ಕೆ ನಿಜವಾದ ಕಾರಣವು ನಿಮಗೆ ಮಕ್ಕಳಾಗದಿರುವುದು. ಇನ್ನು ಮುಂದೆ ನಿಮಗೆ ಈ ಸಮಸ್ಯೆವಿರುವುದಿಲ್ಲ ಮತ್ತು ನಿಮಗೆ ಏನು ಬೇಕಾಗಿದೆಯೋ ಅದನ್ನು ಮರೆಯುವಿರಿ."

ಎರಡು ನಿಮಿಷಗಳು ಡಾ.ಶ್ರೀಮಾಲಿಯವರು ಕೆಲವು ಹೊಂದಿಕೆ ಇಲ್ಲದ ಪದಗಳ ಪಿಸುಮಾತಾಡಿದರು. ಅವರು ಮಂತ್ರೋಚ್ಚಾರ ಮಾಡಿದರೋ ಅಥವಾ ಏನಾದರೂ ಹೇಳಿದರೋ ಸದ್ಗುಣಕ್ಕೊಂದೇ ಗೊತ್ತಾಗಬೇಕು. ಇದಕ್ಕೆ ಹೆಚ್ಚೆಂದರೆ ಹತ್ತು ನಿಮಿಷದ ಸಮಯವಾಯಿತು.

ಡಾ.ಶ್ರೀಮಾಲಿಯವರು ಮೇಲೆದ್ದು ಹೇಳಿದರು:"ಡಾ.ಹರ್ಗೋಲಿಯ ನಿಮ್ಮ ರೋಗಿಯು ಸರಿಯಾಗಿದ್ದಾರೆ. ನೀವು ಅವರನ್ನು ಅವರ ಮನೆಗೆ ಹಿಂದಕ್ಕೆ ಕರೆದುಕೊಂಡು ಹೋಗಬಹುದು. ಇನ್ನು ಮುಂದೆ ಯಾವತ್ತೂ ಅವರಿಗೆ ಮೂರ್ಛೆ ರೋಗ ಬರುವುದಿಲ್ಲ."

ಬೆರಗುಗೊಳಿಸುವ ಹಾಗೆ ಆಕೆಯು ಗುಣಹೊಂದಿದ್ದಳು. ಇಲ್ಲಿದ್ದ ರೋಗಿಯು ದಿನಕ್ಕೆ ಎರಡು ಅಥವಾ ಮೂರುಸಲ ನಡುಗುತ್ತಿದ್ದಳು. ಈ ದೀರ್ಘ ಕಾಲದ ರೋಗವು ಬಹಳದಿನಗಳವರೆಗೂ ಉಳಿದುಕೊಂಡಿತ್ತು ಆಕೆಯಲ್ಲಿ ಆಳವಾಗಿ ಕೂತುಕೊಂಡಿದ್ದ ನೋವನ್ನು ಸರಿಮಾಡಲು ಡಾ.ಶ್ರೀಮಾಲಿಯವರು ಹತ್ತು ನಿಮಿಷಗಳಿಗಿಂತ ಹೆಚ್ಚು ತೆಗೆದುಕೊಳ್ಳಲಿಲ್ಲ. ಈ ಸಂಪೂರ್ಣ ಕೆಲಸವು ನಂಬಲಾಗದಾಗಿತ್ತು.

ಫಲಿತಾಂಶಗಳನ್ನು ಪರೀಕ್ಷಿಸಲು ಡಾ.ಹರ್ಗೋಲಿಯ ಜೋಧಪುರದಲ್ಲಿ ತಂಗಲು ನಿರ್ಧರಿಸಿದರು. ಅವರು ಸುಮಾರು ಒಂದುವಾರ ತಂಗಿದ್ದರು. ಹೇಗಾದರೂ ರೋಗಿಯು ಇಷ್ಟುದಿನದಲ್ಲೂ ಯಾವುದೇ ತೊಂದರೆಯ ಬಗ್ಗೆ ದೂರಲಿಲ್ಲ.

ಇದಾದ ಮೇಲೆ ಮೂರುವರ್ಷಗಳು ಕಳೆದವು. ಈಗ ಆ ರೋಗಿಯು ಲವಲವಿಕೆಯಿಂದಿದ್ದಾಳೆ. ಅಲ್ಲದೆ ಆಕೆಗೆ ಯಾವುದೇ ಮಾನಸಿಕ ವ್ಯಾಧಿಯು ಇಲ್ಲ. ತದನಂತರ ಆಕೆಯು ಒಂದು ಮಗುವಿಗೆ ಜನ್ಮಕೊಟ್ಟಿದ್ದಾಳೆ.

ಇಲ್ಲಿಯ ರೋಗಿಗೆ ಬಹಳ ಸಮಯದವರೆಗೆ ದೇಶದ ಎಲ್ಲಾ ಕಡೆಯಲ್ಲೂ ಚಿಕಿತ್ಸೆ ನೀಡಲಾಗಿತ್ತು. ಓರ್ವನೂ ಗೊತ್ತಿರುವ ಅಥವಾ ಗೊತ್ತಿರದ ಪ್ರವೀಣನು ಆಕೆಗೆ ಚಿಕಿತ್ಸೆ ನೀಡದೆ ಇಲ್ಲ. ಈಗ ನಂಬಲಾಗದೆ, ತನ್ನ ವ್ಯಾಧಿಯಿಂದ ಕೇವಲ ಹತ್ತು ನಿಮಿಷಗಳಲ್ಲಿ ವಿಶೇಷ ಘಟನೆ ಇಲ್ಲದೆ ಮುಕ್ತಿ ಹೊಂದಿದಳು. ಡಾ.ಶ್ರೀಮಾಲಿಯವರ ಅಭೂತಪೂರ್ವ ಒಳದೃಷ್ಟಿಗಳಿಗೆ ಧನ್ಯವಾದಗಳು.

ವಿದ್ಯಾಚರಣರು ಮೀರಟ್‌ನ ಒಬ್ಬ ಏಳ್ಗೆಯ ವ್ಯಾಪಾರಸ್ಥರು. ಅಲ್ಲದೆ ಧರ್ಮಕಾರ್ಯದಲ್ಲಿ ಹೆಚ್ಚಿನ ಸಮರ್ಪಣೆ ಇಂದಿದ್ದರು. ಅವರಿಗೆ ಇದ್ದ ಒಬ್ಬನೇ ಮಗ ಹರೀಶ್ . ಅವನಿಗೆ ಎರಡು ವರ್ಷವೂ ಆಗದಿದ್ದಾಗ ಅವನ ತಾಯಿ ತೀರಿಕೊಂಡಳು. ವಿದ್ಯಾಚರಣರು ಮರುಮದುವೆಯಾಗಬಾರದೆಂದು ನಿರ್ಧರಿಸಿದ್ದರು. ತಮ್ಮ ಮಗುವಿನ ಮೇಲೆ ಅವರು ಅತೀ ಪ್ರೀತಿಯನ್ನಿಟ್ಟುಕೊಂಡಿದ್ದರು. ಹರೀಶನು ಎಳೆಯ 14 ವರ್ಷದವನಾಗಿ ಬೆಳೆದು ನಿಂತಾಗ, ಒಂದು ದಿನ, ಅವನನ್ನು ಕೆಲ ಸಮಾಜ ಘಾತಕ ವ್ಯಕ್ತಿಗಳು ಅಪಹರಿಸಿದರು ಮತ್ತು ಹಣಕೊಟ್ಟರೆ ಬಿಡುವುದಾಗಿ ಹೇಳಿದರು. ವಿದ್ಯಾಚರಣರು ಅಪಹರಣದ ಬಗ್ಗೆ ಪೋಲೀಸರಿಗೆ ದೂರುಕೊಟ್ಟರು. ಕಾನೂನು ಮತ್ತು ನಿಯತ್ತಿನ ಅಧಿಕಾರಿಗಳು ಈ ವಿಷಯದಲ್ಲಿ ತುಂಬಾ ಆಸಕ್ತಿವಹಿಸಿದರು. ಆದರೂ ಹುಡುಗನನ್ನು ಹುಡುಕಲಾಗಲಿಲ್ಲ.

ತದನಂತರದಲ್ಲಿ ವಿದ್ಯಾಚರಣರು ಬೇರೆ ಎಲ್ಲಾ ಸಾಧನಗಳನ್ನು ಅನುಸರಿಸಿ 3 ಲಕ್ಷರೂಪಾಯಿಗಳಿಗಿಂತಲೂ ಹೆಚ್ಚು ಖರ್ಚು ಮಾಡಿದರು. ಹುಡುಗನನ್ನು ಹುಡುಕಿ ತಂದವರಿಗೆ ಒಂದು ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ಪ್ರಕಟಿಸಿದರು.

ಆದರೂ ಹುಡುಗನು ಸಿಗಲಿಲ್ಲ, ಸುಮಾರು ಮೂರುತಿಂಗಳ ನಂತರ ಒಂದುದಿನ ಅವರಿಗೆ ಒಂದು ಅನಾಮಿಕ ದೂರವಾಣಿ ಕರೆ ಬಂದಿತು. ಹುಡುಗನನ್ನು ಹಿಂದಿರುಗಿಸಲು ಮೂರುಲಕ್ಷ ರೂಪಾಯಿಗಳ ಹಣವನ್ನು ಕೊಡಲು ಆಜ್ಞಾಪಿಸಲಾಗಿತ್ತು. ಹಣವನ್ನು ಇಡಬೇಕಾಗಿದ್ದ ಸ್ಥಳವನ್ನು ಸಂದೇಶದಲ್ಲಿ ತಿಳಿಸಲಾಗಿತ್ತು. ಈ ಆಧಾರದ ಮೇಲೆ ಪೋಲೀಸರು ಮತ್ತು ಇಂಟೆಲಿಜೆನ್ಸಿ ಏಜೆನ್ಸಿಗಳು

ಅಪಹರಣಕಾರರನ್ನು ಹುಡುಕಲು ಕಷ್ಟದಿಂದ ಪ್ರಯತ್ನಿಸಿದರು. ಆದರೆ ಪ್ರಯತ್ನವು ನಿರರ್ಥಕವೆಂದು ಸಾಬೀತಾಯಿತು.

ವಿರಾಮರಹಿತ ಮತ್ತು ಆಶಾಹೀನರಾದ ವಿದ್ಯಾಚರಣರು, ಈಗ ವ್ಯಾಪಾರದಲ್ಲಿ ತುಂಬಾ ಕಡಿಮೆ ಆಸಕ್ತಿ ವಹಿಸಿದರು. ಅವರ ಏಕೈಕ ಮಗನನ್ನು ಆಳವಾಗಿ ಹಚ್ಚಿಕೊಂಡಿದ್ದರಿಂದ ಅವರು ಆ ಒಂದು ಧಕ್ಕೆಯೊಡನೆ ರಾಜೀಮಾಡಿಕೊಳ್ಳಲಾಗಲಿಲ್ಲ. ಅವರು ಆರೋಗ್ಯವನ್ನು ಕಳೆದುಕೊಳ್ಳಲಾರಂಭಿಸಿದರು. ಈ ಒಂದು ಧಕ್ಕೆಯನ್ನು ಅವರು ಬಹಳದಿನ ತಾಳಿಕೊಳ್ಳಲಾಗುವುದಿಲ್ಲ ಎಂಬ ಭೀತಿ ಇತ್ತು.

ಮಗನ ಹಿಂದಿರುಗುವಿಕೆಯ ಎಲ್ಲಾ ನಂಬಿಕೆಗಳನ್ನೂ ಕಳೆದುಕೊಂಡಿದ್ದರಿಂದ, ಯಾರೊಬ್ಬರೋ ಡಾ.ಶ್ರೀಮಾಲಿಯವರನ್ನು ಕಾಣಲು ಸೂಚಿಸಿದರು.

ವಿದ್ಯಾಚರಣರು ಜೋಧಪುರಕ್ಕೆ ಬಂದರು. ತಮ್ಮ ದುಃಖವನ್ನು ಡಾ.ಶ್ರೀಮಾಲಿಯವರೊಡನೆ ತೋಡಿಕೊಂಡುದುದಾಗಿ ಮತ್ತು ನಂಬಿಕೆಯನ್ನು ಕಳೆದುಕೊಂಡುದುದಾಗಿ ತಿಳಿಸಿದರು. ಅವರು (ಡಾ.ಶ್ರೀಮಾಲಿ) ತಮ್ಮನ್ನು ವಿಫಲಮಾಡಿದಲ್ಲಿ ತಮ್ಮ ದುಃಖ ತಪ್ತವಾದ ಆತ್ಮವು ಈ ಒಂದು ದುರ್ಘಟನೆಯನ್ನು ಸಹಿಸಿಕೊಳ್ಳುವುದಾಗುವುದಿಲ್ಲವೆಂದು ಸಹ ಹೇಳಿದರು.

ಡಾ.ಶ್ರೀಮಾಲಿಯವರು ಕೆಲ ಸಮಾಧಾನಕರವಾದ ಮಾತುಗಳನ್ನು ಹೇಳಿ ಹುಡುಗನ ಭಾವಚಿತ್ರವನ್ನು ನೋಡಲು ಉದ್ದೇಶಿಸಿದರು. ವಿದ್ಯಾಚರಣರು ಭಾವಚಿತ್ರವನ್ನು ಕೊಟ್ಟರು. ಡಾ.ಶ್ರೀಮಾಲಿಯವರು ಭಾವಚಿತ್ರವನ್ನು ಹಲವು ನಿಮಿಷ ನೋಡಿದರು. ತಮ್ಮ ಅಭಿಪ್ರಾಯವನ್ನು ಹೇಳಿದರು. ನೀವು ಭಯ ಪಡಬೇಕಾಗಿಲ್ಲ, ಈ ಕ್ಷಣದಲ್ಲಿ ಹರೀಷನು ಜೀವಂತವಾಗಿದ್ದಾನೆ, ನಿಮ್ಮಲ್ಲಿಗೆ ಅವನು ಬರುವಹಾಗೆ ನೋಡಿಕೊಳ್ಳುವೆ.

ಆ ಬಡ ಹೆತ್ತವನ ಉಲ್ಲಾಸಮಯ ದಿಘ್ಭ್ರಮೆಯನ್ನು ಊಹಿಸಿಕೊಳ್ಳಿ. ಡಾ.ಶ್ರೀಮಾಲಿಯವರು ಅವರನ್ನು ಮರುದಿನ ಕಾಣಲು ಹೇಳಿದರು. ಹುಡುಗನನ್ನು ಎಲ್ಲಿ ಹಿಡಿದಿಟ್ಟುಕೊಳ್ಳಲಾಗಿದೆ ಮತ್ತು ಸಾಧ್ಯವಾದರೆ ಹುಡುಗನನ್ನು ಎಲ್ಲಿ ಹಿಡಿದಿಟ್ಟುಕೊಳ್ಳಲಾಗಿದೆ ಎಂದು ತಾವು ಹೇಳುವುದಾಗಿ ಸಹ ಹೇಳಿದರು.

ಒಂದು ಘೋರವಾದ ಅನಿಶ್ಚತೆಯು ವಿದ್ಯಾಚರಣರನ್ನು ಅದರ ವಶಕ್ಕೆ ತೆಗೆದುಕೊಂಡಿತು. ಅವರು ಡಾ.ಶ್ರೀಮಾಲಿಯವರನ್ನು ನಂಬಬೇಕೋ ಅಥವಾ ನಂಬಬಾರದೋ ಗೊತ್ತಾಗುವ ಅವಸ್ಥೆಯಲ್ಲಿರಲಿಲ್ಲ ಮತ್ತು ಆದರೂ ಅವರು ನಿಂತುಕೊಂಡು ನಾಳೆಯವರೆಗೆ ಕಾಣಲು ಉದ್ದೇಶಿಸಿದರು.

ಮರುದಿನ ಡಾ.ಶ್ರೀಮಾಲಿಯವರು ಅವರ ಮುಂಜಾವಿನ ಧ್ಯಾನದಿಂದ ಹೊರಬಂದಿದ್ದರು. ವಿದ್ಯಾಚರಣರು ಬಂದರು. ಡಾ.ಶ್ರೀಮಾಲಿಯವರು ಅವರನ್ನು ಕೂತುಕೊಳ್ಳಲು ಹೇಳಿದರು. ಭಾವಚಿತ್ರವನ್ನು ಅವರ ಮುಂದೆ ಇಟ್ಟು ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡರು. ತ್ರಾಟಕದ ಕಲೆಯಿಂದ ಆ ಭಾವಚಿತ್ರವನ್ನು ದೃಷ್ಟಿಸಿದರು ಮತ್ತು ಬೇಗನೇ ಅವರ ಬಹಿರ್ಮನಸ್ಸಿನ ಪ್ರಜ್ಞೆಯನ್ನು ಕಳೆದುಕೊಂಡರು. ಐದು ನಿಮಿಷಗಳ ನಂತರ ಅವರು ಕಣ್ಣುಗಳನ್ನು ತೆಗೆದು ಮತ್ತು ಅವರ ಮಗನ ಬಲಕಣ್ಣಿನ ಮೇಲೆ ಒಂದು ಗಾಯದ ಕಲೆ ಇದೆಯೇ ಎಂದು ಕೇಳಿದರು. ವಿದ್ಯಾಚರಣರು ನಿಜವೆಂದರು. ಅವನ ಚಿಕ್ಕವಯಸ್ಸಿನಲ್ಲಿ ಅವನಿಗೆ ಒಂದು ಬೀಳುವಿಕೆಯಾಗಿತ್ತು, ಕಲೆಯು ಉಳಿದುಕೊಂಡಿತ್ತು.

ಡಾ.ಶ್ರೀಮಾಲಿಯವರು ಬಹಿರಂಗಪಡಿಸಿದರು: ಸಮಾಜ ಘಾತಕ ವ್ಯಕ್ತಿಗಳ ಗವಿಯಾಗಿರುವ ಒಂದು ಸ್ಥಳದಲ್ಲಿ ಅವನನ್ನು ಇಡಲಾಗಿದೆ. ನೀವು ಆಸ್ಥಳಕ್ಕೆ ಹೋಗಿ ನಿಮ್ಮ ಮಗನನ್ನು ಆಸ್ಥಳದಿಂದ ಮರಳಿ ಪಡೆಯಲು ತಯಾರಾಗಿರುವಿರಾದರೆ ಅದರ ಸರಿಯಾದ ಸ್ಥಳವನ್ನು ಹೇಳುವೆನೆಂದರು.

ವಿದ್ಯಾಚರಣರು ಪ್ರತ್ಯುತ್ತರದಲ್ಲಿ ಹೇಳಿದರು: "ಅದು ಸಾಧ್ಯವಾಗುವುದು ಎಂದು ನನಗೆ ಅನ್ನಿಸುವುದಿಲ್ಲ. ಪೋಲೀಸರ ಸಹಾಯದಿಂದ ಮಾತ್ರ ಓರ್ವರು ಅಲ್ಲಿಗೆ ಹೋಗಲು ಇಚ್ಛಿಸಬಹುದು. ಒಮ್ಮೆ ಪೋಲೀಸರು ಕಾರ್ಯದಲ್ಲಿ ತೊಡಗಿದರೆ ಆ ಅಪಹರಣಕಾರರು ಎಚ್ಚೆತ್ತುಕೊಳ್ಳುವರು."

ಡಾ.ಶ್ರೀಮಾಲಿಯವರು ಹೇಳಿದರು:ಸಾಧನದ ಮೂಲಕ ಹುಡುಗನನ್ನು ಈ ವಾರ ಜೋಧಪುರಕ್ಕೆ ತರಲು ಪ್ರಯತ್ನಿಸುವೆ. ಒಂದುವಾರದವರೆಗೆ ನೀವು ಇಲ್ಲಿ ಉಳಿಯುವುದು ಉತ್ತಮವು.

ಡಾ.ಶ್ರೀಮಾಲಿಯವರು ಭಾವಚಿತ್ರವನ್ನು ಸಮ್ಮೋಹನಗೊಳಿಸಿದರು ಮತ್ತು ತಕ್ಕ ಅವಕಾಶ ಸಿಕ್ಕಿದ ತಕ್ಷಣ ತನ್ನ ಗುಹೆಯಿಂದ ಪರಾರಿಯಾಗಬೇಕೆಂದು ಹುಡುಗನಿಗೆ ಆಜ್ಞಾಪಿಸಿದರು. ತನ್ನ ಅಪಹರಣಕಾರರಿಂದ ಈಗಾಗಲೇ ತನ್ನ ತಲೆತಿಕ್ಕಲಾಗಿದೆ ಎಂಬುದು ಅವನಿಗೆ ಗೊತ್ತಾಯಿತು.

ಯಾವುದೇ ಸಂದರ್ಭದಲ್ಲಿ ಆ ಜಾಗವನ್ನು ಬಿಡಬೇಕು ಎಂದು ಬಹಳ ಕಷ್ಟದಿಂದ ಆ ಹುಡುಗನಿಗೆ ಆಜ್ಞೆಯನ್ನು ನೆಡಲಾಯಿತು. ಡಾ.ಶ್ರೀಮಾಲಿಯವರೂ ಮತ್ತು ಹರೀಷನೂ ಮುಖಾಮುಖಿ ಮಾತನಾಡುತ್ತಿರುವ ಹಾಗೆ ಅದು ಕಾಣಿಸಿತು.

ಹುಡುಗನಿಗೆ ಒಂದು ನಿರ್ದಿಷ್ಟವಾದ ರೈಲು ನಿಲ್ದಾಣವನ್ನು ತಲುಪಬೇಕು, ನಿಶ್ಚಿತವಾದ ರೈಲನ್ನೇ ಹತ್ತಬೇಕು ಮತ್ತು ಇನ್ನೊಂದಕ್ಕೆ ನಿಶ್ಚಿತವಾದ ಸ್ಥಳದಲ್ಲಿ ಬದಲಾಯಿಸಬೇಕು ಎಂದು ಸಹ ಆಜ್ಞಾಪಿಸಲಾಯಿತು. ಹುಡುಗನಿಗೆ ಒಂದು ನಿಶ್ಚಿತವಾದ ಸ್ಥಳದಿಂದ ಸ್ವಲ್ಪ ಹಣವನ್ನು ಸಂಗ್ರಹಿಸಲು, ಏಕೆಂದರೆ ಅದನ್ನು ಜೋಧಪುರದವರೆಗಿನ ಪ್ರಯಾಣಕ್ಕೆ ಅವನು ಪಾವತಿಮಾಡಬಹುದೆಂದು ನಿರ್ದೇಶಿಸಲಾಯಿತು.

ಪ್ರತಿದಿನವೂ ಡಾ.ಶ್ರೀಮಾಲಿಯವರು ಈ ಪ್ರಯೋಗವನ್ನು ನಿರ್ವಹಿಸುತ್ತಿದ್ದರು. ನಾಲ್ಕನೆಯದಿನ ಅವರು ವಿದ್ಯಾಚರಣರಿಗೆ ಹುಡುಗನು ಆ ಸ್ಥಳದಿಂದ ಹೊರ ಬಂದಿದ್ದಾನೆ ಮತ್ತು ಹೆಚ್ಚುಕಡಿಮೆ ಅವನು ಸ್ವತಂತ್ರನಾಗಿದ್ದಾನೆ ಎಂದು ತಿಳಿಸಿದರು.

ಆರನೆಯ ದಿನ ಜೋಧಪುರ ರೈಲು ನಿಲ್ದಾಣದಲ್ಲಿ ಹುಡುಗನು ಬಂದಿಳಿದಾಗ ಅವನನ್ನು ಬರಮಾಡಿಕೊಳ್ಳಲು ಡಾ.ಶ್ರೀಮಾಲಿಯವರು ಮತ್ತು ವಿದ್ಯಾಚರಣರಿಬ್ಬರೂ ಅಲ್ಲಿದ್ದರು. ವಿದ್ಯಾಚರಣರು, ಒಬ್ಬ ಹುಚ್ಚನ ಹಾಗೆ ಆ ಹುಡುಗನನ್ನು ಹಿಡಿದಿಟ್ಟುಕೊಳ್ಳಲು ಓಡಿದರು. ತಂದೆ ಮತ್ತು ಮಗ ಇಬ್ಬರೂ ಬಹಳ ತೀಕ್ಷ್ಣವಾಗಿ ಅತ್ತರು.

ನಂತರದಲ್ಲಿ ಹುಡುಗನು ಅಪರಾಧಿಗಳ ಗುಹೆಯಲ್ಲಿ ತನ್ನನ್ನು ಬಂಧಿಯಾಗಿ ಇಟ್ಟುದುದಾಗಿ ಪ್ರಕಟಿಸಿದನು. ಎಲ್ಲಾ ಕೈಕೆಲಸಗಳನ್ನು ಅವನು ಮಾಡುವಹಾಗೆ ಅವರು ಮಾಡಿದ್ದರು. ಅವನ ಮೇಲೆ ಸೂಕ್ಷ್ಮ ಎಚ್ಚರಿಕೆಯನ್ನು ವಹಿಸಿದ್ದರು. ಯಾವುದೇ ಸಂದರ್ಭದಲ್ಲಿ ಆ ಗುಹೆಯಿಂದ ಓಡುವ ಯೋಚನೆ ಅವನು ಮಾಡುವಹಾಗಿದ್ದಿಲ್ಲ.

ಮೊದಲು, ಹಣ ದೊರಕಿದನಂತರ, ಅವನನ್ನು ಅವನ ತಂದೆಗೆ ಹಿಂದಿರುಗಿಸಲು ಯೋಜಿಸಿದ್ದರು. ಆದರೆ, ಕೂಡಲೇ, ಪೋಲೀಸರ ಚಾಲಾಕಿನ ಚಲನವಲನಗಳನ್ನು ಅವರು ನೋಡಿದಾಗ ಹಣವನ್ನು ಪಡೆಯುವ ಉದ್ದೇಶವನ್ನು ಕೈಬಿಟ್ಟರು.

ಹುಡುಗನು ತನ್ನ ಬಿಡುಗಡೆಯ ಎಲ್ಲಾ ಆಸೆಗಳನ್ನೂ ಬಿಟ್ಟಿದ್ದನು. ಅವರು ಅವನೊಂದಿಗೆ ಎಷ್ಟೊಂದು ಹಚ್ಚಿಕೊಂಡು ಮಾತನಾಡುತ್ತಿದ್ದರೆಂದರೆ ನಿಧಾನವಾಗಿ, ಅವನಷ್ಟಕ್ಕೆ ಅವನೇ ಅವರ ಜೀವನಶೈಲಿಗೆ ಹೊಂದಿಕೊಳ್ಳಹತ್ತಿದನು.

ಒಂದು ವಾರದ ಹಿಂದೆ ಅವನ ಕಿವಿಯಲ್ಲಿ ಯಾರೋ ತಾನು ವಿದ್ಯಾಚರಣರ ಮಗ ಹರೀಷನೆಂದೂ, ಮತ್ತು ತಾನು ಇಂತಿಂತಹ ಊರಿನವನೆಂದೂ , ತಾನು ಆ ಸ್ಥಳವನ್ನು ಯಾವುದೇ ಸಂದರ್ಭದಲ್ಲಿ ಬಿಡಬೇಕೆಂದೂ ಪದೇ ಪದೇ ಹೇಳುತ್ತಿರುವ ಹಾಗೆ ಅನ್ನಿಸಿತು.

ಆಜ್ಞೆಗಳು ಇಪ್ಪತ್ತುನಾಲ್ಕುಗಂಟೆಯೂ ಅವನ ಕಿವಿಯಲ್ಲಿ ಗುಂಯ್ ಗುಟ್ಟುತ್ತಲೇ ಇದ್ದವು. ರಾತ್ರಿಯಲ್ಲಿ ಯಾರೋ ತನ್ನನ್ನು ಗವಿಯಿಂದ ಹೊರಗೆ ನಿರ್ವಹಿಸುತ್ತಿರುವ ಹಾಗೆ ಕನಸುಕಂಡನು. ಮೂರನೆಯದಿನ ಅವನು ಅವಕಾಶವನ್ನು ಕಂಡನು. ಆ ಸಮಯದಲ್ಲಿ ಒಂದು ನೂರು ರೂಪಾಯಿ ಆ ಕೋಣೆಯಲ್ಲಿ ಬಿದ್ದಿತ್ತು, ಹಣವನ್ನು ಜೇಬಿನಲ್ಲಿರಿಸಿಕೊಂಡನು. ಕನಸಿನಲ್ಲಿ ಕೊಟ್ಟ ನಿರ್ದೇಶಾನುಸಾರವಾಗಿ ಗವಿಯಿಂದ ಆಚೆಗೆ ಒಂದು ರೈಲು ನಿಲ್ದಾಣವನ್ನು ತಲುಪಿದನು. ದೆಹಲಿಯನ್ನು ತಲುಪಿ ಈ ರೈಲನ್ನು ಹತ್ತಿದನು.

ಕೆಲವುಸಾರಿ ತಾನು ಮೀರಟ್‌ನಲ್ಲಿ ಇರುವುದು ಅರಿವಿಗೆ ಬಂತು, ತಾನು ಜೋಧಪುರಕ್ಕೆ ಹೋಗುತ್ತಿರುವುದು ಅವನನ್ನು ಚಕಿತ ಗೊಳಿಸಿತು. ಆದರೆ ಪ್ರತಿಕ್ಷಣವೂ ಅವನ ಕಿವಿಯಲ್ಲಿ ತಾನು ಜೋಧಪುರಕ್ಕೇ ಹೋಗಬೇಕು ಏಕೆಂದರೆ ತನ್ನ ತಂದೆಯು ಅಲ್ಲಿ ತನ್ನ ಬರಮಾಡಿಕೊಳ್ಳುವರು ಎಂಬ ಪ್ರತಿಧ್ವನಿ ಗುಂಯ್ ಗುಟ್ಟುತ್ತಲೇ ಇತ್ತು.

ಶ್ರೀಮಾಲಿಯವರನ್ನು ಬೀಳ್ಕೊಡುವಾಗ ವಿದ್ಯಾಚರಣರು ಹೇಳಿದರು: ನೀವು ನನ್ನ ಕುಟುಂಬವನ್ನು ಕಾಪಾಡಿದ್ದೀರಿ. ನನ್ನ ಜೀವನಕಾಲಕ್ಕೆ ಇನ್ನೂ ಹಲವು ವರ್ಷಗಳನ್ನು ಹೆಚ್ಚಿಸಿದ್ದೀರಿ. ಹುಡುಗನು ಹಿಂದಿರುಗದಿದ್ದಲ್ಲಿ ಸಂಪೂರ್ಣ ಖಚಿತವಾಗಿ ನಾನು ದುರ್ಘಟನೆಗೀಡಾಗುತ್ತಿದ್ದೆ. ನನ್ನ ಸಾವಿನಿಂದ ಮತ್ತು ನನ್ನ ಮಗನ ಅಪಹರಣದಿಂದ ನನ್ನ ಕುಟುಂಬದ ಸಾಲಿನ ಅಂತ್ಯವಾಗುತ್ತಿತ್ತು.

ವಿದ್ಯಾಚರಣರು ಒಂದು ಖಾಲಿ ಚೆಕ್‌ಗೆ ಸಹಿ ಹಾಕಿ ಅದನ್ನು ಡಾ.ಶ್ರೀಮಾಲಿಯವರಿಗೆ ಅರ್ಪಿಸಿದರು: "ದಯಮಾಡಿ ಹೇಗಾದರೂ ಎಷ್ಟಾದರೂ ಹಣವನ್ನು ತುಂಬಿಕೊಳ್ಳಲು ಹಿಂಜರಿಯದಿರಿ." ಡಾ.ಶ್ರೀಮಾಲಿಯವರು ಚೆಕ್ಕನ್ನು ಹಿಂದಿರುಗಿಸಿ ಅದೇ ಹಣವನ್ನು ಧರ್ಮಕ್ಕಾಗಿ ಖರ್ಚುಮಾಡುವುದು ಉತ್ತಮವೆಂದು ಸಲಹೆ ಕೊಟ್ಟರು.

ವಿದ್ಯಾಚರಣರು ಒಂದು ಶಬ್ದವನ್ನೂ ಉಚ್ಚರಿಸಲಿಲ್ಲ. ಬರಿಯ ಅವರ ಕಣ್ಣುಗಳೇ, ಅವರು ಡಾ.ಶ್ರೀಮಾಲಿಯವರಿಗೆ ಎಷ್ಟು ಕೃತಜ್ಞರಾಗಿದ್ದಾರೆಂದು, ಮಾತನಾಡಿದವು.

ಅಲಿಗಢ್‌ನ ನಿವಾಸಿಗಳಾದ ಮಹೇಶ್ ಚಂದ್ರ ಗುಪ್ತಾರವರಿಗೆ ಇಬ್ಬರು ಪುತ್ರರೂ ಮತ್ತು ಒಬ್ಬಮಗಳೂ ಇದ್ದರು. ಅವರ ಮಕ್ಕಳಲ್ಲಿ ಅವರ ಮಗಳಾದ ಆಶಾ ಎಲ್ಲರಿಗಿಂತಲೂ ದೊಡ್ಡವಳು. ಅವಳು ಅತ್ಯಂತ ಸುಂದರಳಾಗಿಯೂ ಮತ್ತು ಚುರುಕಿನವಳಾಗಿಯೂ ಇದ್ದಳು. ಅವಳು ಕಾಲೇಜಿಗೆ ಹೋಗಲು ಪ್ರಾರಂಭಿಸಿದಾಗ ಬೇರೆ ಪಂಗಡಕ್ಕೆ ಸೇರಿದಂತಹ—ಗುಜ್ಜಾರರ ಪಂಗಡ, ಆ ಹುಡುಗನ ಜೊತೆಗೆ ಒಳ್ಳೆಯ ಆತ್ಮೀಯತೆ ಬೆಳೆಯಿತು ಆತ್ಮೀಯತೆ ಪ್ರೀತಿಗೆ ತಿರುಗಿತು. ಕೆಲವು ಸಲ ಹುಡುಗನು ಆಶಾರವರ ಮನೆಗೆ ಬಂದು ಇವರು ಮದುವೆಯಾಗಲು ಯೋಜಿಸುವರೆಂದು ತಿಳಿಯದಂತಹ ಅವಳ ತಂದೆತಾಯಿಯವರನ್ನು ಕಾಣುತ್ತಿದ್ದನು.

ಅವರ ಮದುವೆಯಾಗುವ ನಿರ್ಧಾರ ಕೈಗೂಡಿದಾಗ ಆಗುವಂತಹ ಸ್ಫೋಟಕ ವಾತಾವರಣವನ್ನು ಎದುರುಗೊಳ್ಳಲು ಅವರು ಎಷ್ಟುಮಟ್ಟಿಗಾದರೂ ತಯಾರಾಗಿದ್ದರು.

ಈ ಆತ್ಮೀಯತೆಯು ಎಷ್ಟು ಆಳವಾಗಿ ಹೋಯಿತೆಂದರೆ, ಒಂದುದಿನ ಆಶಾ ತಾನು ಗರ್ಭಿಣಿಯಾದುದನ್ನು ಕಂಡಳು. ಅದಕ್ಕಾಗಿ ಆದಿನಗಳಲ್ಲಿ ಕಾಲೇಜಿನ ಪ್ರವಾಸವನ್ನು ಸೇರುವ ನೆಪದಲ್ಲಿ

ತನ್ನ ಉಪಪತಿಯ ಜೊತೆಯಲ್ಲಿ ದೆಹಲಿಗೆ ಧಾವಿಸಿ ಗರ್ಭಪಾತವನ್ನು ನಿಭಾಯಿಸಿದಳು. ಅವಳು ಆರೇದಿನ ಹಿಂದಿರುಗಿದಳು.

ಒಂದು ದಿನ ಅವಳು ಆ ಗುಜ್ಜಾರ ಯುವಕನ ಜೊತೆ ಒಂದು ನಿರ್ದಿಷ್ಟವಾದ ದಿನಾಂಕದಂದು ಮದುವೆಯಾಗಲು ಹೋಗುತ್ತಿದ್ದಾಳೆಂದು ಅವಳ ಹತ್ತಿರದವರಿಗೆ ತಿಳಿಯಿತು.

ಮಹೇಶರು ದಾರುಣವಾದ ತೊಂದರೆಗೆ ಒಳಗಾದರು. ವಿಚಾರಣೆಯಿಂದ ಇಬ್ಬರೂ ಈಗಾಗಲೇ ಮದುವೆಗಾಗಿ ಮದುವೆ ನೋಂದಣಿಯ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿದ್ದಾರೆಂದು ತಿಳಿಯಿತು. ನ್ಯಾಯಾಲಯವು ಅವರ ಮದುವೆಗೆ ಒಂದು ದಿನಾಂಕವನ್ನು ಗೊತ್ತು ಪಡಿಸಿತ್ತು.

ಮಹೇಶರು ಗಾಬರಿಗೊಂಡರು. ಆತನ ಸಮಾಜವು ಈ ಮದುವೆಯನ್ನು ಒಪ್ಪುವುದಿಲ್ಲ. ಪಂಗಡ ಹೊರಗೆ ಮದುವೆಮಾಡಿಕೊಳ್ಳುವ ಅವರ ಮಗಳ ನಿರ್ಧಾರದೊಂದಿಗೆ ಸಮಾಜದಲ್ಲಿ ಅವರ ಸ್ಥಾನವು ಪೇಚಿನಲ್ಲಿರುವುದು. ಆಶಾಳ ಅಸಾಧಾರಣ ನಿರ್ಧಾರದಿಂದ ಅವರು ತಮ್ಮ ಷ್ಟಕ್ಕೆ ತಾವೇ ಸ್ನೇಹಿತರ ಒಡನಾಟದೊಂದಿಗೆ ತಮ್ಮ ಮನೆಯಲ್ಲಿ ಇರಲಾಗುತ್ತಿಲ್ಲ ಎಂಬುದನ್ನು ಕಂಡುಕೊಂಡರು.

ಅವರು ಆಶಾಳ ನಿರ್ಧಾರವನ್ನು ಬದಲಿಸಲು ಅವಳ ಮನವೊಲಿಸಲು ಪ್ರಯತ್ನಿಸಿದರು. ಅವಳ ಮನಸ್ಸನ್ನು ಬದಲಿಸದಿದ್ದಲ್ಲಿ ಅವರ ಸಂಪೂರ್ಣ ಪಂಗಡದ ಹೆಸರು ಕೆಡಿಸಿದಹಾಗಾಗುವುದು ಎಂದು ಅವರು ವಾದಿಸಿದರು. ಅವಳು ಗುಜ್ಜಾರ ಹುಡುಗನನ್ನೇ ಮದುವೆಯಾಗಲು ಒತ್ತಾಯಿಸಿದಲ್ಲಿ ಅವರಿಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವುದನ್ನು ಬಿಟ್ಟರೆ ಬೇರೆಯಾವ ಪರ್ಯಾಯವಿಲ್ಲವೆಂದು ಸಹ ಹೇಳಿದರು. ಸಮಾಜ ಕಳಂಕದ ಜೂಜಾಟದಲ್ಲಿ ತಾನು ಬರುವುದಿಲ್ಲ ತನ್ನ ಮದುವೆಯು ಪಂಗಡದ ಮೇಲೆ ನಿಂತಿಲ್ಲ ಎಂದು ಹೇಳುತ್ತಾ ಆಶಾಳು ಹಿಮ್ಮೆಟ್ಟಿದಳು. ಅವರು ಆತ್ಮಹತ್ಯೆಮಾಡಿಕೊಳ್ಳಲು ಹೆದರಿಸಿದರೆ ಅವರ ಸಾವಿಗೆ ತಾನು ಜವಾಬ್ದಾರಳಲ್ಲ. ಈ ತರಹದ ಪೂರ್ವ ಸಂಭಾಷಣೆಯ ಬೆದರಿಕೆಗಳಿಗೆ ಆಕೆ ತೊಂದರೆತೆಗೆದುಕೊಳ್ಳಲಿಲ್ಲ. ಬನ್ನಿ ಏನಾದರಾಗಲಿ, ಆಕೆ ತನ್ನ ನಿರ್ಧಾರಕ್ಕೆ ಅಂಟಿಕೊಂಡಿರಲು ಇತ್ಯರ್ಥ ಮಾಡಿಕೊಂಡಿದ್ದಳು.

ಅವಳ ಮನವೊಲಿಸಲು ವಿಫಲವಾದದ್ದಕ್ಕೆ ಆ ಪರಿವಾರವು ಆಶಾಳನ್ನು ಮೂರುದಿನಗಳವರೆಗೆ ಮನೆಯಲ್ಲಿಯೇ ಕೂಡಿಹಾಕಿತ್ತು. ಮೂರನೆಯದಿನ ಅವಳು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದಳು. ಈ ಕೆಲಸಕ್ಕಾಗಿ ಅವಳು ಸೀಲಿಂಗ್ ಫ್ಯಾನ್‌ಗೆ ಹಗ್ಗವನ್ನು ಕಟ್ಟಿ ಉಸಿರು ಕಟ್ಟಿ ಸಾಯುವವರೆಗೂ ನೇತುಬೀಳಲು ಪ್ರಯತ್ನಿಸಿದಳು. ತಾಯಿಯವರು ಅಕಸ್ಮಾತ್ ಹಗ್ಗವನ್ನು ನೋಡಿದರು. ಅವರು ಬಾಗಿಲುಗಳನ್ನು ಹೊಡೆಸಿ ಮಗಳನ್ನು ಕಾಪಾಡಿದರು. ಆಶಾಳು ತಾನು ಬರಿಯ ಒತ್ತಡದಿಂದ ಹಿಂಜರಿಯುವುದಿಲ್ಲ ಮತ್ತು ತಾನು ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಹೆದರಿಸಿದಳು.

ಇನ್ನೊಂದು ಕಡೆ ಆಶಾಳನ್ನು ಅವಳ ಇಚ್ಛೆಯ ವಿರುದ್ಧವಾಗಿ ಮನೆಯಲ್ಲಿಯೇ ಕೂಡಿಹಾಕಿದ್ದಾರೆಂದು ಗುಜ್ಜಾರ ಯುವಕನು ನ್ಯಾಯಾಲಯದಲ್ಲಿ ಒಂದು ಅರ್ಜಿಸಲ್ಲಿಸಿದನು.

ಈ ಸಮಸ್ಯೆಯು ಒಂದು ಸಂದಿಗ್ಧವಾದ ಆಯಾಮವನ್ನು ತೆಗೆದುಕೊಂಡಿತ್ತು. ಉಪಪತಿಯ ಬಿನ್ನಹವನ್ನು ಅನುಸರಿಸಿ ನ್ಯಾಯಾಲಯವು ಆಶಾಳನ್ನು ಒಂಟಿತನದ ಬಂಧನದಿಂದ ಕಾಪಾಡಲು ಪೋಲೀಸರಿಗೆ ಅಧಿಕಾರವನ್ನು ಕೊಡುವಂತಹ ಆಜ್ಞೆಯನ್ನು ಹೊರಡಿಸಿತು ಮತ್ತು ಆಕೆಯನ್ನು ಸಾರ್ವಜನಿಕ ರಕ್ಷಣೆಗೆ ತಂದಲ್ಲಿ ನಿರ್ದೇಶಿಸಿರುವ ದಿನಾಂಕದಂದು ನ್ಯಾಯಾಲಯದಲ್ಲಿ ಆಕೆಯ ಮದುವೆಯನ್ನು ನಿಲ್ಲಿಸಲು ಯಾರಿಂದಲೂ ಸಾಧ್ಯವಿಲ್ಲ.

ಪ್ರತಿಯೊಂದೂ ಆಶಾಳ ಒಪ್ಪಿಗೆಯ ಕಡೆ ತಿರುಗುತ್ತಿರುವ ಹಾಗೆ ಕಾಣಿಸಿತು. ಆದರೆ ಅವಳು ಪರಿವಾರದವರ ಕಾರಣಗಳನ್ನು ಮತ್ತು ಮನವರಿಕೆಗಳನ್ನು ಗ್ರಹಿಸುತ್ತಲೇ ಇರಲಿಲ್ಲ. ಬೇಡವೆಂದು ಮನಸ್ಸು ತಿರುಗಿಸಲು ಆಕೆಯ ಹಚ್ಚೆಯನ್ನು ಹಿಂತೆಗೆದುಕೊಳ್ಳಲು ಆಕೆಯ ಪರಿವಾರದ ಹೆಚ್ಚಿನ ಸದಸ್ಯರೂ ಪ್ರಯತ್ನಿಸಿದರು. ಆಕೆಯು ಕಲ್ಲಿನಂತಿದ್ದಳು. ಅವಳು ಅದೆಲ್ಲವೂ ಉಪಯೋಗವಿಲ್ಲವೆಂದು ಹೇಳಿ ಯಾಕೆ ನನ್ನನ್ನು ಯಾರಾದರೂ ನಾನು ಇಷ್ಟಪಟ್ಟಹುಡುಗನೊಡನೆ ಮದುವೆಯಾಗಲು ತಡೆಯಬೇಕು ಎಂದಳು. ತನ್ನ ಮೇಲೆ ಯಾವುದಾದರೂ ಒತ್ತಡವನ್ನು ತಂದಲ್ಲಿ ತಾನು ನ್ಯಾಯಾಲಯಕ್ಕೆ ದೂರುವುದಾಗಿ ಮತ್ತು ತನ್ನನ್ನು ಮನೆಯಿಂದ ಆಚೆ ಬರುವುದನ್ನು ತಡೆದಲ್ಲಿ ತಾನು ಖಚಿತವಾಗಿ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಬೆದರಿಸಿದಳು.

ಮಹೇಶಚಂದ್ರರಿಗೆ ಬೇರೆಯಾವ ದಾರಿಯೂ ಕಾಣಲಿಲ್ಲ. ಆಗಲೇ ಯಾರೋ ಒಬ್ಬರು ಡಾ.ಶ್ರೀಮಾಲಿಯವರನ್ನು ನೋಡಲು ಸಲಹೆ ಕೊಟ್ಟರು. ಒಂದು ಕ್ಷಣವನ್ನೂ ಕಳೆದುಕೊಳ್ಳದೆ ಅವರು ಆಶಾಳನ್ನು ಅವಳ ಪರಿವಾರದ ಇತರ ಸದಸ್ಯರೊಂದಿಗೆ ಡಾ.ಶ್ರೀಮಾಲಿಯವರಲ್ಲಿಗೆ ಕರೆದುಕೊಂಡು ಬಂದರು.

ಮಹೇಶಚಂದ್ರರು ಸಂಪೂರ್ಣ ಕಥೆಯನ್ನು ಡಾ.ಶ್ರೀಮಾಲಿಯವರಿಗೆ ವಿವರಿಸಿದರು. ಯಾವುದೇ ಗೌರವಾನ್ವಿತ ಪರಿಹಾರವು ಸಿಗದಿದ್ದಲ್ಲಿ ತಾವು ಸಜೀವ ಅಲೀಗಢ್‌ಗೆ ಹಿಂದಿರುಗಲಿಕ್ಕಿಲ್ಲವೆಂದು ಗಾಬರಿಗೊಂಡರು.

ಡಾ.ಶ್ರೀಮಾಲಿಯವರು ಆಶಾಳೊಡನೆ ಮಾತನಾಡಿದರು. ಆಶಾಳು ತನ್ನ ಪಂಗಡವನ್ನು ಬಿಟ್ಟು ಮದುವೆಯಾಗಲು ದೃಢವಾಗಿ ನಿರ್ಧರಿಸಿದ್ದಾಳೆಂಬುದನ್ನು ನೋಡಿದರು. ಡಾ.ಶ್ರೀಮಾಲಿಯವರಿಗೆ ಅವಳು ತನ್ನ ನಿರ್ಧಾರದಿಂದ ಹಿಂಜರಿಯುವುದಿಲ್ಲವೆಂದು ಹೇಳಿದಳು. ಆತ್ಮಹತ್ಯೆಮಾಡಿಕೊಳ್ಳುತ್ತೇನೆನ್ನುವ ಅವಳ ತಂದೆಯ ಬಗ್ಗೆ ಆಕೆ ಹಚ್ಚಿಕೊಳ್ಳಲಿಲ್ಲ. ತಂದೆ ಒಂದೇ ಯಾಕೆ? ಸಂಪೂರ್ಣಪರಿವಾರ ಆತ್ಮಹತ್ಯೆ ಮಾಡಿಕೊಳ್ಳಲಿ ಅದನ್ನು ಆಕೆ ಹಚ್ಚಿಕೊಳ್ಳುವುದಿಲ್ಲ. ನ್ಯಾಯವಲ್ಲದ ಒತ್ತಡವನ್ನು ಆಕೆಯ ಮೇಲೆ ಹಾಕಿದಲ್ಲಿ ತನ್ನ ಸಾವಿನ ಹೇಳಿಕೆಯನ್ನು ಪೋಲೀಸರಿಗೆ ತಿಳಿಸಿ ಆತ್ಮಹತ್ಯೆಮಾಡಿಕೊಳ್ಳುವಳು.

ನಿಜವಾಗಿಯೂ ಇದೊಂದು ಒಳ್ಳೆಯ ಬಿಡಿಸಲಾರದಗಂಟಾಗಿತ್ತು. ಯಾವುದೇ ಸುಲಭವಾದ ಪರಿಹಾರವನ್ನು ಅದು ಒಪ್ಪುವಹಾಗಿರಲಿಲ್ಲ. ಡಾ.ಶ್ರೀಮಾಲಿಯವರು ಇದಕ್ಕೆ ಒಂದು ಪರಿಹಾರವನ್ನು ಕಂಡುಹಿಡಿಯಲು ನಿರ್ಧರಿಸಿದರು. ಅವರು ಆಶಾಳಿಗೆ ಹೇಳಿದರು:"ಸರಿ, ನಾನು ನಿನ್ನೊಡನೆ ಅರ್ಧಗಂಟೆಗಿಂತ ಹೆಚ್ಚು ಮಾತಾಡುವುದಿಲ್ಲ. ತದನಂತರದಲ್ಲಿ ನೀನು ಸ್ವತಂತ್ರಳು. ನಿನಗೇನು ಬೇಕೋ ಅದನ್ನು ಮಾಡಬಹುದು." ಆಶಾಳು ತನ್ನ ಜೊತೆಗೆ ಮಾತನಾಡುವ ಯಾವುದೇ ವಿಚಾರವನ್ನು ತಳ್ಳಿ ಹಾಕಿದಳು. ಈ ವಿಷಯದಲ್ಲಿ ತನಗೆ ಏನನ್ನೂ ಕೇಳಲಿಚ್ಛೆಯಿಲ್ಲ ಎನ್ನುವ ಮಟ್ಟಿಗೆ ಆಕೆಯು ಹೇಳುವ ಸ್ಥಿತಿಯಲ್ಲಿದ್ದಳು.

ಸಂಪೂರ್ಣ ಪರಿವಾರದ ಸಮ್ಮುಖದಲ್ಲಿಯೇ ಡಾ.ಶ್ರೀಮಾಲಿಯವರು ಸ್ಥಿರವಾದ ನೋಟವನ್ನು ಆಶಾಳ ಕಣ್ಣುಗಳಲ್ಲಿ ಬೀರಿ ಮತ್ತು ಒಂದು ನಿಮಿಷದಲ್ಲಿ ಆಕೆಯನ್ನು ಸಮ್ಮೋಹನಗೊಳಿಸಿದರು. ಅವಳಿಗೆ ಗುಜ್ಜಾರ ಯುವಕನ ಜೊತೆ ಯಾವ ರೀತಿ ಸಂಬಂಧವಿದೆ ಎಂದು ಖಚಿತಪಡಿಸಿಕೊಳ್ಳಲು ಅಂತರ್ಭೇದಕ ಪ್ರಶ್ನೆಗಳನ್ನು ಕೇಳಲಾರಂಭಿಸಿದರು.

ಸಮ್ಮೋಹನ ನಿದ್ರೆಯಲ್ಲಿ ಅವಳು ಎಲ್ಲವನ್ನೂ ಬಹಿರಂಗಪಡಿಸಿದಳು ಹೇಗೆ ಅವನೊಂದಿಗೆ

ಪರಿಚಯವಾಯಿತು, ಪರಿಚಯವು ಪ್ರೀತಿಯಲ್ಲಿ ಹೇಗೆ ಬೆಳೆಯಿತು, ಯಾವಾಗ ತಾನು ಗರ್ಭಿಣಿಯಾದಳು ಮತ್ತು ಹೇಗೆ ಗರ್ಭಪಾತಮಾಡಿಸಿಕೊಂಡಳು ಮತ್ತು ಯಾವಾಗ ಮತ್ತು ಹೇಗೆ ಅವರು ಮದುವೆ ಮಾಡಿಕೊಳ್ಳಲು ಯೋಜಿಸಿದರು.

ಮಹೇಶ್ ಚಂದ್ರರಿಗೆ ಈ ಎಲ್ಲಾ ಸತ್ಯತೆಗಳನ್ನು ತಿಳಿಯಲು ಮರಗಟ್ಟಿದ ಹಾಗನ್ನಿಸಿತು.

ಸಮ್ಮೋಹನವಶದಲ್ಲಿದ್ದ ಆಶಾಳಿಗೆ ಡಾ.ಶ್ರೀಮಾಲಿಯವರು ಗುಜ್ಜಾರ ಯುವಕನು ತುಂಬಾ ಕಪಟಿಯಾಗಿದ್ದಾನೆ ಎಂದು ಸಲಹೆಕೊಟ್ಟರು. ಅವನು ಸುಮ್ಮನೆ ಕಳಂಕಿತ ಮಾಡುವಂತಹ ಉದ್ದೇಶವನ್ನು ಸಾಧಿಸಲು ಹೊರಟಿರುವನು. ಅವನು ಮದುವೆಯಾದ ನಂತರ ಅವಳನ್ನು ಪರಿತ್ಯಜಿಸುವನು. ಕಳಂಕ ಹಚ್ಚಿದ ಜೀವನವನ್ನು ಸಾಗಿಸುವ ಒತ್ತಡದಿಂದ ಅವಳನ್ನು ನಡುನೀರಿನಲ್ಲಿ ಕೈಬಿಡಲಾಗುವುದು.

ಅವರು ಮುಂದುವರಿದು ಹೇಳಿದರು: ಮದುವೆಯು ಕುಟುಂಬದ ಮೇಲೆ ವಿಪತ್ತನ್ನು ತರುವುದು. ಅದು ಆ ಕುಟುಂಬದ ಸಾಮಾಜಿಕ ಗೌರವವನ್ನು ಕೆಳಮಟ್ಟಕ್ಕಿಳಿಸುವುದು. ಸಮಾಜವು ಸಹ ಘೋರವಾಗಿ ಕಂಪಿಸುವುದು. ಅವಳ ತಂದೆಯ ಇನ್ನುಳಿದ ಮಕ್ಕಳು ತಲೆತಗ್ಗಿಸಿದ ಹಾಗಾಗುವುದು. ಅಂತ್ಯದಲ್ಲಿ ಕುಟುಂಬವು ಅವನತಿಯಲ್ಲಿ ಕೊನೆಗೊಳ್ಳುವುದು.

ಪ್ರೇಮ ವಿವಾಹವು ತನ್ನಲ್ಲಿಯೇ ಒಂದು ದುಃಖದಾಯಕವು ಎಂದು ತಿಳಿಹೇಳಿದರು. ಆದರೆ ಅವಳು ಮದುವೆಯಾಗಬೇಕೆಂದಿದ್ದ ಹುಡುಗನು ಈಗಾಗಲೇ ಅಂತಹವೇ ಆದ ಸಂಬಂಧಗಳಲ್ಲಿ ಒಳಗೊಂಡಿದ್ದಾನೆ. ಅವನದು ಕುಪ್ರಸಿದ್ಧವಾದ ವ್ಯಕ್ತಿತ್ವವು. ಅವರು ಅವಳಿಗೆ ಏಕಾಂತದಲ್ಲಿ ಸಹ ಕೆಲವು ಮಾತುಗಳನ್ನು ಹೇಳಿದರು.

ಡಾ.ಶ್ರೀಮಾಲಿಯವರು ಅವಳನ್ನು ಸಮ್ಮೋಹನದಿಂದ ಹೊರತಂದಾಗ ಆಶಾ ಕಣ್ಣುತೆರೆದಳು ಮತ್ತು ತನ್ನ ಪ್ರಜ್ಞೆಯನ್ನು ಪಡೆದುಕೊಂಡಳು. ಅವಳು ನಿರ್ಧಾರಿತ ಧ್ವನಿಯಲ್ಲಿ ತಾನು ಗುಜ್ಜಾರ ಯುವಕನನ್ನು ಮದುವೆಯಾಗುವುದಿಲ್ಲವೆಂದು ದೃಢೀಕರಿಸಿದಳು. ಇನ್ನುಮುಂದೆ ಸಹ ಅವಳು ಅವನೊಡನೆ ಯಾವುದೇ ಸಂಬಂಧವನ್ನಿಟ್ಟುಕೊಳ್ಳುವುದಿಲ್ಲ.

ಮಾರುದಿವಸ ಮಹೇಶ್ ಚಂದ್ರರು ಮನೆಗೆ ತೆರಳಿದರು. ತದನಂತರದಲ್ಲಿ ತಾನು ಗುಜ್ಜಾರಯುವಕನೊಡನೆ ಮದುವೆಯಾಗುವುದಿಲ್ಲವೆಂದು ದೃಢೀಕರಿಸಿ ನ್ಯಾಯಾಲಯದಲ್ಲಿ ಅರ್ಜಿನೋಂದಣಿ ಮಾಡಿದುದು ಗೊತ್ತಾಯಿತು. ಬೇಗನೇ ಅವಳು ಕ್ರಮಬದ್ಧವಾದ ಜೀವನವನ್ನು ಸಾಗಿಸಲು ಪ್ರಾರಂಭಿಸಿದಳು. ಆರು ತಿಂಗಳೊಳಗಾಗಿ ಆಕೆಯು ತನ್ನ ಪಂಗಡದ ಹುಡುಗನೊಡನೆ ಮದುವೆಯಾದಳು. ಅವತ್ತಿನಿಂದ ಅವಳು ಯೋಗ್ಯವಾದ ಮದುವೆ ಜೀವನವನ್ನು ಸಾಗಿಸುತ್ತಿದ್ದಳು. ಆಕೆಗೆ ಒಂದು ಮಗು ಇದೆ ಮತ್ತು ಆ ಕುಟುಂಬವು ಸಂತೋಷದ ಮತ್ತು ಮಂಗಳಕರವಾದ ಜೀವನವನ್ನು ಸಾಗಿಸುತ್ತಿದೆ.

ಮಹೇಶಚಂದ್ರ ಮತ್ತು ಆತನ ಪರಿವಾರವು ಡಾ.ಶ್ರೀಮಾಲಿಯವರ ಆಶೀರ್ವಾದಗಳನ್ನು ತಮ್ಮ ಜೀವನದಲ್ಲಿ ಹೇಗೆ ಮರೆಯಲು ಸಾಧ್ಯ. ನಿಜ ಹೇಳಬೇಕೆಂದರೆ ಅವರನ್ನು ಅವರು ದೇವರೇ ಎಂದು ನೋಡುವರು.

ಗೋರಖಪುರದ ಪ್ರಭುದಯಾಲ್ ಉಪಾಧ್ಯರು ಡಾ.ಶ್ರೀಮಾಲಿಯವರ ಸಮರ್ಪಿತ ಶಿಷ್ಯರಾಗಿದ್ದರು. ಅವರು ವೈಯಕ್ತಿಕವಾಗಿ ಜ್ಯೋತಿಷ್ಯಾಸ್ತ್ರ ಮತ್ತು ಇತರೆ ವಿಜ್ಞಾನಗಳನ್ನು ಕಲಿಯಲು ಯಾವತ್ತೂ

ಪ್ರಯತ್ನಿಸದಿದ್ದರೂ ಡಾ.ಶ್ರೀಮಾಲಿಯವರ ಭಾವೋದ್ದೀಪಿತವಾದ ಪ್ರಶಂಸಕರಾಗಿದ್ದರು. ಪ್ರತಿ ಎರಡುತಿಂಗಳ ನಂತರ ಅವರು ಡಾ.ಶ್ರೀಮಾಲಿಯವರಲ್ಲಿಗೆ ಭೇಟಿಕೊಟ್ಟು ಅವರೊಡನೆ ಕೆಲದಿನಗಳನ್ನು ಕಳೆಯುತ್ತಿದ್ದರು.

ಮಸ್ಸೂರಿಯಲ್ಲಿ ಅವರ ಮಗನು ಓದಿದನು. ಅವನು 12 ವರ್ಷದವನಾಗಿದ್ದನು ಆದರೂ ಅಸಾಧಾರಣ ಸಂಕೋಚಪ್ರವೃತ್ತಿಯವನಾಗಿದ್ದನು. ಆ ಸಂಕೋಚವು ಎಷ್ಟರಮಟ್ಟಿಗೆ ಹೋಗಿತ್ತೆಂದರೆ ಅವನು ಒಮ್ಮೆ ಹುಡುಗಿಯರನ್ನು ನೋಡಿದರೆ ತಲೆ ತಗ್ಗಿಸುತ್ತಿದ್ದನು. ಅವನಿಗೆ ದುಃಖಕರವಾದ ಪ್ರತ್ಯೇಕತೆಯೆನಿಸಿದ್ದ ಸಹಶಿಕ್ಷಣದ ಶಾಲೆಯಲ್ಲಿದ್ದನು. ಅವನು ಹೆಚ್ಚಾಗಿ ಮೌನವಹಿಸುತ್ತಿದ್ದನು.

ಬರಬರುತ್ತಾ ಅವನು ಕೆಟ್ಟನಿರಾಶದವನಾದನು. ಅವನು ತನ್ನಷ್ಟಕ್ಕೆ ತಾನೇ ದೂರ ಉಳಿದನು. ಅವನು ಸ್ನೇಹಿತರಲ್ಲಿ ಯಾರನ್ನೂ ಎಣಿಸಲಿಲ್ಲ, ಅವನು ಯಾರೊಡನೆಯೂ ಮಾತಾಡಲಿಲ್ಲ.

ಈ ಬದಲಾವಣೆಗಳು ಅವನ ಓದಿನ ಮೇಲೆ ದುಷ್ಪರಿಣಾಮವನ್ನು ಬೀರಿದವು. ಬೇಗನೇ ಅವನ ಜ್ಞಾಪಕ ಶಕ್ತಿಯು ದುರ್ಬಲಗೊಂಡಿತು. ಸಹಜವಾಗಿಯೇ ಅವನ ಹೆತ್ತವರು ತುಂಬಾ ವ್ಯಾಕುಲರಾದರು. ಅವನನ್ನು ಸಹಜಸ್ಥಿತಿಗೆ ತರಲು ಅವರ ಯೋಗ್ಯತೆಗೆ ಮೀರಿ ಪ್ರಯತ್ನಿಸಿದರು. ಆದರೂ ವಿಫಲಗೊಂಡರು. ಆ ಕೆಳದರ್ಜೆಯ ಮಗನ ಮಾನಸಿಕ ಪರಿಸ್ಥಿತಿಯನ್ನು ಸುಧಾರಿಸಲು ಅವರ ಪ್ರಯತ್ನಗಳೆಲ್ಲವೂ ಅಪ್ರಯೋಜನವೆಂದು ಸಾಬೀತಾದಾಗ, ಪ್ರಭುದಯಾಲರು ಅವನನ್ನು ಡಾ.ಶ್ರೀಮಾಲಿಯವರಲ್ಲಿಗೆ ಕರೆತಂದರು.

ಪ್ರಭುದಯಾಲರು ಮಗನ ಬಗ್ಗೆ ಎಲ್ಲಾವರದಿಯನ್ನು ಕೊಟ್ಟಾಗ ಡಾ.ಶ್ರೀಮಾಲಿಯವರು ಏನನ್ನೂ ಮಾತಾಡಲಿಲ್ಲ. ನಿಜಹೇಳಬೇಕೆಂದರೆ ಅವರು ಹುಡುಗನ ವರ್ತನೆಯನ್ನು ಗಮನಿಸುತ್ತಿದ್ದರು. ಅವರಿಗೂ ಸಹ ಹುಡುಗನು ಕೆಳಮಟ್ಟದ ಸಂಕೀರ್ಣದಲ್ಲಿ ಒದ್ದಾಡುತ್ತಿದ್ದಾನೆ ಎಂದನಿಸಿತು. ಇಲ್ಲದಿದ್ದರೆ ಬಹುಶಃ ಹುಡುಗನಿಗೆ ಅಂತಹ ಕುಂದು ತಂದಂತಹುದು ಏನಾದರೂ ಆಗಿರಬೇಕು. ಅದು ಅನುಮಾನವಿಲ್ಲದೆ ದುಃಖದಾಯಕವಾದ ಪ್ರವೃತ್ತಿಯು. ಅಂತಹ ಒಂದು ಸೀಮಾಬಂಧನದಲ್ಲಿ ಆಕ್ರಮಿತನಾದ ಅವನು ಸಮಾಜದಲ್ಲಿ ಏಳ್ಗೆಯಾಗಲು ಸಾಧ್ಯವಾಗುವುದಿಲ್ಲ.

ಮೂರನೆಯ ದಿನ ಹುಡುಗನನ್ನು ಡಾ.ಶ್ರೀಮಾಲಿಯವರು ತಮ್ಮ ಮುಂದೆ ಕೂತುಕೊಳ್ಳಲು ಹೇಳಿದರು. ಅವನನ್ನು ಸಮ್ಮೋಹನಗೊಳಿಸಿ ತಾನು ಏಕೆ ಸುಮ್ಮನಿರುವುದೆಂದು ಕೇಳಿದರು. ಆದರೆ ಹುಡುಗನು ತನ್ನ ಅಸಹಜ ವರ್ತನೆಗೆ ಯಾವುದೇ ದೃಢಕಾರಣವನ್ನು ಹೇಳಲಿಲ್ಲ.

ಹೇಗಾದರೂ ಡಾ.ಶ್ರೀಮಾಲಿಯವರು ಯಾವುದೇ ಕಾರಣಕ್ಕೆ ಈ ಒಂದು ಪ್ರವೃತ್ತಿಯು ತುಂಬಾ ದುಃಖಕರವು ಎಂಬ ಆಜ್ಞೆಯನ್ನು ನೆಟ್ಟರು. ಈ ಕುಗ್ಗುವಿಕೆಯನ್ನು ಆದಷ್ಟು ಬೇಗ ಜಯಿಸಬೇಕು. ಇನ್ನು ಮುಂದೆ ಹುಡುಗಿಯರ ಯಾವುದೇ ಸಂಕೋಚವನ್ನು ಎದುರಿಸುವುದಿಲ್ಲ, ಯಾವುದೇ ವಿಷಯಗಳನ್ನು ದೃಢ ಮತ್ತು ಸ್ಪಷ್ಟಭಾಷೆಯಲ್ಲಿ ಮುಂದಿಡುವನು. ಅವನು ಸ್ನೇಹಿತರನ್ನು ಗೆದ್ದು ಇನ್ನೂ ಹೆಚ್ಚು ಸ್ನೇಹಿತರು ಅವನಿಗಾಗುವರು.

ಹಾಗೆಯೇ ಡಾ.ಶ್ರೀಮಾಲಿಯವರು ಅವನ ಎರಡೂ ಬಹಿರ್ ಮತ್ತು ಅಂತರ್ಮನಸ್ಸುಗಳ ಮೇಲೆ ಅವನ ಜ್ಞಾಪಕಶಕ್ತಿ ಕೃಷವಾಗಿಯೇ ಇಲ್ಲ ಎಂಬ ಆಜ್ಞೆಯನ್ನು ಕೊಟ್ಟರು. ಇನ್ನು ಮುಂದೆ ಅವನು ಕಲಿತದ್ದನ್ನೆಲ್ಲಾ ಉಳಿಸಿಕೊಳ್ಳುವನು.

ಚಮತ್ಕಾರಿಕವಾಗಿ ಆ ಪೋರನು ಆ ದಿನದಿಂದ ಸ್ಪಷ್ಟವಾದ ಏಳ್ಗೆಯನ್ನು ತೋರಿಸಿದನು. ಮೂರು

ವರ್ಷಗಳು ಕಳೆದಿದ್ದಾವೆ. ಅವನು ತನ್ನ ತರಗತಿಯಲ್ಲಿ ಹೆಚ್ಚಿನ ವರ್ಗವನ್ನು ಪಡೆದಿದ್ದಾನೆಂದು ನಾನು ಅವನ ತಂದೆಯಿಂದ ತಿಳಿದುಕೊಂಡೆ.

ಅದು ಖಚಿತವಾಗಿ ಹೀಗೆ ಸಂಪೂರ್ಣವಾಗಿ ನಿರ್ಮೂಲನೆಗೊಂಡ ಕೆಳಮಟ್ಟದ ಸಂಕೀರ್ಣವಾಗಿತ್ತು. ಹುಡುಗನು ಈಗ ಸಾಮಾಜಿಕವಾಗಿ ಉಪಯೋಗವಾಗಿದ್ದಾನೆ ಅವನ ಹೆತ್ತವರಿಗೆ ಅದೇ ಬಿಗುಪು ಈಗಿಲ್ಲ.

ಅಲಹಾಬಾದಿನಲ್ಲಿ ಲಕ್ಷ್ಮಣ ಪ್ರಸಾದರು ಒಂದು ಶ್ರೀಮಂತ ಮತ್ತು ಗೌರವಾನ್ವಿತ ಪರಿವಾರಕ್ಕೆ ಸಂಬಂಧಿಸಿದವರಾಗಿದ್ದರು. ಅವರು ಮದುವೆಯಾಗಿ 15 ವರ್ಷಗಳಿಗಿಂತಲೂ ಹೆಚ್ಚಾಗಿತ್ತು ಆದರೂ ಅವರಿಗೆ ಮಕ್ಕಳಾಗಿರಲಿಲ್ಲ. ಅವರು ತುಂಬಾ ನಿರುತ್ಸಾಹದಲ್ಲಿದ್ದರು. ಗಂಡ ಹೆಂಡತಿಯರಿಬ್ಬರೂ ಬಹಳವೇ ವೈದ್ಯಕೀಯ ಪ್ರವೀಣರನ್ನು ಸಂದರ್ಶಿಸಿದರು. ಆ ಪ್ರವೀಣರ ಪ್ರಕಾರ ಅವರಿಬ್ಬರಲ್ಲಿ ಯಾವುದೇ ದೋಷವಿರಲಿಲ್ಲ ಮತ್ತು ಆದರೂ ಅವರು ಮಕ್ಕಳು ರಹಿತರಾಗಿ ಉಳಿದಿದ್ದರು. ಅವರ ಜೀವನ ಒಂದು ದುಃಖಕರವಾದ ಕಥೆಯಾಗಿತ್ತು.

ಈ ಮಧ್ಯೆ ಅವರ ಹೆಂಡತಿಯು ಬಹಳ ತಾಂತ್ರಿಕರನ್ನು ಕಂಡು ಅವರು ಹೇಳಿದಂತಹ ಎಲ್ಲಾ ಪೂಜೆಗಳನ್ನೂ ಮಾಡಿದರು. ಈ ವ್ಯಾಯಾಮವು ಅವರಿಗೆ ಮಕ್ಕಳನ್ನು ಕೊಡದಿದ್ದಾಗ, ಇದು ಅವರಲ್ಲಿ ಒಂದು ಮಟ್ಟದ ಕೆಳಮಟ್ಟ ಸಂಕೀರ್ಣತೆಯನ್ನು ತಂದಿತು.

ಕೊನೆಯ ಆಶ್ರಯವೆಂದು ಅವರು ಜೋಧಪುರದಲ್ಲಿ ಡಾ.ಶ್ರೀಮಾಲಿಯವರಲ್ಲಿಗೆ ಬಂದರು. ಅವರು ಸಂಪೂರ್ಣ ಕಥೆಯನ್ನು ವಿವರಿಸಿದರು. ಡಾ.ಶ್ರೀಮಾಲಿಯವರು ಲಕ್ಷ್ಮಣ ಪ್ರಸಾದರ ಹೆಂಡತಿಯು ತಾವು ಗರ್ಭನಿಲ್ಲಿಸಿಕೊಳ್ಳಲು ಮತ್ತು ಮಗುವಿಗೆ ಜನ್ಮಕೊಡಲು ಸಮರ್ಥರಾಗಿಲ್ಲವೆಂದು ಮೊದಲಿನಿಂದಲೂ ಗ್ರಹಿಸಕೊಂಡಿದ್ದಾರೆಂದು ತಿಳಿದುಕೊಳ್ಳಲು ಬಹಳ ಸಮಯ ತೆಗೆದು ಕೊಳ್ಳಲಿಲ್ಲ. ಈ ಭಯವು ತುಂಬಾ ಆಳವಾಗಿ ಅವರ ಮನಸ್ಸಿನಲ್ಲಿ ಕೂತುಕೊಂಡಿದ್ದರಿಂದ ಈ ಜವಾಬ್ದಾರಿಗೆ ಅವರು ಎಲ್ಲಾ ರೀತಿಯಿಂದಲೂ ತಟಸ್ಥರಾಗಿಯೇ ಉಳಿದರು. ಕೆಲವು ವರ್ಷಗಳು ತಾವು ಗರ್ಭಧಾರಣೆ ಮಾಡದಿದ್ದಾಗ ತಮ್ಮ ಅದೃಷ್ಟದಲ್ಲಿ ಬಂಜೆ ಜೀವನವು ಉಳಿದಿದೆ ಎಂದು ನಿರ್ಧರಿಸಿದ್ದರು. ತಾವು ಹುಟ್ಟಿದಾಗಲೇ ಬಂಜೆಯಾಗಿ ಉಳಿಯಲಿಕ್ಕೆ ಎಂಬ ವಿಚಾರವು ಅವರಲ್ಲಿ ಆಳವಾಗಿ ಬೇರೂರಿದ್ದರಿಂದ ನಂತರದ ಪ್ರಯತ್ನಗಳಾದ ಪೂಜೆಗಳು, ಉಪವಾಸಗಳು ಮತ್ತು ವೈದ್ಯಕೀಯ ಚಿಕಿತ್ಸೆಗಳ ಪ್ರಯತ್ನಗಳು ಫಲಿಸಲಿಲ್ಲ.

ಆ ದಿನಗಳಲ್ಲಿ ಒಂದು ದಿನ ಡಾ.ಶ್ರೀಮಾಲಿಯವರು ಅವರನ್ನು ಅವರ ಗಂಡನ ಎದುರಿಗೆ ಸಮ್ಮೋಹನಗೊಳಿಸಿದರು. ಅವರು ಆಕೆಗೆ ಹಲವಾರು ಪ್ರಶ್ನೆಗಳನ್ನು ಕೇಳಿದರು. ಆಕೆಯು ತಾನು ಒಮ್ಮೆ ಒಬ್ಬ ಹೆಂಗಸು ಮಗುವಿಗೆ ಜನ್ಮ ಕೊಡುತ್ತಿರುವುದನ್ನು ಗಮನಿಸುದುದಾಗಿ ಹೇಳಿದಳು. ಆ ಹೆಂಗಸು ಚಿತ್ರಹಿಂಸೆಗೊಳಗಾಗಿ ಕಿರುಚುವುದು, ಹೆರಿಗೆಯಲ್ಲಿ ಮನೋವೇದನೆಯಿಂದ ನರಳುವುದನ್ನು ನೋಡಿದ್ದಳು. ಈ ವಿಧಾನವು ಆಕೆಗೆ ಬಹಳವೇ ತೊಂದರೆ ಕೊಟ್ಟಿತ್ತು. ಅದು ತನ್ನ ಅಂತರ್ತನದಲ್ಲಿ ಆಳವಾಗಿ ಅಚ್ಚು ಒತ್ತಿದ ತಗ್ಗಲಾರದ ಜಿಗುಪ್ಸೆಯಾಗಿ ಬೆಳೆದುನಿಂತಿತ್ತು. ಆಕೆಯು ಎಷ್ಟು ಹೆದರಿದ್ದಳೆಂದರೆ ಗರ್ಭ ಧಾರಣೆಯನ್ನು ನಿವಾರಿಸಲು ಗರ್ಭನಿರೋಧಕ ಮಾತ್ರೆಗಳ ಮೊರೆ ಹೋಗಿದ್ದಳು.

ಸ್ವಲ್ಪ ವರ್ಷಗಳ ನಂತರ, ಯಾವಾಗ, ಆಕೆಗೆ ಮಗು ಬೇಕಾಗಿದ್ದಾಗ, ಆ ಹೂತುಕೊಂಡ ಭಯವು ಗರ್ಭನಿರೋಧಕಗಳು ಈಗಾಗಲೇ ತುಂಬಾ ಹಾನಿಯನ್ನು ಮಾಡಿದ್ದವು. ಅವರು ಗರ್ಭಧಾರಣೆ

ಮಾಡುವುದಕ್ಕೆ ಶಕ್ತಿ ಮೀರಿ ಪ್ರಯತ್ನಿಸಿದುದರಲ್ಲಿ ಅನುಮಾನವಿಲ್ಲ, ಆದರೆ ವಿಫಲಗೊಂಡರು. ಏಕೆಂದರೆ ಅಂತರ್ಮನವು ಅಂತಹ ಒಂದು ಆಲೋಚನೆಯ ವಿರುದ್ಧ ಸ್ಥಿರವಾಗಿ ಉಳಿದುಕೊಂಡಿತ್ತು.

ಡಾ.ಶ್ರೀಮಾಲಿಯವರು ಆಕೆಯು ಸಮ್ಮೋಹನ ನಿದ್ರೆಯಲ್ಲಿ ತಿಳಿಸಿರುವ ಯಾವುದೇ ವಿಚಾರಗಳನ್ನು ಆಕೆಗೆ ತಿಳಿಸದಿರಲು ಲಕ್ಷ್ಮಣಪ್ರಸಾದರಿಗೆ ಎಚ್ಚರಿಸಿದರು. ಆಕೆಯನ್ನು ಈಗ ಅಸಮ್ಮೋಹನಗೊಳಿಸಿದರು. ಆಕೆಗೆ ತಾನು ಸಮ್ಮೋಹನ ಗೊಂಡಿದ್ದು ಗೊತ್ತಾಗಲೇ ಇಲ್ಲ.

ಅವರು ಆಕೆಯನ್ನು ಮರುದಿನ ಮತ್ತೊಮ್ಮೆ ಸಮ್ಮೋಹನಗೊಳಿಸಿದರು. ಆಕೆಯು ಮಗುವನ್ನು ಹೇರುವ ಸಾಮರ್ಥ್ಯವುಳ್ಳವಳು ಮತ್ತು ಮುಂದಿನ ನಾಲ್ಕು ತಿಂಗಳಲ್ಲಿ ಆಕೆಯು ಗರ್ಭಧಾರಣೆ ಮಾಡಬೇಕು ಎಂಬ ಆಜ್ಞೆಯನ್ನು ಆಕೆಯಲ್ಲಿ ನೆಟ್ಟರು. ಈ ವಿಧಾನದಲ್ಲಿ ಆಕೆಯು ಯಾವುದೇ ಸಮಸ್ಯೆ ಅಥವಾ ಕಷ್ಟವನ್ನು ಎದುರಿಸಬೇಕಾಗಿಲ್ಲ.

ಇಂದು ಆ ಜೋಡಿಯು ಬಹಳ ಚೆನ್ನಾಗಿದೆ. ಅವರ ಸಂತೋಷಕ್ಕೆ ಒಬ್ಬ ಮಗ ಮತ್ತು ಒಬ್ಬ ಮಗಳು ಶೋಭೆಯನ್ನು ತಂದಿದ್ದಾರೆ.

ಈ ಕ್ಷೇತ್ರದಲ್ಲಿ ಅಲ್ಲಿಗೆ ಬರುವವರಿಂದ ಬಹಳ ಮತ್ತು ವಿವಿಧ ತರಹದ ನಿದರ್ಶನಗಳನ್ನು ಪಡೆದುಕೊಳ್ಳಬಹುದು. ಆ ನಿದರ್ಶನಗಳ ಸತ್ಯತೆಗಳನ್ನು ಪತ್ರಗಳೂ ಸಮರ್ಥಿಸುವವು.

ಈ ಮುಂಬರುವ ವೃತ್ತಾಂತಗಳನ್ನು ಡಾ.ಶ್ರೀಮಾಲಿಯವರಿಗೆ ಕೃತಜ್ಞತಾಪೂರ್ವಕವಾಗಿ ಬರೆದಂತಹ ಪತ್ರಗಳಿಂದ ತೆಗೆದುಕೊಂಡಿರುವೆನು. ಈ ಪತ್ರಗಳು ಬಹಳಷ್ಟು ಕಷ್ಟಕರ ರೋಗಿಗಳ ಆಳವಾಗಿ ಬೇರೂರಿರುವಂತಹ ಬಿಕ್ಕಟ್ಟುಗಳನ್ನು ಅವರು ಎಷ್ಟು ಪರಿಣಾಮಕಾರಿಯಾಗಿ ವಾಸಿಮಾಡಿದ್ದಾರೆಂದು ಒತ್ತಿಹೇಳುತ್ತವೆ.

ಒಬ್ಬ ದೆಹಲಿಗೆ ಸಂಬಂಧಿಸಿದ ಮೇಲಾಧಿಕಾರಿಗಳ ಹೆಂಡತಿ. ಆಕೆಯು ತಾನು ಒಂದು ದೊಡ್ಡಕುಟುಂಬದಿಂದ ಬಂದಿರುವವಳು. ತಾನು ಅಹಂಕಾರಿಯಾದ ಕಾರಣ ಗಂಡನೊಡನೆ ಆಕೆ ಕಷ್ಟಕರವಾದ ಸಂಬಂಧವನ್ನೂ ವೃದ್ಧಿಸಿಕೊಂಡಿದ್ದಳು. ಆಕೆಯು ತನ್ನ ಗಂಡನಲ್ಲಿ ಸಂಪೂರ್ಣ ಅಗೌರವ ಹೊರತಾಗಿ ಬೇರೇನನ್ನೂ ಹೊಂದಿರಲಿಲ್ಲ. ಕೆಲವು ಸಾರಿ ಸೇವಕರೆದುರು ಮತ್ತು ಅತಿಥಿಗಳೆದುರಿನಲ್ಲಿ ಗಂಡನ ತೇಜೋಭಂಗ ಮಾಡುತ್ತಿದ್ದಳು. ಸ್ವಲ್ಪ ಕಾರಣ ಅಥವಾ ಕಾರಣವೇ ಇಲ್ಲದೆ ಆಕೆಯು ಸೇವಕರನ್ನು ಬಯ್ಯುವಿದರಲ್ಲಿ ಸ್ಫುಟವಲ್ಲದ ಸಂತೋಷವನ್ನು ಕಾಣುತ್ತಿದ್ದಳು.

ಒಂದು ದಿನ ಆ ದೆಹಲಿಯ ಅಧಿಕಾರಿಯು ಡಾ.ಶ್ರೀಮಾಲಿಯವರನ್ನು ಕಂಡರು. ಒಂದು ದಿನವೂ ತಾವು ಗಂಡಹೆಂಡತಿಯರೆಂದು ತಮಗೆ ಅನ್ನಿಸಲೇ ಇಲ್ಲ ಎಂದು ಒಪ್ಪಿಸಿದರು. ತಾವಿಬ್ಬರೂ ಯಾವಾಗಲೂ ಎದುರಾಳಿಗಳ ಹಾಗೆ ನಿಲ್ಲುತ್ತಿದ್ದರು. ಇದರಿಂದ ಪರಿಣಮಿಸುವ ಪ್ರತಿಕೂಲವಾದ ಧಕ್ಕೆಯಿಂದ ತಾವು ಹೊಂದಿರುವ ದೊಡ್ಡಕಛೇರಿಯ ಮೇಲೆ ಖಚಿತವಾದ ಸಮಾಜ ಅಪಕೀರ್ತಿಯೊಂದಿಲ್ಲದಿದ್ದರೆ ತಾವು ಯಾವತ್ತೋ ವಿವಾಹ ಬಂಧನದಿಂದ ಹೊರಬರುತ್ತಿದ್ದರು.

ಡಾ.ಶ್ರೀಮಾಲಿಯವರು ಅವರ ಹೆಂಡತಿಯೊಡನೆ ಮಾತನಾಡಿದರು. ಶ್ರೀಮಂತ ತಂದೆಯ ಮಗಳು ಹೊಂದಿದಂತಹ ಅರ್ಹತೆಗೆ ಅವರು ಯಾವತ್ತೂ ಆಕೆಗೆ ಗೌರವವನ್ನು ಕೊಡಲಿಲ್ಲವಾದ್ದರಿಂದ ಆತನನ್ನು ಇಷ್ಟಪಡುವುದಿಲ್ಲವೆಂದು ಆಕೆ ಹೇಳಿದಳು. ಆಕೆಯು ತನ್ನನ್ನು ಬಿಡಲಾರದಂತಹ ಅಹಂಕಾರ ಮತ್ತು ಸೊಕ್ಕಿನಿಂದ ತನ್ನ ಗಂಡನ ಮೇಲೆ ಪ್ರಭಾವ ತೋರಬಹುದು ಎನ್ನುವ ಭಾವನೆಯನ್ನು ಉದ್ಭವಿಸಿತ್ತು.

ಡಾ.ಶ್ರೀಮಾಲಿಯವರು ಆ ಹೆಂಗಸನ್ನು ಸಮ್ಮೋಹನಗೊಳಿಸಿ ಆಕೆಯ ಗಂಡನು ಆಕೆಯನ್ನು ಆಳವಾಗಿ ಪ್ರೀತಿಸುತ್ತಿದ್ದಾನೆ ಎಂಬ ಆಜ್ಞೆಯನ್ನು ಬಹಿರ್ಮನಸ್ಸು ಮತ್ತು ಅಂತರ್ಮನಸ್ಸುಗಳ ಮೇಲೆ ನೆಟ್ಟರು. ಆಕೆಯನ್ನು ಅವರು ತುಂಬಾ ಗೌರವಿಸುತ್ತಿದ್ದಾರೆ. ಅದೇ ತರಹದ ಪ್ರೀತಿ ಆಕೆಗೂ ತನ್ನ ಗಂಡನ ಮೇಲೆ ಇರಬೇಕು. ಅಹಂಕಾರ ಮತ್ತು ಸೊಕ್ಕು ಕೆಲಸಮಾಡುವುದಿಲ್ಲ. ಇಂದಿನಿಂದ ಆಕೆಯು ತನ್ನಷ್ಟಕ್ಕೆ ತಾನೇ ಒಳ್ಳೆನಡತೆಯ ಮನೆಹೆಂಗಸಾಗಿ ನಡೆದುಕೊಳ್ಳುವಳು ಮತ್ತು ಎಲ್ಲಾ ರೀತಿಯಿಂದಲೂ ಗಂಡನನ್ನು ಸಂತೈಸಲು ಪ್ರಯತ್ನಿಸುವಳು.

ಅಂದಿನಿಂದ ಆಕೆಯು ನವೀನ ಶಾಂತಿ ಮತ್ತು ಆಹ್ಲಾದತೆಯಲ್ಲಿ ನೆಲಗೊಂಡಿದ್ದಾಳೆ. ಈಗ ಮುಖ್ಯವಾದ ಒಂದು ಯಾತ್ರಾಸ್ಥಳವಾಗಿರುವ ಜೋಧಪುರಕ್ಕೆ ಅವರಿಬ್ಬರೂ ಪ್ರತಿ ಆರು ತಿಂಗಳಿಗೊಮ್ಮೆ ಭೇಟಿಕೊಡುತ್ತಾರೆ. ಡಾ.ಶ್ರೀಮಾಲಿಯವರ ಆಶೀರ್ವಾದವನ್ನು ಪಡೆಯಲು ಉತ್ಸುಕರಾಗಿ ಮುಂದುವರಿದಿದ್ದಾರೆ.

ನೈನಿತಾಲ್‌ನ ಮುನ್ನಿಲಾಲ್ ವರ್ಮ ಅವರಿಂದ ಅಂತಹದೇ ಆದ ಡಾ.ಶ್ರೀಮಾಲಿಯವರ ಅದ್ವಿತೀಯ ಶಕ್ತಿಗಳ ಸಾಕ್ಷ್ಯ ಸಿಗುತ್ತದೆ. ಅವರ ಹೆಂಡತಿಯು ಅವರು ಬೇರೆ ಹೆಂಗಸಿನೊಡನೆ ಸಂಬಂಧವಿಟ್ಟುಕೊಂಡಿದ್ದಾರೆನ್ನುವ ಅನುಮಾನದಲ್ಲಿಯೇ ಇದ್ದರು. ಆಕೆಯು ಅವರ ಮೇಲೆ ಯಾವಾಗಲೂ ಸಿಟ್ಟು ಮತ್ತು ದ್ವೇಷದಿಂದ ವೋರೆ ಮುರುಕಿಸುತ್ತಿದ್ದಳು. ಆ ಮನೆಯು ಅಧೋಭುವನದ ನರಕದ ಸ್ಥಿತಿಗೆ ಬಂದಿಳಿದಿತ್ತು.

ಅವರಿಗೆ ಬೆಳೆದುನಿಂತ ಗಂಡು ಮಕ್ಕಳು ಸೊಸೆಯರು ಮತ್ತು ಮೊಮ್ಮಕ್ಕಳು ಸಹ ಇದ್ದರು ಆದಾಗ್ಯೂ ತನ್ನೊಡನೆ ಧರ್ಮದ್ರೋಹವನ್ನು ಬಗೆದುದಾಗಿ ಎಲ್ಲರ ಎದುರಿನಲ್ಲೇ ತನ್ನ ಗಂಡನನ್ನು ನಿಂದಿಸುತ್ತಿದ್ದಳಾಕೆ. ಯಾವಾಗ ಮತ್ತು ಯಾರ ಎದುರಿನಲ್ಲಿ ತನ್ನ ಮಾಮೂಲು ಅಶಿಷ್ಟತೆಯಲ್ಲಿ ದುರ್ವರ್ತಿಸುವಳೆಂದು ಯಾರಿಗೂ ಊಹಿಸಲಾಗುತ್ತಿರಲಿಲ್ಲ. 50 ವರ್ಷಗಳಾಗಿದ್ದ ಆಕೆಯ ಗಂಡನು ತಾನು ಈ ವಯಸ್ಸಿನಲ್ಲಿ ಹುಡುಗಿಯರ ಹಿಂದೆ ಹೋಗುವನೆಂದು ಎಣಿಸಲು ನಗೆಪಾಟಲು ಎಂದು ಎಷ್ಟೋ ರೀತಿಯಲ್ಲಿ ಮನವೊಲಿಸಲು ಪ್ರಯತ್ನಿಸಿದರು. ಆದರೆ ಅವರ ಹೆಂಡತಿ ಅವರನ್ನು ನಂಬಲಿಲ್ಲ. ಸೊಸೆಯಂದಿರ ಬಗ್ಗೆ ಮಾತನಾಡುವ ಹಾಗಿಲ್ಲ, ಮಕ್ಕಳೂ ಸಹ ಗೇಲಿಮಾಡುತ್ತಿದ್ದರು. ಅವರ ಜೀವನವು ನಿರ್ಗತಿಕವಾಗಿತ್ತು.

ಒಂದುದಿನ ಡಾ.ಶ್ರೀಮಾಲಿಯವರು ನೈನಿತಾಲಕ್ಕೆ ಹೋದರು. ಮುನ್ನಿಲಾಲರು ಅವರನ್ನು ಕಂಡು ತಮ್ಮ ಕಥೆಯನ್ನು ಹೇಳಿದರು. ತಿಳಿಯಪಡಿಸಿದ ಹಾಗೆ ಅವರು ತಮ್ಮ ಹೆಂಡತಿಯೊಡನೆ ಮರುದಿನ ಡಾ.ಶ್ರೀಮಾಲಿಯವರಲ್ಲಿಗೆ ಬಂದರು.ಡಾ.ಶ್ರೀಮಾಲಿಯವರು ಆಕೆಯನ್ನು ಸಮ್ಮೋಹನಗೊಳಿಸಿ ತಾನು ಅಂದವಾದ ಆಕರ್ಷಣೆಯಲ್ಲೇ ಇರುವಳು ಮತ್ತು ತಮ್ಮ ಗಂಡನಾದ ಶ್ರೀವರ್ಮಾರವರು ತಮಗೆ ಅವರಿಗೆ ಅತ್ಯಂತ ಮೋಹಗೊಳ್ಳುವವರಾಗಿದ್ದಾರೆ ಎಂಬ ಆಜ್ಞೆಯನ್ನು ನೆಟ್ಟರು. ಅವರು ಬೇರೆಯಾವ ಹೆಂಗಸನ್ನೂ ಪ್ರೀತಿಸಲಿಲ್ಲ. ಅವರಿಗೆ ಬೇರೆಯಾವ ಹೆಂಗಸಿನೊಡನೆ ಸಂಬಂಧವೂ ಇಲ್ಲ.

ಈಗ ಅವರು ಆಕೆಯನ್ನು ಅಸಮ್ಮೋಹನಗೊಳಿಸಿದರು. ಶ್ರೀವರ್ಮಾರವರು ನಿಯಮಿತವಾಗಿ ತಿಳಿಸಿದಂತೆ ತಮ್ಮ ಹೆಂಡತಿಯಲ್ಲಿ ಗಮನೀಯವಾದ ಬದಲಾವಣೆಯನ್ನು ಕಂಡರು. ಅವರು ಸಂಪೂರ್ಣ ಶಾಂತಿಯುತವಾದ ಜೀವನವನ್ನು ಸಾಗಿಸುತ್ತಿದ್ದಾರೆ. ಈಗ ಆಕೆಯು ಒಮ್ಮೆ ತನ್ನ ಗಂಡನನ್ನು ತಾನು ಹೀಗೆಲ್ಲಾ ನಿಂದಿಸುತ್ತಿದ್ದಳೆಂಬುದನ್ನು ನಂಬುವುದಿಲ್ಲ.

ಈಗ ಎರಡು ವರ್ಷಗಳು ಕಳೆದಿವೆ. ಈಗ ತಮ್ಮೊಡನೆ ಯಾವತ್ತಾದರೂ ಅಗಲಿಕೆ ಇತ್ತು ಎನ್ನುವುದು ಹೆಂಡತಿಗೆ ಜ್ಞಾಪಕವೂ ಇಲ್ಲ.

ಕಾನ್‌ಪುರದಲ್ಲಿ ಒಂದು ತಿರುವುಮುರುವಿನ ಅಧ್ಯಯನವನ್ನು ಕಂಡೆವು. ಈ ವಿಷಯದಲ್ಲಿ ಕಿಷನ್ ಲಾಲ್ ಮಾಲುರವರು ಅವರ ಹೆಂಡತಿಯ ಧರ್ಮಪಾಲನೆಯನ್ನು ಅನುಮಾನಿಸಿದರು. ನಿಜವೆಂದರೆ ಆಕೆಯು ಯಾವುದೇ ವ್ಯಕ್ತಿಯೊಡನೆ ಸಂಬಂಧವಿಲ್ಲದೆ ಮುಗ್ಧೆಯಾಗಿದ್ದಳು. ಕೆಲವುಸಾರಿ ಆಕೆಯು ಯಾರೊಡನೆಯೋ ಕಾನೂನು ಬಾಹಿರದ ಸಂಬಂಧಕ್ಕೆ ಆಕೆಯ ತೌರುಮನೆಯಲ್ಲಿ ಹೆತ್ತವರ ಮುಂದೆ ನಿಂದಿಸುತ್ತಿದ್ದರು. ತಾವು ಕೆಲಸದ ಮೇಲೆ ಮನೆಯಲ್ಲಿಲ್ಲದಾಗ ಒಬ್ಬ ಮನುಷ್ಯ ಕಾನ್‌ಪುರದಿಂದ ಬಂದು ಆಕೆಯನ್ನು ನೋಡುವನೆಂದು ಅವರು ಅನುಮಾನಿಸಿದರು.

ಆ ಹೆಂಗಸು ತಮ್ಮ ಮುಗ್ಧತೆಯನ್ನು ದೃಢೀಕರಿಸಲು ವಿಶ್ವಪ್ರಯತ್ನ ಮಾಡಿದರು. ತಮ್ಮನ್ನು ಬೀಗಹಾಕಿದ ಮನೆಗೆ ಮೀಸಲಿಟ್ಟರೂ ಪರವಾಗಿಲ್ಲವೆಂದು ಅವರು ಹೇಳಿದರು. ತಾವು ಪೂರ್ಣದಿನ ಕಣ್ಣಾವಲಿನಲ್ಲಿರಲೂ ತಯಾರಾಗಿದ್ದರು. ಆದರೆ ಆ ವ್ಯಕ್ತಿಯು ಆಕೆಯನ್ನು ನಂಬಲು ತಯಾರಾಗಿಯೇ ಇರಲಿಲ್ಲ.

ಕ್ರಮೇಣವಾಗಿ ಪರಿಸ್ಥಿತಿ ಕೆಟ್ಟದಾಯಿತು. ಕೆಲವುಸಾರಿ ಅವನು ಹೊಡೆದಾಟಕ್ಕೂ ಮಾರು ಹೋದನು. ಮನೆಯಲ್ಲಿ ಶಾಂತಿ ಇರಲಿಲ್ಲ. ಅವರಿಗೆ ಇಬ್ಬರು ಗಂಡುಮಕ್ಕಳಿದ್ದರು. ಆತನು ಆ ಇಬ್ಬರು ಮಕ್ಕಳನ್ನೂ ಹೊಡೆಯುತ್ತಿದ್ದನು. ಕೆಲವುಸಾರಿ ಈ ಮಕ್ಕಳನ್ನು ಯಾರೋ ಉತ್ಪನ್ನ ಮಾಡಿದ್ದಾರೆಂದು ಹೇಳುತ್ತಿದ್ದನು.

ಹೆಂಗಸು ಆತ್ಮಹತ್ಯೆಯ ಮೂಲಕ ತನ್ನ ಜೀವವನ್ನು ಕೊನೆಗೊಳಿಸಲು ಗಂಭೀರವಾಗಿ ಯೋಚಿಸಿದಳು. ಆದರೆ ಅವರ ಇಬ್ಬರ ಚಿಕ್ಕ ಮಕ್ಕಳ ಕಾಳಜಿಯು ಅವರ ಜೀವನವನ್ನು ಕೊನೆಗೊಳಿಸಲು ತಡೆಯಾಗಿತ್ತು.

ಆಗಿನ ದಿನಗಳ ಒಂದು ದಿನದಲ್ಲಿ ಕಾನ್ಪುರವು ಡಾ.ಶ್ರೀಮಾಲಿಯವರು ಅಧ್ಯಕ್ಷತೆ ವಹಿಸಿರುವಂತಹ ಜೋತಿಷ್ಯರ ಸಮ್ಮೇಳನವನ್ನು ಆತಿಥೇಯಿಸಿತ್ತು. ಆ ಹೆಂಗಸು ಅವರನ್ನು ಕಾಣಲು ನಿರ್ಧರಿಸಿದರು.

ಆಕೆಯು ತನ್ನ ವೇದನೆಯನ್ನು ಡಾ.ಶ್ರೀಮಾಲಿಯವರಲ್ಲಿ ವಿವರಿಸಿದಳು. ಈ ವೇದನೆಯು ಹೀಗೆಯೇ ಮುಂದುವರಿದಲ್ಲಿ ತಮಗೆ ಆತ್ಮಹತ್ಯೆ ಮಾಡಿಕೊಳ್ಳದೆ ಬೇರೆ ದಾರಿಯೇ ಇಲ್ಲ ಎಂದು ಸಹ ಹೇಳಿದಳು.

ಡಾ.ಶ್ರೀಮಾಲಿಯವರು ಅವರನ್ನು ಕರೆದುಕೊಂಡು ಬರಲು ಹೇಳಿದರು. ತಮ್ಮೊಡನೆ ತಮ್ಮ ಗಂಡ ಬರುವರೇ ಎಂದು ವಿಸ್ಮಯಗೊಂಡಳು. ಏಕೆಂದರೆ ಅವರು ತಾವು ಡಾ.ಶ್ರೀಮಾಲಿಯವರನ್ನು ಪಾಲಿಸಿರುವೆನೆಂದು ತಿಳಿಯುವರು. ಅದಕ್ಕಾಗಿ ಡಾ.ಶ್ರೀಮಾಲಿಯವರು ಅವರ ಗಂಡನ ಹೆಸರು ಮತ್ತು ವಿಳಾಸವನ್ನು ತೆಗೆದುಕೊಂಡು ಮರುದಿನ ಅವರ ಓರ್ವ ಶಿಷ್ಯಂದಿರನ್ನು ಅವರನ್ನು ಕರೆದುಕೊಂಡು ಬರಲು ಕಳುಹಿಸುವುದಾಗಿ ಹೇಳಿದರು. ಅವರ ಶಿಷ್ಯನಿಗೆ ಕೇವಲ ಸಂದೇಶವನ್ನು ಮಾತ್ರ ತಿಳಿಸಲು ಹೇಳಿದರು. ಆತನು ತನ್ನಷ್ಟಕ್ಕೆ ತಾನೇ ಬರುವನು. ಡಾ.ಶ್ರೀಮಾಲಿಯವರು ಆತನ ಬರುವಿಕೆಗೆ ಈಗಾಗಲೇ ಸ್ಪಷ್ಟವಾದ ಹೆಜ್ಜೆಯನ್ನು ತೆಗೆದುಕೊಂಡಿದ್ದರು.

ಮರುದಿನ ಗಂಡಹೆಂಡತಿಯರಿಬ್ಬರೂ ಡಾ.ಶ್ರೀಮಾಲಿಯವರನ್ನು ಕಾಣಲು ಬಂದರು. ಅವರು ತಮ್ಮ ಹೆಂಡತಿಯು ಸಡಿಲ ನಡತೆಯವಳು ಎಂದು ಒತ್ತಿಹೇಳಿದರು. ಆಕೆಯು ತನ್ನ ಬಾಲ್ಯ ಸ್ನೇಹಿತನೊಬ್ಬನೊಂದಿಗೆ ಸಂಬಂಧವಿಟ್ಟುಕೊಂಡಿದ್ದಾಳೆ, ನಿಜವಾಗಿ ಆ ಇಬ್ಬರು ಮಕ್ಕಳೂ ಆಕೆಯ ಆ ಸ್ನೇಹಿತನವೇ.

ಡಾ.ಶ್ರೀಮಾಲಿಯವರು ಆತನನ್ನು ಸಮ್ಮೋಹನಗೊಳಿಸಿ ಆತನ ಹೆಂಡತಿಯು ತಮಗೇ ಸತ್ಯವಾಗಿ ಮತ್ತು ಸಂಪೂರ್ಣವಾಗಿ ವಿಧೇಯಳಾಗಿದ್ದಾಳೆ. ಬೇರೆ ಯಾವ ಮನುಷ್ಯನೂ ಆಕೆಯ ಜೀವನದಲ್ಲಿ ಬಂದಿಲ್ಲ. ತಾವೇ ಆ ಇಬ್ಬರು ಮಕ್ಕಳ ನಿಜವಾದ ತಂದೆ ಎಂದು ಸಲಹೆಯನ್ನು ಆಜ್ಞಾಪಿಸಿದರು.

ಆಗ ಸಮ್ಮೋಹನದಿಂದ ಹೊರತಂದರು, ಅದು ಆತನ ಜೀವನವನ್ನು ಸಂಪೂರ್ಣವಾಗಿ ಬದಲಾಯಿಸಿತು. ಆ ಕುಟುಂಬವು ಡಾ.ಶ್ರೀಮಾಲಿಯವರನ್ನು ನೋಡಿದ ದಿನದಿಂದ ಯಾವುದೇ ಜಗಳವನ್ನು ಕಂಡಿಲ್ಲ.

ಸಮ್ಮೋಹಕರಿಗೆ ಪ್ರಯತ್ನವು ಅಪೂರ್ವವೆನಿಸುವುದಿಲ್ಲ. ಅವರು ತಮ್ಮಷ್ಟಕ್ಕೆ ತಾವೇ ಅಂತಹ ವ್ಯಾಯಾಮಗಳನ್ನು ಅಭ್ಯಾಸಿಸಬಹುದಿತ್ತು ಎಂಬುದು ನಿಜ. ಆದರೆ ಅವರ ವಿಫಲಕ್ಕೆ ಸರಳಕಾರಣವೆಂದರೆ ಆ ವ್ಯಕ್ತಿಯನ್ನು ಅವರು ಸಂಪೂರ್ಣವಾಗಿ ಸಮ್ಮೋಹಿಸಲಾಗುವುದಿಲ್ಲ, ಸಾಧಾರಣವಾಗಿ ಈ ಒಂದು ಕೊರತೆಯು ಅವರ ದೀರ್ಘ ವಿಫಲಕ್ಕೆ ಕಾರಣವಾಯಿತು. ಸಂಪೂರ್ಣವಾಗಿ ಹತೋಟಿಗೆ ಬಂದ ಮನಸ್ಸು ಮಾತ್ರ ಸಮ್ಮೋಹಕನಿಗೆ ಹೀಗೆ ಕೆಲಸ ಮಾಡುವುದು.

ಬಾಬ ಪ್ರಜ್ಞಾನಂದರು ಹರಿದ್ವಾರದಲ್ಲಿ ಒಂದು ಪ್ರಖ್ಯಾತ ಆಶ್ರಮವನ್ನು ನಡೆಸುತ್ತಿದ್ದರು. ಅದು ಅಪರಿಮಿತವಾದ ಯಶಸ್ವೀ ಆಶ್ರಮವಾಗಿತ್ತು. ಹಾಗೆಯೇ ಆಶ್ರಮದ ವಿನಯೋಗದಲ್ಲಿ ಬಂದ ಹೇರಳವಾದ ಧನಸಂಪತ್ತು ಆಶ್ರಮದ ಬಹಳ ಶಿಷ್ಯರನ್ನು ಬಾಬರವರ ಮೇಲೆ ಈರ್ಷ್ಯೆಪಡುವ ಹಾಗೆ ಮಾಡಿತ್ತು.

ಸಂಪೂರ್ಣ ಆಶ್ರಮವನ್ನೇ ತನ್ನ ಹತೋಟಿಗೆ ತೆಗೆದುಕೊಳ್ಳಲು ಹೊಂಚು ಹಾಕಿರುವಂತಹ ಒಬ್ಬ ನಿರ್ದಿಷ್ಟವಾದ ಕಪಟ ಶಿಷ್ಯನಿದ್ದನು. ಅವನ ದುಷ್ಕೃತ್ಯದ ಹೊಂಚಿನಲ್ಲಿ ಅವನು ಯಶಸ್ವಿಯಾಗದಿದ್ದರೂ ಆಶ್ರಮದಲ್ಲಿ ಅವನ ಸ್ಥಾನವನ್ನು ಬಲಿಷ್ಠಗೊಳಿಸಿಕೊಂಡಿದ್ದನು. ಬೇರೆಯವರು ಬಾಬಾರವರಿಗೆ ಸ್ವಲ್ಪವೇ ಲಕ್ಷ್ಯಕೊಟ್ಟಿದ್ದರು.

ಬಾಬಾರವರು ಆ ಕಪಟ ಶಿಷ್ಯನ ವಿರುದ್ಧ ಸರಿಯಾದ ಸಮಯದಲ್ಲಿ ಪರಿಣಾಮಕಾರಿಯಾದ ಹೆಜ್ಜೆಯನ್ನು ತೆಗೆದುಕೊಳ್ಳಲು ಯೋಚಿಸಿದರು. ಇಲ್ಲದಿದ್ದರೆ ಸಂಪೂರ್ಣ ಸಂಗತಿ ತಮ್ಮ ಮೇಲೆ ತಿರುಗುಬಾಣವಾಗಬಹುದು. ಕೆಲವು ಸಂದರ್ಭಗಳಲ್ಲಿ ಬಾಬಾರವರು ಆ ಶಿಷ್ಯನನ್ನು ಆಶ್ರಮದಿಂದ ಹಿಂತೆಗೆದುಕೊಳ್ಳಲು ಹೇಳಿದರು. ಆ ಶಿಷ್ಯ, ಹೇಗಾದರೂ ಪ್ರತಿಭಟಿಸಿದನಲ್ಲದೆ ಅವರನ್ನು ನಿಂದಿಸಿದನು.

ಆ ಬಾಬಾರವರು, ಸರಳ ಮತ್ತು ಧಾರ್ಮಿಕ ಆತ್ಮ, ಅಂತಹ ಕದನಗಳಲ್ಲಿ ಅಭ್ಯಾಸವಿರಲಿಲ್ಲ. ಆ ದಿನಗಳ ಒಂದು ದಿನದಂದು ಡಾ.ಶ್ರೀಮಾಲಿಯವರು ತಮ್ಮ ಪರಿವಾರದೊಡನೆ ಪಾವನ ಗಂಗೆಯಲ್ಲಿ ಪವಿತ್ರಸ್ನಾನ ಮಾಡಲು ಹರಿದ್ವಾರಕ್ಕೆ ಬಂದರು.

ಬಾಬಾರವರಿಗೆ ಡಾ.ಶ್ರೀಮಾಲಿಯವರ ಆಗಮನದ ಬಗ್ಗೆ ತಿಳಿದಾಗ ಅವರೊಂದೇ(ಡಾ.ಶ್ರೀಮಾಲಿ) ತಮ್ಮ ಸಮಸ್ಯೆಯನ್ನು ಪರಿಹರಿಸಬಹುದೆಂದು ಅವರಿಗೆ ಅನ್ನಿಸಿತು. ಅವರಿಗೆ ಬೇರೆ ದಾರಿಯೇ ಇರಲಿಲ್ಲ.

ಒಂದು ರಾತ್ರಿ ಸುಮಾರು 10ಕ್ಕೆ ಡಾ.ಶ್ರೀಮಾಲಿಯವರು ಪುಸ್ತಕವನ್ನು ಓದುತ್ತಿದ್ದರು. ಬಾಬಾ ಬಾಗಿಲನ್ನು ತಟ್ಟಿ ತಮ್ಮ ಕಥೆಯನ್ನು ಸ್ವಲ್ಪಮಟ್ಟಿಗೆ ವಿವರಿಸಿದರು. ಡಾ.ಶ್ರೀಮಾಲಿಯವರು ತಮ್ಮ ಸಮಸ್ಯೆಯನ್ನು ಬಗೆಹರಿಸದಿದ್ದರೆ ತಾವು ಕೊಲೆಯಾಗುವರೆಂಬ ಭೀತಿಯಿಂದಿದ್ದರು.

ಡಾ.ಶ್ರೀಮಾಲಿಯವರು ಪರಿಸ್ಥಿತಿಯ ಗಾಂಭೀರತೆಯನ್ನು ಅರ್ಥ ಮಾಡಿಕೊಂಡರು. ಬಾಬಾ ಹೇಳುತ್ತಿರುವುದು ಸರಿ ಕಾಣಿಸಿತು. ಆಲಸ್ಯವಾದಲ್ಲಿ ಬಹುಶಃ ಆಗಬಾರದ್ದು ಆಗಬಹುದು.

ಅವರು ಈ ಸಮಸ್ಯೆಯನ್ನು ಬಗೆಹರಿಸಲು ನಿರ್ಧರಿಸಿದರು. ಮರುದಿನ ಬೆಳಿಗ್ಗೆ ಅವರೇ ಆಶ್ರಮಕ್ಕೆ ಬಂದಿಳಿದರು. ಬಾಬಾರವರು ಎಲ್ಲಾ ಸಮಸ್ಯೆಗಳಿಗೂ ಮೂಲಕಾರಣವಾಗಿದ್ದ ಶಿಷ್ಯನನ್ನು ತೋರಿಸಿದರು.

ಡಾ.ಶ್ರೀಮಾಲಿಯವರು ಶಿಷ್ಯಂದಿರೊಡನೆ ಮಾತನಾಡಿದರು. ಗುರುತಿಸಿದ ಶಿಷ್ಯನ ಕಡೆಗೆ ನಿರ್ದಿಷ್ಟವಾದ ಗಮನವನ್ನು ಕೊಟ್ಟರು. ಒಂದು ಯಾವುದೋ ನೆಪದ ಮೇಲೆ ಆತನನ್ನು ಅವರು ಏಕಾಂತ ಸ್ಥಳಕ್ಕೆ ಕರೆದೊಯ್ದರು. ಇಬ್ಬರೂ ಒಂದು ಬಂಡೆಯ ಮೇಲೆ ಕೂತರು.

ಇಬ್ಬರೂ ಮಾತನಾಡುತ್ತಿದ್ದಹಾಗೆ ಡಾ.ಶ್ರೀಮಾಲಿಯವರು ಆ ಶಿಷ್ಯನನ್ನು ಸಮ್ಮೋಹನಗೊಳಿಸಿದರು ಹಾಗೂ ಆತನ ಅಂತರ್ಮನಸ್ಸನ್ನು ತಮ್ಮ ಹತೋಟಿಗೆ ತೆಗೆದುಕೊಂಡರು. ಆತನ ನಡವಳಿಕೆ ಆಶ್ರಮಗಳ ಶಿಸ್ತು ಪಾಲನೆ(ಕ್ರಮ)ವನ್ನು ಉಲ್ಲಂಘಿಸಿದೆ. ಆಶ್ರಮದ ಹಣವನ್ನು ಕಬಳಿಸಲು ಲೆಕ್ಕಹಾಕಿರುವ ಆತನ ಮತ್ತು ತದನಂತರದಲ್ಲಿ ಆಶ್ರಮವನ್ನೇ ಸ್ವಾಧೀನ ಪಡಿಸಿಕೊಳ್ಳುವ ಆತನ ಚಾತುರ್ಯದ ಯೋಜನೆ ಆಶ್ರಮ ಜೀವನಕ್ಕೆ ಸರಿಹೋಗುವುದಿಲ್ಲ. ಎಲ್ಲಾ ಒಳ್ಳೆಯದಕ್ಕೆ ಆಶ್ರಮವನ್ನು ಬಿಡಬೇಕು ಮತ್ತು ಯಾವುದೇ ಸಂದರ್ಭದಲ್ಲಿ ದುರಾಸೆಯನ್ನು ಆಶ್ರಯಿಸಬಾರದು ಎಂದು ಸಹ ಅವರು ಅವನಿಗೆ ಆಜ್ಞಾಪಿಸಿದರು. ಬಾಬಾರವರ ಆಶ್ರಮವನ್ನು ಬಿಟ್ಟಮೇಲೆ ತಾನು ಸ್ವಂತ ಆಶ್ರಮವನ್ನು ಸ್ಥಾಪಿಸಿಕೊಳ್ಳಬೇಕು. ಒಮ್ಮೆ ಈಗಿನ ಆಶ್ರಮದಿಂದ ಹೊರಬಂದ ನಂತರ ಅದರ ಮೇಲೆ ಎಲ್ಲಾ ಹಗೆತನದಿಂದ ಅವನು ಮುಕ್ತನಾಗುವನು.

ಡಾ.ಶ್ರೀಮಾಲಿಯವರು ಹರಿದ್ವಾರದಲ್ಲಿ ಸುಮಾರು ಒಂದು ತಿಂಗಳು ತಂಗಿದ್ದರು. ಆಮೇಲೆ ಆ ಶಿಷ್ಯನು ಮರುದಿನ ಆ ಆಶ್ರಮವನ್ನು ಬಿಟ್ಟು ಹರಿದ್ವಾರದಲ್ಲಿ ತನ್ನದೇ ಆದ ಬೇರೆ ಆಶ್ರಮವನ್ನು ಪ್ರಾರಂಭಿಸಿದ್ದಾನೆನ್ನುವುದು ಅವರಿಗೆ ತಿಳಿದುಬಂದಿತು.

ಬಾಬಾರವರು ಇನ್ನೂ ಜೀವಂತವಾಗಿದ್ದಾರೆ. ಆಗಾಗ ಅವರು ಡಾ.ಶ್ರೀಮಾಲಿಯವರಿರದಿದ್ದರೆ ತಾವು ಯಾವತ್ತೋ ಕೊನೆಯುಸಿರೆಳೆಯಬೇಕಿತ್ತು ಎಂದು ಘೋಷಿಸುವರು.

ಪಾಯಲ್, ಜಾನ್ಸಿಯ ಒಬ್ಬ ಹುಡುಗಿ, ಒಬ್ಬ ಹುಡುಗನನ್ನು ಪ್ರೀತಿಸಿದಳು. ಅವರಿಬ್ಬರೂ ಗಂಡಹೆಂಡತಿಯರ ಹಾಗೆ ಇರಲು ಪ್ರಾರಂಭಿಸಿದರು. ಸಮಾಜವು ಒಪ್ಪದಿದ್ದರೂ ಮತ್ತು ಕಾನೂನು ಅವರಿಬ್ಬರೂ ಜೊತೆಯಲ್ಲಿರುವುದನ್ನು ಸಮ್ಮತಿಸದಿದ್ದರೂ, ಅವರಿಬ್ಬರೂ ತಮ್ಮಷ್ಟಕ್ಕೆ ತಾವೇ ಸ್ವಂತ ನಿರ್ಣಯ ತೆಗೆದುಕೊಳ್ಳುವುದರಲ್ಲಿ ಸಾಕಷ್ಟು ಪೌರರಾದುದನ್ನು ಕಂಡುಕೊಂಡರು.

ಸ್ವಲ್ಪ ಸಮಯದ ನಂತರ ಹುಡುಗನು ಪಾಯಲ್ಲಳಲ್ಲಿ ಎಲ್ಲಾ ಆಸಕ್ತಿಯನ್ನು ಕಳೆದುಕೊಂಡನು. ಅವನು ಆಕೆಯೊಡನೆ ಇರುವುದನ್ನೂ ವರ್ಜಿಸತೊಡಗಿದನು. ಅವನು ಒಬ್ಬಂಟಿಗನಾಗಿಯೇ ಇರಲು ಆಶಿಸಿ ಅವಳ ಕರೆಗೆ ಓಗೊಡಲಿಲ್ಲ.

ಅದು ಪಾಯಲ್ಲಳ ಹೃದಯವನ್ನು ಘಾಸಿಗೊಳಿಸಿತು. ಅವಳು ಸಂಪೂರ್ಣ ದುಃಖದಲ್ಲಿದ್ದಳು. ಅದು ಅವಳ ಹೃದಯ ಮತ್ತು ಮನಸ್ಸಿನ ಮೇಲೆ ಒಡೆದು ಚೂರುಚೂರು ಆಗುವಂತಹ ಪರಿಣಾಮ ಬೀರಿತ್ತು. ಪರಿಣಾಮವು ಅವಳು ಕಾಲೇಜಿನ ಪರೀಕ್ಷೆಗಳಲ್ಲಿ ಉತ್ತೀರ್ಣಳಾಗಲಿಲ್ಲ.

ಅವಳ ಹೆತ್ತವರು ಅವಳನ್ನು ವೈದ್ಯರಲ್ಲಿಗೆ ಕರೆದೊಯ್ದರು. ಅವರು ಅವಳ ವ್ಯಾಧಿಯನ್ನು ನಿರ್ಣಯಿಸಲು ವಿಫಲರಾದರು. ಒಂದುದಿನ ಆ ಹೆತ್ತವರು ಅವಳನ್ನು ಜೋಧಪುರಕ್ಕೆ ಕರೆದುಕೊಂಡು ಬಂದರು. ಪಾಯಲ್ಲಳು ದುಷ್ಟ ಆತ್ಮಗಳಿಗೆ ಬಲಿಯಾಗಿದ್ದಾಳೆಂದು ಅವರು ತಿಳಿದರು. ಆದರೆ ಪರಿಸ್ಥಿತಿ ಇನ್ನೂ ಚಿಂತಾಜನಕವಾಗಿತ್ತು. ಏಕೆಂದರೆ ಆ ಹುಡುಗನು ಬೇರೆ ಹುಡುಗಿಯನ್ನು ಮದುವೆಯಾಗುವುದರಲ್ಲಿದ್ದಾನೆ

ಎಂದು ಪಾಯಲ್ಲಳಿಗೆ ಗೊತ್ತಾಯಿತು. ಕೆಲವು ಸಾರಿ ಬೇರೆ ಹುಡುಗನ ಬಗ್ಗೆ ತಾನು ಹೇಗೆ ಚಿಂತಿಸಬಹುದೆಂದು ದಿಘ್ಭ್ರಮೆಗೊಂಡಳು. ಏಕೆಂದರೆ ಭಾರತೀಯ ಸ್ತ್ರೀತ್ವವು ಓರ್ವಳ ಒಂದು ಜೀವನದಲ್ಲಿ ಒಬ್ಬನನ್ನು ಮಾತ್ರ ಒಪ್ಪಿತ್ತು.

ಡಾ.ಶ್ರೀಮಾಲಿಯವರು ಸಂಪೂರ್ಣ ಕಥೆಯನ್ನು ಪಾಯಲ್ಲಳಿಂದ ಖಚಿತ ಪಡಿಸಿಕೊಂಡರು. ಎಳ್ಳಷ್ಟೂ ಸಂಕೋಚವಿಲ್ಲದೆ ಪಾಯಲ್ಲಳು ಅವರಿಗೆ ಎಲ್ಲವನ್ನೂ ಹೇಳಿದಳು ಮತ್ತು ಬೇರೆ ಯಾವ ಮನುಷ್ಯನನ್ನೂ ತಾನು ಮದುವೆಯಾಗುವ ಪರಿಸ್ಥಿತಿಯಲ್ಲಿಲ್ಲ ಎಂದು ಸಹ ಹೇಳಿದಳು. ಏಕೆಂದರೆ ತಾನು ಅವನನ್ನು ಮಾತ್ರ ಗಂಡನೆಂದು ಒಪ್ಪಿರುವದು ಬೇರೆ ಯಾರನ್ನೂ ಅಲ್ಲ. ಈಗ ಆ ಮನುಷ್ಯನು ಇನ್ನೂ ನಾಲ್ಕು ತಿಂಗಳಲ್ಲಿ ಬೇರೊಬ್ಬಳನ್ನು ಮದುವೆಯಾಗಲು ನಿರ್ಧರಿಸಿಯವುದು ವರದಿಯಾಗಿದ್ದರಿಂದ ಅವಳಿಗೆ ಒಂದೇ ಒಂದು ದಾರಿಯೆಂದರೆ ಆತ್ಮಹತ್ಯೆ ಮಾಡಿಕೊಳ್ಳುವುದು.

ಡಾ.ಶ್ರೀಮಾಲಿಯವರು ಸ್ವಲ್ಪ ಹೊತ್ತು ಯೋಚಿಸಿದರು. ಅವರು ಆ ಹುಡುಗನು ಕ್ಷುದ್ರಪ್ರಣಯಗಾರನಾಗುವುದರಿಂದ ತಡೆಯಬೇಕು ಎಂದು ನಿರ್ಧರಿಸಿದರು.

ಪಾಯಲ್ಲಳು ಡಾ.ಶ್ರೀಮಾಲಿಯವರಿಗೆ ಹುಡುಗನ ಭಾವಚಿತ್ರವನ್ನು ಕೊಟ್ಟಳು. ಅವರು ಆ ಭಾವಚಿತ್ರವನ್ನು ತ್ರಾಟಕದ ಕಲೆಯಿಂದ ಸಮ್ಮೋಹನಗೊಳಿಸಿ ಮತ್ತು ಆ ಹುಡುಗನು ಯಾವುದೇ ಪರಿಸ್ಥಿತಿಯಲ್ಲಿ ಪಾಯಲ್ಲಳನ್ನೇ ಮದುವೆಯಾಗಬೇಕೆಂದು ಆಜ್ಞಾಪಿಸಿದರು. ನಿಜವಾಗಿಯೂ ಬೇರೆ ಹೆಂಗಸರನ್ನು ತಿರಸ್ಕರಿಸಬೇಕು.
ಆ ಹೆತ್ತವರು ಪಾಯಲ್ಲಳೊಂದಿಗೆ ಜಾನ್ಸಿಗೆ ಹಿಂದಿರುಗಿದರು. ಅವರು ಈ ಸಂಬಂಧವನ್ನು ಖಂಡಿತವಾಗಿ ನಿರಾಕರಿಸಿದಂತಹ ಹುಡುಗನ ಹೆತ್ತವರನ್ನು ಕಂಡರು. ಹೇಗಾದರೂ ಹುಡುಗನು ಪಾಯಲ್ಲಳನ್ನು ಬಿಟ್ಟರೆ ಬೇರೆಯಾರನ್ನೂ ಮದುವೆಯಾಗುವುದಿಲ್ಲವೆಂದು ಆಗ್ರಹ ಮಾಡಿದನು. ಬಹಳ ಸಮಯದಲ್ಲಿ, ಅವನ ಹೆತ್ತವರು ಆ ಹುಡುಗನ ಪಟ್ಟುಹಿಡಿದ ನಿರ್ಧಾರಕ್ಕೆ ಶರಣಾಗಿ ಈ ಮದುವೆ ಸಂಬಂಧಕ್ಕೆ ಒಪ್ಪಿದರು. ಪಾಯಲ್ಲಳು ಅದೇ ಹುಡುಗನನ್ನು ಮದುವೆಯಾದಳು ಮತ್ತು ಈದಿನ ಮೋಹಕ ಗಂಡು ಮಗುವಿನ ತಾಯಿಯಾಗಿದ್ದಾಳೆ.

ದೆಹಲಿಯ ಹರೀಶ್ ಚಾವ್ಲನು ಒಬ್ಬ ಹುಡುಗಿಯನ್ನು ಆಳವಾಗಿ ಪ್ರೀತಿಸಿದನು. ಸ್ವಲ್ಪ ಸಮಯದ ನಂತರ ಆ ಹುಡುಗಿಯು ಅವನನ್ನು ಅಲಕ್ಷಿಸತೊಡಗಿದಳು. ತಾನು ಅವಳನ್ನು ಬಿಟ್ಟರೆ ಬೇರೆಯಾರನ್ನೂ ಪ್ರೀತಿಸುತ್ತಿಲ್ಲ ಎಂದು ಅವಳನ್ನು ಒಪ್ಪಿಸಲು ಅವನು ವಿಶ್ವಪ್ರಯತ್ನ ಮಾಡಿದನು, ಆದರೆ ಅವಳು ಅವನಲ್ಲಿ ಎಲ್ಲಾ ಆಸಕ್ತಿಯನ್ನು ಕಳೆದುಕೊಂಡಳು.

ಹರೀಷನಿಗೆ ಅದೊಂದು ದೊಡ್ಡಹೊಡೆತವಾಗಿತ್ತು. ಅವನು ಭಗ್ನಗೊಂಡನು, ಸಂಪೂರ್ಣ ಆಶಾಭಂಗಗೊಂಡವನಾಗಿ, ಮತ್ತು ದುರ್ಘಟನೆಯ ಒಂದು ನೋಟವಾಗಿದ್ದನು. ಅವನು ಜೋಧಪುರಕ್ಕೆ ಬಂದಿಳಿದು ಡಾ.ಶ್ರೀಮಾಲಿಯವರನ್ನು ಕಂಡನು. ಅವನು ತಾನು ಅವಳಿಗೆ ವಿಧೇಯನಾಗಿರುವುದನ್ನು ತಿಳಿಸಿದನು. ಅವಳ ಪ್ರೀತಿಯನ್ನು ಪಡೆಯದಿದ್ದರೆ ತಾನು ಖಚಿತವಾಗಿ ಹುಚ್ಚನಾಗುವನು. ಅವನು ಡಾ.ಶ್ರೀಮಾಲಿಯವರಿಗೆ ಹುಡುಗಿಯ ಭಾವಚಿತ್ರವನ್ನು ಮತ್ತು ಹರೀಷನ ಮತ್ತು ಅವನ ಪ್ರೇಯಸಿಯ ನಡುವೆ ಇದ್ದ ಬಾಂಧವ್ಯವು ಅಪ್ಪಟವಾದ ಸಂಬಂಧಗಳನ್ನು ಆಧರಿಸಿದೆ ಎಂದು ಸೂಚಿಸುವಂತಹ ಪತ್ರಗಳನ್ನೂ ತೋರಿಸಿದನು.

ತ್ರಾಟಕದ ತಂತ್ರವನ್ನು ಉಪಯೋಗಿಸುತ್ತಾ ಡಾ.ಶ್ರೀಮಾಲಿಯವರು ಆ ಭಾವಚಿತ್ರವನ್ನು ಸಮ್ಮೋಹನಗೊಳಿಸಿದರು. ಬೇರೆಯಾವ ಹುಡುಗರಲ್ಲಿ ತಾನು ಆಸಕ್ತಿ ತೆಗೆದುಕೊಳ್ಳಬಾರದೆಂದು ಅವರು

ಅವಳಿಗೆ ಆಜ್ಞಾಪಿಸಿದರು. ಏಕೆಂದರೆ ಹರೀಷನ ಜೊತೆ ಅವಳ ಸಂಬಂಧವು ತುಂಬಾ ಭಾವನಾತ್ಮಕವಾಗಿ ಬೆಳೆದಿದೆ. ಅವಳು ಹರೀಷನನ್ನು ಮಾತ್ರ ಪ್ರೀತಿಸುತ್ತಿರಬೇಕು ಮತ್ತು ಬೇರೆ ಹುಡುಗರ ಜೊತೆಯಲ್ಲಿರುವುದನ್ನು ನಿವಾರಿಸಬೇಕು. ಅವಳು ತಾನೇ ಹರೀಷನನ್ನು ಕಾಣಬೇಕು ಮತ್ತು ತನ್ನ ಮೊದಲಿನ ನಡೆತೆಯ ಬಗ್ಗೆ ಕ್ಷಮಾಯಾಚನೆ ಮಾಡಬೇಕು.

ಹರೀಷನು ಮನೆಗೆ ಹಿಂದಿರುಗಿದನು. ಅವನ ಪ್ರಿಯತಮೆಯನ್ನು ಮದುವೆಯಾದ ನಂತರ, ಅವನು, ಮತ್ತೆ, ಡಾ.ಶ್ರೀಮಾಲಿಯವರನ್ನು ನೋಡಲು ಜೋಧಪುರಕ್ಕೆ ಬಂದನು. ಅವರು ಸಮ್ಮೋಹನ ಆಜ್ಞೆಯಲ್ಲಿ ತಿಳಿಸಿರುವ ತರಹವೇ ಅಲ್ಲಿಯ ಪರಿಸ್ಥಿತಿಯು ವೃದ್ಧಿಗೊಂಡಿತ್ತು ಎಂದು ತಿಳಿಸಿದನು. ದೆಹಲಿಗೆ ಹಿಂದುರಿಗಿದ ಮೂರುದಿನಗಳ ನಂತರ, ಅವನ ಪ್ರೇಯಸಿಯು ತನ್ನನ್ನು ಕಂಡು ಅವಳ ಮೊದಲಿನ ಅಲಕ್ಷ್ಯತೆಗೆ ಅವನ ಕ್ಷಮೆಗಾಗಿ ತವಳಿಸಿದಳು ಎಂದು ಹರೀಷನು ತಿಳಿಸಿದನು. ಇಬ್ಬರೂ ಈಗ ಸುಖವಾಗಿದ್ದಾರೆ.

ಡಾ.ಶ್ರೀಮಾಲಿಯವರ ಕಛೇರಿಯಲ್ಲಿಯ ಪತ್ರವ್ಯವಹಾರಗಳ ಫೈಲುಗಳನ್ನು ನೋಡಿದಾಗ. ಡಾ.ಶ್ರೀಮಾಲಿಯವರ ಅದ್ವಿತೀಯ ಶಕ್ತಿಗಳಿಂದ ಲೆಕ್ಕವಿಲ್ಲದಷ್ಟು ಹೆಂಗಸರು ಮತ್ತು ಗಂಡಸರು ಯಾವುದೋ ರೀತಿಯಲ್ಲಿ ಲಾಭಪಡೆದಿರುವುದು ಗೊತ್ತಾಯಿತು.

ಆಗಿನ ದಿನಗಳ ಒಂದುದಿನ ರಾಮಾಯಣದಲ್ಲಿ ನಿಷ್ಣಾತವಾಗಿದ್ದ ತುಂಬಾ ಅಸಾಮಾನ್ಯ ವ್ಯಕ್ತಿ ಸ್ವಾಮಿ ಶರಣ್ ದಾಸ್‌ರವರನ್ನು ಕಂಡೆ. ಅವರ ಬದುಕಿಗೆ ಒಂದೇ ಒಂದು ದಾರಿಯಾದ ಈ ಗ್ರಂಥವನ್ನು ಪಠಿಸುತ್ತಾ ಹೋಗುತ್ತಿದ್ದರು.

ತಮ್ಮ ಜೀವನದಲ್ಲಿ ಅವರು ಬಹಳ ಮೇಲೇಳಬೇಕು ಎಂದು ಇಚ್ಛಿಸಿದರು. ಆದರೆ ಅವರ ಧ್ವನಿಯು ಪ್ರತಿಕಂಪನದ ಅಭಾವ ಹೊಂದಿತ್ತು. ಪರಿಣಾಮವಾಗಿ ಅವರು ದೊಡ್ಡ ಸಭೆಗಳನ್ನು ಆಕರ್ಷಿಸುವುದರಲ್ಲಿ ವಿಫಲಗೊಂಡರು. ಅವರು ಕಳವಳಗೊಂಡಿದ್ದರು. ಇನ್ನೊಂದು ಕಡೆ ಅವರ ತಮ್ಮ ಸಿಯಾರಾಂ ಶರಣ್ ದಾಸ್‌ರವರು ದೊಡ್ಡ ದೊಡ್ಡ ಗುಂಪುಗಳನ್ನು ಆಕರ್ಷಿಸುತ್ತಿದ್ದರು. ಬಹಳ ಜನರು ಅವರನ್ನು ಬಯಸುತ್ತಿದ್ದರು. ರಾಮಾಯಣದ ಕಥೆಯನ್ನು ಪಠಿಸುವುದು ಅವರ ಮನೆತನದ ಪರಂಪರೆಯಾಗಿತ್ತು.

ಅಣ್ಣನಾದ–ಸ್ವಾಮಿ ಶರಣ್‌ದಾಸ್‌ರವರನ್ನು ಘೋರವಾದ ಖಿನ್ನತೆಯು ಆವರಿಸಿಕೊಂಡಿತು. ಅಯೋಧ್ಯದ ಹತ್ತಿರ ಇರುವ ಸಾರ್ಯು ನದಿಯಲ್ಲಿ ತಮ್ಮಷ್ಟಕ್ಕೆ ತಾವು ಮುಳುಗಿ ಜೀವವನ್ನು ಕೊನೆಗೊಳಿಸಬೇಕೆಂದು ಅವರು ನಿರ್ಧರಿಸಿಕೊಂಡಿದ್ದರು. ನಿಜವಾಗಿಯೂ ಅವರು ನದಿದಂಡೆಗೂ ಬಂದಿದ್ದರು. ನದಿಯಲ್ಲಿ ಮುಳುಗು ಹಾಕಲು ಅವರು ನಿರ್ಧರಿಸಿಕೊಂಡಿದ್ದರು ಮತ್ತು ಅವರ ಕೊನೆಯ ಆಧ್ಯಾತ್ಮಿಕ ನಡೆಯಾಗಿ ಅಲ್ಲಿಯ ಪ್ರಖ್ಯಾತ ಹನುಮಾನ್ ದೇವಸ್ಥಾನದಲ್ಲಿ ರಾಮಾಯಣದ ಸುಂದರ ಖಾಂಡವನ್ನು ಪಠಿಸಲಿಚ್ಛಿಸಿದರು.

ಅವರು ಆ ದೇವರ ಮುಂದೆ ಪಠಿಸಲು ಪ್ರಾರಂಭಿಸಿದ ಹಾಗೆ ಆ ಭಗವಂತನು ಅವರ ಆತ್ಮಹತ್ಯೆ ಮಾಡಿಕೊಳ್ಳುವ ನಿರ್ಧಾರದ ತಪ್ಪನ್ನು ತೋರಿಸಿಕೊಟ್ಟಹಾಗಾಯಿತು. ಹಾಗೆಯೇ ಅವರಿಗೆ ಆ ಭಗವಂತನು ಈ ಕೆಲಸಕ್ಕಾಗಿ ನೇರವಾಗಿ ಜೋಧಪುರಕ್ಕೆ ಹೋಗಬೇಕು ಮತ್ತು ಡಾ.ನಾರಾಯಣ್ ದತ್ತ ಶ್ರೀಮಾಲಿಯವರನ್ನು ನೋಡಬೇಕು ಎಂದು ಗೊತ್ತು ಮಾಡಿದ ಹಾಗಾಯಿತು.

ಅವರು ಪಠಿಸುತ್ತಿರುವಾಗ ಭಗವಂತನು 6 ರಿಂದ 7 ಸಾರಿ ಈ ರೀತಿ ಗೊತ್ತುಪಡಿಸಿದ ಹಾಗಾಯಿತು ಎಂದು ಸ್ವಾಮಿಯಿಂದ ನಾನು ತಿಳಿದುಕೊಂಡೆ. ಅವರಿಗೆ ಭಗವಂತನಾದ ಶ್ರೀರಾಮನ ಈ ಒಂದು ದೈವಾಜ್ಞೆಯ ಹಿಂದೆ ಮುಖ್ಯ ಒತ್ತಡವು ಎಂದನಿಸಿತು.

ಪಠಣೆಯನಂತರ ಸ್ವಾಮಿಯವರು ಜೋಧಪುರದಕಡೆಗೆ ಹೊರಟು ಡಾ.ಶ್ರೀಮಾಲಿಯವರನ್ನು ಕಂಡರು.

ಸ್ವಾಮಿಯವರು ಡಾ.ಶ್ರೀಮಾಲಿಯವರಿಗೆ ಸಂಪೂರ್ಣ ಕಥೆಯನ್ನು ಹೇಳಿದರು. ಅವರು ಅವರಿಗೆ ತಮಗೆ ಧನಸಂಪತ್ತು ಬೇಕಾಗಿಲ್ಲವೆಂದು ಹೇಳಿದರು. ಹಾಗೆಯೇ ಅವರಿಗೆ ಅಗೌರವದ ಬದುಕು ಬೇಕಾಗಿಲ್ಲ. ಅವರ ಏಳು ತಲೆಗಳಿಗಿಂತಲೂ ಹೆಚ್ಚಿನ ಪೂರ್ವಜರು ಆಧ್ಯಾತ್ಮಿಕ ಪ್ರವಚನಗಳನ್ನು ನಡೆಸುತ್ತಿದ್ದರು. ಅವರಿಗೆ ತಮ್ಮ ತಮ್ಮನ ಮೇಲೆ ಅಸೂಯೆ ಎಂದಲ್ಲ. ನಿಜವಾಗಿಯೂ ಅವರ ತಮ್ಮನು ತಾವು ಪ್ರವಚನ ನಡೆಸುವ ಸ್ಥಳಕ್ಕೇ ಬಂದು ಪ್ರವಚನಗಳನ್ನು ಸಂಘಟಿಸಿ ತಮ್ಮನ್ನು ಅಗೌರವ ಪಡಿಸಲು ಯಾವಾಗಲೂ ಪ್ರಯತ್ನಿಸುತ್ತಿದ್ದನು. ಅಷ್ಟೊಂದು ಜನ ಸಮೂಹವನ್ನು ಅವನು ಹೇಗೆ ಆಕರ್ಷಿಸುತ್ತಿದ್ದನೋ ಆ ದೇವನೇ ಬಲ್ಲ. ಈ ಸ್ವಾಮಿಯೂ ಸಹ ಅಷ್ಟೇ ಜನರ ಗುಂಪನ್ನು ಆಕರ್ಷಿಸುತ್ತಿದ್ದನು, ಆದರೆ ಜನರು ಆ ಸ್ಥಳವನ್ನು ಮಧ್ಯದಲ್ಲೇ ಬಿಟ್ಟು ಹೊರಡುತ್ತಿದ್ದರು. ಅವರ ಶೈಲಿಯಲ್ಲಿ ಅಥವಾ ಧ್ವನಿಯಲ್ಲಿ ಏನೋ ತಪ್ಪಿತ್ತು. ಅವರ ತಮ್ಮನ ಹಾಗೆ ಅವರಿಗೆ ಜನರನ್ನು ಆಕರ್ಷಿಸಲಾಗುತ್ತಿರಲಿಲ್ಲ.

ಈ ಸಂಬಂಧದಲ್ಲಿ ದೇವನಾದ ಹನುಮಂತನು ಅವರಿಗೆ ಅವರನ್ನು (ಡಾ.ಶ್ರೀಮಾಲಿ) ನೋಡಲು ಹೇಗೆ ದಾರಿ ತೋರಿದನು ಎಂದು ಸಹ ಅವರು ತಿಳಿಸಿದರು. ಯಶಸ್ಸು ಮತ್ತು ಕೀರ್ತಿಗೆ ದಾರಿಯನ್ನು ಹುಡುಕಲು ಅವರು ವಿಫಲವಾದಲ್ಲಿ ತಮಗೆ ಆತ್ಮಹತ್ಯೆ ಮಾಡಿಕೊಳ್ಳುವುದು ಬಿಟ್ಟರೆ ಬೇರೆಯಾವ ಕ್ರಮವೂ ತೆರೆದಿರುವುದಿಲ್ಲ. ಇನ್ನು ಅಂತಹ ಅವಮಾನವನ್ನು ಅವರಿಗೆ ಸಹಿಸಿಕೊಳ್ಳಲಾಗುವುದಿಲ್ಲ.

ಡಾ.ಶ್ರೀಮಾಲಿಯವರು ತಲ್ಲೀನರಾಗಿ ಗಮನದಿಂದ ಅವರು ಹೇಳಿದುದು ಕೇಳಿದರು. ನಿಜವಾಗಿಯೂ ಅದು ಸರಿಯಾದ ದೂರೇ ಆಗಿತ್ತು. ಅಲ್ಲದೆ, ಸ್ವಾಮಿಯವರು ಸಂಪೂರ್ಣವಾಗಿ ನಿರ್ಧರಿಸಿದ್ದರು.

ಡಾ.ಶ್ರೀಮಾಲಿಯವರು ಅವರಿಗೆ ಸಾಮೂಹಿಕ ಸಮ್ಮೋಹನವನ್ನು ಕಲಿಸಿದರು. ಈ ಮಾಧ್ಯಮದಿಂದ ಸಮ್ಮೋಹಕನು ಮೊದಲು ತನ್ನಷ್ಟಕ್ಕೆ ತಾನೇ ಸಮ್ಮೋಹನಗೊಳಿಸಿಕೊಳ್ಳುವನು. ಅದು ಅವನ ಕಣ್ಣುಗಳಿಗೆ ತೀಕ್ಷ್ಣತೆಯನ್ನು ಕೊಡುವುದು. ಅವನ ಕಣ್ಣುಗಳು ಸಮ್ಮೋಹಕ ಆಜ್ಞೆಯನ್ನು ಹೊರಸೂಸಲು ಪ್ರಾರಂಭಿಸಿದಾಗ, ಅವನಿಗೆ ಆ ಜ್ವಾಲೆಯು ಎತ್ತರಕ್ಕೆ ವೇಗವಾಗಿ ಜಿಗಿಯುತ್ತದೆನಿಸುತ್ತದೆ. ಖಚಿತವಾಗಿ, ಈ ಸಮಯದಲ್ಲೇ ಸಮ್ಮೋಹಕನು ತನ್ನ ಸ್ವಂತ ಕಣ್ಣುಗಳಲ್ಲೇ ಗುಂಪನ್ನು ನೋಡುವನು. ಅವನ ದೃಷ್ಟಿಗೆ ಒಳಗಾದ ಜನರ ಗುಂಪು ಸಮ್ಮೋಹಿಸಲ್ಪಡುವುದು.

ಈಗ ಅವನು ಏನೇನೆಲ್ಲಾ ಹೇಳುವನೋ ಅದು ಮಧುರವಾದ ಅಮೃತಪಾನವಾಗುವುದು. ಪಿಸುಗುಟ್ಟದೆಯೇ ಸಂಪೂರ್ಣ ಗುಂಪು ಅವನನ್ನು ಒಬ್ಬ ಮನುಷ್ಯನ ಹಾಗೆ ಕೇಳುವುದು.ಹೊಸ ಜನರು ಗುಂಪನ್ನು ಸೇರಿದಾಗ, ಅವರೂ ಸಹ, ಅದೇ ರೀತಿಯಲ್ಲಿ ಸಮ್ಮೋಹನಕ್ಕೊಳಗಾಗುವರು. ಸಂಪೂರ್ಣ ಪ್ರವಚನದಲ್ಲಿ ಅವರು ಅಂಟಿಕೊಂಡೇ ಕೂತುಕೊಳ್ಳುವರು.

ಈ ತರಹದ ಸಮ್ಮೋಹನವು ಅತೀ ಪ್ರಭಾವಶಾಲಿಯಾಗಿರುವ ಹಾಗೆ ಸಾಬೀತಾಗಿದೆ. ಏಕೆಂದರೆ ಈ ಆಧುನಿಕ ಸಮಯದಲ್ಲಿ ಮೂಲ ಒತ್ತಾಯವಿರುವುದು ಜನರ ಹೆಚ್ಚಿನ ವಿಭಾಗಗಳನ್ನು ಗೆದ್ದು ಅವರ ಮೇಲೆ ಪ್ರಭಾವತೋರುವುದು. ಈ ಉದ್ದೇಶಕ್ಕೆ ಸಾಮೂಹಿಕ ಸಮ್ಮೋಹನವು ಚಮತ್ಕಾರಿಕವಾದ ಪರಿಹಾರವಾಗಿದೆ. ಕೇವಲ 15 ದಿನಗಳಲ್ಲಿ ಡಾ.ಶ್ರೀಮಾಲಿಯವರು ಸ್ವಾಮಿಯವರಿಗೆ ಸಾಮೂಹಿಕ ಸಮ್ಮೋಹನದ ಬಗ್ಗೆ ಎಲ್ಲವನ್ನೂ ಕಲಿಸಿಕೊಟ್ಟರು.

ಸ್ವಾಮಿಯವರು ಈ ಕಲಾಕೌಶಲ್ಯವನ್ನು ಪರೀಕ್ಷಿಸಿ ಮತ್ತು ಈ ಕಲಾಕೌಶಲ್ಯವು ತುಂಬಾ ಪರಿಣಾಮಕಾರಿಯಾಗಿದೆಯೆಂದು ಊಹಿಸಲಾರದ ಆಲೋಚನೆಯಾಚೆಗೆ ತೃಪ್ತಿಗೊಂಡರು. ಈ ದಿನ ಅವರು

ವಿಶ್ವದಾದ್ಯಂತ ಹೆಸರುವಾಸಿಯಾಗಿರುವರು. ದೊಡ್ಡಗುಂಪುಗಳು ಅವರಲ್ಲಿಗೆ ಒಗ್ಗೂಡಿ ಗಂಟೆಗಟ್ಟಲೆ ಪರಮಾನಂದದಿಂದ ಕೇಳುವವು.

ಸ್ವಾಮಿಯವರಿಗೆ ತಮ್ಮ ಜೀವನ ಸಂಪೂರ್ಣ ಸಾರ್ಥಕವೆನಿಸಿದೆ. ಡಾ.ಶ್ರೀಮಾಲಿಯವರಿಗೆ ತಮ್ಮ ಕೃತಜ್ಞತೆಯನ್ನು ಹೇಗೆ ತಿಳಿಸಬೇಕೊ ಅವರಿಗೆ ತಿಳಿಯಲಿಲ್ಲ. ಯಾವುದೇ ಸಂದರ್ಭದಲ್ಲಿ ಅವರು ಅವರಿಗೆ ಸಂಪೂರ್ಣ ವಿಧೇಯರಾಗಿದ್ದರು. ಕೆಲವು ಸಾರಿ ತಾವು ತಮ್ಮ ಸ್ವಂತ ದೇಹದ ಚರ್ಮದಿಂದ ಪಾದರಕ್ಷೆಗಳನ್ನು ಮಾಡಿ ಅವರಿಗೆ ಸಲ್ಲಿಸಿದರೂ ಅವರ ಋಣತೀರಲಾರದು ಎಂದು ಹೇಳುವರು.

ಡಾ.ಶ್ರೀಮಾಲಿಯವರು ಯಾವುದೇ ತರಹದ ಕೊಡುಗೆ ಅಥವಾ ಸಂಭಾವನೆಯನ್ನು ಸ್ವಾಮಿಯವರಿಂದ ಒಪ್ಪಿಕೊಳ್ಳಲಿಲ್ಲ. ಡಾ.ಶ್ರೀಮಾಲಿಯವರ ಅದ್ವಿತೀಯ ಸೇವೆಯನ್ನು ಅಂಗೀಕರಿಸುತ್ತಾ ಸ್ವಾಮಿಯವರು ಜೋಧಪುರಕ್ಕೆ 6 ತಿಂಗಳಿಗೊಮ್ಮೆ ಭೇಟಿಕೊಟ್ಟು ಭಕ್ತರಿಗೆ ಆಧ್ಯಾತ್ಮಿಕ ಪ್ರವಚನವನ್ನು ಕೊಟ್ಟರು.

ನೂರಾರು ಮತ್ತು ಸಾವಿರಾರು ಜನರನ್ನು ಸಾಮೂಹಿಕ ಸಮ್ಮೋಹನದ ಸಹಾಯದಿಂದ ಪ್ರಭಾವಕ್ಕೊಳಗಾಗಿಸಬಹುದೆಂದು ನನಗೆ ಯಾವತ್ತೂ ಗೊತ್ತಿರಲಿಲ್ಲ. ಒಂದು ದಿನ ತಕ್ಕ ಅವಕಾಶವನ್ನು ನೋಡುತ್ತಾ ಸಾಮೂಹಿಕ ಸಮ್ಮೋಹನದ ಬಗ್ಗೆ ಎಲ್ಲವನ್ನೂ ಕಲಿಯಲು ನಾನು ಡಾ.ಶ್ರೀಮಾಲಿಯವರಲ್ಲಿಗೆ ಹೋದೆ. ಈ ಅಪೂರ್ವ ಕಲಾಕೌಶಲ್ಯವಾದದನ್ನು ಕಲಿಸಲು ಡಾ.ಶ್ರೀಮಾಲಿಯವರು ತುಂಬಾ ಹರ್ಷಿಸಿದರು.

ನನ್ನ ನಂಬಿಕೆಯಂತೆ, ಈ ಯುಗದಲ್ಲಿ ಸಾಮೂಹಿಕ ಸಮ್ಮೋಹನದ ಕಲೆಯಷ್ಟು ಉಪಯೋಗ ಬೇರಾವುದೂ ಇಲ್ಲ. ಇದು ಬರಿಯ ಜನರ ಗುಂಪುಗಳನ್ನು ಪ್ರಭಾವಕ್ಕೊಳಗಾಗಿಸಲು ಉಪಯೋಗದ ಕಲೆ ಅಲ್ಲ. ಓರ್ವನು ಎದುರಿಗೆ ಕೂತಿರುವ ವ್ಯಕ್ತಿಯನ್ನೂ ಪ್ರಭಾವಕ್ಕೊಳಗಾಗಿಸ ಬಹುದು.

ಯಾವಾಗಲಾದರೂ ನಾನು ಒಬ್ಬ ಮೇಲ್ಮಟ್ಟದ ಅಧಿಕಾರಿಯನ್ನು ಅಥವಾ ಒಬ್ಬ ಕಾರ್ಯದರ್ಶಿ ಅಥವಾ ಒಬ್ಬ ಮಂತ್ರಿಯನ್ನು ಕಂಡಾಗ ಅವನನ್ನು ಮೊದಲು ಸಮ್ಮೋಹನಗೊಳಿಸುವೆ ಎಂದು ಮೊದಲಬಾರಿಗೆ ಬಹಿರಂಗಪಡಿಸುತ್ತಿದ್ದೇನೆ. ಈ ಒಂದು ಮೊದಲ ಹೆಜ್ಜೆಯ ನಂತರವೇ ನಾನು ಅವರೊಡನೆ ಮಾತನಾಡಲು ಪ್ರಾರಂಭಿಸುವೆ. ತಪ್ಪಿಲ್ಲದೆಯೇ ನನಗೆ ಹೇಗೆ ಬೇಕೋ ಹಾಗೆಯೇ ನಿರ್ಧಾರವಾಗುವುದು. ತಮ್ಮ ಸ್ವಂತ ಅಸ್ತಿತ್ವವನ್ನೇ ಸಂಪೂರ್ಣ ಮರೆತು, ನನ್ನ ವಶದಲ್ಲಿರುವ ಅವರು, ನನ್ನ ಮಾತನ್ನು ಆಲಿಸುವರು.

ನಾನು ಬಹಳ ಅವಕಾಶಗಳಲ್ಲಿ ಸಮ್ಮೇಳನಗಳಲ್ಲಿ ಅಥವಾ ದೊಡ್ಡ ಜನ ಸಮೂಹಗಳಲ್ಲಿ ಮಾತನಾಡಿದ್ದೇನೆ. ನಾನು ಮಾತನಾಡುವ ಮೊದಲು ನಾನು ಸಭೆಯ ಸಾಮೂಹಿಕ ಸಮ್ಮೋಹನ ಮಾಡಲು ಎಲ್ಲಾ ಎಚ್ಚರಿಕೆಯನ್ನು ತೆಗೆದುಕೊಳ್ಳುವೆ.

ವಿಚಾರಗಳನ್ನು ವಹಿವಾಟು ಮಾಡುವುದರಲ್ಲಿ, ಅದು ಸಂಭಾಷಣೆ ಅಥವಾ ಭಾಷಣವಾಗಿರಲಿ ಅಥವಾ ರೇಡಿಯೋ ಮಾತಾಗಲಿ ಅಥವಾ ದೂರದರ್ಶನದ ಚರ್ಚೆಗಳಾಗಿರಲಿ ಇಂತಹ ಪರಿಸ್ಥಿತಿಗಳನ್ನು ಒಳಗೊಂಡ ಈ ಕಲೆಯು ತುಂಬಾ ಪರಿಣಾಮಕಾರಿಯಾದುದು ಸಾಬೀತಾಗಿದೆ.

ಪ್ರಸಾರಕಾರನು ರೇಡಿಯೋದಲ್ಲಿ ಮತ್ತು ದೂರದರ್ಶನದಲ್ಲಿ ಮಾತನಾಡುವಾಗ, ಮೊದಲಿಗೆ ತನ್ನನ್ನು ತಾನೇ ಸಮ್ಮೋಹಿಸಿಕೊಳ್ಳಬೇಕು. ಇದು ಪ್ರಸಾರಕನ ಕಣ್ಣುಗಳಿಗಲ್ಲದೆ ಧ್ವನಿಗೂ ಸಹ ಒಂದು ಅಪರೂಪದ ಶಕ್ತಿಯನ್ನು ಉದ್ಭವಿಸುತ್ತದೆ. ಈ ತರಹದ ಧ್ವನಿಯನ್ನು ಕೇಳುತ್ತಾ ಪ್ರೇಕ್ಷಕರ

ಸಮೂಹವೂ ಸಮ್ಮೋಹಿತಗೊಳ್ಳುತ್ತದೆ. ಹೀಗೆ ಪ್ರಸಾರಕನು ಪ್ರಸಾರಣೆಯ ಒಂದು ಅದ್ವಿತೀಯ ಕೆಲಸವನ್ನು ಮಾಡುತ್ತಾನೆ.

ನಿಜವಾಗಿಯೂ ಸಾಮೂಹಿಕ ಸಮ್ಮೋಹನವು ಒಂದು ಕ್ರಾಂತಿಕಾರಕ ಕಲೆಯಾಗಿದೆ. ಈ ಮಾಧ್ಯಮದಿಂದ ಓರ್ವರು ವಿಚಾರಗಳನ್ನು ಪರಿಣಾಮಕಾರಿಯಾಗಿ ವಿಕ್ರಯಿಸಬಹುದು ಮತ್ತು ಪ್ರಸಾರ ಮಾಡಬಹುದು. ಓರ್ವರು ಪ್ರಶಂಸಕರ ಗುಂಪನ್ನೇ ಪಡೆಯಬಹುದು.

ಡಾ.ಶ್ರೀಮಾಲಿಯವರ ಜೊತೆಯಲ್ಲಿ ನಾನು ಒಂದು ತಿಂಗಳಿಗಿಂತ ಹೆಚ್ಚಿದ್ದೆ. ಈ ಒಂದು ಸಮಯದಲ್ಲಿ ನಾನು ಏನನ್ನು ಕಲಿತೆನೋ ಅದೊಂದೇ ನನ್ನ ಜೀವನದ ಆಸ್ತಿಯಾದ ಸಾಬೀತಾಗಿದೆ. ನನ್ನ ಎಲ್ಲಾ ಯಶಸ್ಸಿಯೂ ಡಾ.ಶ್ರೀಮಾಲಿಯವರ ಆಶೀರ್ವಾದಗಳಿಗೇ ಸಲ್ಲುತ್ತದೆ.

ಹರಿದ್ವಾರದ ಕಡೆಯಿಂದ ಹರಿಯುವ ಗಂಗೆಯು ವಿಶ್ವದಲ್ಲಿಯೇ ಪವಿತ್ರವಾದ ನದಿಯಾಗಿದೆ. ಆದರೂ ಅಮೆರಿಕದಲ್ಲಿ ವಾಸಿಸುವಂತಹ ಭಾರತೀಯರ ಹಾಗೆ ನದಿದಂಡೆಯಲ್ಲಿ ವಾಸಿಸುವಂತಹ ಜನರಲ್ಲಿ ಯಾವುದೇ ನಿರ್ದಿಷ್ಟವಾದ ಉದ್ವೇಗತೆಯನ್ನು ನಾನು ನೋಡಿಲ್ಲ. ಆದರೆ ಅಮೆರಿಕದಲ್ಲಿರುವ ಭಾರತೀಯರು ಪವಿತ್ರಗಂಗೆಯ ಹನಿಗಳಿಗೆ ಹೇಗೆ ಪ್ರತಿಕ್ರಿಯಿಸುತ್ತಾರೆಂದು ನಾನು ನೋಡಿದ್ದೇನೆ. ಒಮ್ಮೆ ಅಮೆರಿಕಕ್ಕೆ ಆಹ್ವಾನಿಸಿದ್ದ ಒಬ್ಬ ಭಾರತೀಯ ಸಾಧು ತನ್ನೊಡನೆ ತಂದಂತಹ ಗಂಗೆಯ ತೊಟ್ಟುಗಳನ್ನು ನಿವೇದಿಸಿದನು. ಅಮೆರಿಕದಲ್ಲಿ ವಾಸಿಸಿರುವ ಉದ್ವೇಗಗೊಂಡ ಭಾರತೀಯರ ಕಣ್ಣುಗಳಲ್ಲಿ ಆನಂದ ಬಾಶ್ಪಗಳು ಉದುರಿದವು.

ಇದೇ ಸಾಮ್ಯವನ್ನು ಅನುಸರಿಸಿ ನಾವು ವಿದೇಶೀಯರು ಡಾ.ಶ್ರೀಮಾಲಿಯವರ ನಿಜವಾದ ಶ್ರೇಷ್ಠತೆಯನ್ನು ಗೌರವಿಸಿದ್ದೇವೆ ಹಾಗೂ ವಿಚಿತ್ರವಾಗಿ, ಅವರ ಹತ್ತಿರದಲ್ಲೇ ವಾಸಿಸಿರುವಂತಹ ಭಾರತೀಯರು ಇನ್ನೂ ಅವರ ಅದ್ವಿತೀಯವಾದ ಇರುವಿಕೆಯ ಲಾಭಪಡೆದುಕೊಂಡಿಲ್ಲ. ಅವರು ಅವರ ಹತ್ತಿರ ತಮ್ಮ ಸಮಸ್ಯೆಗಳೊಂದಿಗೆ ಹೋಗುವವರು, ಅವರೋರ್ವರೇ ಕೊಡಬಹುದಾದಂತಹ ಜ್ಞಾನವನ್ನು ಪಡೆಯಲಿಚ್ಛಿಸುವುದಿಲ್ಲ.

ಅವರು ಒಮ್ಮೆ ನನಗೆ ತಾವು ಈಗಾಗಲೇ ಸಂಖ್ಯಾಶಾಸ್ತ್ರ, ಹಸ್ತಸಾಮುದ್ರಿಕೆ, ಜೋತಿಷ್ಯಾಸ್ತ್ರ, ಹಿಪ್ನಾಟಿಜಂ, ತಂತ್ರ, ಮಂತ್ರ ಮತ್ತು ಇತರ ಸಂಬಂಧಪಟ್ಟ ಶಿಸ್ತುಗಳಲ್ಲಿ ನೂರು ಪುಸ್ತಕಗಳನ್ನು ಬರೆದಿರುವುದಾಗಿ ಹೇಳಿದರು. ಹೀಗೆ ಅವರು ಜ್ಞಾನದ ಮುಖ್ಯಕ್ಷೇತ್ರಗಳ ಬಗ್ಗೆ ಅರಿವನ್ನು ಹೆಚ್ಚಿಸಲು ಪ್ರಯತ್ನಿಸಿದ್ದಾರೆ. ಎಷ್ಟೋ ಜನರು ಈ ಪುಸ್ತಕಗಳನ್ನೇ ತಮ್ಮ ಜೀವನಾಧಾರವಾಗಿಟ್ಟುಕೊಂಡು ಗಳಿಸುತ್ತಿದ್ದರು. ಆದರೆ ಈಗ ಅವರು ನಿರ್ಜೀವ ಪುಸ್ತಕಗಳಿಗಿಂತಲೂ ಸಜೀವ ಪುಸ್ತಕಗಳನ್ನು ತರುವುದರಲ್ಲಿ ಹೆಚ್ಚು ಆಸಕ್ತಿವುಳ್ಳವರಾಗಿದ್ದರು. ಸಜೀವ ಪುಸ್ತಕಗಳಿಂದ ಅವರು ತಮ್ಮಿಂದ ಜ್ಞಾನವನ್ನು ಪಡೆದು ಅದನ್ನು ಮುಂಬರುವ ಪೀಳಿಗೆಗೆ ಕೊಡುವಂತಹ ಯುವವ್ಯಕ್ತಿಗಳಿಗೆ ವಿವಕ್ಷಿತ ಗೊಳಿಸಿದರು. ಅವರು, ಹೇಗಾದರೂ ಇಂದಿನ ಯುವತನವು ದೃಢಯತ್ನ ಮತ್ತು ತಾಳ್ಮೆಯ ಅಭಾವವನ್ನು ಹೊಂದಿದೆ, ಮತ್ತು ಕಷ್ಟಕರವಾದ ಕೆಲಸದ ಕಡೆಗೆ ವಾಲುವುದೇ ಇಲ್ಲ ಎಂದು ಹೇಳಿದರು. ಶ್ರಮವಿಲ್ಲದೇ ಓರ್ವರು ಯಾವುದೇ ಆಧ್ಯಾತ್ಮಿಕ ಜ್ಞಾನವನ್ನು ಸಾಧಿಸಲು ಉದ್ದೇಶಿಸಲಾಗುವುದಿಲ್ಲ.

ಈ ದಿನದ ಬಹಳ ದೊಡ್ಡಸ್ತಿಕೆಯ ಯುವಕರಲ್ಲಿ ಭಾರವಾದ ಉಪೇಕ್ಷೆಯನ್ನು ತಡೆಯಲಾಗದ ಡಾ.ಶ್ರೀಮಾಲಿಯವರಿಂದ ಕೆಲ ಯುವಕರನ್ನು ಸನ್ನಾಹ ಮಾಡಲಾಗಿದೆ. ಅವರು ಅವರ ಮೇಲೆ ಎಣಿಸುವರು, ಮತ್ತು ಅವರು ತಮ್ಮಿಂದ ಎಲ್ಲಾ ಜ್ಞಾನವನ್ನು ಪಡೆದು ಅದನ್ನು ಅವರಿಂದ ಪೀಳಿಗೆಗೆ ಕೊಡಲಾಗುತ್ತದೆ ಎಂದು ಸಮಗ್ರ ನಂಬಿಕೆವುಳ್ಳವರಾಗಿದ್ದಾರೆ.

ನನಗೆ ಅವಕಾಶವಿದ್ದಿದ್ದರೆ ನನ್ನ ಜೀವನ ಪೂರ್ತಿ ಡಾ.ಶ್ರೀಮಾಲಿಯವರ ಮನೆಯಲ್ಲೇ ಇರಬೇಕಿತ್ತು. ಈ ಅಲ್ಪಾವಧಿಯ ಒಂದು ತಿಂಗಳಲ್ಲಿ ನಾನು ಡಾ.ಶ್ರೀಮಾಲಿಯವರಿಂದ ಏನೇನು ಸಂಗ್ರಹಿಸಿದೆನೋ ನನ್ನ ಸ್ವಂತ ಮೂಲಗಳಿಂದ ಸಂಗ್ರಹಿಸಿರುವುದಕ್ಕೆ ಹೋಲಿಸಲಾರದಷ್ಟು ಹೆಚ್ಚಾಗಿತ್ತು. ನನಗೇನೇನು ಬೇಕೋ ಅದನ್ನು ಕೊಡಲು ಅವರು ಮತ್ಸರಪಡಲಿಲ್ಲ. ಈಕಡೆ ನನಗೆ ಅವರು ಏನೇನು ಕೊಡಬೇಕೆಂದಿದ್ದರೋ ಅದನ್ನು ಪಡೆಯಲು ನಾನು ನಾಚಲಿಲ್ಲ. ಅವರು ಒಂದು ಗಾದೆಯ ಬಾದಾಮಿ ಇದ್ದಹಾಗೆ ಕಂಡರು—ತೋರಿಕೆಗೆ ಅದರ ಚಿಪ್ಪಿನ ಹಾಗೆ ಗಟ್ಟಿ ಮತ್ತು ಒಳಗೆ ಅದರ ಬೀಜದ ತರಹ ಮೃದು ಹಾಗೂ ಸಿಹಿ.

ಬಾಹ್ಯರೂಪದಲ್ಲಿ ನೋಡಿದಾಗ ಡಾ.ಶ್ರೀಮಾಲಿಯವರು ಅಂತಹ ಸರ್ವತೋಮುಖದ ಅಸಾಧಾರಣ ಬುದ್ಧಿಶಕ್ತಿಯವರ ಹಾಗೆ ಕಾಣುವುದಿಲ್ಲ. ಮೂಲದಲ್ಲಿ ಅವರು ಒಬ್ಬ ಜೋತಿಷ್ಯರು. ಜೋತಷ್ಯಾಸ್ತ್ರದ ಕ್ಷೇತ್ರದಲ್ಲಿ ಕೇವಲ ಭಾರತದಲ್ಲೇ ಅಲ್ಲ ಪ್ರಪಂಚದಾದ್ಯಂತ ಅವರು ಅಧಿಕಾರಯುಕ್ತರೆಂದು ಅಂಗೀಕೃತರಾಗಿದ್ದಾರೆ.

ಹೆಚ್ಚು ಮುಖ್ಯವಾಗಿ ಅವರು ತಂತ್ರದ ಮೇಲೆ ಬಹಳ ಅಧಿಕಾರವುಳ್ಳವರೆಂದು ಹೇಳಲಾಗಿದೆ. ಈ ಕ್ಷೇತ್ರದಲ್ಲಿ ಅವರನ್ನು ಮೀರಿಸದೆಯೇ ಉಳಿದಿದ್ದಾರೆ. ರತ್ನಚಿಕಿತ್ಸೆ ಮತ್ತು ಆಯುರ್ವೇದದಲ್ಲೂ ಅವರ ಕೊಡುಗೆಗಳು ಕಡಿಮೆಯಾಗಿಲ್ಲ.

ಸಮ್ಮೋಹನ ಕ್ಷೇತ್ರದಲ್ಲಿ ಅವರು ಒಂದು ಆಳವಿಲ್ಲದ ಸಮುದ್ರದಂತೆ. ಅವರು ಸುಲಭವಾಗಿಯೇ ಪ್ರಪಂಚದಲ್ಲಿಯೇ ಅತೀ ಶ್ರೇಷ್ಠ ಸಮ್ಮೋಹಕರು. ಸಮ್ಮೋಹನ ಕ್ಷೇತ್ರದಲ್ಲಿ ನಮ್ಮಂತಹ ಬಹಳ ಜನರು, ಡಾ.ಶ್ರೀಮಾಲಿಯವರ ಸಮ್ಮೋಹನದ ಜ್ಞಾನದಲ್ಲಿನ ಒಂದು ಅಂಶಕ್ಕಿಂತಲೂ ಹೆಚ್ಚು ಇಲ್ಲದಿದ್ದರೂ ನಾವೇ ಶ್ರೇಷ್ಠರೆಂದು ತಿಳಿಯಲಾರಂಭಿಸಿದ್ದೆವು.

ಹಾಗಿದ್ದರೂ ಕರ್ತವ್ಯವನ್ನು ಕಾರ್ಯಗತಮಾಡುವುದೇ ಡಾ.ಶ್ರೀಮಾಲಿಯವರ ಜೀವನದ ಬಹುದೊಡ್ಡ ಮತ್ತು ಶ್ರೇಷ್ಠವಾದ ಸಾಧನೆಯಾಗಿದೆ. ಸ್ವಂತ ಪ್ರಚಾರ ಮತ್ತು ಸ್ವಂತಹೊಗಳಿಕೆ ಈ ಒಂದು ಗಮನಾರ್ಹವಾದ ಸಾಧನೆಗೆ ಉಗ್ರವಾದ ಅಡಚಣೆಗಳು ಎಂದು ಅವರು ಹೇಳುತ್ತಾರೆ.

ಈಗಿನ ಪೀಳಿಗೆಯು ಅವರು ಹೇರಳವಾಗಿ ಅರ್ಹರಾಗಿರುವಷ್ಟು ಗೌರವಿಸಲಿಕ್ಕಿಲ್ಲ ಎಂದು ಓರ್ವರು ಭಯಪಡುತ್ತಾರೆ. ಆದರೆ ಓರ್ವರಿಗೆ ಮುಂಬರುವ ಪೀಳಿಗೆಯು ಹಿಂದೆ ಬೀಳುವುದಿಲ್ಲವೆಂದು ಖಚಿತವಾದ ನಿರ್ದಿಷ್ಟತೆ ಇದೆ. ಮುಂಬರುವ ಪೀಳಿಗೆಯು ಗುಪ್ತಜ್ಞಾನಗಳ ಬಹಳ ಕತ್ತಲು ಮೂಲೆಗಳನ್ನು ಪ್ರಕಾಶಿಸುವುದಕ್ಕೆ ಮತ್ತು ಭವಿಷ್ಯಕ್ಕೆ ವೈಭವವನ್ನು ಸಂರಕ್ಷಿಸುದುದಕ್ಕೆ ಸದಾ ಅವರಿಗೆ ಚಿರಋಣಿಯಾಗಿರುತ್ತದೆ.

ಮೂಲದಲ್ಲಿ ನಾನೊಬ್ಬ ವಿಮರ್ಶಕನು. ಎಲ್ಲಾದರೂ ನಾನು ಜಾರುವಿಕೆ ಅಥವಾ ನಿಬಂಧನೆಯನ್ನು ನೋಡಿದಾಗ ನಾನು ಕಠೋರವಾದ ಟೀಕೆಯೊಂದಿಗೆ ಹೊರ ಬರುವೆ. ಹೀಗಾದರೂ ಡಾ.ಶ್ರೀಮಾಲಿಯವರಿಗೆ ನಾನು ಕೊಡತಕ್ಕಂತಹ ಒಂದೇ ಒಂದು ಟೀಕೆ ಎಂದರೆ ಅವರು ತಮ್ಮಷ್ಟಕ್ಕೆ ತಾವೇ ತಮ್ಮ ಕೆಲಸದಲ್ಲಿ ಸೀಮಿತಗೊಂಡಿರುವುದು. ಅವರು ಎಲ್ಲಾ ತರಹದ ಜಾಹೀರಾತು ಮತ್ತು ಪ್ರಚಾರಗಳನ್ನು ಇಷ್ಟಪಡುವುದಿಲ್ಲ.

ಅಂತಹ ಸಾಧಾರಣವಾಗಿ ಕಾಣುವ ಮನುಷ್ಯರನ್ನು ಹೇಗಾದರೂ, ಓರ್ವರು ಅವರಲ್ಲಿ ಅಷ್ಟೊಂದು ಶ್ರೇಷ್ಠತೆ ಹುದುಗಿಕೊಂಡಿವೆ ಎಂದು ಊಹಿಸಲಾಗುವುದಿಲ್ಲ. ನಾನು ಕಂಡಷ್ಟರಲ್ಲಿ ಅವರು ಬರೀ ಶ್ರೇಷ್ಠರಲ್ಲ, ಶ್ರೇಷ್ಠರಲ್ಲಿ ಶ್ರೇಷ್ಠರು.

ಅವರ ಮನೆಯಲ್ಲಿಯ ನನ್ನ ವಾಸವು ಒಂದು ಸ್ವರ್ಗೀಯ ಸ್ಥಳದಲ್ಲಿ ನಿವಾಸಿಸಿದಹಾಗಾಗಿತ್ತು. ನಾನು ಭಾರತವನ್ನು ಬಿಡಲೇಬೇಕಾದ ಕ್ಷಣ ಬಂದಾಗಿತ್ತು, ಏಕೆಂದರೆ ಮನೆಯಲ್ಲಿ ತುರ್ತಾಗಿ ನನ್ನ ಅವಶ್ಯಕತೆಯಿತ್ತು, ನನಗೆ ಬಹಳವೇ ಇಷ್ಟವಿರಲಿಲ್ಲ.

ನಿಜವಾಗಿಯೂ ಬೀಳ್ಕೊಡುಗೆಯ ಕ್ಷಣಗಳು ಅತಿಯಾದ ನೋವಿನದವಾಗಿದ್ದವು ನನಗೆ ಅವರಿಂದ ದೊರೆತ ಅಭೂತಪೂರ್ವವಾದ ಮಮತೆ ಮತ್ತು ನಿರ್ದಿಷ್ಟವಾಗಿ, ಅವರ ಹೆಂಡತಿಯಿಂದ—ಅವರನ್ನು ನಾನು ಮಾತಾಜಿ ಎಂದು ಕರೆಯುತ್ತಿದ್ದೆ—ಎಷ್ಟು ಗಾಢವಾಗಿತ್ತೆಂದರೆ ನಾನು ಅವರ ಕುಟುಂಬದ ಒಬ್ಬ ಸದಸ್ಯನಾಗಿ ಎಣಿಸಲಾರಂಭಿಸಿದ್ದೆ. ಈ ಒಂದು ತಿಂಗಳ ತಂಗುವಿಕೆಯ ನಂತರ ನಾನು ಭಾರತಕ್ಕೆ ಸುಮಾರು ಮೂರು ಸಾರಿ ಭೇಟಿ ಕೊಟ್ಟೆ, ಅದು ನನ್ನ ತೀರ್ಥಯಾತ್ರೆಯನ್ನು ತಲುಪಲು—ಡಾ.ಶ್ರೀಮಾಲಿಯವರ ನಿವಾಸ.

ಹತಾಶಭಾವನೆಯಿಂದ, ಹತ್ತಿರದಿಂದ ಮತ್ತು ವಿಮರ್ಶಾತ್ಮಕವಾಗಿ ಸಂಪೂರ್ಣ ಒಂದು ತಿಂಗಳಲ್ಲಿ ಡಾ.ಶ್ರೀಮಾಲಿಯವರಲ್ಲಿ ಯಾವುದಾದರೂ ಒಂದೇ ಒಂದು ಕಳಂಕವನ್ನು ಗುರುತಿಸಲು ಪ್ರಯತ್ನಿಸಿದನೇ. ನನ್ನ ಸ್ವಂತ ದೇಶದಲ್ಲಿ ಮತ್ತು ಆಚೆಗೂ ಸಹ ನಾನು ಒಳ್ಳೆ ಅರ್ಹತೆಯ ಕುಪ್ರಸಿದ್ಧವಾದ ಕರುಣೆಯಿಲ್ಲದ ವಿಮರ್ಶಕನೆಂದು ಹೆಸರು ಗಳಿಸಿಕೊಂಡಿದ್ದೆ. ಪಕ್ಷಪಾತವಿಲ್ಲದೆ ವೀಕ್ಷಿಸಿದಾಗ ಡಾ.ಶ್ರೀಮಾಲಿಯವರ ಕಾಂತಿಯುತವಾದ ವ್ಯಕ್ತಿತ್ವದಲ್ಲಿ ನಾನು ಒಂದೇ ಒಂದು ಕಳಂಕವನ್ನು ಕಾಣಲಿಲ್ಲ.

ನಿಜವಾಗಿಯೂ ಡಾ.ಶ್ರೀಮಾಲಿಯವರು ಕೇವಲ ಒಬ್ಬ ವ್ಯಕ್ತಿ ಮಾತ್ರವಲ್ಲ ಅವರನ್ನು ಒಂದು ಸಂಪೂರ್ಣ ಸಂಸ್ಥೆಯೆಂದು ತಿಳಿಯಲಾಗಿದೆ. ನಮ್ಮ ಸಮಕಾಲೀನರಲ್ಲಿ ಅವರಿರುವುದು ನಮ್ಮ ಬೆಲೆಕಟ್ಟಲಾಗದ ಸಾಧನೆಗೆ ನಮಗೆ ನಿಜಕ್ಕೂ ಹೆಮ್ಮೆ ಎನಿಸಿದೆ.

ಈ ಒಂದು ಮುನ್ನುಡಿಯ ಅಧ್ಯಾಯಕ್ಕೆ ನನಗೆ ಬರೆಯಲು ಸಮ್ಮತಿಸುದುದಕ್ಕೆ ನಾನು ಡಾ.ಶ್ರೀಮಾಲಿಯವರಿಗೆ ಕೃತಜ್ಞನಾಗಿದ್ದೇನೆ. ಈ ಒಂದು ಯುಗಾರಂಭದ ಪುಸ್ತಕಕ್ಕೆ ನನ್ನ ಹೇಳಿಕೆಯನ್ನು ಕೊಡಲು ನನಗೆ ಅವಕಾಶಮಾಡಿ ಕೊಟ್ಟುದುದು ಒಂದು ಅಪರೂಪದ ಅದೃಷ್ಟವೆಂದು ನಾನು ಪರಿಗಣಿಸುವೆ.

*ಡಬ್ಲ್ಯೂ. ಬಿ. ಹುರ್‌ಸನ್.*

# ಅಧ್ಯಾಯ 1

# "ಪ್ರಾರಂಭ"

ಸಮ್ಮೋಹನವು (ಹಿಪ್ನಾಟಿಸಂ) ಭಾರತದ ಪ್ರಾಚೀನ ಜ್ಞಾನವಾಗಿದೆ. ಅದು ನಮ್ಮ ಆಚಾರಗಳಲ್ಲಿ ಆಳವಾಗಿ ಬೇರೂರಿದೆ. ಒಂದು ಆಧ್ಯಾತ್ಮಿಕ ಬಹಿರ್ನೋಟವು ಯಾವಾಗಲೂ ಭಾರತೀಯ ಜೀವನದ ಗುಣಲಕ್ಷಣವಾಗಿದೆ. ಈ ಕಾರಣಕ್ಕಾಗಿ ಆಧ್ಯಾತ್ಮಿಕತೆ ಮತ್ತು ತತ್ವಜ್ಞಾನಗಳು ಭಾರತೀಯ ಜೀವನದ ಹೆಜ್ಜೆಹೆಜ್ಜೆಯಲ್ಲೂ ಪ್ರಾಮುಖ್ಯತೆಯನ್ನು ರೂಪಿಸಿಕೊಂಡಿವೆ. ಪ್ರಾಚೀನ ಭಾರತ ಗ್ರಂಥಗಳಲ್ಲಿ ಸಮ್ಮೋಹನವನ್ನು *ಪ್ರಾಣವಿದ್ಯೆ* ಅಥವಾ *ತ್ರಿಕಾಲವಿದ್ಯೆ*ಯೆಂದು ಸಹ ಕರೆಯಲಾಗಿದೆ.

ಅದರ ಪ್ರಾರಂಭದ ಬೆಳವಣಿಗೆಯ ಭವ್ಯತೆಯ ನಂತರ ಈ ಜ್ಞಾನವು ಹೆಚ್ಚಾಗಿ ಕತ್ತಲೆಯಲ್ಲಿಯೇ ಹೂತುಕೊಂಡಿತ್ತು. ಕೆಲವು ಕುಟುಂಬಗಳ ವಿಶೇಷ ರಕ್ಷಣೆಯಲ್ಲಿಯೇ ಉಳಿದಕೊಂಡ ಅದನ್ನು ಮೋಡಿಯ ಕ್ಷೇತ್ರಕ್ಕೆ ನೂಕಲಾಗಿತ್ತು.

ಹೇಗಾದರೂ, ಪಶ್ಚಿಮದಲ್ಲಿ ಸಮ್ಮೋಹನವು ಕುತೂಹಲದ ಮತ್ತು ಗೂಢತ್ವದ ವಸ್ತುವಾಗಿತ್ತು. ನಿಜ ಪಶ್ಚಿಮದ ಜನರಲ್ಲಿ ಶೋಧನೆಗೆ ಮತ್ತು ಅನ್ವೇಷಣೆಗೆ ತೀವ್ರವಾದ ಒಲವಿತ್ತು. ಭಾರತೀಯ ಋಷಿಗಳ ಚಮತ್ಕಾರಗಳನ್ನು ನೋಡಲಾಗಿ ಅವರು ಸಹಜವಾಗಿಯೇ ಚಕಿತಗೊಂಡರು. ಅವರು ಭಾರತಕ್ಕೆ ಭೇಟಿಕೊಟ್ಟು, ಯೋಗಿಗಳು ಅಸಾಧ್ಯಗಳನ್ನು ಸಾಧಿಸುವುದನ್ನು ತಮ್ಮಷ್ಟಕ್ಕೆ ತಾವೇ ನೋಡಿಕೊಂಡರು. ಕೇವಲ ಬೆರಳುಗಳ ಸ್ಪರ್ಶದಿಂದ ಅವರು ರೋಗಿಗಳನ್ನು ತಮ್ಮ ಕಾಯಿಲೆಗಳಿಂದ ದೂರಮಾಡುತ್ತಿದ್ದರು, ಬಹಳ ದೂರ ವಾಸಿಸುವಂತಹ ವ್ಯಕ್ತಿಗಳ ಬಗ್ಗೆ ಜ್ಞಾನವನ್ನು ಅರುಹುತ್ತಿದ್ದರು ಮತ್ತು ಪ್ರಪಂಚದಾದ್ಯಂತ ಏನನ್ನಾದರೂ ಎಲ್ಲಿಯಾದರೂ ತಮ್ಮ ಎದುರಿನಲ್ಲಿ ಕೂತುಕೊಂಡ ವ್ಯಕ್ತಿಯನ್ನು ನೋಡುವಂತೆ ಸ್ಪಷ್ಟವಾಗಿ ನೋಡುತ್ತಿದ್ದರು.

ಇದಲ್ಲದೆ, ಅವರು ಗತಕಾಲದಲ್ಲಿ ಆಳವಾಗಿ ಅಗೆದು ಮರೆಯಾಗಿರುವುದರಲ್ಲಿ ಹಿಂದೆಯೇ ಹೂತುಕೊಂಡಿರುವಂತಹ ನಿಜಸಂಗತಿಗಳನ್ನು ಹೊರತೆಗೆದರು.

ಸ್ಪರ್ಷ ಮತ್ತು ದೃಷ್ಟಿಯಾಚೆಗೆ ಇರುವಂತಹ ಜ್ಞಾನವು, ಬಹಳ ಹೆಚ್ಚು ಚಮತ್ಕಾರಿಕವಲ್ಲದಿದ್ದರೂ,ಪ್ರಾಕೃತಿಕ ವಿಜ್ಞಾನಗಳಷ್ಟೇ ನಿಜವೆಂಬುದು ನಿಜವಾಗಿಯೂ ಮೊದಲಬಾರಿಗೆ, ಈ ಸಂಪೂರ್ಣ ವ್ಯಾಯಾಮದಿಂದ ಚಕಿತಗೊಂಡ ಪಾಶ್ಚಾತ್ಯರು ತಮಗೆ ಅರಿವಾಗಲು ಒಂದು ಕಾರಣವನ್ನು ಕಂಡರು.

ಈ *ಮಾನವ ಪ್ರಕೃತಿಯು* ವಿಜ್ಞಾನಿಗಳನ್ನು ಯಾವಾಗಲೂ ದಿಗಿಲು ಪಡಿಸಿರುವಂತಹ ಒಂದು ವಿಚಿತ್ರ ಮತ್ತು ವಿವರಿಸಲಾಗದ ಸಂಗತಿಯಾಗಿರುವ ಒಂದು ಗೋಜಿನದು. ಅವರು ಶರೀರ ಗೂಢತ್ವವನ್ನು ಗುರುತಿಸಲು ಅದನ್ನು ಭೇದಿಸಿ ಪರೀಕ್ಷಿಸಿದರು ಮತ್ತು ಆದರೂ ಅವರು ಈ ಶರೀರವನ್ನು ಅದರ ಪೂರ್ಣತೆಯಲ್ಲಿ ಗುರುತಿಸಲಾಗಲಿಲ್ಲ. ಹೀಗಿದ್ದರೂ ಅವರು ಶರೀರವನ್ನು ಮನುಷ್ಯದೇಹದಲ್ಲಿ ಅಗೋಚರವಾದ ಮೂಲವಸ್ತುಗಳನ್ನು ಕಂಡುಹಿಡಿದರು ಮತ್ತು ಆದರೂ ಯಾರೇ ಆಗಲಿ ಅವುಗಳ ಅಸ್ತಿತ್ವವನ್ನು ಅಲ್ಲಗಳೆಯುವಹಾಗಿರಲಿಲ್ಲ. ಉದಾಹರಣೆಗೆ: ಮನಸ್ಸು ಅಂತಹ ಒಂದು ಮೂಲವಸ್ತು. ಅದು ಗೋಚರವಾಗದಿದ್ದರೂ ಅದರ ಅಸ್ತಿತ್ವವನ್ನು ಅಸಮ್ಮತಿಸಲಾಗುವುದಿಲ್ಲ. ಶರೀರ ಶಾಸ್ತ್ರಜ್ಞರು ದೇಹವನ್ನು ಭೇದಿಸಿದರು ಆದರೂ ಮನಸ್ಸು ಎಂಬ ಅಂಗದ ನೆಲವನ್ನು ಗೊತ್ತುಮಾಡಲಾಗಲಿಲ್ಲ.

ಹೇಗಾದರೂ, ಅವರು ಮನಸ್ಸು ಎನ್ನುವುದು ದೇಹದ ಬಹಳ ಸೂಕ್ಷ್ಮ ಮೂಲವಸ್ತು ಅದಿಲ್ಲದೆಯೇ

ದೇಹವು ಸಂವೇದನೆ ಮತ್ತು ಉದ್ವೇಗ ರಹಿತವಾದ ಕೇವಲ ಎಲುಬು ಮತ್ತು ಮಾಂಸದ್ದಾಗಿರುತ್ತದೆ ಎಂದು ಒಪ್ಪಿದರು.

ಓರ್ವರು ದೇಹದ ಬಗ್ಗೆ ಎಲ್ಲಾ ತಿಳಿದುಕೊಳ್ಳಲಿಚ್ಛಿಸುವ ಮೊದಲು ಮನಸ್ಸಿನ ಬಗ್ಗೆ ತಿಳಿದುಕೊಳ್ಳುವ ಅವಶ್ಯಕತೆ. ಇರಬೇಕು ಮನಸ್ಸು ಅತೀ ಹೆಚ್ಚಿನ ವೇಗವುಳ್ಳ ದೇಹದ ಮೂಲವಸ್ತು ಎಂದು ಹೇಳಲಾಗಿದೆ. ಆಗಾಗ, ಒಬ್ಬ ವ್ಯಕ್ತಿಯು ಮನಸ್ಸಿನ ಸದ್ಗುಣದಿಂದ ಸ್ವಾಭಾವಿಕವಾದ ರಭಸದಿಂದ ಹೊರತೋರಿಕೆಗೆ ಅಸಾಧ್ಯವಾದುವದನ್ನು ಸಾಧಿಸಬಹುದೆಂದು ನೋಡಲಾಗಿದೆ. ಇಚ್ಛಾಶಕ್ತಿ ಮತ್ತು ಧೃಢಯತ್ನಗಳ ಸಾಮರ್ಥ್ಯದಿಂದ ಓರ್ವನು ತನ್ನ ಜೀವನದ ಅತೀ ಕಷ್ಟಕರವಾದ ತಿರುವುಗಳನ್ನು ನಿಬಾಯಿಸುವುದರಲ್ಲಿ ಯಶಸ್ವಿಯಾಗುತ್ತಾನೆ. ಉದಾಹರಣೆಗೆ ತೆಗೆದುಕೊಳ್ಳಿ, ಒಬ್ಬ ಸಾಯುತ್ತಿರುವ ಮನುಷ್ಯನ ಮಗನು ದೂರದ ಉದ್ಯೋಗದಲ್ಲಿ ಇರುವ ವಿಷಯ, ಆತನು ತನ್ನ ಸಾವಿನ ಮುಂಚೆಯೇ ತನ್ನ ಮಗನನ್ನು ನೋಡಲು ನಿರ್ಧಾರಿತನಾಗಿರುವನು. ವೈದ್ಯರು ಎಲ್ಲಾ ನಂಬಿಕೆಗಳನ್ನು ಬಿಟ್ಟಿದ್ದರೂ ಸಹ ಈ ಉಳುವಿಕೆಯ ಶಕ್ತಿಯ ಸದ್ಗುಣದಿಂದ ತನ್ನ ಮಗನನ್ನು ನೋಡಲು ಸಾಕಷ್ಟುಸಮಯ ಬದುಕುವನು. ಈ ರೀತಿ ನಿರ್ಧಾರಿತ ವ್ಯಕ್ತಿಗಳು ಇನ್ನೂ 3 ರಿಂದ 4 ದಿನಗಳವರೆಗೂ ಬದುಕಿರುವುದನ್ನು ಆಗಾಗ ನೋಡಲಾಗಿದೆ. ಮಗನು ಬಂದ ಕ್ಷಣದಲ್ಲಿ ಈ ನಿರ್ಧಾರವು ಮಾಯವಾಗಿ ಮರುಕ್ಷಣವೇ ಆವ್ಯಕ್ತಿಯು ಸಾಯುವನು. ಅದು ರಭಸಯುಕ್ತವಾದ ಮಾನಸಿಕ ಸಾಮರ್ಥ್ಯದ ಶಕ್ತಿಯಲ್ಲಿ ಮಾತ್ರ ಆತನು ಎಳೆದಾಡುತ್ತಿದ್ದನು.

ಭಾರತೀಯ ಯೋಗಿಗಳು, ಜಾರಿಕೊಳ್ಳುವ ಮೂಲವಸ್ತು—ಮನಸ್ಸು, ಇದನ್ನು ಗ್ರಹಿಸಿಕೊಳ್ಳಲು ತಮ್ಮ ಹೆಚ್ಚಿನ ಸಮಯವನ್ನು ಕಳೆದುದರಲ್ಲಿ ಆಶ್ಚರ್ಯವಿಲ್ಲ. ಅವರು ತಮ್ಮಲ್ಲೇ ನೋಡಿಕೊಂಡು ತಮ್ಮತನದಲ್ಲಿ ಆಳವಾಗಿ ಹೋದರು. ಅವರು ಪಾಂಡಿತ್ಯಗಳೊಡನೆ ಹೊರಬಂದಂತಹದು ಪ್ರಪಂಚದಾದ್ಯಂತ ಅಸೂಯೆಯ ವಿಷಯವಾಗಿತ್ತು. ಇನ್ನೊಂದು ಕಡೆ ಪಾಶ್ಚಾತ್ಯ ತತ್ವಜ್ಞಾನಿಗಳು ತಮ್ಮಷ್ಟಕ್ಕೆ ತಾವೇ ಕೇವಲ ಹೊರಗಿನವಕ್ಕೆ ಒಲವು ತೋರಿಸಿಕೊಂಡರು. ಅವರ ಶೋಧನೆಗಳ ಪ್ರಮುಖ ಒತ್ತಡವು ಪ್ರಾಕೃತಿಕ ದೇಹದ ಇಂದ್ರಿಯೋತ್ತೇಜಕಗಳ ಕಡೆಗೆ ವಾಲುತ್ತಿರುವುದನ್ನು ಲೆಕ್ಕಹಾಕಲಾಗಿತ್ತು. ಅವರು ಪ್ರಾಕೃತಿಕ ದೇಹದ ಪ್ರಪಂಚದ ಲೋಕದಲ್ಲಿ ಕೆಲವು ಮಹತ್ವದ ಮಹತ್ಕಾರ್ಯಗಳಿಂದ ಪ್ರಯೋಜನಪಡೆದುದರಲ್ಲಿ ಅನುಮಾನವಿಲ್ಲ. ಅವರು ಕಡಿಮೆ ಅಲ್ಲದ ಅದೇ ರೀತಿಯ ವಿಧಾನದಲ್ಲಿ ಪ್ರಾಕೃತಿಕ ಪ್ರಪಂಚದ ಕೆಲವು ಸಾಧನೆಗಳ ಕಡೆಯಲ್ಲಿ ಹತ್ತಿರವಾದಾಗ, ಅವಶ್ಯಕವಾಗಿರುವ ಮೂಲವಸ್ತು ಮನಸ್ಸು, ಇದರಿಂದ ತಮ್ಮಷ್ಟಕ್ಕೆ ತಾವೇ ದೂರವಿರುವುದನ್ನು ಕಂಡುಕೊಂಡರು.

ಭಾರತೀಯ ಸಿದ್ಧಿಗಳನ್ನು ನೋಡಿದಾಗ ಮತ್ತು ಭಾರತೀಯ ವಿಧಾನ ಶಾಸ್ತ್ರವನ್ನು ಗ್ರಹಿಸಿಕೊಂಡಾಗ ಮಾತ್ರ ಪಶ್ಚಿಮದವರು ತಮ್ಮ ಸಫಲದಾಯಕವಾದ ವಿಧಾನಶಾಸ್ತ್ರದಿಂದ ಹಿಂದೆ ನೆಗೆದು ಮತ್ತು ಇರುವಿಕೆಯ ಅಂತರ್ಪ್ರಪಂಚದ ಮೇಲೆ ದೃಷ್ಟಿಹಾಯಿಸಿದರು. ಈ ಒಂದು ವಿಧಾನಶಾಸ್ತ್ರವನ್ನು ಪ್ರಾರಂಭಿಸಿ ಮತ್ತು ಸಮ್ಮೋಹನಕ್ಕೆ ವೈಜ್ಞಾನಿಕ ಅಧ್ಯಯನವನ್ನು ತಂದ ಮೊದಲ ಪಾಶ್ಚಾತ್ಯ ಚಿಂತಕರಾದ ಪ್ರಖ್ಯಾತ ವಿಜ್ಞಾನಿ ಡಾ॥ಎನ್‌ಟನ್ ಮೆಸ್ಮರ್‌ರವರಿಗೆ ಅದರ ಗಣ್ಯತೆ ಸಲ್ಲಬೇಕು. ಅವರ ಮೇಲೆಯೇ ಈ ವಿಜ್ಞಾನಕ್ಕೆ ಮೆಸ್ಮರಿಜಂ ಎಂಬ ಹೆಸರು ಬಂದಿತು.

ಡಾ॥ಮೆಸ್ಮರ್‌ರವರು ಮೇ 23. 1734 ರಲ್ಲಿ ಜನ್ಮಿಸಿದರು. ಅವರು ಭಾರತೀಯ ಯೋಗಿಗಳ ಸಾಧನೆಗಳ ಹತ್ತಿರದ ಅಧ್ಯಯನವನ್ನು ಅನುಸರಿಸಿ ಅವರು ಈ ಸಂಪೂರ್ಣ ಸೃಷ್ಟಿ ಎರಡೂ ಸಜೀವ ಮತ್ತು ನಿರ್ಜೀವಗಳು ಒಂದು ಅಗೋಚರವಾದ ಶಕ್ತಿಯಿಂದ ಹರಡಿಕೊಂಡಿರುವುದನ್ನು

ಸ್ಪಷ್ಟವಾಗಿ ಗ್ರಹಿಸಿಕೊಳ್ಳಲಾರಂಭಿಸಿದರು. ಈ ಅಗೋಚರವಾದ ಶಕ್ತಿಯನ್ನು ಗುರುತಿಸಿ ಮತ್ತು ಸೃಜನಾತ್ಮಕವಾಗಿ ಉಪಯೋಗಿಸಲು ಅತ್ಯಗತ್ಯವಾಗಿದೆ ಎಂದು ಅವರಿಗೆ ಅನ್ನಿಸಿತು. ಏಕೆಂದರೆ ಅವರು ಎಲ್ಲೆಲ್ಲೂ ಇರುವ ಈ ಅಗೋಚರವಾದ ಶಕ್ತಿಯು[1] ಈ ಸಜೀವ ಜಗತ್ತಿನ ಮೇಲೆ ಅದ್ವಿತೀಯವಾಗಿ ಪ್ರಭಾವವುಳ್ಳದ್ದು ಅದರಲ್ಲೂ ಹೆಚ್ಚಾಗಿ ಮನುಷ್ಯನ ಸಂಬಂಧದಲ್ಲಿ ಎಂದು ನೋಡಲಾರಂಭಿಸಿದರು.

ಓರ್ವನಿಗೆ, ಪ್ರತೀ ಮನುಷ್ಯ ಜೀವಿಯು ಒಂದು ಆಕರ್ಷಣ ಶಕ್ತಿಯಿಂದ ಸಂಪನ್ನವಾಗಿರುವುದು ಇಬ್ಬರು ವ್ಯಕ್ತಿಗಳು ಕಲೆತಾಗ ಅದರ ಅಸ್ತಿತ್ವವು ಗೊತ್ತಾಗುತ್ತದೆ. ಈ ಕಲೆಯುವಿಕೆಯು ಹುದುಗಿರುವ ಶಕ್ತಿಯನ್ನು ಈಚೆಗೆಳೆಯುತ್ತದೆ. ಪಾಸಿಟಿವ್ ಮತ್ತು ನೆಗೆಟಿವ್ ಸ್ವರೂಪಗಳಲ್ಲಿ ಕಾರ್ಯನಡೆಸುತ್ತಿದ್ದ ಅದನ್ನು ಅವರು ಜೀವಿಯ ಆಕರ್ಷಣೀಯ ಶಕ್ತಿಯೆಂದು ಕರೆದರು. ಪುರುಷರಲ್ಲಿ ಪಾಸಿಟಿವ್ ಸ್ವರೂಪ ಮತ್ತು ಸ್ತ್ರೀಯರಲ್ಲಿ ನೆಗೆಟಿವ್ ಸ್ವರೂಪಗಳು ಕಾರ್ಯ ನಡೆಸುವವು.

ಎರಡೂ ಸ್ವರೂಪಗಳು ಪರಸ್ಪರ ಕಲೆತಾಗ ತಪ್ಪಿಲ್ಲದೆಯೇ ಪೂರ್ಣ ಬಲವನ್ನು ಸೂಚಿಸುವಂತಹ ಅದರ ಪರಿಣಾಮದ ಆಕಾರವು ಒಂದು ಸಂಪೂರ್ಣ ವೃತ್ತವಾಗಿ ಬೆಳೆಯುವುದು. ಉದಾಹರಣೆಗೆ ತೆಗೆದುಕೊಳ್ಳಿ, ಒಬ್ಬಾನೊಬ್ಬ ಗಂಡಸು ಒಬ್ಬಾನೊಬ್ಬ ಹೆಂಗಸನ್ನು ಅನಿರೀಕ್ಷಿತವಾಗಿ ಕಂಡಾಗ ಅವನ ಕಣ್ಣುಗಳು ಶೀಘ್ರವಾಗಿ ಹೊಳೆಯುವವು. ಸಾಧಾರಣವಾಗಿ ಅವನ ದೇಹವನ್ನು ಕೆಳಗೆ ಮೇಲೆ ನಿಟ್ಟುಸಿರುಬಿಡುವಂತಹ ಒಂದು ವಿಶೇಷ ವಿದ್ಯುತ್ ಸೆಳೆತದಿಂದ ಈ ಪ್ರತಿಕ್ರಿಯೆಯಾಗುತ್ತದೆ. ಪಾಸಿಟಿವ್ ಅಯಸ್ಕಾಂತವು ನೆಗೆಟಿವ್ ಅಯಸ್ಕಾಂತವನ್ನು ಕಲಿಯಲು ಹಾತೊರೆಯುತ್ತದೆ. ಈ ಒಂದು ವಿಧಾನದಿಂದ ಮಾತ್ರ ನಮಗೆ ಸಂಪೂರ್ಣ ವೃತ್ತ ದೊರೆಯುವುದು. ಡಾ.ಮೆಸ್ಮರ್‌ರವರು ವಿಮರ್ಶಿಸಿದಹಾಗೆ ಪಕ್ಷಿಗಳು ಮತ್ತು ಪ್ರಾಣಿಗಳೂ ಸಹ ಇದೇ ರೀತಿ ಪ್ರತಿಕ್ರಿಯಿಸುತ್ತವೆ. ಪಾಸಿಟಿವ್ ಮತ್ತು ನೆಗೆಟಿವ್ ಸೆಳೆತಗಳು ಕಲೆತಾಗ ಸಹ ಒಂದು ನಿರ್ದಿಷ್ಟವಾದ ಆಕರ್ಷಣಶಕ್ತಿಯು ಹುಟ್ಟುತ್ತದೆ.

ಡಾ:ಮೆಸ್ಮರ್‌ರವರು ವಿಮರ್ಶಿಸಿದ ಹಾಗೆ ಎಲ್ಲಾ ಜೀವಧಾರಿಯು ಆಕರ್ಷಣ ಶಕ್ತಿಯಿಂದ ವ್ಯಾಪಿಸಿಕೊಂಡಿದೆ. ನಾವು ಯಾರಿಗಾದರೂ ಕೈ ಕುಲಕನ್ನು ಕೊಟ್ಟಾಗ ನಮಗೆ ಗೆದ್ದಹಾಗೆ ಅಥವಾ ಗರ್ವಿಸಿದ ಹಾಗೆನ್ನಿಸುತ್ತದೆ. ಈ ವಿವಿಧ ತರಹದ ಅನಿಸಿಕೆಗಳಿಗೆ ಮುಖ್ಯಕಾರಣವೇನೆಂದರೆ ಒಬ್ಬರಿಗೆ ಇನ್ನೊಬ್ಬರಿಗಿಂತ ಹೆಚ್ಚಿನ ಆಕರ್ಷಣಶಕ್ತಿ ಇರಬಹುದು.

ಡಾ.ಮೆಸ್ಮರ್‌ರವರು 1775ರಲ್ಲಿ ಮೊದಲಬಾರಿಗೆ ತಮ್ಮ ಅನ್ವೇಷಣೆಗಳನ್ನು ಬಯಲುಪಡಿಸಿದಾಗ, ಯೂರೋಪ್ ಒಂದು ದೊಡ್ಡ ಕೋಲಾಹಲಕ್ಕೊಳಗಾಯಿತು. ಅದು ಅಂಧನಂಬಿಕೆಯ ಗುಣಲಕ್ಷಣವಿರುವ ಒಂದು ಯುಗವಾಗಿತ್ತು.

ಕೆಲವರು ಡಾ.ಮೆಸ್ಮರ್‌ರವರ ಅನ್ವೇಷಣೆಗಳನ್ನು ಪ್ರಶಂಸಿದಾಗ ಇನ್ನುಳಿದವರು ಅದು ಅಧರ್ಮ ಮತ್ತು ಅದು ಪ್ರಾಕೃತಿಕವಾದ ಸಂಗತಿಗಳಿಗೆ ವಿರುದ್ಧವಾದುದು ಎಂದು ಉಚ್ಚರಿಸಿದರು. ಆ ಆಸ್ಟ್ರಿಯನ್ ಸರ್ಕಾರವು ಅದನ್ನು ದೊಡ್ಡ ಅಪರಾಧವೆಂದು ಪರಿಗಣಿಸಿ ಮತ್ತು ಅವರನ್ನು 48 ಗಂಟೆಯೊಳಗಾಗಿ ದೇಶವನ್ನು ಬಿಡಲು ಆಜ್ಞಾಪಿಸಿತು.

ಆಸ್ಟ್ರಿಯದಿಂದ ಗಡಿಪಾರಾದ ಡಾ.ಮೆಸ್ಮರ್ ರವರು ಪ್ಯಾರಿಸ್‌ನಲ್ಲಿ ನೆಲೆಗೊಂಡು ಅಲ್ಲಿ ವ್ಯವಸ್ಥಿತವಾದ ದವಾಖಾನೆಯನ್ನು ಸ್ಥಾಪಿಸಿದರು. ಆಗಿನಿಂದ ಅವರು ಹಲವಾರು ಪ್ರಯೋಗಗಳನ್ನು ಯಶಸ್ವಿಯಾಗಿ

1. ಭಾರತೀಯ ಯೋಗಿಗಳಿಂದ ಪ್ರಾಣಶಕ್ತಿಯೆಂದು ಗುರುತಿಸಿರುವಂತಹುದು. ಅದನ್ನು ಬಯೋ ಎನರ್ಜಿ ಎಂದು ಸಹ ಕರೆಯಲಾಗಿದೆ.

ನಡೆಸಿದರು ಮತ್ತು ಆಕರ್ಷಣ ಶಕ್ತಿಯಿಂದ ದೀರ್ಘಕಾಲದ ವ್ಯಾಧಿಗಳನ್ನು ಗುಣಪಡಿಸಬಹುದೆನ್ನುವುದನ್ನು ಸಹ ಸಾಬೀತು ಪಡಿಸಿದರು.

ಅವರು ದವಾಖಾನೆಯ ಒಂದು ಕೊಠಡಿಯನ್ನು ಆಯ್ದು ಅದರ ಗೋಡೆಗಳಲ್ಲಿ ಆಕರ್ಷಣಾಶಕ್ತಿಯನ್ನು ಹಾಕಿದರು. ಗೋಡೆಗಳಲ್ಲಿ ಹಚ್ಚಿರುವಂತಹ ಅಯಸ್ಕಾಂತಗಳು ಕಣ್ಣಿಗೆ ಕಾಣುತ್ತಿರಲಿಲ್ಲ ಮತ್ತು ಆದರೂ ಅವುಗಳದೇ ಆದ ಎಳೆತವನ್ನು ಹೊರಸೂಸುತ್ತಿದ್ದವು. ಕೊಠಡಿಯಲ್ಲೆಲ್ಲಾ ಮಧುರವಾಸನೆಯ ಪರಿಮಳವನ್ನು ಸಹ ಸಿಂಪಡಿಸಿದರು. ಕೊಠಡಿಯ ಆಹ್ಲಾದಕರವಾದ ವಾತಾವರಣವನ್ನು ಹೆಚ್ಚಿಸಲು ಅವರು ಕೇವಲ ಕೊಠಡಿಯ ಹೊರಗೆ ಸೌಮ್ಯ ಸಂಗೀತವನ್ನು ಏರ್ಪಡಿಸಿದ್ದರು. ದೀರ್ಘಕಾಲದ ವ್ಯಾಧಿಗಳಿಂದ ನರಳುತ್ತಿದ್ದ ರೋಗಿಗಳನ್ನು ಆ ಕೊಠಡಿಯಲ್ಲಿ ಮಲಗಿಸಲಾಗುತ್ತಿತ್ತು. ತಾವು ಬೇಗನೇ ವಾಸಿಯಾಗುತ್ತಿದ್ದಾರೆನ್ನುವ ಆಜ್ಞೆಯನ್ನು ಅವರಲ್ಲಿ ಅವರು ನೆಟ್ಟರು.

ಗೋಡೆಗಳಲ್ಲಿ ನೆಟ್ಟ ಅಯಸ್ಕಾಂತಗಳಲ್ಲಿಯೂ ಮತ್ತು ರೋಗಿಗಳ ದೇಹಗಳಲ್ಲಿ ಹುದುಗಿರುವಂತಹ ಆಕರ್ಷಣಾಶಕ್ತಿಗಳ ನಡುವೆಯೂ ಆದ ಅಂತರ್ಕಾರ್ಯದಿಂದ ರೋಗಿಗಳಿಗೆ ಬಹಳಷ್ಟು ಹಗುರುತನ ಕೊಟ್ಟಿತು. ಅಲ್ಲದೆ ಕೇವಲ ಕೊಠಡಿಯ ಆನಂದತೆಯಿಂದ ಕೆಲವು ಸಾರಿ ರೋಗಿಗಳು ತಮ್ಮ ನೋವುಗಳನ್ನೇ ಮರೆತುಬಿಡುತ್ತಿದ್ದರು. ಆಕರ್ಷಿತವಾದ ಸಣ್ಣ ಸೀಸೆಗಳಲ್ಲಿ ತುಂಬಿದ್ದರೂ, ಔಷಧಿಗಳಿಗಾಗಿ ಅವರು ಸರಳ ನೀರನ್ನು ಅವರಿಗೆ ಕೊಟ್ಟರು. ರೋಗಿಗಳಿಗೆ ತಮ್ಮನ್ನು ವಿಶೇಷ ರೀತಿಯಲ್ಲಿ ನೋಡಿಕೊಳ್ಳುತ್ತಿದ್ದಾರೆಂಬ ತೃಪ್ತಿಗಾಗಿ ಸಣ್ಣಸೀಸೆಗಳ ಮೇಲೆ ಎಲ್ಲಾ ತರಹದ ಹೆಚ್ಚಿನದ್ರಢತೆಯ ಚೀಟಿಗಳನ್ನು ಹಚ್ಚಲು ಎಚ್ಚರವಹಿಸಿದರು.

ಈ ಅನುಭವವು ಬಹಳಷ್ಟು ರೋಗಿಗಳನ್ನು ಗುಣಮುಖ ಮಾಡಿತು ಮತ್ತು ಅವರಿಗೆ ಫ್ರಾನ್ಸ್ ನಾದ್ಯಂತ ಜನಪ್ರಿಯತೆಯನ್ನು ಗಿಟ್ಟಿತು. ಬಹಳ ಉತ್ತಮಶ್ರೇಣಿಯ ಅಧಿಕಾರಿಗಳು, ಮತ್ತು ಮಂತ್ರಿಗಳು ದವಾಖಾನೆಗೆ ಭೇಟಿಕೊಟ್ಟು ಸಂಪೂರ್ಣಗುಣಮುಖರಾಗಿ ಹಿಂದಿರುಗಿದರು.

ಡಾ:ಮೆಸ್ಮರ್‌ರವರು ಈ ಪ್ರಯೋಗಗಳನ್ನು ನಡೆಸುತ್ತಿದ್ದಾಗ ಬೇರೆ ರೀತಿಯಲ್ಲಿ ಸಂಪೂರ್ಣ ದೇಹವನ್ನು ವ್ಯಾಪಿಸಿಕೊಂಡಿರುವ ಆಕರ್ಷಣ ಶಕ್ತಿ ಬೆರಳಿನ ತುದಿಗಳಲ್ಲಿ ಹೆಚ್ಚು ಕೇಂದ್ರೀಕೃತವಾಗಿದೆ ಎಂದು ಅಭಿಪ್ರಾಯ ಪಟ್ಟರು. ಅವರ ಸ್ವಂತ ಬೆರಳ ತುದಿಗಳು ರೋಗಿಗಳಿಗೆ ಸ್ಪರ್ಷದ ಮೂಲಕ ಪದೇ ಪದೇ ಹೆಚ್ಚು ಆರಾಮಕೊಡುತ್ತಿರುವವೆಂದು ಸಹ ಅವರಿಗೆ ಅನ್ನಿಸಿತು. ಅವರು ತಮ್ಮ ಬೆರಳು ತುದಿಗಳಿಂದ ವಿಷಯವಿದ್ದ ಹಾಗೆ ಅಥವಾ ಎದೆಯನ್ನು ಸ್ಪರ್ಷಿಸಿದಾಗ ರೋಗಿಗೆ ಒಂದು ತರಹದ ಆರಾಮ ದೊರೆಯುವುದನ್ನು ಗಮನಿಸುತ್ತಿದ್ದರು.

ಈ ತಿಳುವಳಿಕೆಗಳು ಅವರ ಆಲೋಚನೆಗಳಲ್ಲಿ ಅಗಾಧವಾದ ಬದಲಾವಣೆಗಳನ್ನು ತಂದವು. ಈಗ ಅವರಿಗೆ ಮನುಷ್ಯ ದೇಹದಲ್ಲಿ ಹುದುಗಿರುವಂತಹ ಪ್ರಾಣ ಆಕರ್ಷಣಶಕ್ತಿಯನ್ನು ಕೇವಲ ಇನ್ನೊಂದು ದೇಹದ ಬೆರಳು ತುದಿಗಳಿಂದ ಚುರುಕುಗೊಳಿಸಬಹುದು ಎಂದು ಮನವರಿಕೆಯಾಯಿತು. ಅವರು ಹಳೆಯ ಕಾಲದಲ್ಲಿ ಭಾರತೀಯ ಋಷಿಗಳು ನರಳುತ್ತಿರುವ ರೋಗಿಗಳ ಮೇಲೆ ಅವರ ಆಶೀರ್ವಾದಗಳನ್ನು ದಯಪಾಲಿಸಿದಂತಹ ರೀತಿಯ ಮೌಲ್ಯಗಳನ್ನು ನೋಡಲಾರಂಭಿಸಿದರು. ಆಗಿನ ವಾಡಿಕೆ ಏನಂದರೆ ಋಷಿಗಳು ನರಳುತ್ತಿರುವ ವ್ಯಕ್ತಿಗಳನ್ನು ತಮ್ಮ ಬೆರಳುತುದಿಗಳಿಂದ ಸ್ಪರ್ಷಿಸುತ್ತಿದ್ದರು. ಅದು ಈಗ ಡಾ.ಮೆಸ್ಮರ್‌ರವರು ಇನ್ನೊಂದು ಮನುಷ್ಯ ದೇಹದಲ್ಲಿ ಪ್ರಾಣದ ಆಕರ್ಷಣೆಯನ್ನು ಪ್ರಚೋದಿಸಲು ಲೆಕ್ಕ ಹಾಕಲಾರಂಭಿಸಿದರು ಋಷಿಗಳು ಹೀಗೆ ಸಹ ಹೇಳುತ್ತಿದ್ದರು: ಈಗ ನೀನು ಗುಣವಾಗಿದ್ದೀಯ. ಈ ಒಂದು ಆಜ್ಞೆಯೇ ತ್ವರಿತ ಪುನಶ್ಚೇತನಕ್ಕೆ ಎಡೆಮಾಡುವಂತಹ ಉತ್ತಮ ಭಾವನೆಗಳನ್ನು

ತಂದಿತು. ಡಾ.ಮೆಸ್ಮರ್‌ರವರು ಒಂದು ಅಯಸ್ಕಾಂತವನ್ನು ಗಾಯದ ಮೇಲೆ ಇಟ್ಟರೆ, ಆ ಕೀಟಾಣುಗಳು ಧ್ವಂಸವಾದದ್ದನ್ನೂ ಸಹ ಕಂಡರು. ಒಂದು ಲೋಟದಲ್ಲಿನ ನೀರಿನಲ್ಲಿ ಅಯಸ್ಕಾಂತವನ್ನೂ ಇಟ್ಟು, ಅದನ್ನು ಹಾಗೆಯೇ ಸ್ವಲ್ಪ ಹೊತ್ತು ಇರಲು ಬಿಟ್ಟು , ಅದು ರೋಗಿಗಳಲ್ಲಿ ಆಶ್ಚರ್ಯಕರವಾದ ಪರಿಣಾಮಕಾರಿಯಾದುದು ಅವರು ನೋಡಿದರು.

ಬೇಗನೇ ಡಾ:ಮೆಸ್ಮರ್‌ರವರು ತಮ್ಮ ವೈದ್ಯಕೀಯ ಚಟುವಟಿಕೆಗಳನ್ನು ವಿಸ್ತರಿಸಿದರು. ಅವರು ರೋಗಿಗಳನ್ನು ವೃತ್ತಾಕಾರದಲ್ಲಿ ಕೂಡಿಸಿ ಮಧ್ಯದಲ್ಲಿ ಒಂದು ಅಯಸ್ಕಾಂತ ಮರವನ್ನು ಇಡುತ್ತಿದ್ದರು. ಪರಿಣಾಮವಾಗಿ ಆ ಆಕರ್ಷಣ ಶಕ್ತಿಯು ರೋಗಿಗಳ ದೇಹದಲ್ಲಿ ಕಾರ್ಯನಿರ್ವಹಿಸುತ್ತಿರುವಂತಹ ಸಾಪೇಕ್ಷಿತವಾಗಿ ದುರ್ಬಲವಾಗಿರುವ ಆಕರ್ಷಣೆಯನ್ನು ಬಲಪಡಿಸಿ ಚುರುಕುಗೊಳಿಸುತ್ತಿತ್ತು. ರೋಗಿಗಳಿಗೆ ತಮ್ಮ ದೇಹಗಳಲ್ಲೇ ಆಕರ್ಷಣಾಶಕ್ತಿಯ ದ್ವಿಗುಣ ಸರಬರಾಜು ಆದದ್ದು ಅನುಭವವಾದ ಕೂಡಲೇ ಅವರು ಲವಲವಿಕೆಯಿಂದಿರಲು ಪ್ರಾರಂಭಿಸುತ್ತಿದ್ದರು.

ಡಾ.ಮೆಸ್ಮರ್‌ರವರ ಪ್ರತಿಯೊಂದು ಪ್ರಯೋಗಗಳೂ ಪ್ರತಿಧ್ವನಿಸುವಹಾಗೆ ಯಶಸ್ವಿಯಾದುದು ಬೇಗನೇ ಫ್ರಾನ್ಸಿನ ಇತರೆ ವೈದ್ಯರನ್ನು ಅಸೂಯೆ ಪಡುವಹಾಗೆ ಮಾಡಿತು. ಇವರು ಅವರ ವಿರುದ್ಧ ಒಳಸಂಚು ನಡೆಸಿದರು. ಅವರು ಫ್ರಾನ್ಸನ್ನು ಒತ್ತಾಯಪೂರ್ವಕವಾಗಿ ಬಿಡಬೇಕಾಯಿತು.

ಡಾ.ಮೆಸ್ಮರ್‌ರವರ ಪ್ರಾರಂಭದ ಪ್ರಯೋಗಗಳು ತುಂಬಾ ಯಶಸ್ವಿಯಾಗಿದ್ದವು. ಅವರು ಲೆಕ್ಕವಿಲ್ಲದಷ್ಟು ರೋಗಿಗಳಿಗೆ ಅವರ ನೋವುಗಳಿಂದ ಪಾರುಮಾಡಿದರು. ಸಾಧಾರಣ ಮನುಷ್ಯರು ಅವರನ್ನು ಒಬ್ಬ ಮಾಟಗಾರನೆಂದು ಪರಿಗಣಿಸಿದರು. ನಿಧಾನವಾಗಿ ಬುದ್ಧಿಜೀವಿಗಳು ಇವರ ಪ್ರಯೋಗಗಳನ್ನು ಸ್ವಲ್ಪ ಗಂಭೀರವಾಗಿ ತೆಗೆದುಕೊಳ್ಳಲಾರಂಭಿಸಿದರು. ಅವರ ಶಿಷ್ಯರಾದ, ಅವರಲ್ಲಿ ಕೆಲವರು, ಪ್ರಯೋಗಗಳನ್ನು ಮುಂದುವರಿಸಿ, ಅವುಗಳನ್ನು ಇನ್ನೂ ಹೆಚ್ಚಿನ ಮಟ್ಟಕ್ಕೆ ತೆಗೆದುಕೊಂಡು ಹೋದರು.

ಡಾ.ಮೆಸ್ಮರ್‌ರವರು ಮಾರ್ಚ್ 5,1815 ರಲ್ಲಿ ಮೃತರಾದರು. ಅಂದಿಗೆ ಅವರ ಪ್ರಯೋಗಗಳು ಯೂರೋಪಿನಾದ್ಯಂತ ಪ್ರಚಂಡವಾದ ಉತ್ಸಾಹವನ್ನು ಕೆರಳಿಸಿತ್ತು. ಹೆಚ್ಚುಕಡಿಮೆ ಮೇಲ್ಮಟ್ಟದ ಎಲ್ಲಾ ಬುದ್ಧಿಜೀವಿಗಳು ಮತ್ತು ವಿಜ್ಞಾನಿಗಳು ಒಬ್ಬ ಮನುಷ್ಯನ ಹಾಗೆ ಡಾ.ಮೆಸ್ಮರ್‌ರವರ ಪ್ರಯೋಗಗಳು ಎಲ್ಲಾ ವ್ಯಾಧಿಗಳನ್ನು ವಾಸಿಮಾಡುವ ಭರವಸೆಕೊಡುತ್ತವೆ ಎಂದು ಉಗ್ಗಡಿಸಿದರು. ಫ್ರಾನ್ಸ್ ಸರ್ಕಾರವು, ಅವರ ಪ್ರಯೋಗಗಳ ಮತ್ತು ಅವುಗಳ ಫಲಿತಾಂಶಗಳ ವರದಿಯನ್ನು ಒಪ್ಪಿಸಲು, ವೈದ್ಯರ ಮತ್ತು ವೈಜ್ಞಾನಿಕ ಫ್ರಾನ್ಸ್ ಅಕ್ಕಾಡೆಮಿಯ ಸದಸ್ಯರುಗಳನ್ನು ಒಳಗೊಂಡ ಒಂದು ಮಂಡಳಿಯನ್ನು ನೇಮಿಸಿತು. ಮಂಡಳಿಯು ಡಾ.ಮೆಸ್ಮರ್‌ರವರ ಪ್ರಯೋಗಗಳನ್ನು ಆಧಾರವಾಗಿರುವ ನಿಯಮಗಳು ಗುಣಪಡಿಸುವ ಸಾಮರ್ಥ್ಯವನ್ನು ಹೊಂದಿರುವುದಾಗಿ ಒಪ್ಪಿತು. ಆದರೆ ನಿಯಮಗಳು ವೈಜ್ಞಾನಿಕ ಪರೀಕ್ಷೆಯನ್ನು ಸಮರ್ಥಿಸಲಿಲ್ಲ. ಈ ಪ್ರಕಾರವಾಗಿ ಸರ್ಕಾರವು ಅವರ ಪ್ರಯೋಗಗಳನ್ನು ಒಪ್ಪಲಿಲ್ಲ.

ಡಾ.ಮೆಸ್ಮರ್‌ರವರ ಶಿಷ್ಯಂದಿರು ಅವರ ಪ್ರಯೋಗಗಳನ್ನು ಮುಂದೆ ವೃದ್ಧಿಸಿದರು. ಅವರಲ್ಲಿ ಡಾ.ಮಾರ್ಕ್ವಿಸ್ ಆಫ್ ಪೆಸೆಜರ್‌ರವರು ಈ ಕ್ಷೇತ್ರದಲ್ಲಿ ಹೆಚ್ಚಿನ ಅಂಗೀಕಾರವನ್ನುಗಳಿಸಿದರು. ವಾಸ್ತವವಾಗಿ ಅವರು ಡಾ.ಮೆಸ್ಮರ್‌ರವರ ಪ್ರಯೋಗಗಳ ಉಗಮಸ್ಥಾನವನ್ನೇ ಬದಲಾಯಿಸಿದರು.

ಡಾ.ಮಾರ್ಕ್ವಿಸ್‌ರವರು ಡಾ.ಮೆಸ್ಮರ್‌ರವರ ಊಹಾಪ್ರಜ್ಞೆಯನ್ನು ವೈಜ್ಞಾನಿಕ ಶಾಸ್ತ್ರಕ್ಕೆ ವೃದ್ಧಿಸಿದರು. ಅವರು ಒಬ್ಬ ರೋಗಿಯನ್ನು ಸಮ್ಮೋಹನದ ಮೂಲಕ ನಿದ್ರೆಗೆ ಪ್ರೇರೇಪಿಸಿ ಮತ್ತು ಸಮ್ಮೋಹನದ ಆಜ್ಞೆಗಳ ಮೂಲಕ ವಾಸಿಮಾಡಬಹುದೆಂದು ಸಾಬೀತು ಪಡಿಸಿದರು. ಡಾ.ಮೆಸ್ಮರ್ ರವರು ಅಯಸ್ಕಾಂತ ಚಿಕಿತ್ಸೆಯ ಮೂಲಕ ಸಾಧಿಸಲೆತ್ನಿಸುದುದನ್ನು ಅವರು ಸಮ್ಮೋಹನ ನಿದ್ರೆಯ ಮೂಲಕ ಸಾಧಿಸಲಿಚ್ಛಿಸಿದರು.

ವೈದ್ಯರು ಮತ್ತು ವಿಜ್ಞಾನಿಗಳು ಸಹ ಈ ಶಾಸ್ತ್ರವನ್ನು ತುಂಬಾ ವಾಸ್ತವಿಕ ಮತ್ತು ನಂಬಲರ್ಹವೆಂದು ಪ್ರಶಂಸಿಸಿದರು. ಆಕರ್ಷಣಾ ಅಲೆಗಳು ಸಾಗುತ್ತಿರುವಂತಹ ಬೆರಳು-ತುದಿಗಳ ಸ್ಪರ್ಶದಿಂದ ಡಾ.ಮಾರ್ಕ್ಸೀಸ್ ರವರು ರೋಗಿಗಳನ್ನು ಒಂದು ನಿರ್ದಿಷ್ಟ ತರಹದ ನಿದ್ರೆಗೆ ಹುರುದುಂಬಿಸುತ್ತಿದ್ದರು. ಈಗ ಅವರು ಅವರ ಮೇಲೆ ಪ್ರಯೋಗಗಳ ಸರಣಿಗಳನ್ನು ನಡೆಸುತ್ತಿದ್ದರು. ಆಗ ಕ್ಲೋರೋಫಾರ್ಮನ್ನು ಕಂಡುಹಿಡಿದಿರಲಿಲ್ಲ. ಆದ್ದರಿಂದ ಶಸ್ತ್ರವೈದ್ಯರು ತಮ್ಮ ರೋಗಿಗಳ ಮೇಲೆ ಕೆಲಸ ಮಾಡುತ್ತಿರುವಾಗ ತುಂಬಾ ಸಮಸ್ಯೆಗಳನ್ನು ಎದುರಿಸುತ್ತಿದ್ದರು. ಇಂತಹ ಸಮಯದಲ್ಲಿ ಡಾ.ಮಾರ್ಕ್ಸೀಸ್ ರವರ ಪದ್ಧತಿಯು ಶಸ್ತ್ರವೈದ್ಯರಿಗೆ ಒಂದು ವರವಾಗಿ ಬಂದಿತು. ಈಗ ಶಸ್ತ್ರ ಚಿಕಿತ್ಸೆಯು ರೋಗಿಗಳಿಗೆ ಮೊದಲಿನಹಾಗೆ ಕ್ರೂರವಾದ ಹಿಂಸೆಯನ್ನು ಕೊಡಲಿಲ್ಲ.

ತದನಂತರದಲ್ಲಿ ಈ ಕ್ಷೇತ್ರದಲ್ಲಿ ಬಹಳಷ್ಟು ಕಾರ್ಯಗಳು ನೆರವೇರಿದವು. ಲಂಡನ್ನಿನ ವಿಶ್ವವಿದ್ಯಾನಿಲಯದಲ್ಲಿ ವೈದ್ಯಕೀಯ ವಿಜ್ಞಾನದ ಪ್ರೊಫೆಸರ್ ಆಗಿರುವಂತಹ ಮತ್ತು ರಾಯಲ್ ಮೆಡಿಕಲ್ ಸೊಸೈಟಿಯ ಅಧ್ಯಕ್ಷರೂ ಆಗಿರುವಂತಹ ಪ್ರೊಫೆಸರ್ ಜಾನ್ ಎಲಿಪ್ ಟನ್ ಸನ್ ಮಾನಸಿಕವಾಗಿ ಭ್ರಮಿಷ್ಟರಾದ ರೋಗಿಗಳ ಮೇಲೆ ಈ ಪದ್ಧತಿಯನ್ನು ಉಪಯೋಗಿಸಿ ಮತ್ತು ಅಂತಹ ರೋಗಿಗಳನ್ನು ನಿದ್ರೆಗೆ ಪ್ರೇರೇಪಿಸಿದ ನಂತರ ಸರಿಯಾದ ಅಭಿಪ್ರಾಯವನ್ನು ಕೊಟ್ಟರೆ, ಅವರು ತಮ್ಮ ಮಾನಸಿಕ ತೊಂದರೆಗಳಿಂದ ಊಹಿಸಿರುವದಕ್ಕಿಂತ ಮುಂಚಿತವಾಗಿಯೇ ಗುಣಹೊಂದುವರು ಎಂದು ನಿರ್ವಿವಾದವಾಗಿ ಹೇಳಿದರು.

1841 ರಲ್ಲಿ ಡಾ.ಜೇಮ್ಸ್ ಬ್ರೇಡ್‌ರವರು ಈ ಪದ್ಧತಿಯನ್ನು ಮುಂದೆ ವೃದ್ಧಿಸಿದರು. ರೋಗಿಯನ್ನು ಸಮ್ಮೋಹನ ನಿದ್ರೆಗೆ ಒಳಪಡಿಸಿ ಮತ್ತು ತಾನು ಬೇಗನೇ ವಾಸಿಯಾಗುತ್ತಿದ್ದಾನೆನ್ನುವ ಸಮ್ಮೋಹನ ಆಜ್ಞೆಯನ್ನು ಅವನಲ್ಲಿ ನೆಟ್ಟಿದ್ದಾದರೆ ಅವನನ್ನು ಬೇಗನೇ ವಾಸಿಮಾಡಬಹುದೆಂಬುದನ್ನು ಅವರು ಸ್ಥಿರಪಡಿಸಿದರು. ವಾಸಿಯಾಗದಂತಹ ವ್ಯಾಧಿಯನ್ನು ಸಹ ಸಮ್ಮೋಹನ ಶಕ್ತಿಯ ಮೂಲಕ ಗುಣಪಡಿಸಬಹುದೆಂದು ಅವರು ತೋರಿಸಿದರು.

ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸಮ್ಮೋಹನ ಶಕ್ತಿಯು ಸಹಜವಾಗಿಯೇ ಇರುತ್ತದೆ ಎಂದು ಡಾ.ಬ್ರೇಡ್ ರವರು ಸಾಬೀತುಪಡಿಸಿದರು. ಈ ಶಕ್ತಿಯನ್ನು ತನ್ನ ಮೇಲೆಯೇ ಅವನು ಉಪಯೋಗಿಸಿಕೊಳ್ಳಬಹುದು. ಬೇರೆಯಾವುದೇ ಅಂಗಕ್ಕಿಂತ ಕಣ್ಣುಗಳಲ್ಲಿ ಹೆಚ್ಚು ಸಮ್ಮೋಹನ ಶಕ್ತಿ ಮತ್ತು ಸಮ್ಮೋಹನ ಸ್ಪರ್ಶವು ಸಂಗ್ರಹವಾಗಿದೆ ಎಂದು ಅವರು ವಾದಿಸಿದರು. ಒಂದು ಮಟ್ಟದ ಕತ್ತಲಲ್ಲಿಯೂ ಸಹ ಬೆಕ್ಕಿನ ಅಥವಾ ಹುಲಿಯ ಕಣ್ಣುಗಳು ಶಕ್ತಿಯುತವಾದ ಬೆಳಕನ್ನು ಮುಂದೆ ಹೊರಸೂಸುತ್ತವೆ. ಅದು ಆಕರ್ಷಣ ಅಲೆಗಳಲ್ಲದೆ ಬೇರೇನೂ ಅಲ್ಲ. ಈ ಶಕ್ತಿಯು, ಸ್ವಲ್ಪ ಹೆಚ್ಚು ಕಡಿಮೆಯಾಗಿದ್ದರೂ ಎಲ್ಲರ ಕಣ್ಣುಗಳಲ್ಲಿಯೂ ಕಾಣಬಹುದು. ಒಬ್ಬ ವ್ಯಕ್ತಿಯ ಕಣ್ಣುಗಳಲ್ಲಿ ಆಕರ್ಷಣ ಶಕ್ತಿಯು ಸ್ವಲ್ಪಮಟ್ಟಿಗೆ ಕಡಿಮೆ ಇದ್ದದ್ದಾದರೆ, ಅದನ್ನು ಅವನು ಪ್ರಯೋಗಗಳಿಂದ ಶಕ್ತಿಯುತಗೊಳಿಸಿಕೊಳ್ಳಬಹುದೆಂದು ಡಾ.ಬ್ರೇಡ್‌ರವರು ವಾದಿಸಿದರು.

ಒಬ್ಬ ವ್ಯಕ್ತಿಯು ತನ್ನ ದೃಷ್ಟಿಯನ್ನು ಒಂದು ನಿರ್ದಿಷ್ಟವಾದ ಬಿಂದು ಅಥವಾ ಜ್ವಾಲೆಯ ಮೇಲೆ ನೆಟ್ಟು ತನ್ನ ಮನಸ್ಸನ್ನು ವಿಚಾರಗಳಿಂದ ಮುಕ್ತಗೊಳಿಸಬಹುದೆಂದು ಅವರು ಮುಂದುವರಿದು ವಿವರಿಸಿದರು. ಅವನು ನಿಧಾನವಾಗಿ ಮತ್ತು ಸ್ಥಿರವಾಗಿ ತನ್ನ ಕಣ್ಣುಗಳ ಆಕರ್ಷಣಶಕ್ತಿಯನ್ನು ಬಲಪಡಿಸಿಕೊಂಡಂತೆ, ಬೇಗನೇ ತನ್ನಷ್ಟಕ್ಕೆ ತಾನೇ ಸಮ್ಮೋಹನ ನಿದ್ರೆಗೆ ಹೋಗುವನು. ಓರ್ವನು ಸಾಧಾರಣವಾಗಿ ಬೇರೆ ವ್ಯಕ್ತಿಗಳಿಂದ ಸಮ್ಮೋಹನ ಕಾಲದಲ್ಲಿ ಪಡೆಯುವಂಥ ಲಾಭಗಳನ್ನು ಅವನು ತನ್ನಷ್ಟಕ್ಕೆ ತಾನೇ ಪಡೆಯಬಹುದೆಂಬುವುದರಲ್ಲಿ ಅನುಮಾನವಿಲ್ಲ.

ಡಾ.ಬ್ರೇಡ್‌ರವರು ಗ್ರೀಕ್ ಪದವನ್ನು ಉಪಯೋಗಿಸಿದರು ಹಿಪ್ನಾಸ್ ಎಂದರೆ ನಿದ್ರೆ. ಈಗ ಮೆಸ್ಮರಿಜಂ ಎನ್ನುವ ಪದಕ್ಕೆ ಹಿಪ್ನಾಟಿಜಂ ಎನ್ನುವ ಪದವು ಸ್ಥಾನಪಲ್ಲಟಗೊಂಡಿತು. ಡಾ.ಬ್ರೇಡ್ ರವರ ಸಾಧನೆಯು ವಿಶ್ವದಾದ್ಯಂತ ಗುರುತಿಸಲಾಯಿತು.

ಡಾ.ಬ್ರೇಡ್ ರವರ ಕಾರ್ಯವನ್ನು ವಿವಿಧ ದೇಶಗಳ ಸುಪ್ರಸಿದ್ಧ ವಿಜ್ಞಾನಿಗಳ ಸಮೂಹವು ಅನುಸರಿಸಿತು. ಯು.ಎಸ್.ನ ಡಾ.ಎಲ್.ವಕೇರಿಚ್, ಫ್ರಾನ್ಸಿನ ಡಾ.ಚಾರ್ ಕೋಟ್ , ಡಾ.ನಾನ್ಸಿ, ಡಾ.ಶ್ರೀಮೌಂಡ್ ಹೂದ್ ಮತ್ತು ಇತರೆ ಪ್ರಮುಖ ವಿಜ್ಞಾನಿಗಳು ಇದನ್ನು ಸಾಮರ್ಥ್ಯಯುತ ವೈಜ್ಞಾನಿಕ ಶಾಸ್ತ್ರವಾಗಿ ಮುಂದೆ ವೃದ್ಧಿಸಲು ಬಹಳವೇ ಕಷ್ಟಪಟ್ಟರು. ಅದು ಹಿಸ್ಟೀರಿಯಾ ಮತ್ತು ಇತರೆ ಮಾನಸಿಕ ವಿಕಾರಗಳಿಂದ ನರಳುತ್ತಿದ್ದ ರೋಗಿಗಳ ಚಿಕಿತ್ಸೆಯಲ್ಲಿ ಪ್ರಚಂಡವಾದ ಪರಿಣಾಮವನ್ನುಂಟುಮಾಡಿತು.

ಡಾ.ಬ್ರೇಡ್‌ರವರ ತಿಳುವಳಿಕೆಗಳು ಭಾರತದಲ್ಲೂ ಸಹ ಗುರುತಿಸಲಾಯಿತು. ಕಲ್ಕತ್ತಾದ ಶಸ್ತ್ರವೈದ್ಯರಾದ ಡಾ.ಜೇಮ್ಸ್ ಎಸ್ ಡೆಲರ್‌ರವರು ಯೋಗದ ಒಳ್ಳೆಯ ಅರ್ಹ ಅಂಗವನ್ನು ಅಳವಡಿಸಿದಂತಹ ಕೆಲವು ಪ್ರಯೋಗಗಳನ್ನು ಮಾಡಿದರು. ಅವರು ರೋಗಿಗಳನ್ನು ಸಮ್ಮೋಹನ ನಿದ್ರೆಗೆ ಒಳಪಡಿಸಿದ ನಂತರ ಕೆಲವು ಅಪಾಯಕರವಾದ ಶಸ್ತ್ರಕ್ರಿಯೆಗಳನ್ನು ಯಶಸ್ವಿಯಾಗಿ ನಡೆಸಿದರು. ನೋವಿಲ್ಲದ ಹೆರಿಗೆ ಅಲ್ಲದೆ ನೋವಿಲ್ಲದೆಯೇ ಹಲ್ಲು ಕೀಳುವಿಕೆಯ ಕಲಾಕೌಶಲ್ಯತೆಯಲ್ಲಿ ಸಹ ಅವರು ಪಾರಂಗತರಾದರು.

ಡಾ.ಚಾರ್ ಕೋಟ್‌ರವರು ಸಮ್ಮೋಹನದ ವೈಜ್ಞಾನಿಕ ಸ್ವರೂಪವನ್ನು ವೈದ್ಯಕೀಯ ಚಿಕಿತ್ಸೆಯ ಕ್ಷೇತ್ರದ ಕೆಲ ವಿಶೇಷ ಪ್ರಯೋಗಗಳಲ್ಲಿ ಉಪಯೋಗಿಸಿದರು. ಅವರು ಒಬ್ಬ ಹೆಣ್ಣುರೋಗಿಯು ತಾನು ಹಿಸ್ಟೀರಿಯಾದ ಕಾಲದಲ್ಲಿಯ ಲಕ್ಷಣಗಳನ್ನೇ ಸಮ್ಮೋಹನ ಶಸ್ತ್ರಕ್ರಿಯೆಯ ಸಮಯದಲ್ಲೂ ಸಹ ಅನುಭವಿಸಿದ್ದುದನ್ನು ಕಂಡರು. ಹೀಗೆ ಗುಣಲಕ್ಷಣಗಳ ಸಂಬಂಧದಲ್ಲಿ, ಇವೆರಡೂ, ಪ್ರತಿರೂಪವಾಗಿದ್ದವು. ಅವರು ಹಿಸ್ಟೀರಿಯಾ ಯಾವುದೇ ರೀತಿಯಲ್ಲಿ ರೋಗವಲ್ಲವೆಂಬುದನ್ನು ಸಹ ಸಾಬೀತು ಪಡಿಸಿದರು.

ಅದು ಓರ್ವರ ಹತ್ತಿಟ್ಟು ನಿಗ್ರಹಿಸಿಕೊಂಡ ಅಥವಾ ಕಾರ್ಯರೂಪಕ್ಕೆ ಬಾರದ ಬಯಕೆಗಳ ಮುಂದಿನ ಪ್ರಕರಣವು. ಈ ನಿಗ್ರಹಿಕೆಯ ಹೆಚ್ಚುವಿಕೆಯು ಹಿಸ್ಟೀರಿಯಾಗೆ ಎಡೆಮಾಡುತ್ತದೆ. ಉದಾಹರಣೆಗೆ, ಒಬ್ಬ ಹೆಂಗಸು ತನ್ನ ಗಂಡನಿಂದ ಲೈಂಗಿಕವಾಗಿ ತೃಪ್ತಿಗೊಳ್ಳದಿದ್ದರೆ, ಆಕೆಯು ಹಿಸ್ಟೀರಿಯದೊಡನೆ ಒಪ್ಪಂದ ಮಾಡಿಕೊಳ್ಳುವ ಆಸ್ಪದವಿರುತ್ತದೆ. ಅದೇ ರೀತಿಯಲ್ಲಿ ಒಬ್ಬ ಮಕ್ಕಳಿಲ್ಲದೇ ನರಳುತ್ತಿರುವ ಮದುವೆಯಾದ ಹೆಂಗಸಿಗೆ ಹಿಸ್ಟೀರಿಯಾದ ಮೂರ್ಛೆರೋಗ ಇರಬಹುದು, ಕಾರಣ ಆಕೆಯ ಸ್ವಂತ ಅಸಂತುಷ್ಟತೆಯು.

ಈ ಕಾರ್ಯಕಾರಣ ಸಂಬಂಧದ ವಿಷಯದ ಕಡೆ ಗಮನವಹಿಸಬೇಕು ಎಂದು ಡಾ.ಚಾರ್ ಕೋಟ್ ರವರು ವಾದಿಸಿದರು. ಈ ಬಯಕೆಯು ಈ ಕಾರ್ಯಕ್ಕೆ ಸಂಬಂಧಿಸಿದ ವಿಷಯವಾಗಿತ್ತು. ಸಮ್ಮೋಹನ ನಿದ್ರೆಯಲ್ಲಿ ಆಕೆಯಲ್ಲಿ ತಾನು ತನ್ನ ಗಂಡನಿಂದ ಸಂಪೂರ್ಣ ತೃಪ್ತಿಯನ್ನು ಹೊಂದುವಳು ಅಥವಾ ತಾನು ಸನಿಹದ ಭವಿಷ್ಯದಲ್ಲೇ ಒಂದು ಮಗುವಿಗೆ ಜನ್ಮಕೊಡುವಳು ಎಂಬ ಆಜ್ಞೆಯನ್ನು ನೆಡಬಹುದು. ಆಕೆಯು ಗುಣಮುಖವಾಗುವುದಕ್ಕೆ ಇದು ತನ್ನಷ್ಟಕ್ಕೆ ತಾನೇ ಒಂದು ಕೊಡುಗೆಯಾಗುವುದು. ಡಾ.ಚಾರ್ ಕೋಟ್‌ರವರು ಸಮ್ಮೋಹನ ಆಜ್ಞೆಗಳ ಮತ್ತು ಸಮ್ಮೋಹನ ನಿದ್ರೆಯ ಪದ್ಧತಿಯನ್ನು ಉಪಯೋಗಿಸಿ ಬಹಳಷ್ಟು ರೋಗಿಗಳಿಗೆ ಚಿಕಿತ್ಸೆ ನೀಡಿದರು.

ನಂತರ ಸಿಗ್ ಮಾಂಡ್ ಫ್ರೆಡ್‌ರವರು ಈ ಕ್ಷೇತ್ರದಲ್ಲಿ ಗಮನೀಯವಾದ ಯಶಸ್ಸಿಯನ್ನು ಸಾಧಿಸಿದರು.

ಅವರು ಸ್ಥಿರವಾಗಿ ಸಮ್ಮೋಹನವನ್ನು ವೈದ್ಯಕೀಯ ಚಿಕಿತ್ಸೆಯಲ್ಲಿ ಸ್ಥಾಪಿಸಿದರು. ಲೈಂಗಿಕಾಸಕ್ತಿಯು, ಯಾರೇ ಆಗಲಿ, ಎರಡು ವರ್ಷದ ಮಗುವಿರಬಹುದು ಅಥವಾ ಎಂಬತ್ತು ವರ್ಷದ ಅಜ್ಜನಾಗಿರಬಹುದು. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಸುಪ್ತಾವಸ್ಥೆಯಲ್ಲಿ ಅಥವಾ ನಿಗ್ರಹತೆಯಲ್ಲಿರುತ್ತದೆ. ಅವರು ಸಮ್ಮೋಹನವನ್ನು ವೈಜ್ಞಾನಿಕ ಚಿಕಿತ್ಸೆಯಲ್ಲಿ ಭದ್ರವಾಗಿ ಸ್ಥಾಪಿಸಿದರು. ಅವರು ಲೈಂಗಿಕಾಸಕ್ತಿಯು ಸುಪ್ತಾವಸ್ಥೆಯಲ್ಲೋ ಅಥವಾ ನಿಗ್ರಹಿಸಲ್ಪಟ್ಟೋ, ಅವನು ಎರಡು ವರ್ಷದ ಮಗುವಾಗಿರಲೀ ಅಥವಾ ಎಂಬತ್ತು ವರ್ಷದ ಅಜ್ಜನಾಗಿರಲಿ ಪ್ರತಿಯೊಬ್ಬರಲ್ಲಿಯೂ ಇರುತ್ತದೆ ಎಂಬುದನ್ನು ಸ್ಥಾಪಿಸಿದರು. ಮಗವು ತನ್ನ ತಾಯಿಯ ಮೊಲೆಗಳನ್ನು ಚೀಪುವಾಗ ಅಥವಾ ಲಲ್ಲೆಯಲ್ಲಿ ಅದು ಲೈಂಗಿಕ ಈಡೇರುವಿಕೆಯಲ್ಲದೆ ಬೇರೇನೂ ಅಲ್ಲ ಎಂಬುದನ್ನು ಸಹ ಅವರು ಹೇಳಿದರು. ಒಮ್ಮೆ ಒಬ್ಬ ನಿರ್ದಿಷ್ಟ ವ್ಯಕ್ತಿಯ ಲೈಂಗಿಕಾಸಕ್ತಿಯು ಪೂರ್ಣಗೊಂಡಾಗ ಅವನು ತನ್ನ ವಿಕಾರತೆಯಿಂದ ಗುಣ ಹೊಂದುವನು. ಅದು ಯಾವ ತರಹದ ಲೈಂಗಿಕಾಸಕ್ತಿಯು ಮತ್ತು ಅದು ಹೇಗೆ ಪೂರ್ಣಗೊಳ್ಳುವುದು ಎಂಬುದು ಒಂದು ಸಂಪೂರ್ಣವಾದ ಬೇರೆ ವಿಷಯ. ಯಾವುದೇ ವಿಷಯದಲ್ಲಿ ಓರ್ವರು ಜೀವನವನ್ನು ಯಾವುದೇ ರೂಪದ ಲೈಂಗಿಕಾಸಕ್ತಿ ಇಲ್ಲದೆ ಯೋಚಿಸುವಹಾಗಿಲ್ಲ. ವ್ಯಕ್ತಿಯ ಪ್ರತಿಕ್ಷಣವೂ ತನ್ನ ಲೈಂಗಿಕಾಸಕ್ತಿಯನ್ನು ಪೂರ್ಣಗೊಳಿಸುವುದರಲ್ಲೇ ಕಳೆಯಲಾಗಿತ್ತು. ಅದು ಯಾವುದೇ ರೂಪವನ್ನು ಊಹಿಸಿಕೊಳ್ಳಬಹುದು. ತೆರಳಿರುವಂತಹ ಪ್ರೇಮವ್ಯಕ್ತಿಯನ್ನು ಕಾಯುವುದು ಅಥವಾ ಅವರು ಜೊತೆಯಲ್ಲಿ ಕಳೆದಿರುವಂತಹ ಪ್ರೇಮಕ್ಷಣಗಳನ್ನೂ ಚಿಂತನೆ ಮಾಡುವುದು ಅಥವಾ ಮಗುವಿನೊಡನೆ ಆಟವಾಡುವುದು ಈ ರೂಪಗಳು ಲೈಂಗಿಕಾಸಕ್ತಿಯ ಪ್ರಕಟಣೆಗಳಲ್ಲದೆ ಬೇರೇನೂ ಅಲ್ಲ. ತಾಯಿಯು ಮಗನನ್ನು ಅತೀಯಾಗಿ ಹಚ್ಚಿಕೊಂಡಿರುವುದು ಹಾಗೆಯೇ ತಂದೆಯು ಮಗಳನ್ನು ತುಂಬಾ ಹಚ್ಚಿಕೊಂಡಿರುವುದು ಈ ಎಲ್ಲಾ ರೂಪಗಳು ಒಂದು ತರಹದ ಲೈಂಗಿಕಾಸಕ್ತಿಗಳನ್ನು ಪೂರ್ಣಗೊಳಿಸುವಂತಹವು.

ಯಾವುದೇ ವಿಷಯದಲ್ಲಿ ಲೈಂಗಿಕತೆಗೆ ತನ್ನ ಭಾವವು ಸಿಗಬೇಕು. ಇಲ್ಲವಾದರೆ ಅದು ಒತ್ತಡಕ್ಕೆ ಮತ್ತು ಎಲ್ಲಾ ತರಹದ ಕ್ಲಿಷ್ಟತೆಗಳಿಗೆ ಎಡೆಮಾಡುವುದು. ಸಮ್ಮೋಹನವೊಂದೇ ಅಂತಹ ವ್ಯಾಧಿಗಳ ವಿರುದ್ಧ ಆರಾಮವನ್ನು ಒದಗಿಸಬಲ್ಲದು.

ಭಾರತದಲ್ಲಿಯೂ ಸಹ ಈ ಕ್ಷೇತ್ರದಲ್ಲಿ ಬಹಳ ಕೆಲಸವನ್ನು ಮಾಡಲಾಗಿತ್ತು. ಈ ವಿಜ್ಞಾನವನ್ನು ಆಧುನಿಕ ರೂಪಕ್ಕೆ ಪುನರುಜ್ಜೀವಿತಗೊಳಿಸಿದ್ದು ಪ್ರೊಫೆಸರ್ ಎಸ್.ಎನ್.ಬೋಸ್ ಇವರು ಸಾಮಾನ್ಯ ಜನರಿಗೆ ಈ ಸಂದೇಶವನ್ನು ಹರಡಲು ಒಂದು ಸಂಚಿಕೆಯನ್ನು ಪ್ರಕಟಿಸಿದರು. ಈ ವಿಜ್ಞಾನದ ಪ್ರಾಯೋಗಿಕ ರೂಪವನ್ನು ಅಳವಡಿಸಲ್ಪಟ್ಟ ಒಂದು ಶಾಲೆಯನ್ನು ಸಹ ಅವರು ಸ್ಥಾಪಿಸಿದರು.

ಭಾರತದಲ್ಲಿ ಈ ವಿಜ್ಞಾನವನ್ನು ಮುಂದೆ ವೃದ್ಧಿಸಿದಂತಹವರಲ್ಲಿ ಪ್ರೊಫೆಸರ್ ಅಹಮ್ಮದ್, ಡಾ.ಜಗದೇವ್ ಮಿತ್ರ, ಪ್ರೊಫೆಸರ್ ರಾವ್ ಮತ್ತು ಇನ್ನೂ ಕೆಲವರು ಒಳಗೊಂಡಿದ್ದಾರೆ.

ನಿಜವಾಗಿಯೂ ಮನುಷ್ಯನ ಈ ರೂಪವು ಅನುಮಾನವಿಲ್ಲದೆ ವಿಸ್ಮಯಗೊಳ್ಳುವಂತಹುದು. ದೇವರು ಈ ಒಂದು ವಿಶಿಷ್ಟವಾದ ಪದ್ಧತಿಯನ್ನು ಯಾವರೀತಿಯಲ್ಲಿ ಸೃಷ್ಟಿಸಿದನೆಂದರೆ ಒಮ್ಮೆ ನಾವು ದೇಹದಲ್ಲಿರುವ ಸ್ವಾಭಾವಿಕ ಆಕರ್ಷಣೀಯ ಗುಣಗಳನ್ನು ಮತ್ತು ಪ್ರಭಾವಗಳನ್ನು ಗ್ರಹಿಸಿದರೆ ಈ ಒಂದು ಮಾಧ್ಯಮದಿಂದ ಅಸಾಧ್ಯವನ್ನು ಸಾಧ್ಯಮಾಡಲಿಕ್ಕೆ ಕಷ್ಟಕರವೇ ಆಗಿರಬಾರದು.

# ಅಧ್ಯಾಯ 2

## ಸಮ್ಮೋಹನಾ ಶಕ್ತಿ.

ಮನುಷ್ಯನಲ್ಲಿ ಒಂದು ವಿಶಿಷ್ಟ ತರಹದ ಶಕ್ತಿಯು ಮತ್ತು ಆಕರ್ಷಣೀಯ ಪ್ರಭಾವವು ಅಡಗಿದೆ. ಉದಾಹರಣೆಗೆ: ನಿಮ್ಮ ಕೂದಲೊಂದನ್ನು ತಲೆಯಿಂದ ಕೀಳಿ ಮತ್ತು ಅದನ್ನು ಗಾಳಿಯು ಬೀಸದ ಅಥವಾ ತೊಂದರೆ ಕೊಡದ ಸ್ಥಳಕ್ಕೆ ತೆಗೆದುಕೊಳ್ಳಿ. ಈಗ ನಿಮ್ಮ ಬಲಗೈಯಿಯ ಬೆರಳೊಂದನ್ನು ಆ ಕೂದಲಿನ ಸಮೀಪಕ್ಕೆ ತನ್ನಿರಿ. ನೀವು ಬೆರಳನ್ನು ಹತ್ತಿರ ತಂದಂತೆಲ್ಲಾ ಆ ಕೂದಲು ಬೆರಳಿನ ಕಡೆಗೆ ಬಾಗುವುದನ್ನು, ಒಂದು ಅಯಸ್ಕಾಂತಕ್ಕೆ ಕಬ್ಬಿಣದ ತುಂಡುಗಳು ಮಾಡಿದ ರೀತಿಯಲ್ಲಿಯೇ, ನೋಡಬಹುದು.

ಓರ್ವರು ತಮ್ಮ ಪ್ರೇಮ ವ್ಯಕ್ತಿಯ ಬಗ್ಗೆ ಆಲೋಚಿಸಿದಾಗ ಅಥವಾ ಚಿಂತಿಸಿದಾಗ ಒಂದು ನಿರ್ದಿಷ್ಟ ರೀತಿಯ ಅಯಸ್ಕಾಂತ ಶಕ್ತಿ ಸಂಚಾರವಾಗಿ ಮತ್ತು ಅವನ ದೇಹವು ನಿಟ್ಟುಸಿರುಬಿಡುವುದು. ಆಗಾಗ ಅವನ ಬೆರಳುಗಳಲ್ಲಿ ಕಂಪನವನ್ನು ಕಾಣುವನು. ಏಕಾ ಏಕಿ ಪ್ರೇಮ ವ್ಯಕ್ತಿಯು ತನ್ನ ಪ್ರೇಮಿಯನ್ನು ಕಂಡಾಗ, ಅವಳ ಮುಖ ಕೆಂಪೇರುವುದು. ಆಕೆಯ ಕಣ್ಣುಗಳು ಕೆಂಪನೆಯ ಪ್ರಕಾಶದಿಂದ ಮಿಂಚುವುದು ಮತ್ತು ಅದೇ ಸಮಯದಲ್ಲಿ ಅವಳಲ್ಲಿ ಬೇರೆಯವರನ್ನು ತನ್ನಲ್ಲಿಗೆ ಸೆಳೆಯುವ ವಿಚಿತ್ರವಾದ ಆಕರ್ಷಣೆಯ ಅದ್ವಿತೀಯವಾದ ಶಕ್ತಿಯು ಉತ್ಪತ್ತಿಯಾಗುವುದು. ಈ ಒಂದು ಆಕರ್ಷಣಾ ಶಕ್ತಿಯ ಸದ್ಬುಣದಿಂದ ಹೆಂಗಸು ಗಂಡಸನ್ನು ಆಕರ್ಷಿಸುವಳು. ಗಂಡಸೂ ಸಹ ಅದೇ ತರಹದ ಶಕ್ತಿಯಿಂದ ಹಾಗೆ ಮಾಡುವನು. ಅವನ ದೇಹವು ಆ ಸಮಯದಲ್ಲಿ ನಿರ್ದಿಷ್ಟ ರೀತಿಯಲ್ಲಿ ಆಕರ್ಷಣೀಯವಾಗುವುದು.

ನಾವು ಒಂದು ಯಥಾ ಸ್ಥಳದ ಸ್ಥಿತಿಯನ್ನು ತೆಗೆದುಕೊಳ್ಳೋಣ. ನೀವು ಒಬ್ಬ ಆರೋಗ್ಯ ವ್ಯಕ್ತಿಯನ್ನು ಭೇಟಿಯಾದಾಗ, ಸ್ವಲ್ಪಮಟ್ಟಿನ ಆಸಕ್ತಿಯಿಂದ ನಿಮ್ಮ ಬೆರಳನ್ನು ಅವನ ಹಣೆಯಮೇಲೆ ಅಥವಾ ಅವನ ತಲೆಯ ಬಹಳ ಹತ್ತಿರವಾಗಿ ಹಾಕಿರಿ. ಸ್ವಲ್ಪ ಹೊತ್ತಿನನಂತರ ಅವನನ್ನು ಕೇಳಿದಾಗ, ಅವನಿಗೆ ತನ್ನ ತಲೆಯಲ್ಲಿ ಒಂದು ತರಹದ ನೋವಿರುವುದನ್ನು ಒಪ್ಪುವನು. ಈ ತಲೆನೋವು ನಿಮ್ಮ ಬೆರಳತುದಿಗಳಿಂದ ಹೋಗಿ ತಲೆಯಲ್ಲಿ ಅಥವಾ ಹಣೆಯಲ್ಲಿ, ವಿಷಯಕ್ಕೆ ಸಂಬಂಧಿಸಿದ ಹಾಗೆ, ಹೊಡೆದಂತಹ, ಅಯಸ್ಕಾಂತ ಶಕ್ತಿಯ ಗುಣಧರ್ಮದಿಂದೊದಗಿರಬೇಕು.

ಕೆಲ ಮಾನವ ದೇಹಗಳು ಹೆಚ್ಚಿನ ಆಕರ್ಷಣ ಶಕ್ತಿಯ ಶೇಖರಣೆಯನ್ನು ಒಳಗೊಂಡಿರುತ್ತವೆ. ಫಲಸ್ವರೂಪವಾಗಿ ಅಂತಹ ವ್ಯಕ್ತಿಗಳು ಹೆಚ್ಚು ಪ್ರಖ್ಯಾತಿಯನ್ನು ಹೊಂದಿರುತ್ತಾರೆ. ಇನ್ನು ನಾವೆಲ್ಲರೂ ಹೆಚ್ಚು ಕಡಿಮೆಯ ಆಕರ್ಷಣಾ ಶಕ್ತಿಯನ್ನು ಹೊಂದಿದ್ದೇವೆ ಎನ್ನುವ ವಿಷಯವನ್ನು ಹೆಚ್ಚು ಚರ್ಚಿಸಬೇಕಾಗಿಲ್ಲ. ಈ ಒಂದು ಶಕ್ತಿಯ ಸದ್ಗುಣದಿಂದ ಓರ್ವನು ಒಬ್ಬ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳನ್ನು ಸಮ್ಮೋಹನಗೊಳಿಸಬಹುದು.

ಈ ದಿನ ನಮ್ಮ ದೇಹಗಳಲ್ಲಿ ಈಗಾಗಲೇ ಇರುವ ಅಯಸ್ಕಾಂತ ಶಕ್ತಿಯ ಸಾಮರ್ಥ್ಯವನ್ನು ಹೇಗೆ ಹೆಚ್ಚಿಸಿಕೊಳ್ಳಬೇಕು ಎಂಬುದು ತಿಳಿದುಕೊಳ್ಳುವ ಅವಶ್ಯಕತೆ ಇದೆ. ಓರ್ವರು ತಮ್ಮ ಸ್ವಂತ ಅಯಸ್ಕಾಂತ ಶಕ್ತಿಯ ಸಾಮರ್ಥ್ಯವನ್ನು ಅತ್ಯುತ್ತಮ ಸ್ಥಿತಿಗೆ ಹೆಚ್ಚಿಸಿಕೊಳ್ಳಲು ಇಚ್ಛಿಸಬೇಕು. ಓರ್ವರು ಈ ಒಂದು ಮೂಲ ಕಾರ್ಯವನ್ನು ಮಾಡಲು ಗಣನೆಗೆ ತೆಗೆದುಕೊಳ್ಳದೆ ಬೇರೆಯವರನ್ನು ಸಮ್ಮೋಹನಗೊಳಿಸಲಿಚ್ಛಿಸಲಾಗುವುದಿಲ್ಲ.

ಈ ಜಗತ್ತಿನ ಎಲ್ಲಾ ವಸ್ತುಗಳು ಜೀವ ಅಥವಾ ನಿರ್ಜೀವವಿರಲಿ ಪ್ರತಿ ಒಂದು ವಿಷಯದಲ್ಲೂ ಒಂದು ತರಹದ ಗುರುತ್ವಾಕರ್ಷಣೆಯ ಸೆಳೆತದಿಂದ ನಿಯಂತ್ರಿಸಲಾಗಿದೆ. ಜಾತಿಗೆ ಅನುಸಾರವಾಗಿ ಗಂಡು ಹೆಣ್ಣಿನ ಕಡೆಗೆ ಸೆಳೆಯಲ್ಪಡುವುದು, ಪುನಃ ಅದು ಗ್ರಹಗಳನ್ನೂ ಮತ್ತು ನಕ್ಷತ್ರಗಳ ಚಲನವಲನಗಳನ್ನೂ ನಿಯಂತ್ರಿಸುವುದು ಗುರುತ್ವಾಕರ್ಷಣೆಯ ಶಕ್ತಿಯೇ. ಜ್ಯೋತಿಷ್ಯವೆಂದು ಕರೆಯಲಾಗಿದ್ದು ಗ್ರಹಗಳ ಅಯಸ್ಕಾಂತ ಶಕ್ತಿಗಳಿಂದ ಉಂಟಾಗಿರುವ ಪ್ರಭಾವಗಳ ಮತ್ತು ಪ್ರತಿಕೂಲ-ಪ್ರಭಾವಗಳ ಅಧ್ಯಯನವು.

ಓರ್ವರು ಈ ಅಯಸ್ಕಾಂತ ಶಕ್ತಿಯ ಸಾಮರ್ಥ್ಯವನ್ನು ಕೇವಲ ಹೆಂಗಸರಲ್ಲಿ ಮತ್ತು ಗಂಡಸರಲ್ಲಿ ಕಾಣುವುದಲ್ಲದೆ ಹಾಗೆಯೇ ಪ್ರಾಣಿಗಳಲ್ಲಿ ಮತ್ತು ಪಕ್ಷಿಗಳಲ್ಲೂ ಕಾಣಬಹುದು. ಹಾವು ತನ್ನ ಬೇಟೆಯ ಆಹಾರದ ಚಲನೆಯ ಮೇಲೆ ತನ್ನ ಕಣ್ಣುಗಳಿಂದ ಹೊರಡುವಂತಹ ಒಂದು ವಿಶಿಷ್ಟ ರೀತಿಯ ಆಕರ್ಷಣ ಶಕ್ತಿಯಿಂದ ನಿಯಂತ್ರಣ ಮಾಡುವುದು. ಹೆಬ್ಬಾವು 10 ಅಡಿದೂರದಲ್ಲಿರುವ ಜಿಂಕೆಯಲ್ಲಿ ಸೀಳುವಂತಹ ನೋಟವನ್ನು ಬೀರುವುದು, ಆ ಬಡ ಪ್ರಾಣಿಯು ತನ್ನಷ್ಟಕ್ಕೆ ತಾನೇ ಸಂಪೂರ್ಣ ಜಡವಾಗಿರುವುದನ್ನು ಕಂಡುಕೊಳ್ಳುವುದು.

ಬೇಟೆಗಾರರು, ತಮ್ಮ ಜೀವಕ್ಕೆ ಅಪಾಯ ತರುವಂತಹ ಪ್ರಾಣಿಗಳ ಕಣ್ಣುಗಳು ಸಾಧಾರಣಕ್ಕಿಂತ ಭಿನ್ನವಾಗಿರುವಂತಹ ಒಂದು ನಿರ್ದಿಷ್ಟ ತರಹದ ಮಿಂಚನ್ನು ಹೊರಸೂಸುತ್ತವೆ ಎಂದು ಆಗಾಗ ವರದಿಸುತ್ತಾರೆ. ಅದಕ್ಕಾಗಿ ಒಬ್ಬ ಅನುಭವೀ ಬೇಟೆಗಾರನಿಗೆ ಹತ್ತಿರದಲ್ಲಿರುವ ಒಂದು ಸಿಂಹದ ಅಥವಾ ಹುಲಿಯ ಇರುವಿಕೆಯನ್ನು ವಾಸನೆಯಿಂದ ಕಂಡುಹಿಡಿಯಲು ಕಷ್ಟವಲ್ಲ, ಅದೂ ಅಕ್ಕಪಕ್ಕದ ಇತರೆ ಪ್ರಾಣಿಗಳು ಹೆದರಿದ ನೋಟಗಳನ್ನು ನಿರ್ದಿಷ್ಟವಾಗಿ ಗುರುತಿಸಿದ ನಂತರ.

ನಾವು ಅನುಭವದಿಂದ ಎಲ್ಲಾ ಜೀವಿಗಳಲ್ಲಿಯೂ ಎರಡು ತರಹದ ಅಯಸ್ಕಾಂತ ಶಕ್ತಿಯು ಇದೆಯೆಂದು ನೋಡಿದ್ದೇವೆ. ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಹೆಚ್ಚುಕಡಿಮೆ ಇರುವಂತಹ, ಅದರಿಂದ ತಾನು ಬೇರೆಯವರನ್ನು ಆಕರ್ಷಿಸುವಂತಹ ಒಂದು ಸಾಮಾನ್ಯ ಅಯಸ್ಕಾಂತ ಶಕ್ತಿಯು, ಮತ್ತು ಎರಡನೆಯದಾಗಿ ಅಪಾಯವನ್ನು ನಿರೀಕ್ಷಿಸಿದಾಗ ಮಾತ್ರ ನಮ್ಮ ಜೀವದಲ್ಲಿ ಉತ್ಪನ್ನವಾಗುವಂತಹ, ತನಗೆ ಸುರಕ್ಷತೆಯ ಭರವಸೆಯನ್ನೂ ಕೊಡುವಂತಹ ಅಯಸ್ಕಾಂತ ಶಕ್ತಿ.

ನಾನು ಆಗಲೇ ಸಮರ್ಥಿಸಿರುವಹಾಗೆ ಅಯಸ್ಕಾಂತ ಶಕ್ತಿಯು ಪ್ರತೀ ಒಬ್ಬೊಬ್ಬ ವ್ಯಕ್ತಿಯಲ್ಲಿಯೂ ಸಿಗುತ್ತದೆ. ತನ್ನ ಅಯಸ್ಕಾಂತ ಶಕ್ತಿಯನ್ನು ವೃದ್ಧಿಸಿಕೊಂಡಿರುವಂತಹ ಓರ್ವನು ಸುಲಭವಾಗಿ ಬೇರೆಯವರನ್ನು ಆಕರ್ಷಿಸಬಲ್ಲನು, ಹಾಗೆಯೇ ಬೇರೆಯಾರಲ್ಲಿ ಆ ಮಟ್ಟಕ್ಕೆ ಅಯಸ್ಕಾಂತ ಶಕ್ತಿ ಇಲ್ಲವೋ ಅಂತಹವರು ಹುರುಳಿಲ್ಲದೇ ಆಕರ್ಷಿಸುವರು. ಉದಾಹರಣೆಗೆ:ಒಂದು ದೊಡ್ಡ ಅಯಸ್ಕಾಂತವು ಸುಲಭವಾಗಿ ಮತ್ತು ಶಕ್ತಿಯುತವಾಗಿ ಸಣ್ಣ ಕಬ್ಬಿಣದ ತುಂಡುಗಳನ್ನು ಆಕರ್ಷಿಸಬಲ್ಲದು. ಸರಳ ಮತ್ತು ಸ್ಪಷ್ಟವಾದ ಕಾರಣವೆಂದರೆ ಅಯಸ್ಕಾಂತವು ದೊಡ್ಡದಾದ ಕಾರಣ ಅದರಲ್ಲಿ ಹೆಚ್ಚು ಅಯಸ್ಕಾಂತ ಶಕ್ತಿ ಇರುತ್ತದೆ. ಅದರ ಅಣುಗಳು ಬೇರೆಯಾಗಿ ಮತ್ತು ಪ್ರತ್ಯೇಕವಾಗಿ ಹೆಚ್ಚಿನ ದಟ್ಟತೆಯಲ್ಲಿ ಸಜ್ಜುಗೊಂಡು ನಿಶ್ಚಿತವಾದ ಶ್ರೇಷ್ಠರೀತಿಯ ಶಕ್ತಿಯನ್ನು ಒಟ್ಟಾಗಿ ಉತ್ಪಾದಿಸುತ್ತದೆ. ಪರಿಣಾಮವಾಗಿ ಕಬ್ಬಿಣದ ತುಂಡು ಅಯಸ್ಕಾಂತದ ಕಡೆಗೆ ಎಳೆಯಲ್ಪಡುತ್ತದೆ.

ಅದು ಅಪರೂಪವಾಗಿ ಮಾತ್ರ, ನಾವು ಈ ತರಹ ವೃದ್ಧಿಯಾಗಿರುವ ಅಯಸ್ಕಾಂತಶಕ್ತಿ ಒದಗಿಯುವಂತಹವರನ್ನು ನೋಡುತ್ತೇವೆ. ಆದರೆ ಈ ಅಯಸ್ಕಾಂತಶಕ್ತಿ ಅಣುಗಳಿಗೆ ಹೆಚ್ಚಿನ ವಿಸ್ತಾರವನ್ನು ಕೊಟ್ಟಾಗ, ಆ ಅಯಸ್ಕಾಂತ ಶಕ್ತಿಯು ಖಚಿತವಾಗಿ ಹೆಚ್ಚುವುದು. ಅಂತಹ ವೃದ್ಧಿಸಿಕೊಂಡ ಶಕ್ತಿಯಿಂದ

ಸಜ್ಜುಗೊಂಡವರು ಯಾವಾಗಲೂ ಬೇರೆಯವರನ್ನು ಆಕರ್ಷಿಸುವರು. ಬೇರೆ ಪದಗಳಲ್ಲಿ ಓರ್ವವ್ಯಕ್ತಿಯು ಹುದುಗಿರುವಂತಹ ಅಯಸ್ಕಾಂತ ಶಕ್ತಿಯನ್ನು ಕೆಲವು ಅಭ್ಯಾಸಗಳಿಂದ ಹೆಚ್ಚಿಸಿಕೊಳ್ಳಬಹುದು.

ಪ್ರಯೋಗಗಳ ಮೂಲಕ, ಪರೀಕ್ಷೆಗಳಿಂದ ಮತ್ತು ಅಭ್ಯಾಸದಿಂದ ನಾವು ಅಯಸ್ಕಾಂತ ಶಕ್ತಿಯನ್ನು ನಮಗೆ ಎಷ್ಟು ಬೇಕೋ ಅಷ್ಟು ಹೆಚ್ಚಿಸಿಕೊಳ್ಳಬಹುದೆಂದು ಡಾ.ಮೆಸ್ಮರ್‌ರವರು ವಿವರಿಸಿದ್ದಾರೆ. ಅಲ್ಲದೆ, ಅದನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ಗಾಯಿಸಬಹುದು ಅಥವಾ ಅದನ್ನು ಬೇರೆ ಆಕಾರವನ್ನು ರೂಪಿಸಿಕೊಳ್ಳುವ ಹಾಗೆಯೂ ಸಹ ಮಾಡಬಹುದು ಎಂದು ಸಹ ಅವರು ವಿವರಿಸಿದ್ದರು.

ಡಾ.ಮೆಸ್ಮರ್‌ರವರು ಸೂಚಿಸಿದರು ಎನ್ನುವ ವಿಷಯವನ್ನು ಸಾವಿರಾರು ವರ್ಷಗಳ ಹಿಂದೆಯೇ ಭಾರತೀಯ ಋಷಿಗಳು ಅನುಮಾನವಿಲ್ಲದೆ ಸಾಬೀತು ಪಡಿಸಿದ್ದರು. ಆಗ ಇದನ್ನು ಪ್ರಾಣ ಶಕ್ತಿಯೆಂದು ಕರೆಯಲಾಗಿತ್ತು. ಈ ಒಂದು ನಿರ್ದಿಷ್ಟವಾದ ಶಕ್ತಿಯನ್ನು ನಾವು ಪ್ರಾಣಾಯಾಮದ ಮೂಲಕ ಮತ್ತು ಒಂದು ನಿರ್ದಿಷ್ಟ ರೀತಿಯ ಯೋಗದ ಅಭ್ಯಾಸಗಳಿಂದ ವೃದ್ಧಿಸಿಕೊಳ್ಳಬಹುದು.

ಪ್ರಾಣಾಯಾಮದ ಮೂಲಕ ನಾವು ನಮ್ಮ ದೇಹಗಳಲ್ಲಿ ಪ್ರಾಣವನ್ನು ಅಥವಾ ಜೀವ ಶಕ್ತಿಯನ್ನು ಎಳೆದುಕೊಳ್ಳಬಹುದು, ಹಾಗೆಯೇ ಅದನ್ನು ನಾವು ಇತರೆ ದೇಹಗಳಿಗೆ ವರ್ಗಾಯಿಸಬಹುದು ಅಥವಾ ಸತ್ತವರಿಗೂ ಸಹ ಜೀವ ತುಂಬಬಹುದು ಮತ್ತು ವ್ಯಕ್ತಿಗಳ ಆಯುಷ್ಯವನ್ನು ಸಹ ಹೆಚ್ಚಿಸಬಹುದು. ಭಾರತದ ಪುರಾತನ ವೇದಗಳು, ಯೋಗಿಗಳು ಸತ್ತವರನ್ನು ಕೇವಲ ಬೆರಳ ಸ್ಪರ್ಷದಿಂದ ಪುನರ್ಜೀವನಗೊಳಿಸುತ್ತಿದ್ದರೆಂದು ಸಾಕ್ಷಿ ಹೇಳುತ್ತವೆ. ಈ ಯೋಗಿಗಳು ಅವರಲ್ಲಿಯೇ ಈ ಹೇರಳವಾದ ಪ್ರಾಣಶಕ್ತಿಯನ್ನು ಸಾಂದ್ರೀಕರಿಸಿ ಹಾಗೆಯೇ ಕೇವಲ ತಮ್ಮ ಬೆರಳಸ್ಪರ್ಷದಿಂದ ಸತ್ತವರಲ್ಲಿ ಜೀವವನ್ನು ಹರಿಸುತ್ತಿದ್ದರು.

*ಯೋಗಿ*ಗಳು ಅದನ್ನು ಇಥರ್ ಅಂದರೆ ಆಕಾಶದ್ರವ್ಯವೆಂದು ಕರೆದರು. ಎಲ್ಲಿ ಶೂನ್ಯವಿರುತ್ತದೋ ಅಲ್ಲಿ ಆಕಾಶವು ತನ್ನಷ್ಟಕ್ಕೇ ಹರಡಿಕೊಳ್ಳುವುದು. ಈ ಸಂಪೂರ್ಣ ಜಗತ್ತು ಈ ಆಕಾಶದಲ್ಲಿ ಹೀರಿಕೊಂಡಿದೆ. ಆಕಾಶದ್ರವ್ಯವು ಮತ್ತು ಜೀವ ಶಕ್ತಿಯು (*ಪ್ರಾಣ ಶಕ್ತಿ*) ಆಧಾರಭೂತವಾಗಿ ಒಂದೇ ಎಂದು ಅರ್ಥವಾಗುತ್ತದೆ. ಬೇರೆಪದಗಳಲ್ಲಿ ಈ ಸಂಪೂರ್ಣ ಜಗತ್ತು ಈ ಪ್ರಾಣ ಅಥವಾ ಜೀವಶಕ್ತಿಯಿಂದ ವ್ಯಾಪಿಸಿಕೊಂಡಿದೆ. ನಾವು ಒಂದು ಕ್ಷಣದಲ್ಲಿ ಈ ಜೀವಶಕ್ತಿಯ ಮಾಧ್ಯಮದಿಂದ ಜಗತ್ತಿನ ಎಲ್ಲಾ ಮೂಲೆಗಳನ್ನೂ ಮುಟ್ಟುತ್ತೇವೆ.

ಯೋಗಿಗಳು ಈ ಶಕ್ತಿಯನ್ನು ಸಮಯರಹಿತವೆಂದು ಕರೆದರು. ಅಂದರೆ ಕಳೆದುಹೋದ ಸಮಯವನ್ನೂ ಸಹ ಈ ಒಂದು ಶಕ್ತಿಯ ಸಹಾಯದಿಂದ ತಿಳಿದುಕೊಳ್ಳಬಹುದು. ಭವಿಷ್ಯವನ್ನೂ ಸಹ ಈ ಒಂದು ಶಕ್ತಿಯ ಸಹಾಯದಿಂದ ನೋಡಬಹುದು. ಈ ಒಂದು ಶಕ್ತಿಯಿಂದ ಸಂಪನ್ನವಾಗಿರುವ ಭಾರತೀಯ ಯೋಗಿಗಳು ಭೂತಕಾಲದ ಕ್ಷಣಗಳನಲ್ಲದೆ ಭವಿಷ್ಯವನ್ನೂ ನಾವು ವರ್ತಮಾನದ ಕ್ಷಣಗಳನ್ನು ನೋಡಿದಹಾಗೆ ನೋಡುತ್ತಿದ್ದರು.

ಈ ಆಕರ್ಷಣ ಶಕ್ತಿಯನ್ನು ಕೆಲವು ನಿರ್ದಿಷ್ಟವಾದ ಆಧ್ಯಾತ್ಮಿಕ ಅಭ್ಯಾಸಗಳಿಂದ ಮುಂದೆ ವೃದ್ಧಿಸಿಕೊಳ್ಳಬಹುದೆಂದು ನಾವು ಈಗಾಗಲೇ ಸಮರ್ಥಿಸಿದ್ದೇವೆ. ಅದನ್ನು ನಾವು ಹೆಚ್ಚು ವೃದ್ಧಿಸಿಕೊಂಡ ಹಾಗೆಲ್ಲಾ, ನಾವು ಉತ್ತಮವಾಗಿ ತಿಳಿಯದ ಸ್ಥಳಗಳನ್ನು ಮತ್ತು ತಿಳಿಯದ ಕ್ಷಣಗಳನ್ನು ಮತ್ತು ತಿಳಿಯದ ಗೂಢತ್ವಗಳನ್ನೂ ನೋಡುತ್ತೇವೆ.

ಈ ಆಕರ್ಷಣ ಶಕ್ತಿಯನ್ನು ಕೆಲವು ನಿರ್ದಿಷ್ಟವಾದ ಆಧ್ಯಾತ್ಮಿಕ ಅಭ್ಯಾಸಗಳಿಂದ ಮುಂದೆ

ವೃದ್ಧಿಸಿಕೊಳ್ಳಬಹುದೆಂದು ನಾವು ಈಗಾಗಲೇ ಸಮರ್ಥಿಸಿದ್ದೇವೆ. ಅದನ್ನು ನಾವು ಹೆಚ್ಚು ವೃದ್ಧಿಸಿಕೊಂಡ ಹಾಗೆಲ್ಲಾ, ನಾವು ಉತ್ತಮವಾಗಿ ತಿಳಿಯದ ಸ್ಥಳಗಳನ್ನು, ತಿಳಿಯದ ಕ್ಷಣಗಳನ್ನು ಮತ್ತು ತಿಳಿಯದ ಗೂಢತ್ವಗಳನ್ನೂ ನೋಡುತ್ತೇವೆ.

ಪ್ರಸಿದ್ಧ ಭಾರತೀಯ ವಿಜ್ಞಾನಿಯಾದ ಡಾ.ಜಗದೀಶ್ ಚಂದ್ರ ಬೋಸ್‌ರವರು ಸಸ್ಯಜಾತಿಯಲ್ಲೂ ಸಹ ಈ ಶಕ್ತಿ ಇದೆ ಎಂಬುದನ್ನು ಸ್ಥಾಪಿಸಿದರು. ಅವರು ಪ್ರಯೋಗಗಳ ಮೂಲಕ ಒಂದು ದ್ರಾಕ್ಷಿಬಳ್ಳಿಯನ್ನು ಒಂದು ಗಿಡದ ಹತ್ತಿರ ನೆಟ್ಟದ್ದಾದರೆ ಅದರ ಬೆಳವಣಿಗೆಯು ಗಿಡಗಳ ಬೆಂಬಲವಿಲ್ಲದವುದಕ್ಕೆ ಹೋಲಿಸಿದಾಗ ಗಮನೀಯವಾಗಿ ತ್ವರಿತಗೊಂಡಿದ್ದಿರುವುದನ್ನು ಸಾಬೀತು ಪಡಿಸಿದರು.

ಡಾ॥ಚಾರ್ ಕೋಟ್‌ರವರಿಗೆ ಅಧ್ಯಯನ ಮಾಡುವಾಗ, ಈ ಶಕ್ತಿಗೆ ಅದಕ್ಕೆ ಪರಿಣಮಿಸುವ ಹಾಗೆ ಆಜ್ಞೆಯನ್ನು ಕೊಟ್ಟದ್ದಾದರೆ ಬೇಗನೇ ಅದರ ವಿಸ್ತಾರವನ್ನು ಗಳಿಸಿಕೊಳ್ಳುವುದು ಎಂದು ಅನ್ನಿಸಿತು. ಉದಾಹರಣೆಗೆ ಒಬ್ಬ ವ್ಯಕ್ತಿಯು ತಾನು ಇಷ್ಟಪಟ್ಟ ಸ್ನೇಹಿತನನ್ನು ಕರೆಯಲು ಹೋದಾಗ ಚುರುಕಾಗಿ ನಡೆಯುವನು ಎಂದು ಅವರು ವಿವೇಚಿಸಿದರು. ಈ ವಿಷಯವು ಒಂದು ಉದ್ವೇಗದ ತಯಾರಿಯ ಪ್ರತಿಕ್ರಿಯೆಯು. ಒಬ್ಬವ್ಯಕ್ತಿಯು ತನ್ನ ವೈರಿಯನ್ನು ನೋಡಲು ಹೋಗುತ್ತಿದ್ದರೆ ಖಚಿತವಾಗಿ ಅಷ್ಟೊಂದು ವೇಗವಾಗಿ ನಡೆಯಲಾರ. ಪುನಃ ಅವನು ಪ್ರೇಮಿಯನ್ನು ನೋಡಲು ಹೋಗುತ್ತಿದ್ದಾನೆಂದರೆ ಅವನ ಮುಖವು ಖುಷಿಯಿಂದ ಮಿಂಚುವುದು. ಅದು ಸೂಚಿಸುವುದೇನೆಂದರೆ ಅವನಿಗೆ ಅವನ ದೇಹ ರಚನೆಯಲ್ಲಿ ಅಷ್ಟೇ ಅಳತೆಯ ಆಕರ್ಷಣ ಶಕ್ತಿ ಇತ್ತು, ಯಾವುದು, ಹೇಗಾದರೂ, ಒಂದು ನಿರ್ದಿಷ್ಟ ಕ್ಷಣದಲ್ಲಿ ಅವನ ಅನುಭವದ ಉದ್ವೇಗಕ್ಕನುಸಾರವಾಗಿ ಹೆಚ್ಚುಕಡಿಮೆಯಾಯಿತು. ಬೇರೆಪದಗಳಲ್ಲಿ, ಉದ್ವೇಗವು ಒಬ್ಬ ವ್ಯಕ್ತಿಯಲ್ಲಿ ಹುದುಗಿರುವಂತಹ ಆಕರ್ಷಣ ಶಕ್ತಿಯನ್ನು ನಿಯಂತ್ರಿಸುವಲ್ಲಿ ಗಮನೀಯವಾದ ಪಾತ್ರವಹಿಸುತ್ತದೆ.

ಓರ್ವರು ಸಂವೇದನೆಗಳ ಅಥವಾ ಉದ್ವೇಗಗಳ ಪಾತ್ರಗಳನ್ನು ಒಂದು ಸಿನಿಮಾ ಮಂದಿರದಲ್ಲಿ ನಡೆದ ಆಸಕ್ತಿಯುತ ಬೆಳವಣಿಗೆಯ ವರದಿಯನ್ನು ನೋಡಬಹುದು. ಒಮ್ಮೆ ಒಬ್ಬ ಚಿಕಿತ್ಸಕ ಮತ್ತು ಅವನ ಹೆಂಡತಿ ಇಬ್ಬರೂ ಜೊತೆಯಲ್ಲಿ ಒಂದು ಸಿನಿಮಾವನ್ನು ನೋಡುತ್ತಿದ್ದರು. ಸ್ವಲ್ಪ ಹೊತ್ತಿನ ನಂತರ ಆ ಹೆಂಡತಿಗೆ ದುಃಸ್ಸಹವಾದ ತಲೆನೋವು ಬಂದು ಸಿನಿಮಾದಲ್ಲಿನ ಎಲ್ಲಾ ಆಸಕ್ತಿಯನ್ನು ಕಳೆದುಕೊಂಡಳು. ಆಕೆಯು ನೋವನ್ನು ಹೆಚ್ಚು ತಾಳಲಾರದೆ ಮನೆಗೆ ಹೊರಡಲು ಒತ್ತಾಯಿಸಲು ಪ್ರಾರಂಭಿಸಿದಳು.

ಆ ಚಿಕಿತ್ಸಕನಿಗೆ ಸಿನಿಮಾ ನೋಡುವ ಸಂತೋಷವನ್ನು ಬಿಟ್ಟುಕೊಡಲು ಇಷ್ಟವಿರಲಿಲ್ಲ. ಆತನು ಹೆಂಡತಿಗೆ ಹೇಳಿದನು: ಯಾವುದಕ್ಕೂ ಹೆದರಬೇಕಾಗಿಲ್ಲ. ಈ ಸಂಜೆ ಒಬ್ಬ ನಿಯೋಗಿಯು ತಲೆನೋವಿಗೆ ಖಚಿತ ಪರಿಹಾರವನ್ನು ಕೊಡುವಂತಹ ಒಂದು ನಮೂನೆಯ ಗುಳಿಗೆಯನ್ನು ಕೊಟ್ಟಿದ್ದಾನೆ. ಆ ನಮೂನೆಯು ನನ್ನ ಜೇಬಿನಲ್ಲಿದೆ ಅದು ನಿನ್ನ ತಲೆನೋವನ್ನು ವಾಸಿಮಾಡುವುದು.

ಆತನು ಹಾಗೆ ಹೇಳುತ್ತಿದ್ದ ಹಾಗೆಯೇ ಥಿಯೇಟರ್‌ನ ಕತ್ತಲಹಾಲಿನಲ್ಲಿ ತನ್ನ ಇಜಾರಿನಿಂದ ಒಂದು ಗುಂಡಿಯನ್ನು (Shirt button) ಕಿತ್ತಿ ತನ್ನ ಹೆಂಡತಿಗೆ ಕೊಟ್ಟನು. ಅದನ್ನು ಅವಳ ಬಾಯಿಯಲ್ಲಿ ಹಾಕಿಕೊಂಡು ಚೀಪುತ್ತಿರಲು ಹೇಳಿದನು.

ಕೆಲ ನಿಮಿಷಗಳ ನಂತರ ಆ ಹೆಂಡತಿಗೆ ತುಂಬಾ ಆರಾಮವೆನಿಸಿತು. ಅವಳ ತಲೆನೋವು ಹೋಗಿತ್ತು. ಅವಳು ಸಿನಿಮಾವನ್ನು ಒಳ್ಳೆ ಸಂತೋಷದಿಂದ ನೋಡಿದಳು.

ಆ ತಲೆನೋವು ಯಾವುದೇ ಔಷಧಿಯಿಂದ ವಾಸಿಯಾಗಿರಲಿಲ್ಲ. ನಿಜವಾಗಿಯೂ ಆ ಹೆಂಡತಿಗೆ ತನ್ನ ಗಂಡನಲ್ಲಿ ಮತ್ತು ಅವನ ಸಾಮರ್ಥ್ಯದಲ್ಲಿ ಆಳವಾದ ನಂಬಿಕೆಯಿತ್ತು. ಅದು ಯಾವುದಾದರೂ ಔಷಧಿಯಕ್ಕಿಂತ ಆಳವಾದ ನಂಬಿಕೆಯೇ ಅವಳ ತಲೆನೋವನ್ನು ವಾಸಿಮಾಡಿತ್ತು.

ನಾವು ಜೀವನದಲ್ಲಿ ಅಂತಹವೇ ಹಲವಾರು ವಿಷಯಗಳನ್ನು ನೋಡುವೆವು. ಫುಟ್‌ಬಾಲ್ ಆಟ ಆಡುವಾಗ ಒಬ್ಬ ಆಟಗಾರನಿಗೆ ತನ್ನ ಕಾಲ ಬೆರಳಿಗೆ ಗಾಯವಾಗುವುದು. ಆ ಬೆರಳು ಎರಡಾಗುವುದು ಮತ್ತು ರಕ್ತ ಹೊರಚಿಮ್ಮುವುದು ಆದರೂ ಒಳ್ಳೆ ಸ್ಪರ್ಧೆಯಲ್ಲಿರುವ ಪಂದ್ಯದ ಉದ್ವೇಗದಲ್ಲಿ ಮೈಮರೆತ ಕಾರಣ, ಅವನಿಗೆ ಬೆರಳಲ್ಲಿ ನೋವು ಕಾಣುವುದೇ ಇಲ್ಲ. ಪಂದ್ಯವು ಮುಗಿದಾಕ್ಷಣ ತನ್ನ ಬೆರಳ ಕಡೆಗೆ ನೋಡಿಕೊಳ್ಳುವನು, ಅವನು ನೋವಿನಿಂದ ಅರಚಿಕೊಳ್ಳುವನು. ಅಂತಹ ಆಳವಾದ ಗಾಯವಾಗಿದ್ದರೂ ತಾನು ಒಂದು ಗಂಟೆಯವರೆಗೂ ಹೇಗೆ ಆಡುತ್ತಿದ್ದೆನೆಂದು ಅವನು ಚಕಿತಗೊಳ್ಳುವನು.

ಇನ್ನೊಂದು ನಿದರ್ಶನವನ್ನು ತೆಗೆದುಕೊಳ್ಳಲು, ಮರಣಹಾಸಿಗೆಯಲ್ಲಿರುವ ಒಬ್ಬ ವ್ಯಕ್ತಿಯು ತಾನು ಸಾಯುವವುದಕ್ಕಿಂತ ಮುಂಚೆ ತನಗೆ ಇಷ್ಟವಾದ ಭಕ್ಷ್ಯವೊಂದನ್ನು ಸವಿಯಲು ಹಾತೊರೆಯಬಹುದು ಹಾಗೂ ಇದು ಆತನ ಕೊನೆಯ ಬಯಕೆಯಾದ ಕಾರಣ, ಅವರು ಆತನಿಗೆ ಆ ಇಷ್ಟ ಭಕ್ಷ್ಯವನ್ನು ಕೊಡುವರು. ರೋಗಿಗೆ ಅದು ಮಾರಕವಾಗಬಹುದೆಂದುಗೊತ್ತಿದೆ. ಹೀಗಿದ್ದರೂ ಅವನ ಕಣ್ಣುಗಳು ಒಂದು ಮಿಂಚನ್ನು ಹೊರಸೂಸುತ್ತವೆ. ಆತನು ಅದರಿಂದಾಗುವ ದುಷ್ಪರಿಣಾಮ ಅಥವಾ ಬೇರೇನೇ ಆಗಲಿ ಇದರಿಂದ ಅಥವಾ ಆ ಭಕ್ಷ್ಯದಿಂದಾಗುವುದಕ್ಕೆ ಲಕ್ಷ್ಯಕೊಡುವುದಿಲ್ಲ. ಆತನ ಉದ್ವೇಗಗಳು ಆ ಒಂದು ಇಷ್ಟ ಭಕ್ಷ್ಯದ ಕಡೆಗೆ ಕೇಂದ್ರೀಕೃತವಾಗಿ ಸುತ್ತುವರೆದುದು ಸ್ಪಷ್ಟವಾಗಿದೆ.

ಇನ್ನೂ ಒಂದು ಉದಾಹರಣೆಯನ್ನು ತೆಗೆದುಕೊಳ್ಳಲು, ನಿಮ್ಮ ಒಬ್ಬ ಆರೋಗ್ಯವಾದ ಮತ್ತು ದೃಢವಾದ ಸ್ನೇಹಿತನೊಬ್ಬನನ್ನು ಮಾತಾಡಿಸಿ ಹೀಗೆ ಹೇಳುವ ಹಾಗೆ ಊಹಿಸಿಕೊಳ್ಳಿ: ಏನು ವಿಷಯ? ನೀನು ಈ ದಿನ ಎಷ್ಟು ದುಃಖಿತ ಮತ್ತು ಮಂದವಾಗಿ ಕಾಣುತ್ತಿದ್ದೀಯ?

ಬಹುಶಃ ಅವನು ನಿಮ್ಮನ್ನು ನಂಬಲಿಕ್ಕಿಲ್ಲ. ಹಾಗೆಯೇ ಇನ್ನೂ ಕೆಲ ಸ್ನೇಹಿತರು ಅವನಿಗೆ ಅದೇ ಅಭಿಪ್ರಾಯದಿಂದ ಮಾತನಾಡಿಸಿದರೆ ಅವನು ಸಂಪೂರ್ಣ ಖಚಿತವಾಗಿ ಅಸ್ವಸ್ಥನಾಗುವನು. ಅವನ ಹಾಗೆ ಕರೆದಂತಹ ವ್ಯಾಧಿಯು ಅವನ ಸ್ನೇಹಿತರಿಂದ ಅವನ ಕಿವಿಯಲ್ಲಿ ಪದೇಪದೇ ಗುಂಯ್ ಗುಟ್ಟಿದಾಗ, ಅವನಿಗೆ ಹಾಸಿಗೆ ಹಿಡಿಯದೆ ಬೇರೆ ದಾರಿ ಕಾಣಲಿಲ್ಲ. ಅದು ಅವನು ವ್ಯಾಧಿಗ್ರಸ್ತನಲ್ಲವೆಂಬ ಸತ್ಯತೆ ಇದ್ದರೂ ಸಹ ಹಾಗೆ ಆಯಿತು. ಏಕೆಂದರೆ ನೀವು ಅವನಲ್ಲಿ ತಾನು ಅಸ್ವಸ್ಥನೆಂಬ ವಿಚಾರವನ್ನು ಡಿಕ್ಕಿಹೊಡೆದ ಕಾರಣ, ಅದೊಂದೇ ಅವನ ವ್ಯಾಧಿಗೆ ಕಾರಣವಾಯಿತು.

ತಾತ್ಪರ್ಯವನ್ನು ಹೇಳಲು:ಭಾರತೀಯ ಯೋಗಿಗಳು ಪ್ರಾಣಶಕ್ತಿ ಎಂದು ಕರೆದ ಅಯಸ್ಕಾಂತ ಶಕ್ತಿಯು ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸಹಜವಾಗಿಯೇ ಇರುತ್ತದೆ. ಕೆಲವೊಂದು ಆಧ್ಯಾತ್ಮಿಕ ಅಭ್ಯಾಸಗಳನ್ನು ಅನುಸರಿಸಿ ಈ ಶಕ್ತಿಯನ್ನು ವೃದ್ಧಿಸಿಕೊಳ್ಳಬಹುದು. ಒಮ್ಮೆ ಒಂದು ಮಟ್ಟಕ್ಕೆ ವೃದ್ಧಿಸಿಕೊಂಡರೆ ಪವಾಡಗಳನ್ನು ಮಾಡುವುದು. ಉದ್ವೇಗ ಅಥವಾ ಭಾವಾತಿರೇಕವು ಅದರ ಪ್ರಗತಿ ಮತ್ತು ಅಪ್ರಗತಿಯಲ್ಲಿ ನಿರ್ಣಾಯಕ ಪಾತ್ರವನ್ನುವಹಿಸುವುದು. ಉದ್ವೇಗವೇ ಈ ಶಕ್ತಿಗೆ ಹರಿತವಾದ ತುದಿ ಅಥವಾ ಮೊಂಡತನವನ್ನು ಕೊಡುವುದು.

# ಅಧ್ಯಾಯ 3

## ಸಮ್ಮೋಹನದ ಪ್ರಮುಖ ನಿಯಮಗಳು

ಕಳೆದ ಅಧ್ಯಾಯದಲ್ಲಿ ಭಾವುಕತೆಯನ್ನೂ ಮತ್ತು ಅಯಸ್ಕಾಂತ ಶಕ್ತಿಯನ್ನೂ ವಿವರಿಸುವ ಪ್ರಯತ್ನ ನಡೆದಿತ್ತು. ಈಗ ಪ್ರತಿ ಜೀವದಲ್ಲಿಯೂ ಅಯಸ್ಕಾಂತ ಶಕ್ತಿ ಇದೆ ಎನ್ನುವುದು ಸ್ಪಷ್ಟವಾಗಿದೆ. ಕೆಲ ಆಧ್ಯಾತ್ಮಿಕ ಅಭ್ಯಾಸಗಳನ್ನು ಅಳವಡಿಸಿ ನಾವು ಈ ಆಕರ್ಷಣ ಶಕ್ತಿಯನ್ನು ಮುಂದೆ ವೃದ್ಧಿಸಿಕೊಳ್ಳಬಹುದು. ನಮ್ಮ ದೇಹದಲ್ಲಿ ಈ ಶಕ್ತಿಯ ಒಂದು ಹೆಚ್ಚಿನ ಕೇಂದ್ರೀಕೃತವಾದುದನ್ನು ಪಡೆದುಕೊಳ್ಳಬಹುದು. ನಾವು ಇದನ್ನು ಬೇರೆ ಜೀವಿಗಳಿಗೂ ಸಹ ವರ್ಗಾಯಿಸಬಹುದು.

ಓರ್ವನು ಭಾವುಕತೆಯಲ್ಲಿ ಇದನ್ನು ಶಕ್ತಿಯುತ ಮಾಡಿಕೊಂಡರೆ ಓರ್ವನಿಗೆ ಅದರ ಸಾಧನೆಯ ಅರಿವು ಸಿಗುವುದು. ಏಕೆಂದರೆ ಭಾವುಕತೆ ಮತ್ತು ಆಕರ್ಷಣ ಶಕ್ತಿಯ ಮಿಶ್ರಣದ ಮೂಲಕ ಉತ್ಪತ್ತಿ ಆದಂತಹ ಶಕ್ತಿಯು ಅದ್ವಿತೀಯವಾಗಿ ಶಕ್ತಿಯುತವಾಗಿದೆ ಎಂದು ಕಾಣಲಾಗಿದೆ. ಇಲ್ಲವಾದರೆ ನಮಗೆ ತಿಳಿಯದೇ ಉಳಿಯುವ ಅನೇಕ ಗೂಢತ್ವಗಳನ್ನು ತಿಳಿಸುವ ಸಾಮರ್ಥ್ಯವು ಅದಕ್ಕೆ ಇದೆ.

ಸಮ್ಮೋಹನವು, ಬೇರೆ ಯಾವುದೇ ವಿಜ್ಞಾನದ ಹಾಗೆ ಒಂದು ನಿರ್ದಿಷ್ಟ ಭದ್ರವಾದ ನಿಯಮಗಳನ್ನು ಆಧರಿಸಿದೆ. ಬಹಳ ವರ್ಷಗಳವರೆಗೆ ಅದು ಗೋಪ್ಯತೆಯ ಗಾಢ ಪದರುಗಳಲ್ಲಿ ಮುಚ್ಚಿಕೊಂಡೇ ಉಳಿದಿದೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ನಮಗೆ ಗೊತ್ತಿರುವ ಸ್ವಲ್ಪವೇ, ಅದರಲ್ಲಿ ಬಹಳಷ್ಟು ಬೆಲೆಬಾಳುವ, ಜೀವನದ ಗುಣವನ್ನು ಉತ್ತಮಗೊಳಿಸುವಲ್ಲಿ ತುಂಬಾ ನೆರವಾಗಿದೆ ಎಂದು ಸಾಬೀತು ಪಡಿಸಿದೆ.

ಪ್ರಮುಖ ಪಶ್ಚಿಮದ ಮತ್ತು ಉತ್ತರದ ಸಮ್ಮೋಹನ ಪ್ರವೀಣರು ಈ ಕೆಳಗಿನ ವಾಸ್ತವಿಕವಾದ ಮತ್ತು ಮಹತ್ವವಾದ ನಿಯಮಗಳನ್ನು ಸೂತ್ರಗಳಾಗಿ ವ್ಯಕ್ತಪಡಿಸಿದ್ದಾರೆ. ಓರ್ವರು ಯಶಸ್ವೀ ಸಮ್ಮೋಹಕರಾಗಿ ಹೊರಬರಬೇಕಾದರೆ ಈ ನಿಯಮಗಳನ್ನು ಹತ್ತಿರದಿಂದ ಅನುಸರಿಸಬೇಕು.

೧. ಯಾರೇ ಸ್ವಸ್ಥ ಬುದ್ಧಿಯ ವ್ಯಕ್ತಿಯು ಹೆಂಗಸಾಗಲೀ, ಗಂಡಸಾಗಲೀ ಯಶಸ್ವೀ ಸಮ್ಮೋಹಕರಾಗಬಹುದು. ಅದು ಯಾವುದೇ ಬೇಧಭಾವವನ್ನು ಗುರುತಿಸುವುದಿಲ್ಲ. ಅವರು ಅಸಾಧಾರಣ ಬುದ್ಧಿಶಕ್ತಿಯವರಾಗಿರುವ ಅವಶ್ಯಕತೆ ಇಲ್ಲ. ಅಲ್ಲದೆ, ಈ ಜ್ಞಾನವು ದೈವಶಕ್ತಿ ಅಥವಾ ದೇವರ ಕೊಡುಗೆ ಎನ್ನುವುದು ಸಂಪೂರ್ಣ ತಪ್ಪು ಅಭಿಪ್ರಾಯವು. ಇದು ಓರ್ವರು ಏಕಪ್ರಕಾರವಾಗಿ ಕಲಿಯಬೇಕಾಗಿರುವಂತಹ ವಿಜ್ಞಾನವು.

೨. ಒಬ್ಬ ಮೂರ್ಖನನ್ನೂ, ಮಾನಸಿಕ ರೋಗಿಯನ್ನು ಅಥವಾ ಬುದ್ಧಿಭ್ರಮಣೆಯಾದವನನ್ನೂ ಸಮ್ಮೋಹನಗೊಳಿಸಲಾಗುವುದಿಲ್ಲ. 'ಮಾಧ್ಯಮ', ಬೇರೆ ಪದಗಳಲ್ಲಿ ಸಮ್ಮೋಹನಕ್ಕೆ ಒಳಪಡುವವನಿಗೆ ಸಾಮಾನ್ಯ ಬುದ್ಧಿಯಿರಬೇಕು. ಅವನಿಗೆ ಒಳ್ಳೆಯದು ಮತ್ತು ಕೆಟ್ಟದ್ದು ಎಂಬ ವ್ಯತ್ಯಾಸ ಗೊತ್ತಿರಬೇಕು. ತಾನು 'ಮಾಧ್ಯಮ'ನು ಒಂದು ಕಾರ್ಯನಿಮಿತ್ತವಾಗಿ ಸಮ್ಮೋಹನಕ್ಕೆ ಒಳಪಡುತ್ತಿರುವನೆಂದು ಅರಿತಿರಬೇಕು.

೩. ಸಮ್ಮೋಹಕನ ವಯಸ್ಸಿಗೆ ಸರಿಸಮಾನವಾಗಿರುವಂತಹ 'ಮಾಧ್ಯಮ'ನನ್ನು ಸಮ್ಮೋಹನಗೊಳಿಸುವುದು ಸುಲಭ. ಮಾಧ್ಯಮನು ಬಹಳ ವಯಸ್ಸಾದವನಾಗಿದ್ದರೆ ಅಥವಾ ಅತೀ ಎಳೆಯವನಾಗಿದ್ದರೆ,

ಸಮ್ಮೋಹಕನಿಗೆ, ವಿಷಯಕ್ಕೆ ಸಂಬಂಧಿಸಿದಂತೆ, ಈ ಕಡೆ ಅತೀ ಗೌರವ ಅಥವಾ ಕರುಣೆ ಇರಬಹುದು ಮತ್ತು ಪರಿಸ್ಥಿತಿಯ ಅವಲಂಬನೆಯ ಸಂಪೂರ್ಣ ಅನನ್ಯತೆ, ಹೇಗಾದರೂ, ಇರುವುದಿಲ್ಲ.

ಒಂದು ನಿದರ್ಶನವನ್ನು ತೆಗೆದುಕೊಳ್ಳಲು 30 ರ ವಯಸ್ಸಿನ ಒಬ್ಬ ಸಮ್ಮೋಹಕನು ತನ್ನ 'ಮಾಧ್ಯಮ'ನನ್ನಾಗಿ 20 ರಿಂದ 40 ವರ್ಷದವರನ್ನು ತೆಗೆದುಕೊಳ್ಳಬಹುದು. ಇಲ್ಲವಾದರೆ, ತನ್ನ ವಯಸ್ಸಿನ ಗುಂಪಿಗೆ ಸೇರದ ವಯಸ್ಸಾದ ಅಥವಾ ಎಳೆಯ 'ಮಾಧ್ಯಮ'ನನ್ನು ಎದುರಿಸಿದಾಗ ತಾನು ಸುಲಭವಾಗಿ ಹೆಚ್ಚುಕಡಿಮೆ ವಯಸ್ಸಿನವರ ಜೊತೆಗೆ ಗುರುತಿಸಿಕೊಳ್ಳಲಿಕ್ಕಿಲ್ಲ.

ಪಾಶ್ಚಿಮಾತ್ಯ ವಿದ್ಯಾಲಯಗಳ ಪ್ರಕಾರ 'ಮಾಧ್ಯಮ'ನು ಹೆಚ್ಚು ನಿರ್ಧಾರಿತನಾಗಿದ್ದರೆ ಅವನು ತನ್ನಷ್ಟಕ್ಕೆ ತಾನೇ ಸಮ್ಮೋಹನ ವಿಧಾನಕ್ಕೆ ಬೆಂಬಲಕೊಡುವನು. ಹೇಗಾದರೂ ಭಾರತೀಯ ವಿದ್ಯಾಲಯವು ಬೇರೆ ದೃಷ್ಟಿಯನ್ನು ಅನುಸರಿಸುತ್ತದೆ. ವಯಸ್ಸು, ಯಾವುದೇ ರೀತಿಯಲ್ಲಿ ಬಂಧಕವಾಗಿಲ್ಲವೆಂದು ಅದು ಸಮರ್ಥಿಸುತ್ತದೆ ಯಾವುದೇ ವಯಸ್ಸಿನ ವ್ಯಕ್ತಿಯನ್ನು ಸಮ್ಮೋಹನಗೊಳಿಸಬಹುದು.

ಭಾರತೀಯ ವಿದ್ಯಾಲಯವು, ಓರ್ವ ಸಮ್ಮೋಹಕನು, ನೂರಾರು ಪುರುಷರನ್ನು ಮತ್ತು ಮಹಿಳೆಯರನ್ನು ಒಮ್ಮೆಲೇ ಸಮ್ಮೋಹನಗೊಳಿಸಬಹುದೆಂದು ಸಾರುತ್ತದೆ. ಭಾರತೀಯ ಪುರಾತನ ಋಷಿಯಾದ ವಿಶ್ವಾಮಿತ್ರನಿಗೆ ಸಾಗರ ರಾಜನ 60000 ಮಕ್ಕಳನ್ನೂ ಸಮ್ಮೋಹನಗೊಳಿಸಿ ಮತ್ತು ಪ್ರತಿಯೊಬ್ಬರಲ್ಲಿ ನಿರ್ಜೀವ ರೀತಿಯ ನಿಶ್ಚೇತನಗೊಳಿಸಲು ಒಂದು ಕ್ಷಣಕ್ಕಿಂತಲೂ ಹೆಚ್ಚು ಸಮಯವಾಗಲಿಲ್ಲ.

೪. ಓರ್ವ 'ಮಾಧ್ಯಮ'ನನ್ನು ತನ್ನ ಪಂಗಡದ ನಿಯಮಗಳಿಗೆ ಅಥವಾ ವೈಯಕ್ತಿಕ ರುಚಿಯ ಅನುಸಾರವಾಗಿ ನಟಿಸಲು ಅಥವಾ ನಡೆದುಕೊಳ್ಳುವಹಾಗೆ ಮಾಡಬೇಕು. ಉದಾ:ಓರ್ವ ಬ್ರಾಹ್ಮಣನನ್ನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಮಾಂಸಹಾರವನ್ನು ತಿನ್ನುವ ಹಾಗೆ ಮಾಡಲಾಗದು. ಏಕೆಂದರೆ ಸಮ್ಮೋಹನ ನಿದ್ರೆಯಲ್ಲಿ'ಮಾಧ್ಯಮ'ನು ಬಹಿರ್ಮನಸ್ಸನ್ನು ನಿದ್ರೆಗೆ ಇಳಿಸಿರುತ್ತಾನೆ ಆದರೆ ಅಂತರ್ಮನಸ್ಸನ್ನಲ್ಲ. ಅದು ಯಾವುದೇ ತನ್ನ ಜಾತಿಗೆ ಮತ್ತು ವೈಯಕ್ತಿಕ ರುಚಿಗೆ ವಿರೋಧವಾದವುಗಳಿಗೆ ತೀಕ್ಷ್ಣವಾಗಿ ಪ್ರತಿಭಟಿಸುತ್ತದೆ ಎಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕು. ಒತ್ತಾಯ ಮಾಡಿದಲ್ಲಿ ಅದು ವಶೀಕರಣವನ್ನು ಕಳೆದುಕೊಳ್ಳಬಹುದು.

೫. ಸಮ್ಮೋಹನ ನಿದ್ರೆಯು ಬಹಳ ಅಥವಾ ಕೊನೆಯಿಲ್ಲದ ನಿದ್ರೆಯಲ್ಲಿ ಉಳಿಯುತ್ತದೆನ್ನುವ ಕೆಲಜನಗಳ ನಂಬಿಕೆಯು ಆಧಾರರಹಿತವು. ವಶವನ್ನು ಹಿಂದಕ್ಕೆ ತೆಗೆದುಕೊಂಡ ತಕ್ಷಣ 'ಮಾಧ್ಯಮ'ನ ನಿದ್ರೆಯು ಅಳಿಸಿಹೋಗಿ ಅವನು ವಾಸ್ತವಿಕತೆಗೆ ಹಿಂದಿರುಗುತ್ತಾನೆ.

ಕೆಲವುಸಾರಿ ಸಮ್ಮೋಹನ ನಿದ್ರೆಯು ಅವನನ್ನು ಸಹಜ ನಿದ್ರೆಗೆ ತೆಗೆದುಕೊಳ್ಳುತ್ತದೆ. ಆ ವಿಷಯದಲ್ಲಿ 'ಮಾಧ್ಯಮ'ನು ಸ್ವಲ್ಪಹೊತ್ತು ಮಲಗಿಕೊಳ್ಳುತ್ತಾನೆ ಮತ್ತು ಎಚ್ಚರಗೊಂಡಾಗ ಅದ್ವಿತೀಯವಾದ ಆರೋಗ್ಯದ ಅನುಭವ ಪಡೆಯುತ್ತಾನೆ.

ಬಹಳ ಕಾಲದಿಂದಲೂ 'ಮಾಧ್ಯಮ'ನು ಸಮ್ಮೋಹನದ ನಿದ್ರೆಯ ನಂತರ ವಾಸ್ತವಿಕತೆಗೆ ಬಾರದಿರುವ ಒಂದೇ ಒಂದು ವರದಿಯು ಬಂದಿಲ್ಲ.

೬. ಸಮ್ಮೋಹನ ನಿದ್ರೆಯ ಅವಸ್ಥೆಯಲ್ಲಿ'ಮಾಧ್ಯಮ'ನ ಒಳ ಸಾಮರ್ಥ್ಯವು ತನ್ನಷ್ಟಕ್ಕೆ ತಾನೇ ಉತ್ತಮ ಅರಿವಿಗೆ, ಹೆಚ್ಚಿನ ವೃದ್ಧಿಗೆ ಮತ್ತು ಸರಿಯಾದ ದಿಕ್ಕಿಗೆ ಎಡೆಮಾಡಿಕೊಡುತ್ತದೆ.

ಖಚಿತವಾಗಿ ಈ ಕಾರಣದಿಂದಲೇ ದೂರದ ಭವಿಷ್ಯವನ್ನು ಅಥವಾ ಆಳವಾದ ಭೂತಕಾಲದಲ್ಲಿ ನೋಡುವನು. ತಲೆಯಮೇಲೆ ಬಲವಾದ ಪೆಟ್ಟಿನ ಕಾರಣದಿಂದ, ಅವನು ತನ್ನ ಸ್ವಂತ ಹೆಸರು

ಮತ್ತು ತನ್ನ ಬಗ್ಗೆ ಮತ್ತು ತನ್ನ ಸಂಸಾರದ ಬಗ್ಗೆ ಎಲ್ಲವನ್ನೂ ಮರೆತಿರುವನೆಂದು ಊಹಿಸಿಕೊಂಡರೆ. ಈಗ, ಸಮ್ಮೋಹನ ವಶದ ಅವಸ್ಥೆಯಲ್ಲಿ ತಾನು ಮರೆತದ್ದನ್ನು ಸ್ಪಷ್ಟವಾಗಿ ಮರುಕಳಿಸಬಹುದು.

ಸಮ್ಮೋಹನ ನಿದ್ರೆಯು ಅಂತಹ ವಿಷಯಗಳಲ್ಲಿ ಸಹಾಯ ಮಾಡುವುದು. ಸಮ್ಮೋಹನ ನಿದ್ರೆಯಲ್ಲಿದ್ದಾಗ ಅವನು ಸುಲಭವಾಗಿ ತನ್ನ ಸ್ವಂತ ಹೆಸರು, ತನ್ನ ಸಂಸಾರ ಮತ್ತು ಸಂಸಾರದ ಮುಖ್ಯ ಘಟನೆಯಂತಹ ಗತಿಸಿದ ಕ್ಷಣಗಳನ್ನು ಜ್ಞಾಪಿಸಿಕೊಳ್ಳುವನು.

೭. ಸಮ್ಮೋಹನ ಪ್ರಯೋಗಗಳು ಕೆಟ್ಟ ಅಭ್ಯಾಸಗಳಿಂದ ಖಚಿತವಾಗಿ ಬಿಡುಗಡೆ ಹೊಂದಲು ಸಹಾಯಕವಾಗಿವೆ ಎಂದು ಸಾಬೀತು ಪಡಿಸಿದೆ. ಸಮ್ಮೋಹನ ನಿದ್ರೆಯಲ್ಲಿ 'ಮಾಧ್ಯಮ'ನಿಗೆ ಇಂತಿಂತಹ ಕೆಟ್ಟ ಅಭ್ಯಾಸಗಳು ತನ್ನ ಆರೋಗ್ಯವನ್ನು ತಿನ್ನುತ್ತಿವೆ ಎಂದು ಆಜ್ಞಾಪಿಸಬಹುದು. ಬಹಳ ಕಾಲದ ಕೆಟ್ಟ ಅಭ್ಯಾಸಗಳನ್ನು ಬಿಟ್ಟುಬಿಡಲು ಅದು ಸಹಾಯಕವಾಗುತ್ತದೆ. 'ಮಾಧ್ಯಮ' ನ ಅಂತರ್ಮನಸ್ಸು ಸಮ್ಮೋಹನ ನಿದ್ರೆಯಲ್ಲಿ ಆಜ್ಞೆಗಳನ್ನು ತೆಗೆದುಕೊಂಡು ಅವನ್ನು ಒಪ್ಪುತ್ತದೆ. ಅವನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಕೊಟ್ಟಂತಹ ಆಜ್ಞೆಗಳನ್ನು ಅವನನ್ನು ಅಸಮ್ಮೋಹನಗೊಳಿಸಿದಾಗ್ಯೂ ಅವನು ಮರೆಯುವುದಿಲ್ಲ. ಅವನು ಈ ಆಜ್ಞೆಗಳ ಮೇರೆಗೆ ನಡೆದುಕೊಂಡು ಕೆಟ್ಟ ಹವ್ಯಾಸಗಳಿಂದ ಮುಕ್ತಿಹೊಂದುವನು.

೮. ಸಮ್ಮೋಹನ ನಿದ್ರೆಯಲ್ಲಿದ್ದಾಗ ಓರ್ವನ ಗ್ರಹಿಕೆ ಮತ್ತು ನಡುವಳಿಕೆಯ ಪ್ರತಿಯೊಂದು ಅಂಗವೂ ನೋಡುವುದಕ್ಕೆ ಸುಪ್ತಾವಸ್ಥೆಯಲ್ಲಿದ್ದರೂ ಒಳ್ಳೆಯ ಚುರುಕಾಗೇ ಇರುವುದು. ವಾಸ್ತವದಲ್ಲಿ ಓರ್ವನ ಯೋಗ್ಯತೆ ಮತ್ತು ಬುದ್ಧಿವಂತಿಕೆಗಳು ಮೊನಚಾಗುವವು. ಅವನು ಉತ್ತಮ ರೀತಿಯಲ್ಲಿ ವಾಸನೆನೋಡುವನು ಮತ್ತು ಕೇಳವನು.

೯. ಸಮ್ಮೋಹನವು ಒಂದು ಕೃತಕ ನಿದ್ರೆಯನ್ನು ನಿರ್ವಹಿಸುವುದರ ಮೂಲಕ ಬಹಿರ್ಮನಸ್ಸನ್ನು ನಿದ್ರೆಗೊಳಗಾಗಿಸುವುದು. ಆದರೂ ಅಂತರ್ಮನಸ್ಸು ಎಚ್ಚರವಾಗೇ ಇದ್ದು ಸಮ್ಮೋಹಕನ ಹತೋಟಿಗೆ ಅನುಕೂಲಕರವಾಗಿರುವುದು. ಈ ಸ್ಥಿತಿಯಲ್ಲಿ ಅಂತರ್ಮನಸ್ಸು ಸಮ್ಮೋಹಕನು ಹೇಳಿದ ರೀತಿಯಲ್ಲೆಲ್ಲಾ ನಡೆದುಕೊಂಡು ಒಪ್ಪುವುದು.

೧೦. 'ಮಾಧ್ಯಮ'ರ ಮೇಲೆ ಪ್ರಯೋಗವು ಪ್ರಾರಂಭಿಸುವ ಮುನ್ನ ಸಮ್ಮೋಹಕನು ಎಲ್ಲಾ ರೀತಿಯಿಂದ ಸಜ್ಜುಗೊಂಡಿದ್ದಾನೆ ಮತ್ತು ಅನುಮಾನವಿಲ್ಲದೆ ಸಮರ್ಥನಾಗಿದ್ದಾನೆ ಎಂದು ಎಲ್ಲಾ ಮುಂಜಾಗ್ರತೆಯನ್ನು ಖಚಿತ ಪಡಿಸಿಕೊಳ್ಳಬೇಕು. ಅರ್ಧ ಬೆಂದ ಜ್ಞಾನವು ಅಪಾರ ತೊಂದರೆಗೆ ಎಡೆ ಮಾಡುವುದು.

೧೧. ಕೇವಲ ಮೋಜಿಗೋಸ್ಕರ ಓರ್ವರು ಸಮ್ಮೋಹನವನ್ನು ಉಪಯೋಗಿಸಬಹುದು ಎಂಬ ಊಹೆಯು ಅಪಾಯಕರವಾಗಿದೆ. ಏಕೆಂದರೆ ಬಹಿರ್ಮನಸ್ಸನ್ನು ನಿದ್ರಾವಸ್ಥೆಯಲ್ಲಿಟ್ಟಿರುವುದರಿಂದ ಅದು ಪದೇ ಪದೇ ಯಾವುದೇ ಚಿಕಿತ್ಸೆ ಅಥವಾ ಪರಿಹಾರಗಳಿಗೆ ಮೀರಿ ನಿಯಂತ್ರಿಸಲಾಗದ ಕೆಲ ಕಷ್ಟಗಳಿಗೆ ಎಡೆಮಾಡಬಹುದು. ಆದ್ದರಿಂದ ಮೋಜಿಗೋಸ್ಕರ ಸಮ್ಮೋಹನಕ್ಕೆ ಒಳಪಡಿಸುವುದು ಕಟ್ಟುನಿಟ್ಟಾಗಿ ನಿಷೇಧಿಸಲಾಗಿದೆ.

ಆದಾಗ್ಯೂ ನಾವು ಸಮ್ಮೋಹನದ ಸರಿಯಾದ ಪ್ರಕೃತಿಯನ್ನು ಒಂದು ಮಟ್ಟದ ಸಂದೇಹ ಆಕ್ರಮಿಸಿಕೊಂಡಂತಹ ಸರಿಯೋಚನೆ ಇರುವ ಜನರನ್ನು ಕಾಣುತ್ತೇವೆ. ಅವರಲ್ಲಿ ಏಳುವಂತಹ ಹಲವಾರು ಪ್ರಶ್ನೆಗಳನ್ನು ಈ ಕೆಳಗಿನ ಪ್ರಶ್ನೆಗಳಲ್ಲಿ ಒಗ್ಗೂಡಿಸಲಾಗಿದೆ. ನಮ್ಮ ಓದುಗರು ಸಂದೇಹರಹಿತರಾಗಲು ಉತ್ತರಗಳನ್ನು ಒದಗಿಸಿದ್ದೇವೆ.

ಪ್ರಶ್ನೆ:ಸಮ್ಮೋಹನವೆಂದರೇನು?

ಉತ್ತರ:ಸಮ್ಮೋಹನವೆಂದರೆ ಒಬ್ಬ ವ್ಯಕ್ತಿಯ ಬಹಿರ್ಮನಸ್ಸನ್ನು ನಿದ್ರೆಗೆ ತಂದು ಮತ್ತು ಅಂತರ್ಮನಸ್ಸನ್ನು ಎಚ್ಚರಿಸಿ ಹಾಗೆಯೇ ಉದ್ದೇಶಿಸಿದಂತಹ ಫಲಿತಾಂಶವನ್ನು ಪಡೆಯುವ ಮತ್ತು ನಿಯಂತ್ರಿಸುವ ಒಂದು ವಿಜ್ಞಾನ. ಹೀಗೆ ನಾವು ಮನುಷ್ಯರಲ್ಲಿ ಎರಡು ಮನಸ್ಸುಗಳು ಇರುವುದನ್ನು ನೋಡುವೆವು. ಬಹಿರ್ಮನಸ್ಸು ಎಚ್ಚರಗೊಂಡಿರುತ್ತದೆ ಹಾಗೆಯೇ ಅಂತರ್ಮನಸ್ಸು ಯಾವಾಗಲೂ ಚುರುಕಾಗಿಯೇ ಉಳಿಯುತ್ತದೆ. ಕೆಲವು ಸಾರಿ ನಮ್ಮ ಕೈ ಜಾರಿ ಬೆಂಕಿಯ ಹತ್ತಿರ ಹೋದಾಗ ತನ್ನಷ್ಟಕ್ಕೆ ತಾನೇ ಕೂಡಲೇ ಹಿಂತೆಗೆದುಕೊಳ್ಳುವುದನ್ನು ಗಮನಿಸಿದ್ದೇವೆ. ಬಹಿರ್ಮನಸ್ಸು ಯಾವುದೋ ಯೋಚನೆಯಲ್ಲಿ ಮುಳುಗಿದಾಗ ಕೈ ಬೆಂಕಿಯ ಹತ್ತಿರ ಹೋಗುವುದನ್ನು ಗಮನಕ್ಕೆ ತೆಗೆದುಕೊಂಡಿಲ್ಲ, ಆದರೆ ಅಂತರ್ಮನಸ್ಸು ಯಾವಾಗಲೂ ಚುರುಕಾಗಿರುವುದರಿಂದ ಆಗಬಹುದಾದ ಅಪಾಯದಿಂದ ಹಿಂತೆಗೆದುಕೊಳ್ಳುತ್ತದೆ. ವಿಷಯವೆಂದರೆ ಅಂತರ್ಮನಸ್ಸೂ ಸಹ ಬಹಿರ್ಮನಸ್ಸಿನಷ್ಟೇ ಚುರುಕಾಗಿಯೇ ಇರುವುದು.

ಪಾಶ್ಚಾತ್ಯ ಸಮ್ಮೋಹಕರಾದ ಡಾ.ಬರ್ನ್‌ಹ್ಯಾಮ್‌ರವರ ಪ್ರಕಾರ ಸಮ್ಮೋಹನವು ಈ ಕೆಳಗಿನ ಮೂರು ವಿಷಯಗಳ ಮೇಲೆ ಆಧಾರವಾಗಿದೆ.

೧. ಅಪೇಕ್ಷೆ: ಸಮ್ಮೋಹನಾವಸ್ಥೆಗೆ ಮುಟ್ಟಲು ಇದು ತನ್ನಲ್ಲೇ ಬಹಳ ಪ್ರಮುಖ ಮತ್ತು ಚುರುಕಾದ ಅಡಿಪಾಯವಾಗಿದೆ.

೨. ಸಂಕಲ್ಪ: ಇದು ಸಮ್ಮೋಹನಾವಸ್ಥೆಯನ್ನು ತೀವ್ರಗೊಳಿಸಿ ಪೂರ್ಣತೆಯನ್ನು ಸಾಧಿಸಲು ಮುಂದೆ ವೃದ್ಧಿಸುತ್ತದೆ.

೩. ಪರಿಣಾಮ: ಅದು ಪರಿಣಾಮದ ಮೂಲಕವೇ ಸಮ್ಮೋಹಕನು ತನ್ನ 'ಮಾಧ್ಯಮ'ನ ಮೇಲೆ ಹೆಚ್ಚು ಪರಿಣಾಮಕರವಾದ ಪ್ರಭಾವವನ್ನು ಸ್ಥಾಪಿಸಲು ಯಶಸ್ವಿಯಾಗುತ್ತಾನೆ.

ಅಪೇಕ್ಷೆ:ಈ ಪದ ಒಂದು ಸಣ್ಣ ಟಿಪ್ಪಣಿಗೆ ಯೋಗ್ಯವಾಗಿದೆ. ಅಪೇಕ್ಷೆ ಎಂದರೆ 'ಮಾಧ್ಯಮ'ನಿಗೆ ಸಮ್ಮೋಹಕನ ಸಾಮರ್ಥ್ಯಗಳ ಮೇಲೆ ಆಳವಾದ ನಂಬಿಕೆ ಇರಬೇಕು. ಈ ತರಹದ ದೃಷ್ಟಿಯನ್ನು ಸೃಷ್ಟಿಸಲು ಸಮ್ಮೋಹಕನು ಬಹಳ ಗಂಭೀರವಾಗಿ ನಡೆದುಕೊಳ್ಳುವ ಅವಶ್ಯಕತೆ ಇರುತ್ತದೆ. ಹಾಗೆಯೇ ಸಮ್ಮೋಹಕನು ಯಾವ ರೀತಿಯಲ್ಲಿ ತನ್ನನ್ನು ತಾನೇ ಪ್ರದರ್ಶಿಸಿಕೊಳ್ಳಬೇಕೆಂದರೆ ತಾನು ಈ ಕ್ಷೇತ್ರದಲ್ಲಿ ಒಬ್ಬ ಅದ್ವಿತೀಯ ಪ್ರಭಾವಶಾಲಿಯೆಂದು 'ಮಾಧ್ಯಮ'ನು ನಂಬಬೇಕು.

ಸಮ್ಮೋಹಕನು ತನ್ನ ಕೆಲಸದಲ್ಲಿ ಮುಂದುವರಿದ ಹಾಗೆಲ್ಲಾ ತಾನು ಹೇಗೆ ನಡೆದುಕೊಳ್ಳಬೇಕು, ಏನೇನೆಲ್ಲಾ ಮಾಡಬೇಕು ಮತ್ತು ಯಾವ ಸಲಕರಣೆಗಳನ್ನು ಒದಗಿಸಿಕೊಳ್ಳಬೇಕು ಎಂದು ನಿಧಾನವಾಗಿ ತಿಳಿದುಕೊಳ್ಳುವನು. ಸಮ್ಮೋಹಕನ ಬಗ್ಗೆ ಎಲ್ಲವೂ ಅವನು ಮಾತಾಡುವ ರೀತಿ, ಅವನ ನಿರ್ವಹಣೆ, ಅವನ ಕೆಲಸದ ಶೈಲಿ, ಅವನ ಪದ್ಧತಿ, ಅವನ ನಡುವಳಿಕೆ ಮತ್ತು ಅವನ ಉಡುಪು ಮತ್ತು ಎಲ್ಲಕ್ಕಿಂಥಾ ಹೆಚ್ಚಾಗಿ ಅವನ ವ್ಯಕ್ತಿತ್ವ ಬಯಸಿದಂತಹ ಸಮ್ಮೋಹನ ಪರಿಣಾಮವನ್ನು ತರಲು ಸಾಮರ್ಥ್ಯವುಳ್ಳದ್ದಾಗಿರುತ್ತದೆ.

ಈ ಕೆಳಗಿನ ಮೂರು ಹಂತಗಳಲ್ಲಿ ನಾವು ಸಮ್ಮೋಹನವನ್ನು ಪಡೆಯಬಹುದು.

೧. ಸಾಮಾನ್ಯ: ಈ ಹಂತದಲ್ಲಿ 'ಮಾಧ್ಯಮ'ನು ತನ್ನ ಕಣ್ಣುಗಳನ್ನು ತೆರೆಯಲು ತನ್ನ ಕೈಮೀರಿದೆ ಎಂಬುದನ್ನು ಕಂಡುಕೊಳ್ಳುತ್ತಾನೆ. ನಿಧಾನವಾಗಿ ಅವನ ಕೈಗಳು ಮತ್ತು ಕಾಲುಗಳು ಅವನ ಹತೋಟಿಯನ್ನು ತಪ್ಪುತ್ತವೆ. ಅವನಿಗೆ ತಾನು ಏನು ಮಾಡುತ್ತಿರುವುದು ಮತ್ತು ತನ್ನ ಅವಸ್ಥೆ ಏನು ಎಂಬುದು ಗೊತ್ತಾಗುವುದಿಲ್ಲ.

೨. ಮಧ್ಯಮ: ಈ ಹಂತವು 'ಮಾಧ್ಯಮ'ನನ್ನು ಆಳವಾದ ನಿದ್ರೆಗೆ ಒಯ್ಯುತ್ತದೆ. ಯಾವುದೇ ಆಜ್ಞೆಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವು ಬಹಳ ಸೀಮಿತವಾಗಿದ್ದಾಗ, ಅವನ ಅಂತರ್ಮನಸ್ಸು ತನ್ನ ಮೇಲೆ ಆದಂತಹ ಎಲ್ಲಾ ಆಜ್ಞೆಗಳನ್ನೂ ಶೀಘ್ರವಾಗಿ ಗ್ರಹಿಸುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ.

೩. ಸಮ್ಮೋಹನ ನಿದ್ರೆ: ಈ ಹಂತವು ಮಾಧ್ಯಮನು ವರ್ಗೀಕೃತವಾದ ಆಳವಾದ ಸಮ್ಮೋಹನ ನಿದ್ರೆಯನ್ನು ಸಂಕೇತಿಸುವುದು. ಅವನು ಸರಿಯಾದ ರೀತಿಯಲ್ಲಿ ತಾನು ಅನುಸರಿಸಬೇಕಾದಂತಹ ತನಗೆ ಕೊಟ್ಟಂತಹ ಆಜ್ಞೆಗಳನ್ನು ಅಥವಾ ಅಪ್ಪಣೆಗಳನ್ನು ತೆಗೆದುಕೊಳ್ಳುವನು. ಅದರ ಪ್ರಕಾರ ಅವನು ಸರಿಯಾದ ರೀತಿಯಲ್ಲಿ ನಡೆದುಕೊಳ್ಳುವನು. ಅದು ವಾಸ್ತವದಲ್ಲಿ ಕೃತಕ ನಿದ್ರೆ, ಮತ್ತು ಅವನು ತನ್ನ ಅರಿವಿಗೆ ಎಚ್ಚರಗೊಳ್ಳುತ್ತಿರುವ ಹಾಗೆ ತನಗೆ ಏನೇನೆಲ್ಲಾ ಸಮ್ಮೋಹನ ನಿದ್ರೆಯಲ್ಲಿ ಹೇಳಲಾಗಿತ್ತು ಎಂಬುದನ್ನು ಜ್ಞಾಪಿಸಿಕೊಳ್ಳುವನು.

ಇದು ಸುತ್ತು ಹಾಕಿದ ಕೊನೆಯ ಹಂತ. ಈ ಹಂತದಲ್ಲಿ 'ಮಾಧ್ಯಮ'ನು ತನ್ನ ಮೇಲಿನ ಎಲ್ಲಾ ಹತೋಟಿಯನ್ನು ಕಳೆದುಕೊಂಡು ತನಗೆ ಹೇಳಿದುದನ್ನೆಲ್ಲಾ ಯಥಾವತ್ತಾಗಿ ಅನುಸರಿಸುವನು. ಅವನು ತಾನು ಸಂಪೂರ್ಣ ಸಮ್ಮೋಹಕನ ವಿನಯೋಗದಲ್ಲಿರುವನು.

ಈ ಹಂತದಲ್ಲಿ 'ಮಾಧ್ಯಮ'ನಿಗೆ ತನ್ನ ದೇಹವನ್ನು ತುಂಡು ತುಂಡಾಗಿಸಿದರೂ ಯಾವುದೇ ನೋವಾಗುವುದಿಲ್ಲ ಎಂದು ಆಜ್ಞಾಪಿಸಿದರೆ ಮತ್ತು ಸಮ್ಮೋಹಕನು ವಾಸ್ತವವಾಗಿ ಅವನ ದೇಹದಿಂದ ಒಂದು ಅಂಗವನ್ನು ಕತ್ತರಿಸಿದರೂ ಅವನಿಗೆ ಯಾವುದೇ ನೋವಾಗುವುದಿಲ್ಲ. ಈ ಒಂದು ಪದ್ಧತಿಯನ್ನು ಅನುಸರಿಸಿ ಯು.ಎಸ್ ನಲ್ಲಿ ಶಸ್ತ್ರಚಿಕಿತ್ಸೆಗಳನ್ನು ನಡೆಸುತ್ತಾರೆ. ಯೂರೋಪ್ ನಲ್ಲಿ ಸಹ ಅಪಾಯಕರ ಶಸ್ತ್ರಚಿಕಿತ್ಸೆಗಳನ್ನು ಈ ಹಂತವನ್ನು ತಲುಪಿದ ನಂತರ ಕಾರ್ಯನಿರ್ವಹಿಸುತ್ತಾರೆ.

ಈ ಆಜ್ಞೆಯ ಮೇರೆಗೆ ಭಾರತೀಯ ಯೋಗಿಗಳು ಹಿಮಾಲಯದ ಎತ್ತರದ ಮಂಜು ತುದಿಗಳಲ್ಲಿ ತಂಗುತ್ತಿದ್ದರು, ಇದು ಒಂದು ಮಂಜು ಮತ್ತು ಮಂಜುಗಡ್ಡೆಗಳ ಗುಡ್ಡದ ಸಾಲು. ಅಲ್ಲಿ ಯಾರೂ ಎಲ್ಲಾ ತರಹದ ಬಟ್ಟೆಗಳ ರಕ್ಷಣೆಯನ್ನು ತೆಗೆದುಕೊಂಡೂ ಒಂದು ನಿಮಿಷವೂ ತಂಗಲು ವಿಚಾರಿಸುವುದಿಲ್ಲ, ಈ ಯೋಗಿಗಳು ಕಡಿಮೆ ಬಟ್ಟೆಗಳಲ್ಲಿ ಸಂತೋಷದಿಂದ ತಿರುಗುತ್ತಿದ್ದರು.

**ಪ್ರಶ್ನೆ:ಓರ್ವನು ತನ್ನಷ್ಟಕ್ಕೆ ತಾನೇ ಸಮ್ಮೋಹನಗೊಳಿಸಿಕೊಳ್ಳಬಹುದೇ?**

**ಉತ್ತರ:**ಸಮ್ಮೋಹಕನು ಬೇರೆಯವರನ್ನು ಸಮ್ಮೋಹನಗೊಳಿಸಿ ತನಗೆ ಬೇಕಾದಹಾಗೆ ನಡೆಸಿಕೊಳ್ಳಬಹುದು. ಇನ್ನೊಂದು ಪದ್ಧತಿಯನ್ನು ಅನುಸರಿಸಿ ಅವನು ತನ್ನಷ್ಟಕ್ಕೆ ತಾನೇ ಸಮ್ಮೋಹನಗೊಳಿಸಿಕೊಳ್ಳಬಹುದು, ಇದಕ್ಕೆ ಸ್ವ-ಸಮ್ಮೋಹನವೆಂದು ಕರೆಯುತ್ತಾರೆ.

ಪುರಾತನ ಕಾಲದಲ್ಲಿ ಯೋಗಿಗಳು ಬಹಳ ಕಾಲದವರೆಗೆ ಸಮಾಧಿ'ಯಲ್ಲಿ ಕೂತುಕೊಳ್ಳುತ್ತಿದ್ದರು. ಈ ದಿನವೂ ಸಹ ಸಮಾಧಿಯಲ್ಲಿ 10 ರಿಂದ 15 ದಿನಗಳವರೆಗೆ ಕೂತುಕೊಳ್ಳುವ ಯೋಗಿಗಳಿದ್ದಾರೆ. ಈ ಸಾಮರ್ಥ್ಯವನ್ನು ಕೊಡುವಂತಹುದು ಸ್ವ-ಸಮ್ಮೋಹನವು. ಈ ತರಹದ ಪರಿಸ್ಥಿತಿಯಲ್ಲಿ ಸಮ್ಮೋಹಕನು ತನ್ನ ಬಹಿರ್ಮನಸ್ಸಿಗೆ ನಿದ್ರೆ ಹೋಗಲು ಆಜ್ಞಾಪಿಸುವನು. ಅವನಿಗೆ ಸ್ವ-ಸಮ್ಮೋಹನದ ಮೂಲಕ ಸಮಾಧಿ ಸಿಗುವುದು. ಹೀಗಿದ್ದರೂ ಅವನ ಅಂತರ್ಮನಸ್ಸು ಚುರುಕಾಗಿಯೇ ಇರುವದು, ಫಲಸ್ವರೂಪವಾಗಿ ಎಲ್ಲಾ ಅಂಗಗಳು ಯಥಾರೀತಿ ನಿರ್ವಹಿಸಿ ಸಜೀವವಾಗಿ ಉಳಿಯುವವು.

---

1. ಸಮಾಧಿ : ತನ್ನನ್ನು ತಾನೇ ಮರೆತು ಸರ್ವಶಕ್ತನೊಡನೆ ಒಂದಾಗುವಂತಹ ಒಂದು ಆಧ್ಯಾತ್ಮಿಕ ಧ್ಯಾನ.

ಪ್ರಶ್ನೆ:ಮನೋಬಲ ಇಲ್ಲದವನನ್ನು ಮಾತ್ರ ಸಮ್ಮೋಹನಗೊಳಿಸಬಹುದೆನ್ನುವುದು ನಿಜವೇ?

ಉತ್ತರ:ಇಲ್ಲ. ಅದು ತಿರುವುಮುರುವಾಗಿದೆ. ಮನೋಬಲ ಇಲ್ಲದ ವ್ಯಕ್ತಿಗಿಂತಲೂ ಬಲವಾದ ದೃಢಸಂಕಲ್ಪ ಇರುವವನನ್ನು ಸಮ್ಮೋಹನಗೊಳಿಸುವುದು ಸುಲಭ. ಗಮನಿಸಬೇಕಾದ ಅಂಶವೆಂದರೆ ಸಮ್ಮೋಹಕನ ಆಜ್ಞೆಗಳನ್ನು ಅನುಸರಿಸಿದರೆ ಮಾತ್ರ ಅವನು ಉತ್ತಮ 'ಮಾಧ್ಯಮ'ನೆಂದು ಸಾಬೀತು ಪಡಿಸಿಕೊಳ್ಳುತ್ತಾನೆ. ಸಾಧಾರಣವಾಗಿ ಓರ್ವನು ಉತ್ತಮವಾಗಿ ಅರ್ಥಮಾಡಿಕೊಳ್ಳುವಂತಹ ಮತ್ತು ಹೆಚ್ಚು ದೃಢಸಂಕಲ್ಪವಿರುವ ವ್ಯಕ್ತಿಯು ಆಜ್ಞೆಗಳಿಗೆ ಉತ್ತಮ ರೀತಿಯಲ್ಲಿ ಪ್ರತಿಕ್ರಿಯಿಸುವುದನ್ನು ಕಾಣುತ್ತಾನೆ.

ನಿಜವಾಗಿಯೂ ಸಮ್ಮೋಹನವು ಓರ್ವನ ಮನೋಬಲವನ್ನು ಬಲಪಡಿಸಲು ಸಾಬೀತಾದಂತಹ ಸಲಕರಣೆಯಾಗಿದೆ. ಅದು ಉತ್ತಮ ಜ್ಞಾಪಕಶಕ್ತಿಯ ಭರವಸೆಯನ್ನೂ ಕೊಡುತ್ತದೆ.

ಪ್ರಶ್ನೆ:ಬಹುಭಾಗದ ಜನರನ್ನು ಸಮ್ಮೋಹನಗೊಳಿಸಬಹುದೆಂದು ನೀವು ತಿಳಿಯುತ್ತೀರಾ?

ಉತ್ತರ:ಪ್ರತಿ ವ್ಯಕ್ತಿಯೂ ಉದ್ವೇಗಿಯಾಗಿದ್ದಾನೆ ಮತ್ತು ಅವನಿಗೆ ಅವಶ್ಯವಾಗಿ ಅವನ ಉದ್ವೇಗ ಪ್ರೇರೇಪಣೆಗಳಿಗೆ ಎಡೆಮಾಡಿಕೊಡಬೇಕು. ಈ ಒಂದು ಅವಸ್ಥೆಯು ಬಹು ಜನಗಳಲ್ಲಿ ಇರುವುದರಿಂದ ಓರ್ವನು ಅವರನ್ನು ಬೇರೆಯಾವ ವ್ಯಕ್ತಿಯ ಹಾಗೆಯೇ ಸಮ್ಮೋಹನಗೊಳಿಸಲಾಗುವುದಿಲ್ಲ. ನಿಜಸಂಗತಿಗಳ ಮೇಲೆ ಮತ್ತು ತಾನು ನೋಡಿದುದನ್ನೇ ನಂಬುವವನು ಆಜ್ಞೆಗಳಿಗೆ ಪ್ರತಿಕ್ರಿಯಿಸುವುದಿಲ್ಲ ಆದ್ದರಿಂದ ಅವನನ್ನು ಸಮ್ಮೋಹನಗೊಳಿಸಲಾಗುವುದಿಲ್ಲ.

ಪ್ರಶ್ನೆ:ಸಮ್ಮೋಹನವು ನೋವನ್ನು ಕಡಿಮೆ ಮಾಡಿ ದೂರ ಮಾಡುತ್ತದೆಯೇ?

ಉತ್ತರ:ಪಾಶ್ಚಾತ್ಯ ದೇಶಗಳಲ್ಲಿ ಸಮ್ಮೋಹನಗೊಳಿಸಿದಂತಹ ರೋಗಿಗಳ ಮೇಲೆ ಶಸ್ತ್ರಚಿಕಿತ್ಸೆಗಳನ್ನು ನಿರ್ವಹಿಸುವುದು ಸರ್ವೇಸಾಮಾನ್ಯವಾಗಿದೆ. ರೋಗಿಗಳನ್ನು ಒಮ್ಮೆ ಸಮ್ಮೋಹನಗೊಳಿಸಿದರೆ ಅವರಿಗೆ ಯಾವುದೇ ತರಹದ ನೋವೇ ಆಗುವುದಿಲ್ಲ. ಅಲ್ಲದೆ ಸಮ್ಮೋಹನಗೊಂಡ ರೋಗಿಗಳು ಆಜ್ಞೆಗಳಿಗೆ ಪ್ರತಿಕ್ರಿಯಿಸಿ ಅದರ ಪ್ರಕಾರ ನಡೆದುಕೊಳ್ಳುತ್ತಾರೆ. ಯು.ಎಸ್ ನಲ್ಲಿ ಹೆಂಗಸರು ಈ ಮಾಧ್ಯಮದಿಂದ ನೋವಿಲ್ಲದೆ ಪ್ರಸವಿಸುತ್ತಾರೆ.

ಪ್ರಶ್ನೆ:ಸಮ್ಮೋಹನದಿಂದ ಓರ್ವನು ಕೆಟ್ಟ ಅಭ್ಯಾಸಗಳಾದ ಧೂಮಪಾನ ಮತ್ತು ಕುಡಿತವನ್ನು ಬಿಡಬಹುದೇ?

ಉತ್ತರ:ಹೌದು, ಓರ್ವನು ಸಮ್ಮೋಹನ ನಿದ್ರೆಯಲ್ಲಿರುವ 'ಮಾಧ್ಯಮ'ನಿಗೆ ಈ ಕೆಟ್ಟ ಅಭ್ಯಾಸಗಳಿಂದ ಆಗುವ ದುಷ್ಪರಿಣಾಮಗಳನ್ನು ಹೇಳಿ ತಾನು ಈ ಬೇರೂರಿರುವಂತಹ ಕೆಟ್ಟ ಅಭ್ಯಾಸಗಳನ್ನು ಬಿಡುವ ಸಾಮರ್ಥ್ಯವುಳ್ಳವನಾಗಿದ್ದಾನೆಂದು ಆಜ್ಞಾಪಿಸಬೇಕು. ತನ್ನ ಅರಿವು ಬಂದಾಗ ಸಹ ಅವನು ಈ ಆಜ್ಞೆಗಳನ್ನು ಜ್ಞಾಪಕದಲ್ಲಿಡುವನು ಮತ್ತು ಕೆಟ್ಟ ಅಭ್ಯಾಸಗಳನ್ನು ದ್ವೇಷಿಸಲು ಪ್ರಾರಂಭಿಸುವನು.

ಹಾಗೆಯೇ ತನ್ನ ಇರುವಿನ ಯಾವುದೇ ಕ್ಲಿಷ್ಟತೆಗಳನ್ನು ಅವನು ದೂರಮಾಡಿಕೊಳ್ಳಬಹುದು.

ಪ್ರಶ್ನೆ:ಯಾರನ್ನಾದರೂ ಅವರ ಇಚ್ಛೆಯಿಲ್ಲದೆ ಸಮ್ಮೋಹನಗೊಳಿಸಬಹುದೇ?

ಉತ್ತರ:ಇಲ್ಲ. ಓರ್ವನು ಸಹಕರಿಸದ ಹೊರತು ಸಮ್ಮೋಹನಗೊಳಿಸಲಾಗುವುದಿಲ್ಲ. ಅಲ್ಲದೆ ಅವನಿಗೆ ಸಮ್ಮೋಹಕನಲ್ಲಿ ಆಳವಾದ ನಂಬಿಕೆ ಇರಬೇಕು.

ಪ್ರಶ್ನೆ:ಯಾರನ್ನು ಉತ್ತಮ ಮಾಧ್ಯಮನೆಂದು ಪರಿಗಣಿಸಬಹುದು?

ಉತ್ತರ:ಅವನು ಅರ್ಥಮಾಡಿಕೊಳ್ಳುವಂತಹ ವ್ಯಕ್ತಿ ಆಗಿರಬೇಕು. ಅವನು ನಾವು ಮಾತಾಡುವ ಭಾಷೆಯನ್ನು ಅನುಸರಿಸಬೇಕು. ಅವನು ನಾವು ಹೇಳಿದುದಕ್ಕೆಲ್ಲಾ ಗಮನವನ್ನು ಕೇಂದ್ರೀಕರಿಸಬೇಕು. ಅಂತಹ ವ್ಯಕ್ತಿ ಮಾತ್ರ ಉತ್ತಮ 'ಮಾಧ್ಯಮ'ನಾಗುತ್ತಾನೆ.

ಪ್ರಶ್ನೆ:ಸಮ್ಮೋಹನಕ್ಕೊಳಗಾದ ಮನುಷ್ಯನನ್ನು ಎಚ್ಚರಿಸುವುದು ಕಷ್ಟವೇ?

ಉತ್ತರ:ಇಲ್ಲ. ಸಮ್ಮೋಹನವು ಒಂದು ಕೃತಕ ನಿದ್ರೆಯನ್ನು ತರುತ್ತದೆ ಮತ್ತು ಈ ನಿದ್ರೆಯನ್ನು ಕೊನೆಗೊಳಿಸಿದಾಗ ಸಮ್ಮೋಹನಗೊಂಡ ವ್ಯಕ್ತಿಯು ಎಚ್ಚರಗೊಳ್ಳುವನು.

ಅವನನ್ನು ಸಮ್ಮೋಹನಗೊಳಿಸುವ ಮುನ್ನವೇ ಮೂರುಸಾರಿ ಚಪ್ಪಾಳೆ ತಟ್ಟಿದರೆ, ಬೆರಳುಗಳನ್ನು ಬಿಡಿಸಿದರೆ ಅಥವಾ ಸರಳವಾಗಿ ಎಚ್ಚರಗೊಳ್ಳು ಎಂದು ತಿಳಿಸುವುದು ಸಮ್ಮೋಹಕನು ಉಪಯೋಗಿಸುವಂತಹ ಸಾಧಾರಣ ಚಿಹ್ನೆಗಳು.

'ಮಾಧ್ಯಮ' ನು ಎಚ್ಚರಗೊಳ್ಳಲು ಪ್ರಯತ್ನ ಮಾಡದೇ ಇದ್ದರೆ ನಾವು ಇದರ ಬಗ್ಗೆ ಗಾಬರಿಯಾಗಬೇಕಿಲ್ಲ ಏಕೆಂದರೆ ಈ ಕೃತಕ ನಿದ್ರೆಯು ಸ್ವಲ್ಪ ಸಮಯದ ನಂತರ ಸಾಧಾರಣ ನಿದ್ರೆಗೆ ಬದಲಾಗುವುದು. ಈ ಸಾಧಾರಣ ನಿದ್ರೆಯು ಮುಗಿದ ನಂತರ ಎಲ್ಲರೂ ಏಳುವಹಾಗೆ ಅವನೂ ಎಚ್ಚರಗೊಳ್ಳುವನು. ಈ ವಿಧಾನದಲ್ಲಿ ಸಮ್ಮೋಹನಗೊಂಡ ವ್ಯಕ್ತಿಯು ಯಾವುದೇ ನೋವಿಗೆ ಅಥವಾ ವೇದನೆಗೆ ಒಳಪಡುವುದಿಲ್ಲ. ಇನ್ನೊಂದು ಕಡೆ ಅವನು ಹೆಚ್ಚು ಶಕ್ತಿಯುತವಾದ ಹೊಸ ಹುರುಪು ಮತ್ತು ಉತ್ಸಾಹಗಳನ್ನು ಹೊಂದುತ್ತಾನೆ. ಆದ್ದರಿಂದ ಸಮ್ಮೋಹನ ನಿದ್ರೆಯಿಂದ ವ್ಯಕ್ತಿಯನ್ನು ಎಚ್ಚರಿಸಲಾಗುವುದಿಲ್ಲವೆಂದು ಉಪದೇಶಿಸುವುದು ತಪ್ಪಾಗಿದೆ. ಒಬ್ಬ ವ್ಯಕ್ತಿಯನ್ನು ಸಮ್ಮೋಹನ ಗೊಳಿಸುವುದು ಪ್ರಾರಂಭದಲ್ಲಿ ಕಷ್ಟ, ಆದರೆ ಒಮ್ಮೆ ಈ ಹಂತವು ತಲುಪಿದರೆ ಉಳಿದದ್ದು ತನ್ನಷ್ಟಕ್ಕೆ ತಾನೇ ನೋಡಿಕೊಳ್ಳುತ್ತದೆ.

ಪ್ರಶ್ನೆ:'ಮಾಧ್ಯಮ' ಸಮ್ಮೋಹನ ನಿದ್ರೆಯಿಂದ ಎಚ್ಚರಗೊಂಡಾಗ ತನಗೆ ಸಮ್ಮೋಹನ ನಿದ್ರೆಯಲ್ಲಿ ಆಜ್ಞಾಪಿಸಿರುವುದೆಲ್ಲಾ ಜ್ಞಾಪಕದಲ್ಲಿರುವುದೇ?

ಉತ್ತರ:ಸಮ್ಮೋಹಕನು ಎಲ್ಲವನ್ನೂ ಅಂತರ್ಮನಸ್ಸಿಗೆ ಆಜ್ಞಾಪಿಸುವನು. ನಮಗೆ ಖಚಿತವಾಗಿ ತಿಳಿದಿರುವ ಹಾಗೆ ಅಂತರ್ಮನಸ್ಸು ಯಾವಾಗಲೂ ಚುರುಕಾಗಿಯೇ ಇರುತ್ತದೆ. ಆದ್ದರಿಂದ ಒಮ್ಮೆ ಸಮ್ಮೋಹಕನು ಸಮ್ಮೋಹನಗೊಂಡ ವ್ಯಕ್ತಿಗೆ ಹೇಳಿದುದನ್ನೆಲ್ಲಾ ಜ್ಞಾಪಕದಲ್ಲಿಟ್ಟುಕೊಳ್ಳಲು ಹೇಳಿದರೆ, ಅವನು ಆಜ್ಞೆಗಳ ಪ್ರತಿ ಶಬ್ದವನ್ನೂ ಖಚಿತವಾಗಿ ಜ್ಞಾಪಕದಲ್ಲಿಟ್ಟುಕೊಳ್ಳುವನು.

ಸಮ್ಮೋಹನಗೊಂಡ ವ್ಯಕ್ತಿಯು ತನ್ನ ಸಮ್ಮೋಹನ ನಿದ್ರೆಯಲ್ಲಿ ತನ್ನ ಚಿಕ್ಕವಯಸ್ಸಿನ ಘಟನೆಗಳನ್ನು ಜ್ಞಾಪಿಸಿಕೊಂಡರೆ, ಈ ವಿವರಣೆಗಳನ್ನು ಸಹ ಅವನು ಎಚ್ಚರಗೊಂಡಾಗ ಮರುಕಳಿಸುವನು.

ಹೇಗಿದ್ದರೂ, ಮಾಧ್ಯಮನಿಗೆ ಸಮ್ಮೋಹನ ನಿದ್ರೆಯಲ್ಲಿ ಈಗ ಹೇಳಿದುದನ್ನೆಲ್ಲಾ ಜ್ಞಾಪಕದಲ್ಲಿಟ್ಟುಕೊಳ್ಳಬಾರದೆಂದು ಹೇಳಿದರೆ ಅವನು ಎಚ್ಚರಗೊಂಡಾಗ ಎಲ್ಲವನ್ನೂ ಮರೆತಿರುವನು. ನೀನು ಎಲ್ಲವನ್ನೂ ಮರೆತಿರುವಿ ಎಂದು ಹೇಳಿದರೂ ಸಹ ಅವನು ಮರೆಯುವನು.

ಪ್ರಶ್ನೆ: ಸಮ್ಮೋಹನವು ಜ್ಞಾಪಕಶಕ್ತಿಯನ್ನು ಬಲಪಡಿಸುವುದೇ?

ಉತ್ತರ:ಪಕ್ಷಪಾತರಹಿತ ದೃಷ್ಟಿಯಲ್ಲಿ ನೋಡಿದಾಗ, ಇದೊಂದೇ ಸಮ್ಮೋಹನದ ಮಹತ್ಕಾರ್ಯವಾಗಿ

ಬಂದಿರೆ. ಅವನು ಸಮ್ಮೋಹನ ನಿದ್ರೆಯಲ್ಲಿ ತನ್ನ ಜೀವನದಲ್ಲಿ ನಡೆದುದ್ದನ್ನೆಲ್ಲಾ ನೆನಪಿನಲ್ಲಿಡುತ್ತಾನೆ. ಅಲ್ಲದೆ ಬಹಳ ಸಮಯದಿಂದ ಮೆದುಳಿನ ನಿದ್ರಿತ ಅಥವಾ ಅಚೇತನವಾಗಿರುವಂತಹ ನರಗಳ ಕ್ಷೇತ್ರವು ಚೇತನಗೊಂಡು ಈ ವಿಧಾನದಿಂದ ವೃದ್ಧಿಗೊಳ್ಳುತ್ತವೆ. ಈ ತರಹದ ನರದ ಕ್ಷೇತ್ರವನ್ನು ಚೇತರಿಸಿದಾಗ, ಆತನ ಜ್ಞಾಪಕಶಕ್ತಿ ಬಲಗೊಂಡು ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳುವ ಸಾಮರ್ಥ್ಯವು ವೃದ್ಧಿಯಾಗುತ್ತದೆ.

ಕೆಲವೊಮ್ಮೆ ಕೆಲವ್ಯಕ್ತಿಗಳು ನೆನವನ್ನು ಕಳೆದುಕೊಳ್ಳುತ್ತಾರೆ. ಅಂತಹ ವಿಷಯಗಳಲ್ಲಿ ಹಿಪ್ನಾಟಿಸಂ ಒಂದೇ ಅವರ ಸ್ಮೃತಿಯನ್ನು ಹಿಂದಿರುಗಿಸಬಲ್ಲದು.

**ಪ್ರಶ್ನೆ:ಕೇವಲ ತುಂಬಾ ಬುದ್ಧಿವಂತರು ಮತ್ತು ಹೆಚ್ಚಿನ ವಿದ್ಯಾವಂತರೇ ಸಮ್ಮೋಹಕರಾಗಬಹುದೆನ್ನುವುದು ನಿಜವೇ?**

ಉತ್ತರ:ಇಲ್ಲ. ಅದು ಹಾಗೇನಿಲ್ಲ. ಸರಿಯಾದ ಅಭ್ಯಾಸವನ್ನು ಅನುಸರಿಸಿದ ಯಾವುದೇ ವ್ಯಕ್ತಿ ಸಮ್ಮೋಹಕನಾಗಬಹುದು. ಅವನಿಗೆ ಬಲವಾದ ಇಚ್ಛಾಶಕ್ತಿ ಇರಬೇಕು. ಹಾಗೆಯೇ ಅವನಿಗೆ ಸಂಭಾಷಣೆ ಮಾಡುವ ಕಲೆ ಗೊತ್ತಿರಬೇಕು. ಅವನಿಗೆ ಪ್ರತಿಧ್ವನಿಸುವಂತಹ ಧ್ವನಿ ಮತ್ತು ಸರಿಯಾದ ಉಡುಪಿನ ಅಭಿರುಚಿ ಸಹ ಇದ್ದರೆ ಅವನೂ ಉತ್ತಮ ಸಮ್ಮೋಹಕನಾಗಬಹುದು. ಯಾರೊಬ್ಬರಿಗೆ ಇನ್ನೊಬ್ಬರಲ್ಲಿ ವಿಶ್ವಾಸವನ್ನು ಬೇರೂರಿಸಲಾಗುವುದೋ ಅಂಥವರು ಯಶಸ್ವೀ ಸಮ್ಮೋಹಕರಾಗುತ್ತಾರೆ.

**ಪ್ರಶ್ನೆ:ಸಮ್ಮೋಹನಗೊಂಡ ವ್ಯಕ್ತಿಗಳಿಂದ ಅಪರಾಧಗಳನ್ನು ಮಾಡಿಸಬಹುದೇ?**

ಉತ್ತರ:ಇದಕ್ಕೆ ಉತ್ತರವು ಅವಶ್ಯವಾಗಿ ಹೌದು. ಸಮ್ಮೋಹನದಲ್ಲಿ ಮೂರು ಹಂತಗಳಿವೆ ಎಂದು ನಾವು ಈಗಾಗಲೇ ತೋರಿಸಿದ್ದೇವೆ. ಸಾಮಾನ್ಯ ಮತ್ತು ಮಧ್ಯಮ ಹಂತಗಳಲ್ಲಿ ಓರ್ವನು ಸಮ್ಮೋಹನಗೊಂಡ ವ್ಯಕ್ತಿಯಿಂದ ಯಾವುದೇ ಅಪರಾಧಗಳನ್ನು ಮಾಡಿಸಲಾಗುವುದಿಲ್ಲ. ಆದರೆ ಆತನು ಮೂರನೆಯ ಹಂತವನ್ನು ಮುಟ್ಟಿದಾಗ ಸಮ್ಮೋಹಕನ ನಿಶ್ಚಿತ ಗುಲಾಮನಾಗುವನು. ಆತನು ಸಮ್ಮೋಹಕನ ಆಜ್ಞೆಯನ್ನು ಪಾಲಿಸುವುದು ತನ್ನ ಅಪ್ಪಣೆಯೆಂದು ಭಾವಿಸುವನು.

ಈ ತರಹದ ಒಂದು ಪರಿಸ್ಥಿತಿಯಲ್ಲಿ ಅದರಲ್ಲೂ ಸಮ್ಮೋಹಕನು ಸಮ್ಮೋಹನ ನಿದ್ರೆಯಲ್ಲಿ ಒಂದು ಆಜ್ಞೆಗಳ ಸರಮಾಲೆಯನ್ನು ಕೊಟ್ಟಾಗ, ಆತನು ಆಜ್ಞೆಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದಲ್ಲದೆ ಅವುಗಳನ್ನು ನಿರ್ವಹಿಸದ ಹೊರತು ಅಶಾಂತನಾಗುತ್ತಾನೆ. ಇದೇ ಅವನಿಗೆ ಮನಃಶಾಂತಿಯನ್ನು ಕೊಡುವುದು.

ಕಾಂಟೆಂಪೆರರಿ ಯೂರೋಪಿಯನ್ ಪತ್ರಿಕೆಯು ಈ ತರಹದ ವರದಿಗಳಿಂದ ಪರಿಪೂರಿತವಾಗಿದೆ. ಅಲ್ಲಿನ ಸರ್ಕಾರಗಳಿಗೆ ಇದು ಒಂದು ದೊಡ್ಡ ಸಮಸ್ಯೆಯಾಗಿ ಬೆಳೆದಿದೆ. ಯೂರೋಪಿಯನ್ ನ್ಯಾಯಾಲಯಕ್ಕೆ ಇಂತಹ ಅಪರಾಧಗಳಿಗೆ ಜವಾಬ್ದಾರಿಯನ್ನು ನಿಯೋಗಿಸಲು ಒಂದು ದೊಡ್ಡಸಮಸ್ಯೆಯಾಗಿದೆ ಆತನು ನನ್ನ ಸ್ವಂತದಿಂದಲ್ಲ ಆದರೆ ಬೇರೆಯವರ ಒತ್ತಡದ ಮೇಲೆ ಅಂತಹ ಅಪರಾಧಗಳನ್ನು ಮಾಡಿರುತ್ತಾನೆ.

ಕೇವಲ ಮೂರನೆಯ ಹಂತದಲ್ಲಿ ಮಾತ್ರ ಓರ್ವನು ಅಂತಹ ಅಪರಾಧಗಳ ಆಜ್ಞೆಗಳನ್ನು ಕೊಡಬಹುದು ಅದು ಮುಂಚಿನ ಹಂತಗಳಲ್ಲಿ ಸಾಧ್ಯವಿಲ್ಲ.

**ಪ್ರಶ್ನೆ:ಶಸ್ತ್ರಚಿಕಿತ್ಸೆಯ ಕ್ಷೇತ್ರದಲ್ಲಿ ಸಮ್ಮೋಹನವನ್ನು ಉಪಯೋಗಿಸುವುದು ಸರಿಯೇ?**

ಉತ್ತರ:ಆಧುನಿಕ ಶಸ್ತ್ರಚಿಕಿತ್ಸೆಯು ಸಮ್ಮೋಹನಕ್ಕೆ ಋಣಿಯಾಗಿದೆ. ಕ್ಲೋರೋಫಾರಂನ ಸಹಾಯವಿಲ್ಲದ ಶಸ್ತ್ರವೈದ್ಯರು ಬಹಳವಾಗಿ ಹಿಪ್ನಾಟಿಸಂನ ಸಹಾಯದಿಂದ ಶಸ್ತ್ರಚಿಕಿತ್ಸೆಗಳ ಕಾರ್ಯನಿರ್ವಹಿಸುತ್ತಾರೆ. ಕ್ಲೋರೋಫಾರಂನನ್ನು ಕೊಡುವುದು ಕೆಲವು ತೊಡಕುಗಳಿಲ್ಲದೇ ಇಲ್ಲ. ಅದರ ಹೆಚ್ಚಿನ ಪ್ರಮಾಣವು ಅಪಾಯಕರವಾಗಿ ಸಾಬೀತಾಗುವುದು ಹಾಗೆಯೇ ಕಡಿಮೆ ಪ್ರಮಾಣವು ರೋಗಿಯನ್ನು ಮೊದಲೇ ಎಚ್ಚರಗೊಳಿಸಿಬಿಡಬಹುದು.

ಅದು ಕೇವಲ ಸಮ್ಮೋಹನದಿಂದ ಮಾತ್ರ ಈ ಸಮಸ್ಯೆಯನ್ನು ಬಗೆಹರಿಸಬಹುದು. ಯೂರೋಪಿನಲ್ಲಿ ಮತ್ತು ಯು.ಎಸ್.ನಲ್ಲಿ ಹೆಚ್ಚುಕಡಿಮೆ ಕ್ಲೋರೋಫಾರಂನನ್ನು ಉಪಯೋಗಿಸುವುದನ್ನು ಬಿಟ್ಟುಬಿಟ್ಟಿದ್ದಾರೆ. ಹೃದಯ ಶಸ್ತ್ರಚಿಕಿತ್ಸೆಯಲ್ಲಿ ವೈದ್ಯರು ಕೇವಲ ಸಮ್ಮೋಹನವನ್ನೇ ಉಪಯೋಗಿಸುತ್ತಾರೆ. ಅದು ನೂರಕ್ಕೆ ನೂರರಷ್ಟು ಒಳ್ಳೆಯ ಫಲಿತಾಂಶವನ್ನು ಕೊಟ್ಟಿದೆ.

ಪ್ರಶ್ನೆ:ಓರ್ವನು ತನ್ನಷ್ಟಕ್ಕೆ ತಾನೇ ಸಮ್ಮೋಹನಗೊಳಿಸಿಕೊಳ್ಳಬಹುದೇ?

ಉತ್ತರ:ವಾಸ್ತವದಲ್ಲಿ ಸಮ್ಮೋಹನವು ಸ್ವ-ಸಮ್ಮೋಹನದ ನಿಯಮದ ಮೇಲೆ ಕೆಲಸಮಾಡುತ್ತದೆ. ಡಾ.ಬರ್ನ್‌ಹ್ಯಾಮ್‌ರವರು ಓರ್ವನು ಸಮ್ಮೋಹಕನ ಸೇವೆಯಿಲ್ಲದೆ ತನ್ನಷ್ಟಕ್ಕೆ ತಾನೇ ಸಮ್ಮೋಹನಗೊಳಿಸಿಕೊಳ್ಳಬಹುದೆಂದು ಈಗಾಗಲೇ ವಿಮರ್ಶಿಸಿದ್ದಾರೆ.

ಸಮ್ಮೋಹನದಲ್ಲಿ ಮಾಧ್ಯಮನಿಗೆ ಸಮ್ಮೋಹಕನ ಮೇಲೆ ಬಲವಾದ ನಂಬಿಕೆ ಇರುವುದು ಅವಶ್ಯಕವಾಗಿರುತ್ತದೆ. ಅವನಲ್ಲಿ ನೆಟ್ಟಂತಹ ಆಜ್ಞೆಗಳಿಗೆ ಪ್ರತಿಕ್ರಿಯಿಸುವಂತಹ ಸಾಮರ್ಥ್ಯ ಅವನಿಗಿದ್ದರೆ ಸಮ್ಮೋಹನದ ವಿಧಾನಕ್ಕೆ ತನಗೆ ತಾನೇ ಒಪ್ಪಿಸಿಕೊಂಡು ಅದರಿಂದ ಎಲ್ಲಾ ಲಾಭಗಳನ್ನು ಪಡೆಯುವನು.

ಮೊದಲಿನ ಪುಟಗಳಲ್ಲಿ ಈಗಾಗಲೇ ವಿಮರ್ಶಿಸಿದಂತೆ, ಪಾಶ್ಚಾತ್ಯ ಸಮ್ಮೋಹನ ವಿಜ್ಞಾನವು ಒಂದು ನಿರ್ದಿಷ್ಟ ರೀತಿಯಲ್ಲಿ ವೃದ್ಧಿಗೊಂಡಿದೆ, ಆದರೆ ಅದರ ಪ್ರಾರಂಭವು ಭಾರತೀಯ ಅಭ್ಯಾಸಗಳಲ್ಲಿ ಪೂರ್ಣಗೊಂಡಿದೆ ಎಂದು ಉಪದೇಶಿಸುತ್ತದೆ. ಭಾರತೀಯ ತತ್ವಜ್ಞಾನದಲ್ಲಿ ಈ ಅಭ್ಯಾಸವನ್ನು ಪ್ರಾಣವಿದ್ಯೆಯೆಂದು ಕರೆಯಲಾಗಿದೆ.

ಬೇರೆ ಪದಗಳಲ್ಲಿ ಓರ್ವನು ಪ್ರಾಣಾಯಾಮ ಮತ್ತು ಯೋಗಗಳನ್ನು ಅಭ್ಯಸಿಸಿದರೆ ಅವನನ್ನು ಸಮ್ಮೋಹಕನೆಂದು ಕರೆಯಲಾಗುವುದು. ಈ ಅಭ್ಯಾಸದ ಸದ್ಗುಣದಿಂದ ಆತನ ಅಂತರ್ಶಕ್ತಿಯು ಬಲವಾಗುವುದು. ಅವನ ಸ್ವಾಭಾವಿಕ ಆತ್ಮವಿಶ್ವಾಸವನ್ನು ಪುಟಿದೆಬ್ಬಿಸಿಬಿಟ್ಟು ಅವನನ್ನು ಯಶಸ್ವೀ ಸಮ್ಮೋಹಕನನ್ನಾಗಿ ಮಾಡುತ್ತದೆ.

ಭಾರತೀಯ ಯೋಗಿಗಳು ಸ್ವ-ಸಮ್ಮೋಹನವನ್ನು ಅನುಸರಿಸಿ ಸಮ್ಮೋಹನಾವಸ್ಥೆಯಲ್ಲಿದ್ದರು. ಅದು ಅವರಿಗೆ ತಮ್ಮ ಗ್ರಹಿಕೆಯ ಮತ್ತು ನಡುವಳಿಕೆಯ ಅಂಗಗಳಮೇಲೆ ಹತೋಟಿಯನ್ನು ತೆಗೆದುಕೊಳ್ಳಲು ಎಡೆಮಾಡಿತು. ಅವರು ಅಂತಹ ಒಂದು ಬಲವಾದ ಸ್ವಯಂ ಹತೋಟಿಯಿಂದ ಈಗಿನ ವಿಜ್ಞಾನದ ಕಾಲದಲ್ಲಿ ಪವಾಡಗಳೆಂದು ಪರಿಗಣಿಸಿರುವಂತಹ ಅಸಾಧ್ಯ ಕಾರ್ಯಗಳನ್ನು ಸಾಧಿಸುತ್ತಿದ್ದರು.

ಈವತ್ತಿಗೂ ಸಹ ನಾವು ಅಂತಹ ಅಭ್ಯಾಸಗಳನ್ನೇ ಅನುಸರಿಸಿ ಅಂತಹ ಸಿದ್ಧಿಗಳನ್ನೇ ಸಾಧಿಸಬಹುದು. ನಾವು ನಮ್ಮ ದೇಹದ ಮೇಲೆ ಸಂಪೂರ್ಣ ಹತೋಟಿಯನ್ನು ಸಾಧಿಸಿ ನಮ್ಮ ಆಕರ್ಷಣ ಶಕ್ತಿಯನ್ನು ವೃದ್ಧಿಸಿಕೊಂಡು ಯಶಸ್ವೀ ಸಮ್ಮೋಹಕರಾಗಬಹುದು.

ಡಾ.ವಿಲಿಯಮ್ ಬ್ರೌನ್ ರವರು ತಮ್ಮ ಪುಸ್ತಕದಲ್ಲಿ ಈ ಕೆಳಗಿನ ಸಾಮಾನ್ಯ ಅಭ್ಯಾಸಗಳನ್ನು ಶಿಫಾರಸು ಮಾಡಿದ್ದಾರೆ.

ಮೊದಲನೆಯ ಹೆಜ್ಜೆ: ಒಂದು ಅನುಕೂಲಕರ ಭಂಗಿಯಲ್ಲಿ ಒರಗಿಕೊಳ್ಳಿ ನಂತರ ಮನಸ್ಸನ್ನು ಮತ್ತು ಮೆದುಳನ್ನು ವಿಶ್ರಮಿಸಲು ಬಿಡಿ.

ಎರಡನೆಯ ಹೆಜ್ಜೆ: ಅಂತರ್ಮನಸ್ಸಿನ ಮೇಲೆ ಹತೋಟಿಯನ್ನು ಸಾಧಿಸುವುದರ ಮೂಲಕ ಅದನ್ನು ಚೇತರಿಸಿಕೊಳ್ಳಿ. ಅಂತರ್ಮನಸ್ಸನ್ನು ಚೇತರಿಸಿದಾಗ ಅದು ಒಂದು ವಿಶಿಷ್ಟ ರೀತಿಯ ಆಕರ್ಷಣ ಶಕ್ತಿಯನ್ನು ಉತ್ಪಾದಿಸುತ್ತದೆ, ಅದು ವೃದ್ಧಿಗೊಂಡ ಏಕಾಗ್ರತೆಯ ಮನಸ್ಸನ್ನು, ಸ್ಮೃತಿ ಮತ್ತು ಆತ್ಮವಿಶ್ವಾಸವನ್ನು ಕೊಡುವುದು. ಈ ಶಕ್ತಿಯು ಒಬ್ಬ ವ್ಯಕ್ತಿಯನ್ನು ಅರ್ಹ ಹಾಗೂ ಯಶಸ್ವೀ ಸಮ್ಮೋಹಕನನ್ನಾಗಿ ಮಾಡುವುದು.

# ಅಧ್ಯಾಯ 4

## ಸಮ್ಮೋಹನದ ನಿಯಮಗಳು: ಭಾರತೀಯ ರೀತಿ.

ಪುರಾತನ ವಿಜ್ಞಾನವಾದ ಸಮ್ಮೋಹನವು ಭಾರತದಲ್ಲಿ *ಯೋಗ*ದ ಪದ್ಧತಿಯಲ್ಲಿ ಅಳವಡಿಸಲಾಗಿತ್ತು. ಹಾಗೆಯೇ ಆಗಾಗ ಅದನ್ನು ನಾನಾ ರೀತಿಯಲ್ಲಿ ಸಮ್ಮೋಹನದ ಕಲೆ ಅಥವಾ ಸಮ್ಮೋಹನ ಜ್ಞಾನವೆಂದು ಕರೆಯಲಾಗಿತ್ತು, ಈ ವಿಜ್ಞಾನವು ಭಾರತೀಯ ಧಾರ್ಮಿಕತೆಯ ಅವಿಭಾಜ್ಯ ಅಂಗವಾಗಿತ್ತು.

ಭಾರತೀಯ ತತ್ವಜ್ಞಾನ ಮತ್ತು ಭಾರತೀಯ ಆಧ್ಯಾತ್ಮಿಕತೆಗಳು ಯಾವಾಗಲೂ ನಮ್ಮ *ಯೋಗ*ದ ಪದ್ಧತಿಗೆ ಪೂರ್ಣತೆಯನ್ನು ಕೊಟ್ಟಿವೆ. ಯೋಗವೆಂದರೆ ಕೂಡುವುದು ಅಥವಾ ಸಂಯೋಗ. ಆಧ್ಯಾತ್ಮಿಕ ಪದಗಳಲ್ಲಿ ಅದು ಆತ್ಮ ಮತ್ತು *ಬ್ರಹ್ಮ*ನ ಸಂಯೋಗ. ಸಂಯೋಗದ ಜ್ಞಾನವೆಂದರೆ ಮುಂದುವರಿದಂತೆ ಭಕ್ತ ಮತ್ತು ಭಗವಂತನ, ಮನುಷ್ಯ ಮತ್ತು ದೇವರ, ಒಬ್ಬ ವ್ಯಕ್ತಿ ಮತ್ತು ಜಗತ್ತು ಮತ್ತು ಈ ದೇಹ ಹಾಗೂ ಈ ಸೃಷ್ಟಿಯ ಕೂಡುವಿಕೆ ಎಂದು ಅರ್ಥಮಾಡಿಕೊಳ್ಳಲಾಗಿದೆ. ಗಣನೀಯವಾಗಿ ಯೋಗಾಭ್ಯಾಸದ ಕೊನೆಯ ಉದ್ದೇಶವು ಓರ್ವನು ಸಂಪೂರ್ಣವಾಗಿ ದೇವರಿಗೆ ಒಪ್ಪಿಸುವಂತಹ ಅಂತರಾತ್ಮದ ಆಳವಾದ ಏಕಾಗ್ರತೆಯ ಸಾಧನೆ. ಅದು ಕೇವಲ ಭಗವಂತನಿಗೆ ಸಂಪೂರ್ಣವಾಗಿ ಒಪ್ಪಿಸುವ ಮೂಲಕವೇ ಓರ್ವನಿಗೆ ದೈವೀಯ ಕೃಪೆ ಲಭಿಸುತ್ತದೆ. ಈ ಆಶೀರ್ವಾದಕ್ಕೆ ಬೇರೆಪದಗಳಲ್ಲಿ *ಯೋಗ* ಅಥವಾ ಹಿಪ್ನಾಟಿಜಂಯೆಂದು ಕರೆಯಲಾಗಿದೆ.

ಭಾರತೀಯ ತತ್ವಜ್ಞಾನದ ಕಲ್ಪನೆಯಲ್ಲಿಯೋಗ ವೆಂದರೆ ಕಠೋರವಾದ ಹತೋಟಿ ಮತ್ತು ಬಯಕೆಗಳ ಮತ್ತು *ಚಿತ್ರಗಳ* ಕಡೆಗೆ ವಾಲುವಿಕೆಯ ಸಂಪೂರ್ಣ ನಿಷೇಧವು. ಒಮ್ಮೆ ನಾವು ಇದನ್ನು ಪಡೆದಾಗ, ಭಗವಂತನ ಜೊತೆ ನಾವು ಸಂಪೂರ್ಣ ಗುರುತನ್ನು ಸಾಧಿಸುವೆವು. ಈ ಸ್ಥಿತಿಯಲ್ಲಿ ಈ ವ್ಯಕ್ತಿಯು ಆಚೆಗೆ ನೋಡಬೇಕಾದಾಗ ಯಾವುವೇ ಅಡಚಣೆಗಳನ್ನು ಎದುರಿಸುವುದಿಲ್ಲ; ಕಳೆದು ಹೋದುದರಲ್ಲಿ ಮತ್ತು ಭವಿಷ್ಯದಲ್ಲಿ ಅಂತಹ ವ್ಯಕ್ತಿಯು ತನ್ನ ಇಚ್ಛೆಯಂತೆ ಸಂಪೂರ್ಣ ವಿಶ್ವವನ್ನೇ ಚಿತರಿಸಬಹುದು.

ನಿಜವಾಗಿಯೂ ಸಮ್ಮೋಹನ ಶಕ್ತಿಯನ್ನು *ಯೋಗದ* ಮಾಧ್ಯಮದಿಂದಲೂ ಸಾಧಿಸಬಹುದು. ವಿಶಾಲವಾಗಿ ಯೋಗವು ಐದು ರೀತಿಯಲ್ಲಿದೆ *ಹಠಯೋಗ, ಧ್ಯಾನಯೋಗ, ಕರ್ಮಯೋಗ, ಭಕ್ತಿಯೋಗ* ಮತ್ತು *ಜ್ಞಾನಯೋಗ.* ಈಬಗೆಗಳು ಹೇಗೆ ಸಾಧ್ಯವಾಯಿತೆಂದರೆ, ಮೂಲಭೂತವಾಗಿ, ಮನುಷ್ಯನಿಗೆ ಐದು ಶಕ್ತಿಗಳಿವೆ. ಉದಾ, *ಪ್ರಾಣಶಕ್ತಿ*ಯಿಂದ *ಹಠಯೋಗವು* ಉತ್ಪತ್ತಿಯಾಗುತ್ತದೆ, *ಮಾನಸಿಕ ಶಕ್ತಿ*ಯಿಂದ *ಧ್ಯಾನಯೋಗವು,* ಚಟುವಟಿಕೆಗಳಿಂದ *ಕರ್ಮಯೋಗವು* ಉದ್ವೇಗದಿಂದ *ಭಕ್ತಿಯೋಗವು* ಮತ್ತು ಹೆಚ್ಚಾಗಿ ವೃದ್ಧಿಸಿರುವಂತಹ ಬುದ್ಧಿಯಿಂದ *ಜ್ಞಾನಯೋಗವು.* ಈ ತರಹದ ಸಂಬಂಧಗಳನ್ನು ಸ್ಥಾಪಿಸಿದ ನಂತರ ಮಾತ್ರ ಮನುಷ್ಯನು ತನ್ನ ವ್ಯಕ್ತಿತ್ವವನ್ನು ದಾಟಿಹೋಗಿ ವಿಶ್ವದಲ್ಲಿ ಮುಳುಗುವನು. *ಪುರಾಣ*ಗಳ ಪ್ರಕಾರ ಈ *ಯೋಗಜ್ಞಾನವನ್ನು* ಸ್ಥಾಪಿಸಿದವನು *ಶಿವದೇವನು* ಮತ್ತು ಈ ಕಾರಣದಿಂದ ಆತನನ್ನು ಯೋಗಿರಾಜ್—ಯೋಗಗಳ ರಾಜನೆಂದು ಕರೆಯಲಾಗಿದೆ. ಶಿವದೇವನಿಂದ ಪ್ರಾರಂಭಗೊಂಡ ಈ ಯೋಗ ಜ್ಞಾನವು ತದನಂತರದ ಸಂತರು ಮತ್ತು ಋಷಿಗಳಿಂದ ಮುಂದುವರಿಸಲಾಯಿತು. ಆಧುನಿಕ ಕಾಲದಲ್ಲಿ ದೊರೆಯುವಂತಹ ಗ್ರಂಥಗಳಲ್ಲಿ, ಪ್ರಮುಖವಾಗಿರುವವೆಂದರೆ *ಹಠಯೋಗ ಪ್ರದೀಪಿಕ, ಯೋಗ ದರ್ಶನ, ಗೌರವ ಸಂಹಿತ, ಹಠಯೋಗಸಾರ* ಮತ್ತು *ಕುಂಡಕಯೋಗ.* ಪತಂಜಲಿಯವರ '*ಯೋಗದರ್ಶನ* 'ವು ಈ ಕ್ಷೇತ್ರದಲ್ಲಿ ಅಧಿಕೃತವಾಗಿರುವುದೆಂದು ಹೇಳಲಾಗಿದೆ.

*ಪತಂಜಲಿಯವರ ಪ್ರಕಾರ ಯೋಗದಲ್ಲಿ ಎಂಟು ಹಂತಗಳಿವೆ: ಯಮ, ನಿಯಮ, ಆಸನ, ಪ್ರಾಣಾಯಾಮ,*

*ಪ್ರತ್ಯಾಹಾರ, ಧಾರಣ, ಧ್ಯಾನ* ಮತ್ತು *ಸಮಾಧಿ.* ಮೊದಲ ಐದು ಬಾಹ್ಯಕ್ಕೆ ಮತ್ತು ಉಳಿದ ಮೂರು ಅಂತರಕ್ಕೆ ಸಂಬಂಧಪಟ್ಟಿರುವವು.

**1. ಯಮ:**ಬಿಡದೇ ಸ್ಥಿರವಾಗಿ ಪಾಲಿಸುವಂತಹ ಅಹಿಂಸೆ, ಸತ್ಯ, ಪ್ರಾಮಾಣಿಕತೆ. ಲೈಂಗಿಕತೆ ಮತ್ತು ಪ್ರಾಪಂಚಿಕತೆಯಿಂದ ದೂರವಿರುವುದು ಮತ್ತು ಒಡೆತನ ಇಲ್ಲದಿರುವುದಕ್ಕೆ ಯಮ ಎಂದು ಕರೆಯುವರು.

**2. ನಿಯಮ:**ಆರೋಗ್ಯ, ತೃಪ್ತಿ, ಉಗ್ರ ಸಂಯಮ, ಪವಿತ್ರತೆ ಮತ್ತು ಆಧ್ಯಾತ್ಮಿಕ ಧ್ಯಾನಗಳಲ್ಲಿ ಶ್ರದ್ಧೆಯನ್ನು ನಿಯಮವೆಂದು ಕರೆಯುವರು.

**3. ಆಸನ:**ಅನುಕೂಲಕರವಾದ ಭಂಗಿಯಲ್ಲಿ ಕೂತುಕೊಂಡು ಮಗ್ನತೆಯ ಗಮನದಲ್ಲಿ ನಿರತನಾಗಿರುವುದಕ್ಕೆ ಆಸನ ವೆನ್ನುವರು.

**4. ಪ್ರಾಣಾಯಾಮ:**ರೇಚಕ, ಪೂರಕ ಮತ್ತು ಉಸಿರಿನ ಚಲನೆಗಳನ್ನು ನಿಯಂತ್ರಿಸುವ ಮೂಲಕ ಅತಿ ಮಹತ್ವದ ಶಕ್ತಿಯನ್ನು ದೇಹದಲ್ಲಿ ಸಂರಕ್ಷಿಸುವುದು.

**5. ಪ್ರತ್ಯಾಹಾರ:**ಇಂದ್ರಿಯಗಳನ್ನು ತಮ್ಮ ಭೌತಿಕ ವಸ್ತುಗಳಿಂದ ತಿರುಗಿಸಿ ಮತ್ತು ಅವನ್ನು ಮನಸ್ಸಿನ ಸಹನ ಶಕ್ತಿಯೊಂದಿಗೆ ಸಮರಸಗೊಳಿಸುವುದೇ ಪ್ರತ್ಯಾಹಾರವೆಂದು ಕರೆಯಲಾಗಿದೆ.

**6. ಧಾರಣ:**ಓರ್ವನ ಮನಸ್ಸಿನ ಸಂಪೂರ್ಣ ಏಕಾಗ್ರತೆಯನ್ನು ಒಂದು ನಿರ್ದಿಷ್ಟಯೋಚನೆಯ ಮೇಲೆ ಒಗ್ಗೂಡಿಸುವುದೇ ಧಾರಣವೆಂದು ಕರೆದಿದೆ.

**7. ಧ್ಯಾನ:**ಬೇರೆವಸ್ತುಗಳ ಉಪಸ್ಥಿತಿಯಲ್ಲಿಯೂ ಕೊಟ್ಟಂತಹ ವಸ್ತುವಿನ ಮೇಲೆ ವಿಚಲಿತವಾಗದೆ ಕೇಂದ್ರೀಕರಿಸುವುದು *ಧ್ಯಾನ*ವೆಂದು ಹೇಳಲಾಗಿದೆ.

**8. ಸಮಾಧಿ:**ಗುರಿಯಿಟ್ಟ ವಸ್ತುವಿನಲ್ಲಿ ಸಂಪೂರ್ಣವಾಗಿ ಮುಳುಗಿ ತನ್ನ ಸ್ವಂತ ಇರಿವನ್ನೇ ಮರೆಯುವುದು *ಸಮಾಧಿ*ಯೆಂದು ಕರೆಯಲಾಗಿದೆ.

ಮೊದಲಿನ ಐದು ಹಂತಗಳನ್ನು ಸಾಧಿಸಿದಾಗ ಮತ್ತು *ಸಾಧಕ*ನು ಈ ಎಲ್ಲಾ ಹಂತಗಳಲ್ಲಿ ಪರಿಪೂರ್ಣತೆಯನ್ನು ಪಡೆದಾಗ ಅವನನ್ನು ಮುಂದಿನ ಮೂರು ಹಂತಗಳಿಗೆ ಯೋಗ್ಯನೆಂದು ಪರಿಗಣಿಸಲಾಗುವುದು. ಉಳಿದ ಮೂರರಲ್ಲಿ ಪ್ರವೇಶಿಸುವ ಮುನ್ನ *ಸಾಧಕ*ನನ್ನು ಮೊದಲನೆಯ ಐದು ಹಂತಗಳಲ್ಲಿ ಯಶಸ್ವಿಯಾಗಲು ಉಪದೇಶಿಸಲಾಗಿದೆ.

*ಯೋಗಿ*ಯು ಐದು ಮೂಲಭೂತಗಳಲ್ಲಿ ಪೂರ್ಣವಾದ ಪರಿಚಯವನ್ನು ಸಾಧಿಸುವನು: ಪೃಥ್ವಿ, ಜಲ,ಅಗ್ನಿ, ಗಾಳಿ ಮತ್ತು ಆಕಾಶ. ಅವನಿಗೆ ಈ ಮೂಲಭೂತಗಳ ವಸ್ತುಗಳಲ್ಲಿಯೂ ಪೂರ್ಣಸಮರತೆಯು ಸಹ ಪ್ರಾಪ್ತಿಯಾಗುವುದು ಇಂದ್ರ, ರಸ, ವಾಸನೆ, ಪದ ಮತ್ತು ಸ್ಪರ್ಶ.

ಮೇಲೆ ವಿವರಿಸಿದಂತಹ ಪರಿಚಯ ಮತ್ತು ಸಮರಸಗಳ ಕಾರ್ಯಗಳಲ್ಲಿ ಅವನು ಯಶಸ್ವಿಯಾದ ನಂತರವೇ ಯೋಗಿಗೆ ಈ ಎಂಟು ಸಿದ್ಧಿಗಳು ಪ್ರಾಪ್ತಿಯಾಗುವವು. ಆ ಎಂಟು ಸಿದ್ಧಿಗಳೆಂದರೆ :

| | |
|---|---|
| 1. ಅಣಿಮ | 5. ಪ್ರಾಪ್ತಿ |
| 2. ಮಹಿಮ | 6. ಪ್ರಕಮ್ಯ |
| 3. ಲಘಿಮ | 7. ವಶಿಟ್ಟ |
| 4. ಗರಿಮ | 8. ಇಷ್ಟ್ವ |

ಈ ಎಂಟು *ಸಿದ್ಧಿ*ಗಳೂ ಪ್ರಾಪ್ತಿಯಾಗಿರುವಂತಹ *ಯೋಗಿಗೆ* ಜೀವನದಲ್ಲಿ ಬೇರೇನೂ ಬೇಕಾಗಿರುವುದಿಲ್ಲ. ಕೇವಲ ಇಚ್ಛೆಯು ಮಾತ್ರ ಅವನಿಗೆ ಬೇಕಾದದ್ದನ್ನು ಕೊಡುವುದು.ಅವನು ಉಚ್ಛರಿಸುವಂತಹ ಪ್ರತಿ ಶಬ್ದವೂ ಬೇರೇನಾಗದೆ ಕೇವಲ ಸತ್ಯವಾಗಿ ಪರಿಣಮಿಸುವುದು.ಆತನನ್ನು *ಯೋಗಿರಾಜ–ಯೋಗಿ*ಗಳ ರಾಜನೆಂಬ ಬಿರುದಿನಿಂದ ಗೌರವಿಸಲಾಗುವುದು.

*ಹಠಯೋಗ* ಅಭ್ಯಾಸಗಳಲ್ಲಿ ಮೊದಲನೆಯದು *ಕುಂಡಲಿನಿಯನ್ನು*[1] ಕೆರಳಿಸುವುದು. ದೇಹದಲ್ಲಿ ಜನನಾಂಗ ಮತ್ತು ಗುದಗಳ ಮಧ್ಯೆ *ಸುಷಮ್ನ*[2] ಎಂಬ ಸುಪ್ತಶಕ್ತಿಯಿದೆ. *ಸುಷಮ್ನದ* ಎರಡು ಕಡೆ *ಇಡ* ಮತ್ತು *ಪಿಂಗಳವೆಂಬ* ಎರಡು ನರಗಳನ್ನು ಕಾಣಬಹುದು. ಇವುಗಳು ನಾಭಿಯ ಪ್ರದೇಶದ ಹತ್ತಿರದಲ್ಲಿ ವಾಸ ಗೊಂಡಿವೆ. ಈ ಮೂರುಗಳನ್ನೂ ಒಟ್ಟಿಗೆ *ತ್ರಿನೇತ್ರ* ಎಂದು ಕರೆಯಲಾಗಿದೆ. ಯಾರೊಬ್ಬನು ಬೆನ್ನೆಲುಬಿನ ಮೂಲಕ ಅದರ ಕೆಳತುದಿಯಲ್ಲಿರುವ ತ್ರಿಕೋನಾಕಾರದ ಎಲುಬಿನ ಮುಂದಿನ ಒಂದು ಬಿಂದುವಿನ ಮೇಲೆ *ಸುಷಮ್ನವು* ಮೇಲಕ್ಕೆ ಪ್ರಯಾಣಿಸಿ *ಸಹಸ್ರಾರ*[3] ನಲ್ಲಿ ಕೊನೆಗೊಳಿಸುತ್ತಾನೋ ಅಂತವನಿಗೆ ತನ್ನ ಕುಂಡಲಿಯನ್ನು ಕೆರಳಿಸಿ (ಅರಿವು ಅಥವಾ ಎಚ್ಚೆತ್ತು ಕೊಳ್ಳುವುದು) ದ್ಯಾನೆನ್ನುತ್ತಾರೆ. ಕುಂಡಲಿನಿಯು ಯಾವ ವಸ್ತುವಿನ ರೂಪವನ್ನಾದರೂ ಪಡೆದುಕೊಳ್ಳಬಹುದು ಸರ್ಪ ಅಥವಾ ಅಮೃತ ಅಥವಾ ತ್ರಿಶೂಲದ ಹಾಗೆ ಈ ನರಗಳ ಮೂಲಕ ಸರಿಯುವುದನ್ನು ನೋಡಬಹುದು. ಅವನು ಎಲ್ಲವನ್ನೂ ತಿಳಿದಂತಹ ದೈವೀಕ ಜ್ಞಾನವನ್ನು ಪಡೆಯುತ್ತಾನೆ. ಅವನು ತನ್ನಷ್ಟಕ್ಕೆ ಶಿವದೇವನಾಗುತ್ತಾನೆ. 'ಅಸಾಧ್ಯ' ಮತ್ತು 'ಕಷ್ಟ' ಎಂಬ ಪದಗಳು ಅವನಿಗೆ ಅರ್ಥವನ್ನು ಕಳೆದುಕೊಳ್ಳುತ್ತವೆ.

ಸಮ್ಮೋಹನವು ಯೋಗ ಶಕ್ತಿಯ ಒಂದು ಅಂಶ. ಈ ಶಕ್ತಿಯ ಮೂಲಕ ಓರ್ವನು ತನ್ನ ಮಾನಸಿಕ ಶಕ್ತಿ ಮತ್ತು ಇಚ್ಛಾಶಕ್ತಿಯನ್ನು ವೃದ್ಧಿಸಿಕೊಳ್ಳಬಹುದು. ಈ ವೃದ್ಧಿಸಿಕೊಂಡ ಶಕ್ತಿಗಳು ಸಮ್ಮೋಹನದಲ್ಲಿ ನೈಪುಣ್ಯತೆಯನ್ನು ನಿಶ್ಚಿತವಾಗಿಸುವವು. ಪ್ರಾರಂಭದಲ್ಲಿ ಈ ಅಭ್ಯಾಸಗಳಿಂದ ಈ ಕೆಳಗಿನ ಲಾಭಗಳು ಒಗ್ಗೂಡುವವು.

1.ದೇಹವು ಆರೋಗ್ಯಕರವಾದ ಮತ್ತು ಸ್ಫುಟವಾದ ಜೀವವಾಗಿ ಬೆಳೆಯುವುದು.

2.ಅದು ಮಾನಸಿಕ ಶಕ್ತಿಯನ್ನು ವೃದ್ಧಿಸಿಕೊಳ್ಳಲು ಸಹಾಯಕವಾಗುವುದು.

3.ಅದು ಎಲ್ಲಾಕಡೆ ವ್ಯಾಪಿಸಿಕೊಂಡಂತಹ ಶಾಂತಿಯನ್ನು ನಿಶ್ಚಿತಗೊಳಿಸುವುದು.

4.ಅದು ದೈವೀಕ ಶಕ್ತಿಯನ್ನು ವೃದ್ಧಿಸಿಕೊಳ್ಳಲು ಸಹಾಯವಾಗುವುದು.

5.ಅದು ಸ್ವ-ಜ್ಞಾನವನ್ನು ನಿಶ್ಚಿತಗೊಳಿಸುವುದು.

## ಯೋಗ ನಿದ್ರೆ.

ನಾವು ಆಧ್ಯಾತ್ಮಿಕ ಶಕ್ತಿಯಿಂದ ಬೇರೆಯವರನ್ನು ಪ್ರಭಾವಗೊಳಿಸುವುದರ ಮೂಲಕ ಅಥವಾ ನಮ್ಮಲ್ಲಿಯೇ

----------------

1.ಕುಂಡಲಿನಿ:ಜೀವಿಯಲ್ಲಿ ಎಚ್ಚೆತ್ತು ಕೊಂತ ಸುಪ್ತವಾದ ಪ್ರಮುಖ ಶಕ್ತಿ.

2.ಸುಷಮ್ನ:ಬೆಳಕಿನ ಕಿರಣದ ಹಾಗೆ ಕಾಣುವ ಒಂದು ಮಾನಸಿಕ ಮಾರ್ಗ.

3.ಸಹಸ್ರಾರ:ಎಲ್ಲಿ ವ್ಯಕ್ತಿಯು ತನ್ನ ಮನಸ್ಸನ್ನು ದೇವರೊಂದಿಗೆ ಒಗ್ಗೂಡಿಸುತ್ತಾನೋ ಅಂತಹ ಮನಸ್ಸಿನ ಕೊನೆಯ ಕೇಂದ್ರ ಅಥವಾ ಚಕ್ರ.

ಪ್ರಭಾವವನ್ನು ವಿಸ್ತರಿಸಿಕೊಳ್ಳುವುದರ ಮೂಲಕ ಎರಡೂ ವಿಷಯಗಳಲ್ಲಿ ಕೃತಕನಿದ್ರೆ ಅಥವಾ ಹಿಪ್ನಾಟಿಸಂನ್ನು ತರುತ್ತೇವೋ ಅದಕ್ಕೆ ಭಾರತೀಯ ತತ್ವಜ್ಞಾನದಲ್ಲಿ ಯೋಗನಿದ್ರೆ ಎಂದು ಕರೆಯುವರು. ಯೋಗನಿದ್ರೆಯಿಂದ ಈ ಕೆಳಗಿನವನ್ನು ಸಾಧಿಸಲು ಲೆಕ್ಕಹಾಕಲಾಗಿದೆ:

೧. ಅದು 'ಮಾಧ್ಯಮ'ನಲ್ಲಿ ಕೃತಕನಿದ್ರೆಯನ್ನು ತರುವುದು.

೨. 'ಮಾಧ್ಯಮ'ನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಸಾಧಕನ--ಸಮ್ಮೋಹಕನ ಆಜ್ಞೆಗಳನ್ನು ಪಾಲಿಸುವ ಹಾಗೆ ಮಾಡಬಹುದು.

೩. ಅದು ಅವನ ಕಲ್ಪನಾಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಸಹಾಯವಾಗುವುದು. ಕಲ್ಪನಾಶಕ್ತಿಯನ್ನು ವೃದ್ಧಿಸಿಕೊಳ್ಳುವ ಮೂಲಕ ಅವನು ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸುವ ಸ್ಥಿತಿಯಲ್ಲಿರುವನು.

೪. ಯೋಗ ನಿದ್ರೆಯ ಮೂಲಕ ಸಾಧಕನು ಮಾಧ್ಯಮನಿಗೆ ತನ್ನ ಪ್ರತಿಬಂಧಕಾಜ್ಞೆಗಳನ್ನು ಅನುಸರಿಸುವ ಹಾಗೆ ಮಾಡಬಹುದು.

ಅಲ್ಲದೆ, ಸಾಧಕನು ತನ್ನನ್ನು ತಾನೇ ಸಮ್ಮೋಹಿಸಿಕೊಂಡು 'ಮಾಧ್ಯಮ'ನಿಗೆ ಸಿಗುವಂತಹ ಲಾಭಗಳೆಲ್ಲವನ್ನೂ ತಾನೂ ಪಡೆಯಬಹುದು. ಯಾವುದೇ ಕೋನದಿಂದ ನೋಡಿದರೂ ಅದು ಒಳ್ಳೆಯದನ್ನೇ ಮಾಡುತ್ತದಾದರೂ ಕೆಟ್ಟದನ್ನಲ್ಲ.

ಓರ್ವನು ಯೋಗ ನಿದ್ರೆ ಅಥವಾ ಕೃತಕ ನಿದ್ರೆಯು ಸಹಜವಾದ ನಿದ್ರೆಯಿಂದ ಬೇರೆಯಾಗಿದೆ ಎಂಬುದನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳಬೇಕು. ಸಹಜ ನಿದ್ರೆಯಲ್ಲಿ ಓರ್ವನು ಸಂಪೂರ್ಣವಾಗಿ ಮಲಗಿಕೊಳ್ಳುವನು ಅದು ಸಮ್ಮೋಹಕನ ಆಜ್ಞೆಗಳಿಗೆ ಪ್ರತಿಕ್ರಿಯಿಸಲು ಯಾವುದೇ ಅವಕಾಶವನ್ನುಕೊಡುವುದಿಲ್ಲ. ಹೇಗಾದರೂ, ಸಮ್ಮೋಹನ ನಿದ್ರೆಯಲ್ಲಿ ಓರ್ವನ ಬಹಿರ್ಮನಸ್ಸನ್ನು ಮಾತ್ರ ನಿದ್ರೆಗೆ ತರಲಾಗುವುದು ಹಾಗೆಯೇ ಅಂತರ್ಮನಸ್ಸು ಸಂಪೂರ್ಣವಾಗಿ ಎಚ್ಚೆತ್ತುಕೊಂಡು ಸಮ್ಮೋಹಕನ ಎಲ್ಲಾ ಆಜ್ಞೆಗಳಿಗೂ ಪ್ರತಿಕ್ರಿಯಿಸುವುದು.

ಒಂದು ನಿಶ್ಚಿತಕೋನದಿಂದ ವೀಕ್ಷಿಸಿದಾಗ ಕೃತಕನಿದ್ರೆಯು ಅರೆನಿದ್ರೆ ಅಥವಾ ಹಗುರನಿದ್ರೆಗೆ ಸಮಾನವಾಗುತ್ತದೆ. ಈ ಅವಸ್ಥೆಯಲ್ಲಿ 'ಮಾಧ್ಯಮ'ನು ತನ್ನನ್ನು ತಾನೇ ಸಮ್ಮೋಹಕನಿಗೆ ಒಪ್ಪಿಸುವನು.

ಯೋಗ ನಿದ್ರೆಯ ಅಡಿಪಾಯವು ಆಧ್ಯಾತ್ಮಿಕ ಶಕ್ತಿ. ನಿಜವಾಗಿಯೂ ಪ್ರತಿವ್ಯಕ್ತಿಯಲ್ಲಿಯೂ ಅದು ಸ್ವಲ್ಪಮಟ್ಟಿಗೆ ಇರುತ್ತದೆ. ಅವನು ಹಾಗೆ ಇಚ್ಛಿಸಿದಲ್ಲಿ ಕೆಲ ವಿಶಿಷ್ಟ ಅಭ್ಯಾಸಗಳ ಮತ್ತು ವ್ಯಾಯಾಮಗಳ ಮೂಲಕ ಅದನ್ನು ವೃದ್ಧಿಸಿಕೊಳ್ಳಬಹುದು. ಈ ಆಧ್ಯಾತ್ಮಿಕ ಶಕ್ತಿಯ ಬೇರೆ ಕೆಲವು ವಿಧಗಳೆಂದರೆ ಕರ್ಮಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ. ಈ ಶಕ್ತಿಗಳನ್ನು ಎಚ್ಚರಿಸಿ ವೃದ್ಧಿಸಿಕೊಳ್ಳುವುದರ ಮೂಲಕ ಸಾಧಕನು ಪೂರ್ಣತೆಯನ್ನು ಪಡೆಯುತ್ತಾನೆ.

ಬೇರೊಂದು ಕಡೆ ನಾವು ಪ್ರಾಣಶಕ್ತಿಯ ಬಗ್ಗೆ ಹೇಳಿದ್ದೇವೆ. ವಾಸ್ತವದಲ್ಲಿ ಸಮ್ಮೋಹಕನ ಮುಖ್ಯ ಅಡಿಪಾಯವು ಪ್ರಾಣಶಕ್ತಿ. ಈ ಶಕ್ತಿಯನ್ನು ವೃದ್ಧಿಸಿಕೊಂಡಾಗ ಮಾತ್ರ ಸಮ್ಮೋಹಕನು ತನ್ನ ಪ್ರಯತ್ನಗಳಲ್ಲಿ ಯಶಸ್ವಿಯಾಗುವನು. ಅದು ಅವನಲ್ಲಿ ಒಂದು ನಿರ್ದಿಷ್ಟರೀತಿಯ ಪ್ರಾಣದ ಅರಿವನ್ನು ಮತ್ತು ವೃದ್ಧಿಸಿಕೊಂಡ ರೀತಿಯ ಆಕರ್ಷಣ ಶಕ್ತಿಯನ್ನು ಕೊಡುವುದು. ಅದೇ ಪ್ರಕಾರವಾಗಿ ಒಂದು ನಿರ್ದಿಷ್ಟ ರೀತಿಯ ಮಿಂಚು ಮತ್ತು ಆಕರ್ಷಣೆ ಅವನ ಕಣ್ಣುಗಳ ವಿಶಿಷ್ಟತೆಯಾಗುವವು. ಬೆರಳುಗಳು ಆಕರ್ಷಣ ಶಕ್ತಿಯನ್ನು ಹೊಂದಿದವವಾಗಿ ಯಾರನ್ನಾದರೂ ಕೇವಲ ಸ್ಪರ್ಶದಿಂದ ಸಮ್ಮೋಹನಗೊಳಿಸುವ ಶಕ್ತಿಯು ವೃದ್ಧಿಯಾಗುವುದು.

ಯೋಗ ನಿದ್ರೆ ಬಹಿರ್ಮನಸ್ಸನ್ನು ನಿದ್ರೆಗೆ ತರುವುದು. ಅಂತರ್ಮನಸ್ಸು ಚುರುಕಾಗಿಯೇ ಇರುವುದು. ಅವನು ತನ್ನ ಬುದ್ಧಿಶಕ್ತಿಯ ಅರಿವನ್ನು ಕಳೆದುಕೊಳ್ಳುವನು.

## ಪ್ರಾಣ ಶಕ್ತಿ

ಭಾರತೀಯ ತತ್ವಜ್ಞಾನದ ಪ್ರಕಾರ ಪ್ರಾಣಶಕ್ತಿಯು ಪ್ರಾಪಂಚಿಕ. ಪ್ರತಿಯೊಂದು ಸಜೀವಗಳು ಉಸಿರಾಟದ ಮೂಲಕ ಅದನ್ನು ಪಡೆಯುತ್ತವೆ. ವಾಸ್ತವವಾಗಿ ಅದು ವಾಯು, ಸೂರ್ಯಬೆಳಕು, ಪೃಥ್ವಿ, ಆಕಾಶ ಮತ್ತು ಮುಂತಾದವುಗಳಿಂದ ರೂಪಗೊಳ್ಳುತ್ತದೆ. ವ್ಯಕ್ತಿಯು ಇದರ ಬಲಕ್ಕೆ ಆಕರ್ಷಿಸಲ್ಪಡುತ್ತಾನೆ. ಈ ಶಕ್ತಿಯ ಚಲಾವಣೆಯಿಂದ ಒಬ್ಬ ವ್ಯಕ್ತಿಯ ಆರೋಗ್ಯವು ಒಗ್ಗೂಡಿ ಸಮತೋಲನದಲ್ಲಿರುತ್ತದೆ.

ಭಾರತೀಯ ಯೋಗದ ಅಧ್ಯಯನಗಳ ಪ್ರಕಾರ ಮನುಷ್ಯನ ದೇಹದಲ್ಲಿ ಎಂಟು ಕೇಂದ್ರಗಳು ಅಥವಾ ಚಕ್ರಗಳಿವೆ. ಕುಂಡಲಿನಿ ಎಂದು ಗುರುತಿಸಲಾದ ಶಕ್ತಿಯು ನದಿ ಎಂದು ಕರೆದಂತಹ ಆತ್ಮಕ ಮಾರ್ಗಗಳ ಮೂಲಕ ಹರಿಯುವುದು. ಈ ನದಿಯೇ ಈ ಎಲ್ಲಾ ಕೇಂದ್ರಗಳನ್ನು ಜೋಡಿಸುವುದು. ಈ ಚಕ್ರಗಳೆಂದರೆ: *ಮೂಲಾಧಾರ, ಸ್ವಾಧಿಷ್ಠಾನ, ಸೂರ್ಯ, ಅನಹದ್, ವಿಶುಧ, ಅಗ್ನಿ, ಸಹಸ್ರಾರ* ಮತ್ತು *ಬ್ರಹ್ಮರಂಧ್ರ.*

ಈ ಪ್ರಾಣಶಕ್ತಿಯೇ ಈ ಎಂಟು ಕೇಂದ್ರಗಳ ಮೇಲೆ ಪ್ರಭಾವಬೀರಿ ಸಂರಕ್ಷಿಸುತ್ತದೆ.

ಈ ಮೊದಲೇ ವಿಮರ್ಶಿಸಿದಂತೆ ಓರ್ವನು ತನ್ನ ಜೀವನವು ಚೇತನಯುಕ್ತವಾಗಿರಲು ಪ್ರತಿಕ್ಷಣವೂ ಶಕ್ತಿಯನ್ನು ಗ್ರಹಿಸಿಕೊಳ್ಳುತ್ತಾನೆ. ಓರ್ವನು ಅದನ್ನು ವ್ಯಯಿಸಿದರೂ ಇನ್ನೂ ಅವಶ್ಯಕವಾಗಿರುತ್ತದೆ. ಆದ್ದರಿಂದ ಅದನ್ನು ಒಂದು ಸ್ಥಳದಲ್ಲಿ ಶೇಖರಿಸಿ ಬೇರೆಯವರಿಗೆ ಆಜ್ಞೆಗಳ ಮೂಲಕ ಕೊಟ್ಟಲ್ಲಿ ಓರ್ವನು ಬಯಸಿದಂತಹ ಇಚ್ಛೆಗಳು ಖಚಿತವಾಗಿ ನೆರವೇರುವವು. ಶಕ್ತಿಯನ್ನು ಒಂದು ಕ್ಷಣದಲ್ಲಿ ಕೇಂದ್ರೀಕರಿಸಿ ಬೇರೆಯವರಿಗೆ ಕೊಡಲು ಉಪಯೋಗಿಸಿದರೆ ಅದಕ್ಕೆ ಇಚ್ಛಾಶಕ್ತಿಯೆಂದು ಕರೆಯುವರು. ಈ ವಿಧಾನವು ಬಾಹ್ಯಗೋಳದ ಮಸೂರ(Convex lens) ದಲ್ಲಿ ಸೂರ್ಯಕಿರಣಗಳನ್ನು ತೆಗೆದುಕೊಂಡು ಅದನ್ನು ಒಂದು ಕಾಗದದ ತುಂಡಿನ ಮೇಲೆ ಸೌರತಾಪವನ್ನು ಸಂಪೂರ್ಣ ಪ್ರಮಾಣದಲ್ಲಿ ತೆರೆದಿಡುವುದು.

ಪುರಾತನ ಭಾರತೀಯ ಲೇಖನವು ಈ ತರಹದ ಉದಾಹರಣೆಗಳಿಂದ ತುಂಬಿಕೊಂಡಿವೆ. ಉದಾಹರಣೆಗೆ, ಪ್ರಖ್ಯಾತ ಋಷಿಯಾದ ಅಗಸ್ತ್ಯ ಒಮ್ಮೆಲೇ ಸಂಪೂರ್ಣ ಸಮುದ್ರವನ್ನು ಕುಡಿದಿದ್ದನು. ದೂರ್ವಾಸ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳಲು ಸಾಗರರಾಜನ 60000 ಮಕ್ಕಳನ್ನು ಒಮ್ಮೆಲೇ ಸುಟ್ಟುಹಾಕಿದ್ದನು. ಈ ಉದಾಹರಣೆಗಳು ಊಹೆಯ ಕಟ್ಟುಕತೆಗಳಲ್ಲ. ಅದು ಈ ಧ್ಯಾನಸ್ಥರು ತಮ್ಮ ದೇಹಗಳಲ್ಲಿ ಶೇಖರಿಸುತ್ತಿದ್ದ ಹೆಚ್ಚು ಕೇಂದ್ರೀಕೃತವಾದ ಪ್ರಾಣಶಕ್ತಿಯು.

ಇಚ್ಛಾಶಕ್ತಿಯನ್ನು ಸಹ ಪ್ರಾಣಶಕ್ತಿಯನ್ನು ನಿಯಂತ್ರಿಸಿದ ಹಾಗೆ ನಿಯಂತ್ರಿಸಬಹುದು.

ನಾವು ಪ್ರಾಣಶಕ್ತಿಯ ಮೇಲೆ ಹತೋಟಿಯನ್ನು ಪಡೆದುಕೊಳ್ಳಲು ಪ್ರಾಣಾಯಾಮವನ್ನು ಸಾಧಿಸುವ ಅವಶ್ಯಕತೆ ಇರುತ್ತದೆ. ಏಕೆಂದರೆ ಅದು ಮನಸ್ಸಿನ ಯೋಚನೆಗಳು ಏಕಾಗ್ರತೆಯನ್ನು ನಿಶ್ಚಿತವಾಗಿ ಕೊಡುತ್ತದೆ. ಈ ಏಕಾಗ್ರತೆಯ ಸದ್ಗುಣದಿಂದ ಭೂತಕಾಲ ಮತ್ತು ಭವಿಷ್ಯ ಕಾಲಗಳು ಬಹಿರಂಗವಾಗುವವು.

ಈ ತರಹದ ಏಕಾಗ್ರತೆಯನ್ನು ಈ ದಿನದ ಗಲಾಟೆಯುಕ್ತ ಜಗತ್ತಿನಲ್ಲಿ ಸಾಧಿಸುವುದು ಸಾಧ್ಯವಾಗದಿದ್ದರೂ, ಓರ್ವನು ಹೇಗಾದರೂ ಏಕಾಂತ ಸ್ಥಳದಲ್ಲಿ ಅಂದರೆ ನದೀದಂಡೆಯಲ್ಲಿ ಅಥವಾ ದೂರದ ಗುಡ್ಡ ಗುಹೆಯಲ್ಲಿ ಪ್ರಾಣಾಯಾಮವನ್ನು ಅಭ್ಯಸಿಸಬಹುದು.

## ಪ್ರಾಣಾಯಾಮ:

ಈ ಮೊದಲೇ ವಿಮರ್ಷಿಸಿದ ಹಾಗೆ ಪ್ರಾಣಾಯಾಮವು ಯೋಚನೆಗಳ ಮೇಲೆ ಸಂಪೂರ್ಣ ಹತೋಟಿಯನ್ನು ಸಾಧಿಸುವುದು. ಅದು ಕೇವಲ ರೇಚಕ,ಪೂರಕಗಳ ಓರ್ವನ ಉಸಿರಾಟವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಲ್ಲ. ಅದು ಇನ್ನೊಂದು ಕಡೆ ಓರ್ವನ ಪ್ರಾಣಶಕ್ತಿಯ ಮೇಲೆ ಸಂಪೂರ್ಣವಾದ ಹತೋಟಿಯನ್ನು ಸ್ಥಾಪಿಸಲು ಸಹಾಯಕವಾಗುವ ಒಂದು ಶಿಸ್ತು.

ಸ್ವಾಮಿ ವಿವೇಕಾನಂದರು ತಮ್ಮ ರಾಜಯೋಗದಲ್ಲಿ—ಈ ಸುವ್ಯವಸ್ಥಿತ ವಿಶ್ವವು ಎರಡು ಮೂಲ ವಸ್ತುಗಳಿಂದ ಮಾಡಲಾಗಿದೆ ಅವು ಪ್ರಾಣ ಮತ್ತು ಆಕಾಶ (ಇಥರ್) ಎಂದು ವಿಮರ್ಶಿಸಿದ್ದಾರೆ. ಈ ಎರಡು ಮೂಲವಸ್ತುಗಳ ಸಮರಸವಾದ ಕೂಡುವಿಕೆಯಿಂದ ಸೃಷ್ಠಿಯು ಸಾಧ್ಯವಾಗಿದೆ.

ಎಲ್ಲಾ ಸ್ಪರ್ಷವೇದ್ಯ ವಸ್ತುಗಳು ಆಕಾಶದಿಂದ ಹುಟ್ಟಿದ್ದಾವೆ. ಇದರಿಂದಲೇ ಸೂರ್ಯ ಮತ್ತು ಚಂದ್ರವು ಅವುಗಳ ಆಕೃತಿಯನ್ನು ಪಡೆದುಕೊಂಡವು. ಮಾನವನ ದೇಹದ ಅಸ್ತಿತ್ವವು ಈ ಆಕಾಶದ್ರವ್ಯ ಮೂಲಕವೇ ಬಂದಿದುದು. ಪ್ರಪಂಚದ ಎಲ್ಲಾ ಚಲಿಸುವ ಮತ್ತು ಚುರುಕಾಗಿರುವ ವಸ್ತುಗಳ ಅಸ್ತಿತ್ವವು ಈ ಆಕಾಶದ್ರವ್ಯದಿಂದಲೇ.

ಈ ಆಕಾಶ ದ್ರವ್ಯವು ಅತಿಸೂಕ್ಷ್ಮವಿದ್ದು ಯಾರಿಗಾದರೂ ನೋಡಲು ಕಷ್ಟಕರವಾಗಿದ್ದರೂ ಪ್ರಾಣಶಕ್ತಿಯ ಮೇಲೆ ಹತೋಟಿಯನ್ನು ಸಾಧಿಸಿದಂತಹ ಯೋಗಿ ಅಥವಾ ಸಾಧಕನು ಖಚಿತವಾಗಿ ನೋಡಬಲ್ಲನು.

ಈ ಆಕಾಶದ್ರವ್ಯದಿಂದ ಮಾತ್ರ ಸೃಷ್ಠಿಯು ಸಾಧ್ಯವಾಯಿತು. ಹಠಾತ್ತಾಗಿ ಭೂಮಿಯು ಜಲಪ್ರಳಯದ ಹಿಂದೆ ಹೋದಾಗ ಓರ್ವನು ನೋಡುವುದು ಈ ದ್ರವ್ಯ ಆಕಾಶಕ್ಕೆ. ಮನುಷ್ಯನ ಪ್ರಾಣ ಮತ್ತು ಈ ಆಕೃತಿ ಈ ದ್ರವ್ಯ ಗುಣದಿಂದಲೇ ಬರುತ್ತದೆ. ಈ ಆಕಾಶದ್ರವ್ಯವು ಎಲ್ಲೆಡೆಯೂ ಪಸರಿಸಿಕೊಂಡಿದೆ ಹಾಗೆಯೇ ಪ್ರಾಣ ಶಕ್ತಿಯು.

ಮನುಷ್ಯನು 'ಪ್ರಾಣಶಕ್ತಿ'ಯುತನಾಗಿರುವುದರಿಂದಲೇ ಸೃಷ್ಠಿಯು ಸಾಧ್ಯವಾಯಿತು. ಪ್ರಾಣಶಕ್ತಿಯು ಆಕಾಶದಲ್ಲಿ ಹಿಂದಕ್ಕೆ ಹೋದಾಗ ಮನುಷ್ಯನೂ ಸಹ ಹೋಗುತ್ತಾನೆ. ಹೀಗೆ ಪ್ರಾಣಶಕ್ತಿ ಮತ್ತು ಆಕಾಶದ್ರವ್ಯಗಳು ಒಂದಕ್ಕೊಂದು ಅಂತರ್ಸಂಬಂಧಿತವಾಗಿವೆ. ಆಕಾಶದ್ರವ್ಯವು ಪ್ರಾಣದಿಂದ ಸೃಷ್ಠಿಯಾಗಿದೆ ಮತ್ತು ಈ ಆಕಾಶದ್ರವ್ಯವು ಪ್ರಾಣದ ಸಾವು ಅಥವಾ ಮರಣದಿಂದ ತನ್ನ ಪೂರ್ಣತೆಯ ಆಕಾರವನ್ನು ಹೊಂದುತ್ತದೆ. ಈ ಆಕಾಶ ದ್ರವ್ಯದ ಮೂಲಕವೇ ಮನುಷ್ಯನು ಮತ್ತೆ ತನಗೆ ಶಕ್ತಿ, ಯೋಚನೆ, ಜೀವ, ಮುಂತಾದವುಗಳ ನಿಶ್ಚಯಗೊಳಿಸುವಂತಹ ಪ್ರಾಣಶಕ್ತಿಯಿಂದ ಪಡೆಯುತ್ತಾನೆ.

ಆದ್ದರಿಂದ ಭಾರತೀಯ ತತ್ವಜ್ಞಾನವು ಮನುಷ್ಯನ ಪ್ರತಿ ನಡವಳಿಕೆಯು ಈ ಪ್ರಾಣಶಕ್ತಿಯಿಂದ ನಿಯಂತ್ರಿತವಾಗಿದೆ ಎಂದು ಮತ್ತು ಅದು ಆಕಾಶದ್ರವ್ಯದ ಪ್ರಾಣಶಕ್ತಿಯನ್ನು ಹೀರಿಕೊಳ್ಳುವುದು 'ಪ್ರಾಣಾಯಾಮ' ವೆಂದು ಅಷ್ಟೊಂದು ಸ್ಪಷ್ಟವಾಗಿ ಹೇಳಿದೆ.

ಸಮ್ಮೋಹಕನು ಪ್ರಾಣಾಯಾಮದ ನಡವಳಿಕೆಗಳಲೆಲ್ಲಾ ನಿಷ್ಣಾತನಾಗಿರಬೇಕೆನ್ನುವ ಅವಶ್ಯಕತೆಯೇ ಇರುವುದಿಲ್ಲ. ಹೇಗಾದರೂ, ತಾನು ಸಮ್ಮೋಹನದ ಸೂಕ್ಷ್ಮತೆಗಳನ್ನು ತಿಳಿದುಕೊಳ್ಳಬೇಕಾದರೆ ಅವುಗಳ ಎಲ್ಲಾ ಪ್ರಾಯೋಗಿಕ ನೋಟಗಳನ್ನು ತಿಳಿದುಕೊಳ್ಳುವ ಅವಶ್ಯಕತೆ ಇರುತ್ತದೆ. ಒಂದು ಉಲ್ಲಾಸಕರವಾದ ಮತ್ತು ಅಕುಲುಷಿತವಾದ ಏಕಾಂತತೆ ಇರುವ ಸ್ಥಳ ಸಹ ಪ್ರಾಣಾಯಾಮಕ್ಕೆ ಅವಶ್ಯಕವಿರುತ್ತದೆ. ಆಳವಾದ ಮಾನಸಿಕ ಏಕಾಗ್ರತೆಯಿಂದ ಅಭ್ಯಸಿಸಿದಲ್ಲಿ, ಪ್ರಾಣಾಯಾಮದಿಂದ ಎಲ್ಲಾ ಸಾಧನೆಗಳಲ್ಲಿ ಪೂರ್ಣತೆಯನ್ನು ಸಾಧಿಸುವಂತಹ ಮತ್ತು ಸಂಪೂರ್ಣ ಮನುಷ್ಯ ಅಥವಾ

ಯೋಗಿರಾಜನೆಂದು ಒಪ್ಪಿಕೊಳ್ಳುವಂತಹ ಆಧ್ಯಾತ್ಮಿಕ ಶಕ್ತಿಯನ್ನು ಖಚಿತವಾಗಿ ವೃದ್ಧಿಸಿಕೊಳ್ಳಬಹುದು.

ಸಾಧಕನಿಗೆ ಸಾಧಾರಣ ಪ್ರಾಣಾಯಾಮಕ್ಕೆ ಈ ಕೆಳಗಿನ ಕೃತ್ಯಗಳು ಗೊತ್ತಿರಬೇಕು.

## ಪ್ರಾಣಾಯಾಮ_ಕೃತ್ಯ 1

ನಿಮ್ಮ ಬೆನ್ನಿನ ಮೇಲೆ ಸಮವಾದ ಮೇಲ್ಮೈಮೇಲೆ ಮಲಗಿಕೊಳ್ಳಿ. ನಿಮ್ಮ ಕಾಲುಗಳನ್ನು ನೇರವಾಗಿ ಚಾಚಿ ನಿಮ್ಮ ಕೈಗಳನ್ನು ನಿಮ್ಮ ದೇಹಕ್ಕೆ ಸಮಾಂತರದಲ್ಲಿ ಇಡಿರಿ. ನಿಮ್ಮ ಕಣ್ಣುಗಳನ್ನು ಮುಚ್ಚಿರಿ. ಹಾಗೆಯೇ ಮಲಗಿಕೊಳ್ಳಿ, ನಿಮ್ಮ ದೇಹದ ಯಾವುದೇ ಭಾಗವನ್ನು ಚಲಿಸಬೇಡಿರಿ.

ನಿಮ್ಮ ದೇಹದ ಯಾವುದೇ ಭಾಗವು ಚಲಿಸುತ್ತಿಲ್ಲವೆಂಬುದನ್ನು ನಿಶ್ಚಯಮಾಡಿಕೊಳ್ಳಿ. ಯಾವುದೇ ಯೋಚನೆಯು ನಿಮ್ಮ ಮನಸ್ಸಿಗೆ ತೊಂದರೆಕೊಡುತ್ತಿಲ್ಲ ಎಂಬುದನ್ನು ನೋಡಿಕೊಳ್ಳಿ. ಪ್ರತಿಯೊಂದು ಅಂಗವೂ ಸಂಪೂರ್ಣವಾಗಿ ವಿಶ್ರಮಿಸುವ ಹಾಗೆ ದೇಹವನ್ನು ಸಡಿಲವಾಗಲು ಬಿಡಿ.



*ಪ್ರಾಣಾಯಾಮ–ಕೃತ್ಯ 1*

ನಿಧಾನವಾಗಿ ನಿಮ್ಮ ಎಲ್ಲಾ ಅಂಗಗಳು ತಲೆಯಿಂದ ಪಾದದವರೆಗೆ ಸಂಪೂರ್ಣ ಆರಾಮದಹಾಗೆ ಅನುಭವಿಸಿ. ಮೊದಲಿಗೆ ನಿಮ್ಮ ತಲೆಯನ್ನು ವಿಚಾರಮುಕ್ತ ವಾಗಿಸಿ. ನಂತರ ಕಣ್ಣುಗಳು, ಕತ್ತು, ಮನಸ್ಸೂ ಸಹ ವಿಶ್ರಮಿಸಿ ವಿಚಾರಮುಕ್ತವಾಗಲಿ. ವಿಚಾರಗಳಿಗೆ, ಯೋಚನೆಗಳಿಗೆ, ಭಾವನೆಗಳಿಗೆ ನಿಮ್ಮ ಮೆದುಳಿನಲ್ಲಿ ಆಶ್ರಯ ಕೊಡಬೇಡಿ.

ಪ್ರಾರಂಭದಲ್ಲಿ ನಿಮ್ಮ ಮೆದುಳನ್ನು ವಿಚಾರಗಳಿಂದ ಮುಕ್ತವಾಗಿಸಲು ಬಹಳ ಕಷ್ಟವೆನಿಸುವುದು. ಹೇಗಾದರೂ, ನಿಯಮಿತವಾಗಿ ಅಭ್ಯಸಿಸಿ. ಸ್ವಲ್ಪ ಸಮಯದ ನಂತರ ನಿಮಗೆ ನಿಮ್ಮ ಮೆದುಳನ್ನು ವಿಚಾರಗಳಿಂದ ಮತ್ತು ಯೋಚನೆಗಳಿಂದ ಮುಕ್ತವಾಗಿಸಲಾಗುವುದು. ನೀವು ನಿಮ್ಮ ಮೆದುಳನ್ನು ಸಂಪೂರ್ಣವಾಗಿ ನಿಯಂತ್ರಿಸುವಿರಿ.

ಹೇಗೇಯಾದರೂ ಮೆದುಳನ್ನು ಇನ್ನೂ ಯಾವುದೋ ಯೋಚನೆ ಆಕ್ರಮಿಸುತ್ತಿದೆ ಎಂದು ನೋಡುವಿರಿ. ನಿಧಾನವಾಗಿ ಅದೂ ದೂರಹೋಗುವುದು. ಪ್ರಾರಂಭದಲ್ಲಿ ನೀವು ಕೇವಲ ಒಂದು ನಿಮಿಷ ಯೋಚನೆ

ರಹಿತರಾಗುವಿರಿ. ಹೇಗಾದರೂ ನೀವು ನಿಮ್ಮ ಅಭ್ಯಾಸವನ್ನು ಮುಂದುವರಿಸಿದಂತೆ, ನಿಮ್ಮ ಯೋಚನ ರಹಿತರಾಗುವ ಸಮಯವೂ ಹೆಚ್ಚಾಗುತ್ತದೆ. ಈಗ ನೀವು ಈ ಹಂತದಲ್ಲಿ ಅಭ್ಯಾಸವನ್ನು ಮುಂದುವರಿಸಿ ಈ ಅವಸ್ಥೆಯನ್ನು ಹದಿನೈದು ನಿಮಿಷಗಳಿಗೆ ತನ್ನಿ. ನಿಧಾನವಾಗಿ ಮತ್ತು ಸ್ಥಿರವಾಗಿ ಈ ಸಮಯವನ್ನು ಕೆಳಕ್ಕೆ ತನ್ನಿ ಅಂದರೆ ಒಂದು ನಿಮಿಷ.

ಮನಸ್ಸನ್ನು ಸಂಪೂರ್ಣವಾಗಿ ಎಲ್ಲಾ ಯೋಚನೆಗಳಿಂದ ಮುಕ್ತ ಮಾಡಿದಾಗ ಮತ್ತು ನಿಮ್ಮ ದೇಹವು ಕೃತ್ಯರಹಿತವಾಗಿದ್ದು ನಿಜವಾದ ನಿಷ್ಕ್ರಿಯತೆಗೆ ಇಳಿಯುತ್ತದೆ, ಈ ತರಹದ ಅವಸ್ಥೆಯನ್ನು ಶವಾಧನವನ್ನುವರು, ಜೀವನದಲ್ಲಿ ಸಾವಿಗೆ ಹೋಲುವುದು. ಅದೇ ಸಮಯದಲ್ಲಿ ಒಂದು ವಿಶಿಷ್ಟರೀತಿಯ ಶಕ್ತಿಯು ದೇಹದಲ್ಲೆಲ್ಲಾ ಸಂಚರಿಸುವುದು.

## ಪ್ರಾಣಾಯಾಮ_ಕೃತ್ಯ 2

ಯಾರೊಬ್ಬನಾಗಲೀ ಮೊದಲಿನ ಅಭ್ಯಾಸದ ನಂತರವೇ ಈ ಅಭ್ಯಾಸವನ್ನು ಅವಲಂಭಿಸಬೇಕು.



*ಪ್ರಾಣಾಯಾಮಕೃತ್ಯ—2*

ನಿಮ್ಮ ಬೆನ್ನಿನ ಮೇಲೆ ಮಲಗಿ ಕಾಲುಗಳನ್ನು ಚಾಚಿ ಮತ್ತು ಕೈಗಳನ್ನು ಸಡಿಲಿಸಿ ಮತ್ತು ಮನಸ್ಸನ್ನು ಸಂಪೂರ್ಣ ವಿಚಾರಮುಕ್ತತೆಗೆ ಇಳಿಸಿ. ತುಟಿಗಳನ್ನು ಸ್ಥಿರವಾಗಿ ಮುಚ್ಚಿ. ಉಸಿರನ್ನು ಆಳವಾಗಿ, ಎರಡೂ ಹೊಳ್ಳೆಗಳ ಮೂಲಕ ತೆಗೆದುಕೊಳ್ಳಿ. ಈಗ ನಿಮ್ಮ ತುಟಿಗಳನ್ನು ವೃತ್ತಾಕಾರದಲ್ಲಿ ತಂದು ಒಳಗಿರುವ ಗಾಳಿಯನ್ನು ನಿಧಾನವಾಗಿ ಬಿಡಿರಿ. ನೀವು ಹಾಗೆ ಮಾಡುವಾಗ ಸಿಳ್ಳೆಯ ಶಬ್ದವಾಗುವುದನ್ನು ಕೇಳುವಿರಿ.

ಓರ್ವನು ಓರ್ವನ ಹೊಳ್ಳೆಯಿಂದಲೇ ಉಸಿರನ್ನು ತೆಗೆದುಕೊಳ್ಳಬೇಕೆಂಬುದನ್ನು ನಿಶ್ಚಯ ಮಾಡಿಕೊಳ್ಳಬೇಕು. ಆ ಸಮಯದಲ್ಲಿ ಬಾಯಿಯು ಮುಚ್ಚಿಕೊಂಡಿರಬೇಕು. ಓರ್ವನು ರೇಚಕ ಮಾಡುವಾಗ ಮೂಗು ಪ್ರತಿಬಂಧಕವಾಗಿದ್ದು ಸಂಪೂರ್ಣ ಗಾಳಿಯನ್ನು ಬಾಯಿಯಿಂದ ಬಿಡಬೇಕು.

ಪ್ರಾರಂಭದಲ್ಲಿ ಓರ್ವನು ಈ ವ್ಯಾಯಾಮವನ್ನು 2 ರಿಂದ 3 ನಿಮಿಷದವರೆಗೆ ಅಭ್ಯಸಿಸಬೇಕು. ಸ್ಥಿರವಾಗಿ ಓರ್ವನು ಅಭ್ಯಾಸವನ್ನು ಮುಂದುವರಿಸಬೇಕು. ಈಗ ಓರ್ವನು 15 ನಿಮಿಷಗಳವರೆಗೆ ಈ ವ್ಯಾಯಾಮವನ್ನು ಅಭ್ಯಸಿಸಬಹುದು. ತೊಡರಿಸುವುದೆಂದರೆ ಓರ್ವನು ಗಾಳಿಯನ್ನು ಆಳವಾಗಿ ಪೂರಕಮಾಡಿ ಶ್ವಾಸಕೋಶಗಳಲ್ಲಿ ತುಂಬಿಸಬೇಕು, ಗಾಳಿಯನ್ನು ಶ್ವಾಸಕೋಶಗಳಲ್ಲಿ 3 ರಿಂದ 4 ನಿಮಿಷಗಳವರೆಗೆ ಇರಲು ಬಿಟ್ಟು, ನಂತರ ನಿಧಾನವಾಗಿ ಹೊರಕ್ಕೆ ಬಿಡುಗಡೆ ಮಾಡಬೇಕು.

ಓರ್ವನು ಗಮನಿಸಬೇಕಾದ ಸತ್ಯವೆಂದರೆ ಪ್ರಾಣಾಯಾಮವೆಂದರೆ ಓರ್ವನ ಗಾಳಿಯನ್ನು ಒಳಗೆ ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ. ಸಾವಕಾಶವಾಗಿ ಸಾಧಕನು ಬಹಳ ದಿನದ ಮತ್ತು ಸ್ಥಿರವಾದ ಅಭ್ಯಾಸದ ನಂತರ ಹಿಡಿದಿಟ್ಟುಕೊಳ್ಳುವ ಸಮಯವನ್ನು ಹೆಚ್ಚಿಸಿಕೊಳ್ಳಬೇಕು. ಯಾವುದೇ ವಿಷಯಕ್ಕೆ ಅವನು ತಾಳ್ಮೆಗೆಡಬಾರದು, ಈ ಎಣಿಕೆಯಲ್ಲಿ ಯಾವುದೇ ಅವಸರವು ಪರಿಪೂರ್ಣವಾಗಿ ತೀವ್ರವಾದ ಅಪಾಯ.

## ಪ್ರಾಣಾಯಾಮ_ಕೃತ್ಯ 3



ಮೊದಲು ಸಾಧಕನು ಮೊದಲನೆಯ ಮತ್ತು ಎರಡನೆಯ ಕೃತ್ಯಗಳನ್ನು ಯಶಸ್ವಿಯಾಗಿ ಅಭ್ಯಸಿಸಬೇಕು. ಅವನು ವಿಚಾರಮುಕ್ತ ಮನಸ್ಸಿನ ವಾಸ್ತವಿಕತೆಯನ್ನು ನೆರವೇರಿಸಿರಬೇಕು. ಅವನು ಸ್ವಲ್ಪಹೊತ್ತಿನವರೆಗೆ ಉಸಿರನ್ನು ಹಿಡಿದಿಟ್ಟುಕೊಳ್ಳುವ ಅದ್ವಿತೀಯ ಸಾಮರ್ಥ್ಯವನ್ನು ಸಹ ವೃದ್ಧಿಸಿಕೊಂಡಿರಬೇಕು. ಅವನು ಉಸಿರನ್ನು ಹಿಡಿದಿಟ್ಟುಕೊಂಡಾಗ, ತಾನು ಹಿಡಿದಿಟ್ಟುಕೊಂಡ ಪ್ರಾಣಶಕ್ತಿಯು ತನ್ನ ತಲೆಯಲ್ಲಿ, ಹೆಗಲಿನಲ್ಲಿ, ಕಣ್ಣುಗಳಲ್ಲಿ ಚಲಾವಣೆಯಾಗುತ್ತಿದೆ ಎಂದು ಆಶಿಸಬೇಕು. ಪ್ರತಿಯೊಂದು ಅಂಗದಲ್ಲಿ ಮತ್ತು ತನ್ನ ದೇಹದ ಪ್ರತಿ ರಂಧ್ರದಲ್ಲಿ ಪ್ರಾಣಶಕ್ತಿಯನ್ನು ಹಾಜರು ಪಡಿಸಿದ ಹಾಗೆ ಅನುಭವಿಸಬೇಕು.

ಈಗ ಪ್ರಾಣಶಕ್ತಿಯು ಕೊಟ್ಟಂತಹ ಅಂಗದಲ್ಲಿ ಚಲಾವಣೆಯಾಗಿದೆ ಎಂದು ವಿಶ್ವಾಸದಲ್ಲಿದ್ದಾಗ, ಅದನ್ನು ಇನ್ನೊಂದು ಅಂಗಕ್ಕೆ ವಿಸ್ತರಿಸಲು ಉದ್ದೇಶಿಸಬೇಕು. ಪ್ರಾರಂಭದಲ್ಲಿ ಉಸಿರಾಟವನ್ನು ನಿಗ್ರಹಿಸಿದ್ದರಿಂದ, ಓರ್ವನಿಗೆ ಪ್ರಾಣಶಕ್ತಿಯ ಚಲಾವಣೆಯನ್ನು ಕೆಲವೇ ಅಂಗಗಳಿಗೆ ಅಳ್ವಾಪಿಸಲಾಗುವುದು.

ಆಮೇಲೆ ಅಭ್ಯಾಸವು ಬಲಗೊಳ್ಳುತ್ತಿದ್ದ ಹಾಗೆ ಓರ್ವನಿಗೆ ಅದನ್ನು ಹೆಚ್ಚಿನ ಅಂಗಗಳಲ್ಲಿ ಚಲಾವಣೆ ಮಾಡಲಾಗುತ್ತದೆ. ಆದ್ದರಿಂದ ಸಾಧಕನು ತನ್ನ ಅಭ್ಯಾಸವನ್ನು ಹೆಚ್ಚಿಸಿ ಯಾವರೀತಿಯ ಮಟ್ಟಕ್ಕೆ ಬರಬೇಕೆಂದರೆ ಪ್ರಾಣಶಕ್ತಿಯು ಸಂಪೂರ್ಣ ದೇಹದಲ್ಲಿ ಒಮ್ಮೆಲೇ ಬಂದು ಬಿಡಬೇಕು.

ಒಂದು ಅಂಗದಲ್ಲಿ ಹೆಚ್ಚಿನ ಪ್ರಾಣಶಕ್ತಿಯು ಚಲಾವಣೆಯಾದಾಗ ಸಾಧಕನು ತನ್ನಷ್ಟಕ್ಕೆ ತಾನೇ ಒಂದು ತರಹದ ಸಂವೇದನೆಯನ್ನು ಅನುಭವಿಸುವನು. ಇದು ಆ ಅಂಗವು ಈ ಶಕ್ತಿಯ ಸಂಪೂರ್ಣ ಪರಿಣಾಮಕ್ಕೆ ಒಳಗಾಗಿರುವ ಚಿಹ್ನೆಯಾಗಿದೆ.

ವಾಸ್ತವದಲ್ಲಿ ಈ ಸಂವೇದನೆಯು ಪ್ರಾಣಶಕ್ತಿಯ ಒಳ್ಳೆಯ ವೇಗದ ಚಲಾವಣೆಯಲ್ಲದೆ ಬೇರೇನೂ ಅಲ್ಲ.

**ಶಕ್ತಿ ಚಕ್ರ:**

ಓರ್ವನು ಪ್ರಾಣಾಯಾಮದಿಂದ ಪಡೆದುಕೊಂಡಂತಹ ಪ್ರಾಣಶಕ್ತಿಯಿಂದ ತುಂಬಿದೆ ಎಂದು ಕಂಡುಕೊಂಡಾಗ ಮುಂದಿನ ಶಕ್ತಿ ಚಕ್ರದ ಅಭ್ಯಾಸಕ್ಕೆ ಮುನ್ನಡೆಯಬೇಕು.

ಶಕ್ತಿ ಚಕ್ರವು ಸಾಧಕನ ಕಣ್ಣುಗಳಲ್ಲಿ ಆಕರ್ಷಣಶಕ್ತಿಯನ್ನು ಉತ್ಪಾದಿಸುತ್ತದೆ ಎಂಬುದನ್ನು ಗಮನಿಸಬೇಕು. ಅಲ್ಲದೆ ಅದು ಅವನ ಏಕಾಗ್ರತೆಯನ್ನು ಹೆಚ್ಚಿಸಲು ನೆರವಾಗುವುದು.



*ಶಕ್ತಿ ಚಕ್ರ ಅಮೇರಿಕ ಪದ್ಧತಿ.*

ಒಳ್ಳೆಯ ಗಾಳಿ ಬೆಳಕು ಇರುವ ಏಕಾಂತ ಕೋಣೆಯೊಂದನ್ನು ಆಯ್ದುಕೊಳ್ಳಿರಿ. ಶಕ್ತಿಚಕ್ರದ ರೂಪರೇಖೆಯನ್ನು ತೆಗೆದು ಕೊಳ್ಳಿ. ಯು.ಎಸ್ .ನಲ್ಲಿ ಇದನ್ನು ಬೇರೆ ರೀತಿ ಎಳೆಯುತ್ತಾರೆ. ಗ್ರೀಸ್‌ನಲ್ಲಿ ಇನ್ನೂ ಬೇರೆ ರೀತಿಯಲ್ಲಿ. ಹೇಗಿದ್ದರೂ ಸಿಗುವಂತಹ ಶಕ್ತಿಯು ಹೆಚ್ಚುಕಡಿಮೆ ಒಂದೇಯಾಗಿದೆ.

ಶಕ್ತಿಚಕ್ರವನ್ನು ಕರಿಯ ಮಸಿಯಲ್ಲಿ ಬಿಳಿಯ ದಪ್ಪನೆಯ ಕಾಗದದ ಮೇಲೆ ಸ್ಫುಟವಾಗಿ ಬರೆಯಿರಿ. ಅದನ್ನು ನಿಮ್ಮ ಕಣ್ಣಿನ ಸಮನಾಗಿ ಗೋಡೆಯ ಮೇಲೆ ತಗಲಾಕಿ. ಈಗ ಒಂದು ದಪ್ಪನೆಯ ದಿಂಡಿನಮೇಲೆ ಕನಿಷ್ಠ ಎರಡು ಅಡಿ ದೂರದಲ್ಲಿ ರೂಪರೇಖೆಯ ಕಡೆಗೆ ಮುಖಮಾಡಿ ಕೂತುಕೊಳ್ಳಿ. ನಿಮ್ಮ ಕಣ್ಣುಗಳನ್ನು ಆ ರೂಪರೇಖೆಯ ಮೇಲೆ ಸ್ಥಿರಮಾಗಿಸಿ. ನೀವು ಈ ಅಭ್ಯಾಸವನ್ನು ಪ್ರಾರಂಭಿಸುವ ಮುನ್ನ ನೀವು ಆರೋಗ್ಯದ ಅನುಭವ ಪಡುತ್ತಿದ್ದೀರಿ, ದಣಿವಾಗಿಲ್ಲ ಅಥವಾ ಆತಂಕಗೊಂಡಿಲ್ಲ ಮತ್ತು ನೀವು ಹಸನ್ಮುಖರಾಗಿದ್ದೀರೆಂದು ಖಚಿತಪಡಿಸಿಕೊಳ್ಳಿ. ನೀವು ದಿಂಬಿನ ಮೇಲೆ ಕೂತುಕೊಂಡಿದ್ದಾಗ ನಿಮ್ಮ ಕೈಕಾಲುಗಳನ್ನು ಸರಳವಾಗಿ ಮತ್ತು ಆರಾಮವಾಗಿ ಚಾಚಿರಿ. ನೀವು ಬಹಳ ಹಗುರಾಗಿ ಸಮುದ್ರದ ಅಲೆಗಳ ಮೇಲೆ ತೇಲುತ್ತಿರುವ ಹಾಗೆ ಭಾವನೆಯನ್ನು ಬರಮಾಡಿಕೊಳ್ಳಿ. ದಯಮಾಡಿ ನಿಮ್ಮ ಮನಸ್ಸನ್ನು ಯಾವುದೇ ಯೋಚನೆಗಳು ಹೇಗಾದರೂ· ಆಕ್ರಮಿಸುತ್ತಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಿ. ನಿಮ್ಮ ಕಣ್ಣುಗಳನ್ನು ಸ್ಥಿರವಾಗಿಸಿ ರೂಪರೇಖೆಯ ಮೇಲೆ ದೃಢವಾಗಿ ದಿಟ್ಟಿಸಿ.

ಸಾಧಕನು ಈ ಅಭ್ಯಾಸವನ್ನು ಕಣ್ಣಿನ ರೆಪ್ಪೆಯನ್ನು ಮಿಟುಕಿಸದೆಯೇ ಮುಂದುವರಿಸಬೇಕು. ನೀವು ರೂಪರೇಖೆಯ ಮೇಲೆ ಹೆಚ್ಚು ದಿಟ್ಟಿಸಿದ ಹಾಗೆ ಹೆಚ್ಚು ಉತ್ತಮವು. ಅಭ್ಯಾಸದ ಸಮಯವನ್ನು ನಿಧಾನವಾಗಿ ಹೆಚ್ಚಿಸಬೇಕು. ಕಣ್ಣುಗಳಲ್ಲಿ ನೀರು ತುಂಬಲು ಪ್ರಾರಂಭಿಸಿದಾಗ ಅಭ್ಯಾಸವನ್ನು ಮುಂದೆ ಹಾಕುವುದು ಒಳ್ಳೆಯದು. ನೀವು ಅಭ್ಯಾಸವನ್ನು ಮುಂದುವರಿಸಿದ ಹಾಗೆ ನಿಮ್ಮ ಮನಸ್ಸಿನಲ್ಲಿ, ನಿಮ್ಮ ಕಣ್ಣುಗಳು ಶಕ್ತಿಯನ್ನು ಪಡೆದುಕೊಳ್ಳುತ್ತಿವೆ ಮತ್ತು ನಿಮ್ಮ ಮನಸ್ಸು ಯೋಚನೆರಹಿತವಾಗುತ್ತಿದೆ ಎನ್ನುವ ಭಾವನೆಯನ್ನು ತಂದುಕೊಳ್ಳಬೇಕು.



*ಶಕ್ತಿ ಚಕ್ರ—ಗ್ರೀಕರ ಪದ್ಧತಿ*

ಕೆಲವೇ ದಿನಗಳ ನಿಯಮಿತ ಅಭ್ಯಾಸದ ನಂತರ ಚಕ್ರವು ತನ್ನ ಸ್ಥಳದಿಂದ ದೂರ ಸರಿಯುತ್ತಿರುವ ಹಾಗೆ ಭಾಸವಾಗುವುದು. ಅದು ಬಲಕ್ಕೆ ಅಥವಾ ಎಡಕ್ಕೆ ಮೇಲಕ್ಕೆ ಅಥವಾ ಕೆಳಕ್ಕೆ ಸರಿಯುತ್ತಿರುವ ಹಾಗೆ ಅನ್ನಿಸುವುದು. ಚಕ್ರವು ತನ್ನ ಸ್ಥಳದಿಂದ ಆಚೆ ಈಚೆ ಸರಿಯುತ್ತಿದ್ದಾಗ ಸಾಧಕನು ತಾನು

ದಿಟ್ಟಿಸುವುದನ್ನು ಸ್ಥಿರವಾಗಿಸಬೇಕು, ಅದಕ್ಕೆ ಎಂತಹ ನೋಟವನ್ನು ಕೊಡಬೇಕೆಂದರೆ ಅದು ತನ್ನ ಸ್ಥಿರಸ್ಥಳಕ್ಕೆ ಹಿಂದಿರುಗಬೇಕು.

ಸ್ವಲ್ಪ ಸಮಯದ ನಂತರ ಸಾಧಕನು ಚಕ್ರದ ಮೇಲೆ ಕೆಲ ಸುಂದರವಾದ ಅಥವಾ ಭಯಂಕರವಾದ ಚಿತ್ರಗಳನ್ನು ಅಥವಾ ದೃಶ್ಯಗಳನ್ನು ನೋಡುತ್ತಾನೆ. ಅದು ನೀವು ಬೇಕಾದಂತಹ ಏಕಾಗ್ರತೆಯ ಸಾಧನೆ ಮತ್ತು ನೀವು ಹೋಗುತ್ತಿರುವ ಕಾರ್ಯದಲ್ಲಿ ಸರಿಯಾದ ಮಾರ್ಗದಲ್ಲಿದ್ದೀರಿ ಎನ್ನುವುದನ್ನು ಸೂಚಿಸುತ್ತದೆ.

ನೀವು ಅಭ್ಯಾಸವನ್ನು ಮುಂದುವರಿಸಿದ ಹಾಗೆ ಒಂದು ಚಕ್ರದ ಸ್ಥಳದಲ್ಲಿ ಎರಡು ಅಥವಾ ಮೂರು ಚಕ್ರಗಳನ್ನು ನೋಡಬಹುದು, ಇದು ಸಹ ನಿಮ್ಮ ಯಶಸ್ಸಿನ ಚಿಹ್ನೆಯಾಗಿದೆ. ನೀವು ಚಕ್ರದಲ್ಲಿ ಗುಡ್ಡಗಳನ್ನು, ನದಿಗಳನ್ನು, ಟ್ಯಾಂಕುಗಳನ್ನು ಮತ್ತು ಮರುಭೂಮಿಯನ್ನು ಸಹ ನೋಡಬಹುದು. ಅವು ನಿಮಗೆ ಪರಿಚಯದ್ದವೂ ಇರಬಹುದು. ಅವು ಪರಿಚಯ ಇಲ್ಲದೆಯೂ ಇರಬಹುದು. ಪರಿಚಯ ಇಲ್ಲದಿರುವವು, ಈಗಾಗಲೇ ಭೂಮಿಯ ಮೇಲಿದ್ದಾವೆ. ಬಹುಶಃ ನೀವು ಅವುಗಳನ್ನು ಕಂಡಿರಲಿಕ್ಕಿಲ್ಲ. ನೀವು ಸಂಪೂರ್ಣ ಬೆರಗಾಗುವ ಹಾಗೆ ನೀವು ಒಂದು ದಿನ ಅವನ್ನು ನೋಡಬಹುದು.

ನೀವು ಚಕ್ರದ ಮೇಲೆ ನೋಡಿದಂತಹ ದೃಷ್ಯಗಳನ್ನು ನಿಮ್ಮ ಭೂತಕಾಲದ ಭಾಗ ಅಥವಾ ಭವಿಷ್ಯದ ಭಾಗವಾಗಿದೆ ಅದನ್ನು ನೀವು ಭವಿಷ್ಯದ ನಿರ್ದಿಷ್ಟ ಕಾಲದಲ್ಲಿ ನೋಡುತ್ತೀರಿ.

ಅಂತಹ ದೃಷ್ಯಗಳು ನಿಮ್ಮ ಏಕಾಗ್ರತೆ ಶಕ್ತಿಯು ಹೆಚ್ಚಾಗುತ್ತಿದೆ ಎಂದು ಸೂಚಿಸುತ್ತವೆ. ಈಗ ನೀವು ಚಕ್ರದ ಮೇಲೆ ನೋಡಿದುದರ ಮೇಲೆ ಹತೋಟಿಯನ್ನು ಪಡೆಯಬೇಕು ಅಂದರೆ ನೀವು ಆರಿಸಿದಂತಹ ದೃಷ್ಯಗಳನ್ನೇ ನೋಡಲು ಪ್ರಯತ್ನಿಸಬೇಕು. ಉದಾ, ನೀವು ಒಂದು ದೂರದ ಸ್ಥಳದ ಮಲಗುವ ಕೋಣೆಯಲ್ಲಿ ಯಾರು ಕೂತುಕೊಂಡಿದ್ದಾರೆ ಅಥವಾ ನಿಮ್ಮ ಪತ್ನಿ ಅಥವಾ ತಾಯಿ ಆ ಕ್ಷಣದಲ್ಲಿ ಮನೆಯಲ್ಲಿ ಏನು ಮಾಡುತ್ತಿದ್ದಾರೆಂದು ನೋಡಲು ಬಯಸಬಹುದು. ಚಕ್ರದ ಮೇಲೆ ನಿಮ್ಮ ನಿಯಮಿತವಾದ ಅಭ್ಯಾಸದ ನಂತರ ಬಯಸಿದಂತಹ ದೃಷ್ಯವನ್ನು ನೋಡಲು ನಿಮಗೆ ಸಾಧ್ಯವಾಗಿರಬೇಕು. ಪ್ರಾಯಶಃ ನಿಮಗೆ ಅವರ ಧ್ವನಿಗಳೂ ಸಹ ಕೇಳಿಸಬೇಕು.

ಚಕ್ರದ ನಿಯಮಿತವಾದ ಅಭ್ಯಾಸವು ನಿಮ್ಮ ಕಣ್ಣುಗಳನ್ನು ಸಮ್ಮೋಹನಾ ಕಣ್ಣುಗಳಾಗಿ ಸಜ್ಜುಗೊಳಿಸುವವು. ಒಂದು ಕೇವಲ ದೃಢವಾದ ದೃಷ್ಟಿಯು ಬೇರೆಯಾವುದೇ ವ್ಯಕ್ತಿಯನ್ನು ನಿಮಗೆ ಸಂಪೂರ್ಣವಾಗಿ ಒಪ್ಪಿಸುವಹಾಗೆ ಮಾಡುವುದು. ಅವನ ಅಭಿಪ್ರಾಯದ ತತ್ವಜ್ಞಾನಕ್ಕೆ ವಿರೋಧವಾಗದಿದ್ದಲ್ಲಿ ನೀವು ಹೇಳಿದ ಕೆಲಸವನ್ನು ಅವನು ಮಾಡುವನು.

ನೀವು ನಿಮ್ಮ ಅಭ್ಯಾಸದಲ್ಲಿ ಎಷ್ಟರಮಟ್ಟಿಗೆ ಉತ್ತೀರ್ಣರಾಗಿರುವಿರಿ ಎಂದು ಪರೀಕ್ಷಿಸಿಕೊಳ್ಳಲು, ಈ ಕೆಳಗಿನ ಅಭ್ಯಾಸಗಳನ್ನು ಸಹ ತೆಗೆದುಕೊಳ್ಳುವುದು ಉತ್ತಮವು.

1. ನೀವು ನಡೆಯುತ್ತಿದ್ದೀರಿ, ನಿಮ್ಮ ಕಣ್ಣುಗಳನ್ನು ನಿಮ್ಮ ಮುಂದೆ ನಡೆಯುತ್ತಿರುವ ವ್ಯಕ್ತಿಯ ಕುತ್ತಿಗೆಯ ಮೇಲೆ ಸ್ಥಿರವಾಗಿಸಿ. ಈಗ ನೀವು ಆ ವ್ಯಕ್ತಿಯು ಹಿಂದಕ್ಕೆ ನಿಮ್ಮ ಕಡೆ ತಿರುಗಿನೋಡ ಬೇಕೆಂಬುದನ್ನು ಬಯಸಿ.

ಆ ವ್ಯಕ್ತಿಯು ನೀವು ಬಯಸಿದ ಹಾಗೆ ಹಿಂದಕ್ಕೆ ತಿರುಗಿನೋಡುವುದನ್ನು ಕಂಡು ನೀವು ಚಕಿತಗೊಳ್ಳುವಿರಿ.

2. ಒಂದು ವೇಳೆ ನೀವು ಒಂದು ಔತಣ ಅಥವಾ ಸಮ್ಮೇಳನದಲ್ಲಿ ಭಾಗವಹಿಸುವಿರಿ. ಒಬ್ಬ ವ್ಯಕ್ತಿ ಗಂಡಸು ಅಥವಾ ಹೆಂಗಸು ಎದುರಿನಲ್ಲಿ ಅವನ ಅಥವಾ ಅವಳ ಕುತ್ತಿಗೆ ಕಾಣುವ ಹಾಗೆ

ಕೂತುಕೊಂಡಿದ್ದಾರೆ. ಈಗ ನೀವು ಅವನ ಅಥವಾ ಅವಳ ಕುತ್ತಿಗೆಯ ಮೇಲೆ ದಿಟ್ಟಿಸುವುದನ್ನು ಸ್ಥಿರವಾಗಿಸಿ ಹಾಗೆಯೇ ನಿಮ್ಮ ಮನಸ್ಸಿನಲ್ಲಿ ಅವನು ಅಥವಾ ಅವಳು ನಿಮ್ಮ ಕಡೆ ನೋಡಬೇಕೆಂಬ ವಿಚಾರವನ್ನು ತಂದುಕೊಳ್ಳಿ. ನಿಮ್ಮ ಹರ್ಷವಾದ ಆಶ್ಚರ್ಯದಲ್ಲಿ ನೀವು ಬಯಸಿದ ರೀತಿಯಲ್ಲೇ ಆ ವ್ಯಕ್ತಿಯು ಮಾಡಿದುದನ್ನು ನೋಡುವಿರಿ.

3.. ಒಬ್ಬ ವ್ಯಕ್ತಿಗೆ ಒಂದು ಕರವಸ್ತ್ರದಿಂದ ತನ್ನ ಅಂಗೈಯನ್ನು ಸುತ್ತಿ ಕೊಳ್ಳಲು, ಅಥವಾ ತನ್ನ ಜೇಬಿನಲ್ಲಿ ಬಚ್ಚಿಡಲು(ಅಂಗೈಯನ್ನು)ಅಥವಾ ಟೇಬಲ್ಲಿನ ಕೆಳಗಿಡಲು ಹೇಳಿ. ಈಗ ಅವನ ಕೈಯ ಯಾವುದಾದರೂ ಭಾಗದ ಮೇಲೆ ನಿಮ್ಮ ದೃಷ್ಟಿಯನ್ನು ಸ್ಥಿರವಾಗಿಸಿ ಅವನ ಅಂಗೈ ಬಿಸಿಯಾಗುತ್ತಿದೆ ಎನ್ನುವ ಭಾವನೆಯನ್ನು ಪ್ರಾರಂಭಿಸಿ. ನಿಮ್ಮ ಸ್ನೇಹಿತನ ಅಂಗೈ ಸಹ ಬಹಳ ಬಿಸಿಯಾಗುತ್ತಿರುವುದನ್ನು ತಿಳಿದು ನೀವು ಆಶ್ಚರ್ಯವಾಗುವಿರಿ.

4. ನೀವು ನಿಮ್ಮ ಸ್ನೇಹಿತನಿಗೆ ಅವನ ಅಂಗೈಯನ್ನು ಟೇಬಲ್ಲಿನ ಮೇಲೆ ವಿರುದ್ಧವಾಗಿ ಹಾಕಲು ಹೇಳಿ. ಅಂಗೈ ಮೇಲೆ ದೃಷ್ಟಿಸಿ ಕೈ ತನ್ನಷ್ಟಕ್ಕೆ ತಾನೇ ಮೇಲೇಳುತ್ತಿದೆ ಎಂದು ಆಜ್ಞಾಪಿಸಿ. ಅವನ ಕೈ ತನಗೆ ಇಚ್ಛೆ ಇಲ್ಲದಿದ್ದರೂ ತನಗೆ ತಾನೇ ಮೇಲೇಳುತ್ತಿದೆ ಎಂದು ಹೇಳಿ. ಅವನಿಗೆ ಬೇಕಿಲ್ಲದಿದ್ದರೂ ತನ್ನ ಕೈ ಮೇಲೆದ್ದು ತೇಲಾಡುತ್ತಿರುವುದನ್ನು ನೋಡಿ ಅವನು ಆಶ್ಚರ್ಯವಾಗುವನು.

ಓರ್ವನು ಈ ಎಲ್ಲಾ ಅಭ್ಯಾಸಗಳನ್ನು ಮುಂದುವರಿಸಬೇಕು. ಓರ್ವನು ಪ್ರಾರಂಭದಲ್ಲಿ ಯಶಸ್ಸು ಸಿಗದಿದ್ದಾಗ ಬೇಸರಗೊಳ್ಳಬಾರದು. ಓರ್ವನು ಸ್ವಲ್ಪಕಾಲದ ವರೆಗೆ ಅಭ್ಯಾಸವನ್ನು ಮುಂದುವರಿಸಿದಲ್ಲಿ ಖಂಡಿತವಾಗಿ ಯಶಸ್ವಿಯಾಗುವನು.

### ಚಕ್ರದ ಮೇಲೆ ಬೆಳಕು :

ಒಂದು ಕಾಲದ ನಿಯಮಿತವಾದ ಅಭ್ಯಾಸದ ನಂತರ ಸಾಧಕನು ಒಂದು ಉಲ್ಲಾಸಕರವಾದ ಹೊಸ ಅನುಭವವನ್ನು ಪಡೆಯುವನು. ಅವನು ಶಕ್ತಿ ಚಕ್ರದ ಸುತ್ತಲೂ ಒಂದು ತೆಳ್ಳನೆಯ ಬಂಗಾರದ ಬೆಳಕಿನ ಕಿರಣವನ್ನು ನೋಡಲು ಪ್ರಾರಂಭಿಸುವನು. ಕ್ರಮೇಣವಾಗಿ ಈ ಬಂಗಾರದ ಬೆಳಕು ಹೆಚ್ಚಾಗಿ ವಿಸ್ತರಿಸಿ ಸಂಪೂರ್ಣ ಶಕ್ತಿ ಚಕ್ರವು ಈ ಬೆಳಕನ್ನು ಪ್ರತಿಬಿಂಬಿಸುವ ಹಾಗೆ ಕಾಣಿಸುವುದು.

ಓರ್ವನು ಈ ಅಭ್ಯಾಸವನ್ನು ಮುಂದುವರಿಸಬೇಕು. ಓರ್ವನು ಒಂದು ನಿರ್ದಿಷ್ಟ ಹಂತದಲ್ಲಿ ಈ ಬಂಗಾರದ ಬೆಳಕು ನೀಲಿ ಬೆಳಕಾಗಿ ಪರಿವರ್ತನೆಗೊಳ್ಳುವುದನ್ನು ನೋಡುವನು. ಸ್ವಲ್ಪಕಾಲದ ನಂತರ ನೀಲಿ ಬೆಳಕು ಹಸಿರು ಬೆಳಕಿಗೆ ಬದಲಿಸುವುದು. ಬೇಗನೇ ಹಸಿರು ಬೆಳಕು ಸೂರ್ಯನ ಬೆಳಕಾಗಿ ಬದಲಾಗುವುದು. ಎಷ್ಟರಮಟ್ಟಿಗೆಂದರೆ ಶಕ್ತಿಚಕ್ರವು ಸೂರ್ಯನ ತರಹ ಪ್ರಕಾಶಮಾನವಾಗಿ ಹೊಳೆಯಲು ಪ್ರಾರಂಭಿಸುವುದು.

ವಾಸ್ತವದಲ್ಲಿ ಶಕ್ತಿ ಚಕ್ರವು ಹೇಗಿರುತ್ತದೋ ಹಾಗೇ ಇರುತ್ತದೆ. ಅದು ಸೂರ್ಯನಾಗಿ ಬದಲಾಗುವುದಿಲ್ಲ. ಅದು ನಿಜವಾಗಿ ಸೂರ್ಯನ ಹಾಗೆ ಪ್ರಕಾಶಮಾನವಾಗಿ ಹೊಳೆಯುವಂತಹ ನಿಮ್ಮ ಕಣ್ಣುಗಳು. ಅದು ಈ ಉಗ್ರದೃಷ್ಟಿಯೇ ಶಕ್ತಿಚಕ್ರದಲ್ಲಿ ಪ್ರತಿಬಿಂಬಿಸುತ್ತದೆ. ಅದು ಪರಸ್ಪರವಾಗಿ ನಿಮ್ಮ ಕಣ್ಣುಗಳೊಂದಿಗೆ ಸಹ ಕೆಲಸಮಾಡುತ್ತದೆ. ತದನಂತರದಲ್ಲಿ ನಿಮ್ಮ ಕಣ್ಣುಗಳು ಎಷ್ಟೊಂದು ಕಾಂತಿಯುತವಾಗುತ್ತವೆಂದರೆ ಎಲ್ಲೆಲ್ಲಿ ನೀವು ದೃಷ್ಟಿಯನ್ನು ಎರಚುತ್ತೀರೋ ಅದು ಒಂದು ಪಂಜಿನ ತರಹ ಬೆಳಕಾಗುವುದು.

ಒಂದು ವಿಧದಲ್ಲಿ ಈ ಅಭ್ಯಾಸದಿಂದ ನಿಮ್ಮ ಕಣ್ಣುಗಳಲ್ಲಿ ಒಂದು ವಿಶಿಷ್ಟವಾದ ಕಾಂತಿಯನ್ನು ಉತ್ಪಾದಿಸಲು ಉದ್ದೇಶಿಸಲಾಗಿದೆ.

ಕಣ್ಣುಗಳಲ್ಲಿ ಈ ಕಾಂತಿಯನ್ನು ಕಾಪಾಡಿಕೊಳ್ಳಲು ಸಾಧಕನು ಈ ಕೆಳಗಿನ ಕಟ್ಟುಪಾಡುಗಳನ್ನು ಲಕ್ಷಿಸಬೇಕು:

1. ಮಾಂಸಾಹಾರವನ್ನು, ಮಸಾಲೆ ಪದಾರ್ಥಗಳನ್ನು, ಕಠಿಣ ಪೇಯಗಳನ್ನು ಮತ್ತು ಉಗ್ರತೆ ತರುವಂತಹ ಆಹಾರಗಳನ್ನು ನಿವಾರಿಸಬೇಕು.

2. ನಿಮ್ಮ ಮನಸ್ಸಿನ ಮೇಲೆ ಸಂಪೂರ್ಣವಾದ ನಿಯಂತ್ರತೆಯನ್ನು ಅಭ್ಯಸಿಸಿ. ಮನೋವಿಕಾರಗಳಾದ ಸಿಟ್ಟು, ದ್ವೇಷ, ಅಹಂಕಾರಗಳನ್ನು ನಿಗ್ರಹಿಸಿಬೇಕು.

3. ಯಾವುದೇ ಕೆಲಸ ಮಾಡುವುದಕ್ಕೆ ಮುಂಚೆ ಎರಡುಸಾರಿ ಯೋಚಿಸಿ. ಇದು ಅವಶ್ಯವಿದೆ ಏಕೆಂದರೆ ನೀವು ಮಾಡಿದುದಕ್ಕೆ ನಂತರ ಪೇಚಾಡಬಾರದು.

4. ಧಾರ್ಮಿಕ ಮತ್ತು ಲೌಕಿಕ ಆಜ್ಞೆಗಳನ್ನು ಬಹಿಷ್ಕರಿಸಲಾಗಿರುವಂತಹ ಕಾರ್ಯಗಳಲ್ಲಿ ನಿಮ್ಮಷ್ಟಕ್ಕೆ ನೀವೇ ತೊಡಗಬೇಡಿರಿ.

5. ಮೂರ್ಖಕಾರ್ಯಗಳಾದ ಕಾಲುಗಳನ್ನು ತೂಗಾಡಿಸುವುದು, ಬೆರಳುಗಳಲ್ಲಿ ಸಲ್ಲಾಪನಡೆಸುವುದು, ಹಲ್ಲುಗಳಿಂದ ಬೆರಳುಗಳನ್ನು ಕಚ್ಚುವುದು ಮುಂತಾದವುಗಳಲ್ಲಿ ನಿರತರಾಗಬೇಡಿರಿ.

6. ದೃಢಪಡುವವರೆಗೂ ಕ್ಷಮೆಯಾಚಿಸಬೇಡಿರಿ.

7. ನಿರ್ಮಲ ಮತ್ತು ಸ್ವಚ್ಛವಾದ ಶರೀರಸ್ಥಿತಿ ಮತ್ತು ಒಂದು ಸಂಪೂರ್ಣ ನಿರಪರಾಧಿ ಮಾನಸಿಕತೆಯನ್ನು ಕಾಪಾಡಿಕೊಳ್ಳಿ. ಇದು ನಿಮ್ಮನ್ನು ಚುರುಕಾಗಿಡುತ್ತದೆ.

8. ಕ್ಷುಲ್ಲಕ ವಿಷಯಗಳನ್ನು ಹಚ್ಚಿಕೊಳ್ಳಬೇಡಿರಿ. ಅಲ್ಲದೆ ಅನಾವಶ್ಯಕವಾಗಿ ತಡೆತಡೆದು ಬರುವ ನಗೆಚಾಟಿಕೆಗಳಲ್ಲಿ ಹೊರಬೀಳಬೇಡಿರಿ. ನಿಮ್ಮ ಮನಸ್ಸನ್ನು ನೀವು ಸಂಪೂರ್ಣ ನಿಯಂತ್ರಣದಲ್ಲಿ ಇರಿಸಿಕೊಳ್ಳಿರಿ.

9. ಬೆಡಗಿನ ದೃಷ್ಯಗಳನ್ನು ನೋಡಬೇಡಿರಿ.

ನಿಯಮಿತವಾಗಿ *ಶಕ್ತಿಚಕ್ರವನ್ನು* ಅಭ್ಯಸಿಸಿ ನೀವು ಸ್ವಲ್ಪಕಾಲವಾದ ಮೇಲೆ, ಸ್ವಲ್ಪ ಅಭ್ಯಾಸದ ನಂತರ ಶಕ್ತಿಚಕ್ರದ ಮೇಲೆ ಒಬ್ಬ ಮನೋಹರವಾದ ದೈವವು ವಿರಾಮಿಸಿರುವ ಹಾಗೆ ಊಹಿಸಿಕೊಳ್ಳುವುದು ಉತ್ತಮವು. ಈಗ ನಿಮ್ಮ ಮನಸ್ಸಿನಲ್ಲಿ ನೀವು ಆ ಚಕ್ರದ ದೈವದ ತರಹವೇ ಸುಂದರರಾಗಿ, ಮನೋಹರವಾಗಿ ಮತ್ತು ಆಕರ್ಷಣೀಯವಾಗಿ ಕಾಣುವಿರೆಂದು ಬಯಕೆಯನ್ನು ನಿರ್ವಹಿಸಿಕೊಳ್ಳಿ. ನೀವು ಈ ಅಭ್ಯಾಸವನ್ನು ಸ್ವಲ್ಪಕಾಲದವರೆಗೆ ಮುಂದುವರಿಸಿದ ಹಾಗೆ ನಿಮ್ಮಲ್ಲಿಯೇ ಗಮನೀಯವಾದ ಬದಲಾವಣೆಯನ್ನು ಕಾಣುವಿರಿ.

### ಕಣ್ಣುಗಳಲ್ಲಿ ಆಕರ್ಷಣೀಯ ಶಕ್ತಿ:

ಈ ಮೊದಲೇ ಸ್ಪಷ್ಟ ಪಡಿಸಿದಹಾಗೆ ಚಕ್ರದ ಅಭ್ಯಾಸವನ್ನು ಮುಂದುವರಿಸಿದ ಹಾಗೆ ನಿಮ್ಮ ಕಣ್ಣುಗಳಲ್ಲಿ ವಿಶಿಷ್ಟರೀತಿಯ ಆಕರ್ಷಣ ಶಕ್ತಿಯು ಬರುವುದು. ಬೇಗನೇ ನೀವು ಖ್ಯಾತರಾಗಿ ನಿಮ್ಮ ಗೆಳೆಯರ ಬಳಗವು ಹೆಚ್ಚು ಹೆಚ್ಚಾಗಿ ವಿಸ್ತರಿಸುವುದು.

ಕೆಲವೊಮ್ಮೆ ನೀವು ಗುಂಪುಗಳಲ್ಲಿ ಸೇರುವಿರಿ. ನಿಮ್ಮ ದೃಷ್ಟಿಯನ್ನು ಸುಮಾರು 15 ರಿಂದ 20 ವ್ಯಕ್ತಿಗಳ ಕುತ್ತಿಗೆಯ ಮೇಲೆ ಸ್ಥಿರವಾಗಿಸಿ ಅವರೆಲ್ಲರೂ ನಿಮ್ಮ ಕಡೆ ತಿರುಗಿ ನೋಡಬೇಕೆಂಬ

ಬಯಕೆಯನ್ನು ತಂದುಕೊಳ್ಳಿ. ಬೇಗನೇ, ಒಬ್ಬರೇ ಅಲ್ಲದೇ ಪ್ರತಿಯೊಬ್ಬರೂ ನಿಮ್ಮ ಕಡೆ ತಿರುಗಿ ನೋಡುವರು.

ನೀವು ಯಾವಾಗಲಾದರೂ ಯಾವ ವ್ಯಕ್ತಿಯೊಡನೆ ಮಾತನಾಡಿದ್ದರೂ, ಅವನ ಕಣ್ಣುಗಳಲ್ಲಿ ಆಳವಾಗಿ ನೋಡಿ. ನೀವು ಕೈಕುಲಿಕಿದಾಗ, ನೀವು ಅವನ ಕೈಯನ್ನು ಸರಿಯಾಗಿ ಅರಿವಿಗೆ ತೆಗೆದು ಕೊಳ್ಳುವುದು ಉತ್ತಮ ಹಾಗೂ ಇದಕ್ಕಾಗಿ, ಅವನ ಕೈಯನ್ನು ದುಂಡಾಗಿ ಒತ್ತಿರಿ. ನಿಮ್ಮ ಕೈಯನ್ನು ಒತ್ತಲು ಅವನಿಗೆ ಬಿಡಬೇಡಿರಿ. ನಿಮ್ಮ ಧ್ವನಿಯು ಮಧುರ ಮತ್ತು ಮೋಹಕವಾಗಿರಬೇಕು.

ಈ ಕೆಲವು ಆದೇಶದ ತುಣುಕುಗಳ ಮೇಲೆ ನಡೆಯಿರಿ ಮತ್ತು ನಿಮ್ಮ ಕಣ್ಣುಗಳ ಆಕರ್ಷಣೀಯ ಶಕ್ತಿಯನ್ನು ಅಖಂಡವಾಗಿರಿಸಿಕೊಳ್ಳಿ.

# ಅಧ್ಯಾಯ 5

# 'ತ್ರಾಟಕ'

ಹಠಯೋಗದಲ್ಲಿ ಪ್ರಖ್ಯಾತ ಮತ್ತು ಅಧಿಕೃತ ಗ್ರಂಥವಾಗಿರುವ *ಹಠಯೋಗ ಪ್ರದೀಪಿಕ* ವು ತ್ರಾಟಕವನ್ನು ಆರು ಯೋಗಿಕ ಕ್ರಿಯೆಗಳಲ್ಲಿ ಒಂದು ಕ್ರಿಯೆ ಎಂದು ಕರೆದಿದೆ. ಜೀವನದ ಅತಿ ಶ್ರೇಷ್ಠವಾದ ಸಾಧನೆಯಲ್ಲಿ ಮತ್ತು ಯೋಗದಲ್ಲಿ ಯಶಸ್ವಿಯಾಗಲು ಓರ್ವನು ತನ್ನ ದೇಹವನ್ನು ದೈಹಿಕವಾಗಿ ಶುದ್ಧವಾಗಿಡುವುದು ಅತ್ಯಾವಶ್ಯಕ. ಪ್ರಾಣಾಯಾಮವು ಈ ತರಹದ ಶುದ್ಧತೆಯನ್ನು ನೆರವೇರಿಸುತ್ತದೆ, ಆದರೆ ಅದು ಬಹಳ ಸಮಯ ತೆಗೆದುಕೊಳ್ಳುತ್ತದೆ. ಆದ್ದರಿಂದ ಈ ಗ್ರಂಥವು ದೇಹವನ್ನು ಶುದ್ಧೀಕರಿಸಲು ಈ ಕೆಳಗಿನ ತಂತ್ರಗಳನ್ನು ಶಿಫಾರಸು ಮಾಡುತ್ತದೆ.

೧. **ವಸ್ತಿ:** ಓರ್ವನು ಈ ತಂತ್ರವನ್ನು ಅನುಸರಿಸಿ ನೀರನ್ನು ಗುದದಿಂದ ಹೊಟ್ಟೆಯವರೆಗೆ ಪೂರಕಮಾಡಿಕೊಳ್ಳುತ್ತಾನೆ, ಅದು ಹೊಟ್ಟೆಯಲ್ಲಿಯ ದೊಡ್ಡಕರುಳುಗಳನ್ನು ಮತ್ತು ಇತರ ಭಾಗಗಳನ್ನು ಶುಚಿ ಮಾಡುತ್ತದೆ.

೨. **ಧೌತಿ:** ಕನಿಷ್ಠ 15 ಅಡಿ ಉದ್ದ ಮತ್ತು ಒಂದು ಅಡಿ ಅಗಲವಿರುವ ಒಂದು ತೆಳ್ಳನೆಯ ಬಟ್ಟೆಯನ್ನು ತೆಗೆದುಕೊಳ್ಳಿ. ಅದನ್ನು ತೋಯಿಸಿ ಬಾಯಿಯ ಮೂಲಕ ಮುಂದೆ ಸಾಗಿಸಿ. ಅದು ಬಾಯಿಯಿಂದ ಗುದದ್ವಾರದವರೆಗಿನ ಮಾರ್ಗವನ್ನು ಸ್ವಚ್ಛಗೊಳಿಸಿ ಕಫವನ್ನು ತೆಗೆಯುತ್ತದೆ.

೩. **ನೌಲಿ:** ಇದು ಜಠರದ ಅಂಗಗಳನ್ನು ಮರ್ದನಗೊಳಿಸಿ ಶಕ್ತಿಯುತಮಾಡುವ ಪದ್ಧತಿ. ಓರ್ವನು ಪದ್ಮಾಸನವೆನ್ನುವ ಭಂಗಿಯಲ್ಲಿ ಕೂತುಕೊಂಡು ಒಂದು ವಿಶಿಷ್ಟರೀತಿಯ ಪ್ರಾಣಾಯಾಮವನ್ನು ಕಾರ್ಯಗತಗೊಳಿಸುವನು ಮತ್ತು ಕೇವಲ ಇಚ್ಛಾಶಕ್ತಿಯ ಸದ್ಬಳಿಕೆಯಿಂದಲೇ ಅವನ ಹೊಕ್ಕಳನ್ನು ಎಡದಿಂದ ಬಲಕ್ಕೆ ಮತ್ತು ಬಲದಿಂದ ಎಡಕ್ಕೆ ತಿರುಗಿಸುವನು.

೪. **ನೇತಿ:** ಒಂದು ಹೊಳ್ಳೆಯಿಂದ ನೀರನ್ನು ಎಳೆದುಕೊಳ್ಳುವುದು ಮತ್ತು ಇನ್ನೊಂದು ಹೊಳ್ಳೆಯಿಂದ ಮತ್ತು ಬಾಯಿಯಿಂದ ಹೊರಗಡೆ ಬಿಡುವುದು. ಅದು ನಾಸಿಕದ ಮಾರ್ಗವನ್ನು ನಿಶ್ಚಯವಾಗಿ ಸ್ವಚ್ಛಗೊಳಿಸುವುದು. ಓರ್ವನು ಅದೇರೀತಿಯಲ್ಲಿ ಒಂದು ಹತ್ತಿಯ ಹುರಿಯನ್ನೂ ಹೊಳ್ಳೆಯ ಮೂಲಕಒಳತೂರಿಸಿ ಬಾಯಿಯಿಂದ ತೆಗೆದು ಸ್ವಚ್ಛಗೊಳಿಸಬಹುದು. ಅದು ನಿಶ್ಚಯವಾಗಿ ಎಲ್ಲಾ ಕಫವನ್ನೂ ತೆಗೆಯುವುದು.

೫. **ಕಪಾಲಭಾತಿ:** ಮೆದುಳಿನ ಮುಂದಿನ ಭಾಗವನ್ನು ನಿರ್ಮಲಗೊಳಿಸುವಂತಹ ಪ್ರಾಣಾಯಾಮದ ಕಲಾಕೌಶಲ್ಯಗಳ ಸರಣಿಗಳು.

೬. **ತ್ರಾಟಕ:** ಓರ್ವನ ದೃಷ್ಟಿಯನ್ನು ಒಂದು ಬಿಂದುವಿನ ಮೇಲೆ ಅಥವಾ ಜ್ವಾಲೆಯ ಮೇಲೆ ಕಣ್ಣುರೆಪ್ಪೆಯನ್ನು ಮಿಟುಕಿಸದೆಯೇ ಕೇಂದ್ರೀಕರಿಸುವ ವಿಧಾನ. ಅದು ಕಣ್ಣಿನದೃಷ್ಟಿ ಮತ್ತು ಏಕಾಗ್ರತಾ ಶಕ್ತಿಯನ್ನು ಹೆಚ್ಚಿಸುವುದು.

ಮೇಲೆ ಹೇಳಿದ ಆರು ತಂತ್ರಗಳಲ್ಲಿ *ತ್ರಾಟಕವು* ಸರ್ವಶ್ರೇಷ್ಠವಾದುದು, ಏಕೆಂದರೆ ಅದು ಓರ್ವನು ದಿಟ್ಟಿಸುವುದನ್ನು ಸ್ಥಿರವಾಗಿಸಿ, ಆಲೋಚನಾರಹಿತ ಮನಸ್ಸನ್ನು ನಿಶ್ಚಯವಾಗಿಸುವುದು. ಒಮ್ಮೆ ನೀವು ಕಣ್ಣುಗಳನ್ನು ಮುಚ್ಚಿದರೆ ನಿಮಗೆ ನಿಶ್ಚಯವಾಗಿ ಬೇಗನೇ ಏಕಾಗ್ರತೆಯು ಸಿಗುವುದು.

ವಾಸ್ತವಿಕತೆಯಲ್ಲಿ ತ್ರಾಟಕವು ಸಮ್ಮೋಹನದ ಪ್ರಾರಂಭದ ಅಭ್ಯಾಸ, ಏಕೆಂದರೆ ಅದು ಕಣ್ಣುಗಳ

ಆಕರ್ಷಣಾ ಶಕ್ತಿಯ ಸಹಾಯದಿಂದಲೇ ಓರ್ವನು ಬೇರೆಯವರನ್ನು ಸಮ್ಮೋಹನಗೊಳಿಸಬಹುದು. ತ್ರಾಟಕದ ನಿಯಮಿತ ಅಭ್ಯಾಸವು ನಮ್ಮ ಧ್ಯಾನಯೋಗದಲ್ಲಿ ಯಶಸ್ಸಿಯನ್ನು ತಂದುಕೊಡುವುದು. ಅದು ಕೇವಲ ಈ ಯಶಸ್ಸಿಯ ಸದ್ಗುಣದಿಂದಲೇ ಓರ್ವನು ಬೇರೆಯವರ ಮನಸ್ಸಿನಲ್ಲಿ ಹೊಕ್ಕು ಅಲ್ಲಿ ಏನೇನು ನಡೆಯುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳಬಹುದು. ಓರ್ವನು ದೂರದ ವಸ್ತುಗಳನ್ನು ಹತ್ತಿರದಲ್ಲಿಯೇ ನೋಡಬಹುದು. ದೃಷ್ಟಿಯನ್ನು ಹಾಯಿಸಿ ಕ್ರೂರ ಪ್ರಾಣಿಗಳನ್ನೂ ಸಂಪೂರ್ಣವಾಗಿ ಮಣಿಸಬಹುದು. ನಾವು ಒಂದು ದೀಪವನ್ನು ಹತ್ತಿಸಲೂಬಹುದು ಮತ್ತು ನಂದಿಸಲೂ ಬಹುದು. ನಾವು ಟೇಬಲ್ಲಿನ ಮೇಲಿರುವ ವಸ್ತುಗಳನ್ನು ಮುಟ್ಟದಯೇ ಕದಲಿಸಬಹುದು.

ತ್ರಾಟಕವು ಕಣ್ಣಿನ ರೋಗಗಳನ್ನು ದೂರಮಾಡುವುವು. ಅದು ಆಲಸ್ಯವನ್ನು ದೂರಮಾಡಿ ಮೆದುಳಿನ ಶಾಖವನ್ನು ಸಮನಾಗಿಸಿ ಹೀಗೆ ಏಕಾಗ್ರತಾಶಕ್ತಿಯನ್ನು ವೃದ್ಧಿಗೊಳಿಸುವುದು.

## ತ್ರಾಟಕದ ನಮೂನೆಗಳು:

ಮುಖ್ಯವಾಗಿ ಮೂರು ತರಹದ ತ್ರಾಟಕಗಳಿವೆ:

**1. ಹತ್ತಿರ ತ್ರಾಟಕ:** ನಾವು *ಸುಖಾಸನ*[1]ದಲ್ಲಿ ಕೂತುಕೊಳ್ಳಬೇಕು ಮತ್ತು ನಮ್ಮ ಕಣ್ಣುಗಳನ್ನು ಮೇಲೆಕೆಳಗೆ ಹಾಗೆಯೇ ಬಲಕ್ಕೆ ಎಡಕ್ಕೆ ಚಲಿಸಬೇಕು. ಕಣ್ಣಿನ ನರಗಳು ಶಕ್ತಿಯುತವಾಗುವವು. ತ್ರಾಟಕಕ್ಕೆ ಸರ್ವಶ್ರೇಷ್ಠ ಸಮಯವೆಂದರೆ ಬೆಳಿಗ್ಗೆ ನಾಲ್ಕರಿಂದ ಸೂರ್ಯೋದಯದವರೆಗೆ.

ಒಂದು ಮೂರ್ತಿ ಅಥವಾ ದುಂಡಾಗಿರುವ ಬಿಳಿಯ ಕಲ್ಲನ್ನು ಕನಿಷ್ಠ ಎರಡು ಅಡಿ ದೂರದಲ್ಲಿಟ್ಟು ನಿಮ್ಮ ದೃಷ್ಟಿಯನ್ನು ಆ ವಸ್ತುವಿನ ಮೇಲೆ ಆಳವಾದ ಮತ್ತು ಕದಲದ ಏಕಾಗ್ರತೆಯಿಂದ ಸ್ಥಿರವಾಗಿಸಿ. ನೀವು ಯಾವ ವಸ್ತುವನ್ನಾದರೂ ಆರಿಸಿಕೊಳ್ಳಬಹುದು ಉದಾ.ಒಂದು ಮೇಣದ ಬತ್ತಿಯ ಉರಿ, ಮೂಗಿನತುದಿ, ಒಂದು ಬಟ್ಟೆಯ ತುಂಡು, ಅಥವಾ ಚುಕಿ ಅಥವಾ ಅದರ ಪ್ರತಿಬಿಂಬ.

ನೀವು ಆ ವಸ್ತುವಿನ ಮೇಲೆ ನಿಮ್ಮ ದೃಷ್ಟಿಯನ್ನು ನಿಮ್ಮ ಕಣ್ಣಿನಲ್ಲಿ ನೀರು ಉರುಳುವವರೆಗೂ ಕೇಂದ್ರೀಕರಿಸುವುದನ್ನು ಮುಂದುವರಿಸಬೇಕು. ನಿಮ್ಮ ಕಣ್ಣುಗಳನ್ನು ಪಿಳುಕಿಸಬಾರದು. ನಿಮ್ಮ ಕಣ್ಣುಗಳಲ್ಲಿ ನೀರು ಶೇಖರಣೆಯಾಗುತ್ತಿರುವ ಹಾಗೆ, ನೀವು ನಿಮ್ಮ ಕಣ್ಣುಗಳನ್ನು ಮುಚ್ಚುವುದು ಉತ್ತಮವು. ನೀವು ನಿಮ್ಮ ಅಭ್ಯಾಸವನ್ನು ಪುನಃ ಪ್ರಾರಂಭಿಸುವ ಮುನ್ನ ನಿಮ್ಮ ಕಣ್ಣುಗಳಿಗೆ ಸ್ವಲ್ಪ ವಿಶ್ರಾಮವನ್ನು ನಿಶ್ಚಯಮಾಡಿಕೊಳ್ಳಿ.

ನೀವು ನಿಮ್ಮ ಅಭ್ಯಾಸದ ಸಮಯವನ್ನು ನಿಧಾನವಾಗಿ ಹೆಚ್ಚಿಸುವುದು ಉತ್ತಮವು. ನೀವು ಮೊದಲನೆಯ ದಿನ ನಿವೇದಿಸಿದ ಸಮಯಕ್ಕಿಂಥ ಎರಡನೆಯ ದಿನದ ಅಭ್ಯಾಸದ ಸಮಯವನ್ನು ಹೆಚ್ಚಾಗಿ ವಿಸ್ತರಿಸಬಹುದು. ನೀವು ನಿಮ್ಮ ಕಣ್ಣು ಪಿಳುಕಿಸದಯೇ ಒಂದು ದೀಪದ ಜ್ವಾಲೆಯ ಮೇಲೆ ಕೇಂದ್ರೀಕರಿಸುವಲ್ಲಿ ಯಶಸ್ಸಿಯಾದ ನಂತರ, ನಿಮ್ಮ ವಸ್ತುವಾಗಿ ಮೂಗಿನತುದಿಯ ಮೇಲೆ ಕೇಂದ್ರೀಕರಿಸುವ ಅಭ್ಯಾಸವನ್ನು ಪ್ರಾರಂಭಿಸಬೇಕು. ಈ ವಸ್ತುವಿನ ಮೇಲೆ ನಿಯಮಿತವಾದ ಅಭ್ಯಾಸವು ಖಚಿತವಾಗಿ ಕಷ್ಟಕರವು, ಆದರೂ ಅದರಿಂದ ಲಾಭಗಳು ಅಪರಿಮಿತ.

**2. ದೂರದ ತ್ರಾಟಕ:**

ಅಭ್ಯಸಿಸುವವನು ಹತ್ತಿರದ ತ್ರಾಟಕದ ಮೇಲೆ ದೃಢವಾದ ಅಭ್ಯಾಸವನ್ನು ಸಾಧಿಸಿದ ನಂತರ ಅವನು

---

1. **ಸುಖಾಸನ:** ಕೂತುಕೊಳ್ಳುವ ಒಂದು ಭಂಗಿ, ಇದರಲ್ಲಿ ಸಾಧಾರಣವಾಗಿ ಓರ್ವನು ನೆಲದ ಮೇಲೆ ಕೂತುಕೊಳ್ಳುವಹಾಗೆ ಕೂತುಕೊಂಡು, ತನ್ನ ತಲೆ, ಕುತ್ತಿಗೆ ಹಾಗೂ ಬೆನ್ನನ್ನು ನೇರವಾಗಿರಿಸಿ ತನ್ನ ಕೈಗಳನ್ನು ಮೊಣಕಾಲುಗಳ ಮೇಲೆ ಇರಿಸುವುದು.

ಗುಡ್ಡದ ತುದಿಯ ಮೇಲಾದರೂ ಅಥವಾ ಮರದ ಮೇಲ್ತುದಿಯ ಮೇಲೆ ತನ್ನ ಗಮನವನ್ನು ಕೇಂದ್ರೀಕರಿಸಬೇಕು. ಅವನು ತನ್ನ ಕಾರ್ಯಕ್ಕೆ ಗುಡಿಯ ಗೋಪುರವನ್ನೂ ಸಹ ಆಯ್ದುಕೊಳ್ಳಬಹುದು. ನಿಯಮಿತವಾದ ಮತ್ತು ದೃಢವಾದ ಅಭ್ಯಾಸದ ನಂತರ ತನ್ನ ಏಕಾಗ್ರತೆಯನ್ನು ಚಂದ್ರನ ಮೇಲೆ ಕೇಂದ್ರೀಕರಿಸುವ ಮೂಲಕ ಹೆಚ್ಚಾಗಿ ವೃದ್ಧಿಗೊಂಡ ಅಭ್ಯಾಸವನ್ನು ತೆಗೆದುಕೊಳ್ಳಬೇಕು. ನಂತರ ನಕ್ಷತ್ರವನ್ನು ಈ ಕೆಲಸಕ್ಕಾಗಿ ತೆಗೆದುಕೊಳ್ಳಬೇಕು. ಅವನು ಕೊನೆಯದಾಗಿ ಸೂರ್ಯನನ್ನೇ ತನ್ನ ವಸ್ತುವನ್ನಾಗಿ ಮಾಡಿಕೊಳ್ಳಬೇಕು.

ಪ್ರಾರಂಭದಲ್ಲಿ ನೀವು ಸೂರ್ಯನ ಮೇಲೆ ದೃಷ್ಟಿಯನ್ನು ನೆಡಲು ಪ್ರಯತ್ನಿಸುತ್ತಿರುವ ಹಾಗೆ ಸಂಪೂರ್ಣವಾದ ನಿರಾಶೆಯನ್ನು ಎದುರುಗೊಳ್ಳುವಿರಿ. ಅದಕ್ಕಾಗಿ ಅಭ್ಯಸಿಸುವವನು ನೀರಿನ ಮೇಲೆ ಸೂರ್ಯನ ಪ್ರತಿಬಿಂಬದ ಮೇಲೆ ಏಕಾಗ್ರತೆಯ ಅಭ್ಯಾಸವನ್ನು ಮಾಡಬೇಕು, ನಂತರ ಕಾಣುವ ಗಾಜಿನ ಮೇಲೆ ಕೊನೆಯದಾಗಿ ಸೂರ್ಯನನ್ನು ನೇರವಾಗಿ ನೋಡಬೇಕು. ಕಟ್ಟಕಡೆಗೆ ಅವನು ಸೂರ್ಯನ ಮೇಲೆ 32 ನಿಮಿಷಗಳ ಕಾಲ ಕಣ್ಣುಗಳನ್ನು ಇಡಲು ಯಶಸ್ವಿಯಾದಲ್ಲಿ, ಅವನು ದೈವೀಕ ಶಕ್ತಿಯಿಂದ ಗಣ್ಯತೆ ಪಡೆದಿದ್ದಾನೆಂದು ಊಹಿಸಿಕೊಳ್ಳಬಹುದು.

### 3. ಅಂತರ್ತ್ರಾಟಕ:

ಮೊದಲನೆಯ ಮತ್ತು ಎರಡನೆಯ ತ್ರಾಟಕಗಳು ಹೆಚ್ಚಾಗಿ ಬಾಹ್ಯ ವಸ್ತುಗಳ ಮೇಲೆ ತಿರುಗಿಸಲಾಗಿತ್ತು. ಅಂತರ್ತ್ರಾಟಕದಲ್ಲಿ ಅಭ್ಯಸಿಸುವವನು ಕಣ್ಣುಗಳನ್ನು ಮುಚ್ಚಿಕೊಂಡು ಕೇವಲ ಇಚ್ಛಾಶಕ್ತಿಯ ಸದ್ಗುಣದಿಂದಲೇ ಅಭ್ಯಾಸವನ್ನು ಸಾಧಿಸಬೇಕು.

ಅವನು ತನ್ನ ಎರಡು ಹುಬ್ಬುಗಳ ನಡುವಿನ ಬಿಂದುವಿನ ಮೇಲೆ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಬೇಕು. ಪ್ರಾರಂಭದಲ್ಲಿ ಅವನು ಗಣನೀಯವಾಗಿ ದಿಗಿಲುಗೊಳ್ಳುವನು. ನಂತರ ಅವನು ತನ್ನ ಕಣ್ಣನ್ನು ಎರಡೂ ಹುಬ್ಬುಗಳ ನಡುವಿನ ಸ್ಥಳದ ಮೇಲೆ ಕೇಂದ್ರೀಕರಿಸುವ ಅಭ್ಯಾಸವನ್ನು ಮುಂದುವರಿಸಿದ ಹಾಗೆ ಅವನು 3 ಅಥವಾ 5 ಅಥವಾ 7 ನೀಲಿ ಅಥವಾ ಹಳದೀ ಬಣ್ಣದ ಸಣ್ಣ ಬಿಂದುಗಳನ್ನು ನೋಡಲು ಪ್ರಾರಂಭಿಸುವನು. ಸ್ವಲ್ಪ ಸಮಯದ ನಂತರ ಆ ಬಿಂದುಗಳೂ ಮಾಯವಾಗುವವು. ಅವನು ಬದಲಾಗಿ ಪ್ರಕಾಶಮಾನವಾಗಿ ಹೊಳೆಯುವ ಕಣ್ಣನ್ನು ನೋಡುವನು. ಪ್ರಾರಂಭದಲ್ಲಿ ಆ ಕಣ್ಣು ಬದಲಾಯಿಸುತ್ತಿರುವ ಹಾಗೆ ಅಥವಾ ಮಿಳುಕಿಸುತ್ತಿರುವ ಹಾಗೆ ಕಾಣುವುದು. ಅವನು ಆ ಕಣ್ಣಿನ ಹೊಳಪಿನಲ್ಲಿ ಸೂರ್ಯನನ್ನು, ಚಂದ್ರನನ್ನು, ನಕ್ಷತ್ರಗಳನ್ನೂ ನೋಡಬಹುದು. ಸ್ವಲ್ಪ ಸಮಯದ ನಂತರ ಅಭ್ಯಸಿಸುವವನು ತನ್ನ ಮೂರನೆಯ ಕಣ್ಣನ್ನು ವಿಶಿಷ್ಟವಾದ ಆಕಾಶನೀಲಿಯಲ್ಲಿ ಆಕಾಶದಲ್ಲಿ ನೋಡುವನು. ಮುಂದೆ ಅವನು ಬಿಂದುಗಳ ಮಧ್ಯದಲ್ಲಿ ಹರಡಿರುವಂತಹ ತ್ರಿಕೋಣವನ್ನು ನೋಡುವನು. ಈ ಬಿಂದುಗಳೂ ಸಹ ಸ್ವಲ್ಪ ಸಮಯದ ನಂತರ ಮಾಯವಾಗುವವು. ಹೀಗೆ ಅಭ್ಯಸಿಸುವವನು ಒಂದು ಪೂರ್ಣತೆಯನ್ನು ಕೈಗೊಳ್ಳುವನು.

ಅಭ್ಯಸಿಸುವವನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕಾದ ಕೆಲವು ಮುಖ್ಯವಾದ ನಿಯಮಗಳಿವೆ. ತ್ರಾಟಕದ ಅಭ್ಯಾಸದ ಸಮಯವನ್ನು ಸ್ವಲ್ಪಮಟ್ಟಿಗೆ ನಿಧಾನವಾಗಿ ಹೆಚ್ಚಿಸಬೇಕು. ತ್ರಾಟಕದ ತಂತ್ರಗಳ ಮೂಲಕ ಯಶಸ್ವಿಯನ್ನು ಸಾಧಿಸಬೇಕಾದರೆ ಓರ್ವನು ತನ್ನ ಅಭ್ಯಾಸವನ್ನು ತನ್ನ ಕಣ್ಣುಗಳನ್ನು ಮಿಳುಕಿಸದಯೇ ಒಂದೊಂದು ತಂತ್ರಕ್ಕೂ ಕನಿಷ್ಠ ಮುವತ್ತೆರಡು ನಿಮಿಷಗಳವರೆಗೆ ಮುಂದುವರಿಸಬೇಕು.

ಕಣ್ಣುಗಳಲ್ಲಿ ನೀರು ತುಂಬಿದರೆ ಅಥವಾ ಸುಸ್ತಾದರೆ ಅಭ್ಯಾಸವನ್ನು ನಿಲ್ಲಿಸಬೇಕು. ಅವನು ತನ್ನ ಕಣ್ಣುಗಳನ್ನು ಮುಚ್ಚಿ ಸ್ವಲ್ಪಮಟ್ಟಿನ ವಿಶ್ರಾಂತಿಯನ್ನು ಕೊಡುವುದು ಉಚಿತವು.

ಬೇರೆ ಯಾವ ನಿರ್ದೇಶನಗಳಿಲ್ಲದ ವಕ್ಷದಲ್ಲಿ *ತ್ರಾಟಕವನ್ನು* *ಸುಖಾಸನ* ಅಥವಾ *ಪದ್ಮಾಸನ*[1] ದಲ್ಲಿಯೇ ಅಭ್ಯಸಿಸಬೇಕು.

## ಮುನ್ನೆಚ್ಚರಿಕೆಗಳು:

ತ್ರಾಟಕದ ಅಭ್ಯಾಸಕಾರನು ಎಲ್ಲಾ ತರಹದ ಮಾದಕ ವಸ್ತುಗಳನ್ನು ವರ್ಜಿಸಬೇಕು, ನಿರ್ದಿಷ್ಟವಾಗಿ ಮದ್ಯ, ಧೂಮಪಾನ, ಮುಂತಾದವುಗಳು.

ಹೃದಯ ರೋಗಿಗಳು, ಕ್ಷಯ, ಕುಷ್ಠ, ಮೇಹ ರೋಗಗಳಿಂದ ನರಳುತ್ತಿರುವವರು ತ್ರಾಟಕ ಅಭ್ಯಾಸವನ್ನು ಮಾಡಬಾರದು. ಮಂದದೃಷ್ಟಿವುಳ್ಳ ವ್ಯಕ್ತಿಗಳಿಗೂ ಇದು ಬಹಿಷ್ಕರಿಸಲಾಗಿದೆ.

ಅಭ್ಯಾಸಕಾರನು ದೃಢವಾದ ನೈತಿಕ ನಡತೆಯ ವ್ಯಕ್ತಿತ್ವದವನಾಗಿರಬೇಕು. ಮನೋವಿಕಾರಗಳಾದ ಸಿಟ್ಟು, ಲೈಂಗಿಕತೆ, ಮುಂತಾದವುಗಳ ಮೇಲೆ ಸಂಪೂರ್ಣ ಹತೋಟಿವುಳ್ಳವನಾಗಿರಬೇಕು. ಅವನು ಊಟ ತೆಗೆದುಕೊಳ್ಳುವುದರಲ್ಲಿ ನಿಯಮಗಳನ್ನು ಅನುಸರಿಸಬೇಕು. ಅವನಿಗೆ ಹಗುರವಾದ ಊಟವು ನಿರ್ದಿಷ್ಟವಾಗಿ ಹೊಂದುವುದು.

ಅಭ್ಯಾಸಕಾರನು ನಿಯಮಿತವಾಗಿ *ಪದ್ಮಾಸನ* ಶೈಲಿಯಲ್ಲಿ ಕೂತುಕೊಳ್ಳಬೇಕು.

ಈ ತಂತ್ರವನ್ನು ಮುಂಜಾನೆಗಳಲ್ಲಿ ಅಭ್ಯಸಿಸುವುದನ್ನು ಆಯ್ದುಕೊಳ್ಳಿ. ಆ ಸ್ಥಳವು ಸಂಪೂರ್ಣ ಕತ್ತಲು ಅಥವಾ ತುಂಬಾ ಪ್ರಕಾಶಮಾನವಾಗಿರಬಾರದು.

ಮುಂಜಾನೆಯ ಕೆಲಸಗಳನ್ನು ಮುಗಿಸಿದನಂತರ ಅಭ್ಯಾಸಕಾರನು ತನ್ನ ಅಭ್ಯಾಸವನ್ನು ಪ್ರಾರಂಭಿಸಬೇಕು.

ಓರ್ವನು ಸಡಿಲವಾದ ಬಟ್ಟೆಗಳನ್ನು ತೊಟ್ಟಿರಬೇಕು.

ಮಂದದೃಷ್ಟಿಯ ಅಭ್ಯಾಸಕಾರರಿಗೆ ಸೂರ್ಯತ್ರಾಟಕವನ್ನು ಕಟ್ಟುನಿಟ್ಟಾಗಿ ಬಹಿಷ್ಕರಿಸಲಾಗಿದೆ.

ಅಭ್ಯಾಸಕಾರನು ಅಭ್ಯಾಸದ ಅವಧಿಯಲ್ಲಿ ತನ್ನ ಕಣ್ಣುಗಳು ನೀರುನೀರಾಗುತ್ತಿವೆ ಎಂಬುದನ್ನು ಕಂಡುಕೊಂಡಲ್ಲಿ ಅವನು ಅಭ್ಯಾಸವನ್ನು ನಿಲ್ಲಿಸಬೇಕು. ಅವನು ಬಹಳ ಹೊತ್ತಿನ ವಿಶ್ರಾಮದ ನಂತರವೇ ಪ್ರಾರಂಭಿಸಬೇಕು.

## ತ್ರಾಟಕದ ಮುಂದಿನ ವರ್ಗೀಕರಣ:

ಅಭ್ಯಾಸಕಾರನು ತನಗೆ ತ್ರಾಟಕದಲ್ಲಿ ಸಂಪೂರ್ಣ ಜ್ಞಾನವಿದ್ದರೆ ಮಾತ್ರ ಯಶಸ್ವಿಯಾಗುವನು. ನಮ್ಮ ವಾಚಕರಿಗೆ ನಾವು ತ್ರಾಟಕದಲ್ಲಿ ಮೂರು ವಿಧಗಳಿವೆ ಎಂಬುದನ್ನು ಈಗಾಗಲೇ ಹೇಳಿದ್ದೇವೆ.

*೧. ಹತ್ತಿರದ ತ್ರಾಟಕ*

*೨. ದೂರದ ತ್ರಾಟಕ*

*೩. ಅಂತರ್ತ್ರಾಟಕ*

ಹತ್ತಿರದ ತ್ರಾಟಕವನ್ನು ಈ ಕೆಳಗಿನ ವರ್ಗೀಕರಣದಲ್ಲಿ ವಿಭಾಗಿಸಲಾಗಿದೆ.

---

1. ಪದ್ಮಾಸನ: ಇದೊಂದು ಶಾಸ್ತ್ರೀಯ ಧ್ಯಾನದ ಭಂಗಿ, ಇದರಲ್ಲಿ ಎರಡೂ ಕಾಲುಗಳನ್ನು ಮಡಚಿ ಪಾದಗಳನ್ನು ವಿರುದ್ಧ ತೊಡೆಗಳ ಮೇಲೆ ಇರಿಸಬೇಕು. ಅಂಗಾಲುಗಳು ಮೇಲ್ಮುಖವಾಗಿರುತ್ತವೆ.

(ಅ) ಮೂರ್ತಿ ತ್ರಾಟಕ (ಆ) ಜ್ಯೋತಿ ತ್ರಾಟಕ (ಇ) ಮೂಗಿನ ತುದಿ ತ್ರಾಟಕ (ಈ) ಕೆಂಪು ಬಟ್ಟೆ ತ್ರಾಟಕ(ಉ) ಬಿಂದು ತ್ರಾಟಕ(ಊ) ಪ್ರತಿಬಿಂಬ ತ್ರಾಟಕ (ಎ) ಬೆಂಕಿ ತ್ರಾಟಕ.
ಹಾಗೆಯೇ *ದೂರತ್ರಾಟಕವನ್ನು* ಈ ಕೆಳಗಿನ ವರ್ಗೀಕರಣದಲ್ಲಿ ವಿಭಾಗಿಸಲಾಗಿದೆ.

(ಅ) ದೃಶ್ಯ ತ್ರಾಟಕ (ಆ) ನಕ್ಷತ್ರ ತ್ರಾಟಕ (ಇ) ಸೂರ್ಯ ತ್ರಾಟಕ .

## ಹತ್ತಿರದ ತ್ರಾಟಕದ ವರ್ಗೀಕರಣಗಳು:

### ಅ. ಮೂರ್ತಿ ತ್ರಾಟಕ

ಅಂದಾಜು 3 ರಿಂದ 4 ಅಂಗುಲಗಳ ಎತ್ತರವಿರುವ ಮೂರ್ತಿಯನ್ನು ತೆಗೆದುಕೊಂಡು ಸ್ವಲ್ಪದೂರದಲ್ಲಿಡಿರಿ. ನಿಮ್ಮ ಕಣ್ಣನ್ನು ಮೂರ್ತಿಯ ಮೇಲೆ ಕೇಂದ್ರೀಕರಿಸಿ ಏಕಾಗ್ರತೆಯನ್ನು ವೃದ್ಧಿಸಿಕೊಳ್ಳಲು ಪ್ರಾರಂಭಿಸಿ. ನಿಮ್ಮಲ್ಲಿ ಮೂರ್ತಿ ಇಲ್ಲದಿದ್ದರೆ ಬದಲಾಗಿ ಭಾವಚಿತ್ರವನ್ನು ತೆಗೆದುಕೊಳ್ಳಿ. ಆ ಚಿತ್ರವು ಬಣ್ಣದ್ದಲ್ಲವೆಂಬುದನ್ನು ಖಾತ್ರಿಮಾಡಿಕೊಳ್ಳಿ.

ಮುಂದಿರುವ ಮೂರ್ತಿ ಅಥವಾ ಚಿತ್ರದೊಡನೆ, ಆ ಮೂರ್ತಿ ಅಥವಾ ಚಿತ್ರದ ಯಾವುದು ಇದೆಯೋ ಅದು, ಕಣ್ಣಿನ ಮೇಲೆ ನಿಮ್ಮ ದೃಷ್ಟಿಯನ್ನು ಕೇಂದ್ರೀಕರಿಸಲು ಪ್ರಾರಂಭಿಸಿ. ನೀವು ಸ್ವಲ್ಪವೂ ಅಲುಗಾಡದೆ ಅಥವಾ ವಿಚಲಿತಗೊಳ್ಳದೆ ಗೊತ್ತು ಪಡಿಸಿದ ವಸ್ತುವಿನ ಮೇಲೆ ನಿಮ್ಮ ದೃಷ್ಟಿಯನ್ನು ಕೇಂದ್ರೀಕರಿಸಬೇಕು. ನಿಮ್ಮ ಸ್ವಂತ ಕಣ್ಣಲ್ಲಿ ನೀರನ್ನು ತಿಳಿಯುವವರೆಗೂ ನಿಮ್ಮ ಕಣ್ಣನ್ನು ವಾಲಿಸಬಾರದು. ಈ ಅವಸ್ಥೆಯಲ್ಲಿ ನೀವು ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳುವುದು ಉತ್ತಮವು. ಸಾಕಷ್ಟು ವಿಶ್ರಾಂತಿಯನ್ನು ತೆಗೆದುಕೊಂಡ ನಂತರ ನಿಮ್ಮ ಕಣ್ಣುಗಳನ್ನು ಮುಚ್ಚಿಕೊಂಡು ಆ ಮೂರ್ತಿ ಅಥವಾ ಚಿತ್ರವನ್ನು ನಿಮ್ಮ ವಿಶದವಾದ ಕಾಲ್ಪನಿಕತೆಯಲ್ಲಿ ತಂದು ನಂತರ ಅದನ್ನು ತ್ರಾಟಕದ ಅಭ್ಯಾಸಕ್ಕೆ ಹಾಕಬೇಕು. ಕನಿಷ್ಠ 20 ರಿಂದ 25 ಸಾರಿ ಆ ಮೂರ್ತಿ ಅಥವಾ ಚಿತ್ರವನ್ನು ನಿಮ್ಮ ಕಾಲ್ಪನಿಕತೆಯಲ್ಲಿ ಮುಂದೆ ತರಬೇಕು. ಕೆಲವು ದಿನಗಳ ನಿಯಮಿತವಾದ ಅಭ್ಯಾಸದ ನಂತರ ಅಭ್ಯಾಸಕಾರನು ಸ್ವಲ್ಪವೂ ವಿಳಂಬಿಸದೆ ಆ ಮೂರ್ತಿ ಅಥವಾ ಚಿತ್ರವನ್ನು ತನ್ನ ಕಾಲ್ಪನಿಕತೆಯಲ್ಲಿ ತರಲು ಸಮರ್ಥವಾಗುವನು. ಆರಂಭದಲ್ಲಿ ಆ ಮೂರ್ತಿ ಅಂದಾಜು ಒಂದು ನಿಮಿಷ ತನ್ನ ಪ್ರತ್ಯಕ್ಷ ಸ್ಥಿರ ಕಾಲ್ಪನಿಕತೆಯಲ್ಲಿ ನಿಲ್ಲುವುದು. ನಿಧಾನವಾಗಿ ಅಭ್ಯಾಸಕಾರನು ಆ ಮೂರ್ತಿಯು ತನ್ನ ಕಲ್ಪನೆಯಲ್ಲಿ ಹೆಚ್ಚು ಹೊತ್ತು ನಿಲ್ಲುವುದನ್ನು ಕಾಣುವನು.

ಮೊದಲಿನಲ್ಲಿ ನಿಮ್ಮ ಮನಸ್ಸಿನ ಕಣ್ಣು ಅಥವಾ ಕಾಣುವ ಕಲ್ಪನೆಯು ಮೂರ್ತಿ ಮತ್ತು ಚಿತ್ರದೊಂದಿಗೆ ಬಹಳ ವಸ್ತುಗಳನ್ನು ನೋಡುತ್ತದೆ. ನಿಧಾನವಾಗಿ ಅದು ಒಂದೇ ಬಿಂದುವಿನ ಕೇಂದ್ರ ನಿರ್ದಿಷ್ಟ ಗುರಿಯಲ್ಲಿ ನೆಲೆಯಾಗುತ್ತದೆ. ಪುನಃ ಈ ಏಕಾಗ್ರತೆಯು ಅಭ್ಯಾಸಕಾರನಿಗೆ ತಾನು ಬಯಸಿದಂತಹ ದೃಷ್ಯ ಅಥವಾ ವ್ಯಕ್ತಿಯನ್ನು ನೋಡುವ ಶಕ್ತಿಯನ್ನು ಕೊಡುತ್ತದೆ. ಈ ವಸ್ತುಗಳನ್ನು ನೋಡುವುದಕ್ಕೋಸ್ಕರ ಅಭ್ಯಾಸಕಾರನು ಅಂತಹ ವಸ್ತುಗಳನ್ನು ಮೂರ್ತಿ ಅಥವಾ ಚಿತ್ರದ ಜೊತೆಗೆ ತ್ರಾಟಕದಲ್ಲಿ ತರಬೇಕು. ಅವನ್ನು ಎಷ್ಟು ಹೊತ್ತಾಗುತ್ತದೋ ಅಷ್ಟು ಹೊತ್ತು ದೃಷ್ಟಿಯಲ್ಲಿ ತರುವ ಪ್ರಯತ್ನ ಮಾಡಬೇಕು.

ಈ ಅಭ್ಯಾಸವು ಮೂರನೆಯ ಕಣ್ಣನ್ನು ತೆರೆಯಲು ಎಡೆ ಮಾಡಿಕೊಡುತ್ತದೆ. ಓರ್ವನು ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುವುದರಿಂದ ಮತ್ತು ತ್ರಾಟಕವನ್ನು ಮುಂದೆ ಇಟ್ಟಂತಹ ಮೂರ್ತಿಯ ಮೇಲೆ ತರವುದರಿಂದ ಮೂರನೆಯ ಕಣ್ಣು ತೆರೆಯುವ ವಿಧಾನವು ರೂಪಗೊಳ್ಳಲು ಆರಂಭಿಸುತ್ತದೆ. ಈ ಅಭ್ಯಾಸದಿಂದ ಮೂರನೆಯ ಕಣ್ಣಿಗೆ ಬೆಂಬಲವಾಗಿ ನಿಂತ ನರದಮೇಲಿನ ಉಬ್ಬುವು ಶಕ್ತಿಯುತವಾಗುತ್ತದೆ.

ಟಿಬೆಟ್ಟಿನಲ್ಲಿ ತಲೆಯಮೇಲೆ ರಂಧ್ರವನ್ನು ತೆಗೆದು ಮೂರನೆಯ ಕಣ್ಣನ್ನು ತೆರೆಯುತ್ತಾರೆ. ಹೇಗಾದರೂ ತ್ರಾಟಕದ ತಂತ್ರವು ಹೆಚ್ಚು ಪರಿಣಾಮಕಾರಿಯಾಗಿರುವುದನ್ನು ಕಂಡುಕೊಳ್ಳಲಾಗಿದೆ.

**ಆ. ಜ್ಯೋತಿ ತ್ರಾಟಕ:**

ನೀವು ಚಿತ್ರದ ಮೇಲೆ ದೃಷ್ಟಿಯನ್ನು ಯಶಸ್ವಿಯಾಗಿ 32 ನಿಮಿಷಗಳು ಕೇಂದ್ರೀಕರಿಸಿದ್ದೀರೆಂದು ಸರಿಯಾಗಿ ಖಚಿತಪಡಿಸಿಕೊಂಡ ಮೇಲೆ ನೀವು ಜ್ಯೋತಿ ತ್ರಾಟಕದ ಅಭ್ಯಾಸವನ್ನು ಪ್ರಾರಂಭಿಸಬೇಕು.

ಒಂದು ದೊಡ್ಡ ಗಾತ್ರದ ಮೋಂಬತ್ತಿಯನ್ನು ತೆಗೆದುಕೊಂಡು ಜೋರಾಗಿ ಬೀಸುವ ಗಾಳಿಯಿರದಿರುವ ಕೊಠಡಿಯಲ್ಲಿ ಇಡಿರಿ. ಏಕೆಂದರೆ ಕೊಠಡಿಯಲ್ಲಿಯ ಏನೂ ಆ ಜ್ಯೋತಿಯನ್ನು ನಂದಿಸಬಾರದು. ಈಗ ಕೊಠಡಿಯನ್ನು ಕತ್ತಲಾಗಿಸಿ. ಮೋಂಬತ್ತಿಯಿಂದ ಕನಿಷ್ಠ ಮೂರು ಅಡಿ ದೂರದಲ್ಲಿ ಆಸನದ ಮೇಲೆ ಕೂತುಕೊಳ್ಳಿ. ಮೋಂಬತ್ತಿಯ ಜ್ವಾಲೆಯ ಮೇಲೆ ನಿಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿ. ಬೇರೆ ಯಾವುದೇ ಯೋಚನೆಗಳು ಅಥವಾ ಭಾವನೆಗಳು ನಿಮ್ಮ ಮನಸ್ಸನ್ನು ಹಾಯುವುದಿಲ್ಲವೆಂದು ನಿಶ್ಚಯಮಾಡಿಕೊಳ್ಳಿ.

ನೀವು ನಿಮ್ಮ ನಿಯಮಿತ ಅಭ್ಯಾಸದಿಂದ ಮುಂದುವರಿದ ಹಾಗೆಲ್ಲಾ ಮೋಂಬತ್ತಿಯಿಂದ ಹೊರಬರುತ್ತಿರುವಂತಹ ಬೆಳಕು ಹೆಚ್ಚು ಹೆಚ್ಚಾಗಿ ಪ್ರಕಾಶಮಾನ ಮತ್ತು ಹೊಳೆಯುವುದನ್ನು ಕಾಣುವಿರಿ. ಕೆಲವೊಮ್ಮೆ ನಿಮಗೆ ಬೇಕಾಗಿರುವ ಮುಖಗಳನ್ನೇ ನೀವು ಅವುಗಳನ್ನು ಜ್ಞಾಪಿಸಿಕೊಂಡ ತಕ್ಷಣವೇ ನೋಡುವಿರಿ.



ಜ್ಯೋತಿ ತ್ರಾಟಕ

ನಿಜವಾದ ಮತ್ತು ಉತ್ತಮ ಫಲಿತಾಂಶಕ್ಕಾಗಿ ನೀವು ಜ್ಯೋತಿ ತ್ರಾಟಕವನ್ನು ಪ್ರತಿದಿನ ಕನಿಷ್ಠ 20 ರಿಂದ 25 ನಿಮಿಷಗಳವರೆಗೆ ಅಭ್ಯಸಿಸಿಬೇಕು.

ವಾಸ್ತವಿಕೆಯಲ್ಲಿ ಮೋಂಬತ್ತಿಯ ಜ್ವಾಲೆಯ ಒಂದು ಬೆಂಕಿಯ ತುಣಕಾಗಿರುತ್ತದೆ. ಈ ಕಾರಣದಿಂದ ನೀವು ಈ ತಂತ್ರದ ಅಭ್ಯಾಸವನ್ನು ಮುಂದುವರಿಸಿದಲ್ಲಿ ನಿಮ್ಮ ಕಣ್ಣಲ್ಲಿ ಬೆಂಕಿಯ ಹೊಳವು ವೃದ್ಧಿಸುತ್ತದೆ ಅಲ್ಲದೆ ಎಂತಹ ಕಣ್ಣು ಕುಕ್ಕುವಂತಹ ಪ್ರಕಾಶವಿರುತ್ತದೆಂದರೆ ಯಾರೊಬ್ಬರೂ ನಿಮ್ಮ ಕಡೆ ನೋಡಲು ಧೈರ್ಯಮಾಡುವುದಿಲ್ಲ. ಅವನು ನಿಮ್ಮ ಕಡೆ ನೋಡಿದ್ದೇಯಾದರೆ ಅವನು ತನ್ನಷ್ಟಕ್ಕೆ ತಾನೇ ಕ್ಷೀಣ ಹಾಗೂ ಎದೆಗುಂದಿದ ಅನುಭವವನ್ನು ಪಡೆಯುತ್ತಾನೆ.

ಹಿಂದೂ ಧರ್ಮಗ್ರಂಥಗಳು ಒಬ್ಬ ಕುಪಿತಗೊಂಡ ಸಾಧು ಎತ್ತರದ ಮರದ ಕೊಂಬೆಗಳಲ್ಲಿ ಕೂತುಕೊಂಡ ಪಕ್ಷಿಯ ಕಡೆ ಕೇವಲ ಒಂದು ನೋಟವನ್ನು ಬೀರಿ ಅದನ್ನು ಸಾಯಿಸಿ ಕೆಳಗುರುಳಿಸಿದಂತಹ ವಾಸ್ತವ ಜೀವನ ಕಥೆಗಳಿಂದ ಪರಿಪೂರ್ಣವಾಗಿದೆ. ಅದು ಒಂದು ವಿಧದಲ್ಲಿ ತದನಂತರದಲ್ಲಿ ಪಕ್ಷಿಯನ್ನು ಸುಟ್ಟಂತಹ ಅವನ ಕಣ್ಣುಗಳಿಂದ ಹೊರಸೂಸಿರುವಂತಹ ಬೆಂಕಿಯಾಗಿತ್ತು.

ಅಭ್ಯಾಸಕಾರನು ಅವನ ಶಕ್ತಿಯನ್ನು ಉತ್ತಮ ಕಾರ್ಯಕ್ಕಾಗಿ ವಿನಯೋಗಿಸಬೇಕು ಮತ್ತು ಎಂದೆಂದಿಗೂ ಆಚೆಯ ಉದ್ದೇಶಗಳಿಗಾಗಿ ವಿನಿಯೋಗಿಸಬಾರದು.

**ಇ. ಮೂಗಿನ ತುದಿಯ ತ್ರಾಟಕ:**

ನೀವು ಮೂಗಿನ ತುದಿ ತ್ರಾಟಕಕ್ಕೆ ಅಣಿಯಾಗುವುದಕ್ಕೆ ಮುಂಚೆ ಜ್ಯೋತಿ ತ್ರಾಟಕದ ನಿಯಮಿತ ಅಭ್ಯಾಸವನ್ನು ಮಾಡಿರುವುದನ್ನು ಖಚಿತಪಡಿಸಿಕೊಳ್ಳಿ.

ನಿಮ್ಮ ಮೂಗಿನ ತುದಿಯ ಮೇಲೆ ನಿಮ್ಮ ಕಣ್ಣನ್ನು ಕೇಂದ್ರೀಕರಿಸುವುದರ ಮೂಲಕ ಈ ಅಭ್ಯಾಸವನ್ನು ಪ್ರಾರಂಭಿಸಿ. ಈ ಸ್ಥಿರತೆಯನ್ನು ಸಾಧಿಸಿದಾದನಂತರ ನಿಮ್ಮ ಕಣ್ಣನ್ನು ಹುಬ್ಬುಗಳ ಮಧ್ಯ ಸ್ಥಾಪಿಸಲು ತೆಗೆದುಕೊಂಡು ಹೋಗಿರಿ.

ಇದು ಒಳ್ಳೆ ಪ್ರಯಾಸಕರ ಅಭ್ಯಾಸವು. ಅದು ಮೇಲಿಂದ ಮೇಲೆ ತಲೆನೋವುಗಳಿಗೆ ಎಡೆಮಾಡುತ್ತದೆ. ಕಣ್ಣುರೆಪ್ಪೆಗಳು ವಿಶ್ರಾಂತಿ ಇಲ್ಲದೇ ನೋವಾಗುವವು. ಆದ್ದರಿಂದ ಅಭ್ಯಾಸಕಾರನು ಈ ಅಭ್ಯಾಸದೊಂದಿಗೆ ಮುಂದೆ ಹೋಗಬೇಕು ಹಾಗೆಯೇ ಅಭ್ಯಾಸದ ಸಮಯವನ್ನು ಮುಂದುವರಿಸುತ್ತಾ ಹೋಗಬೇಕು. ಅದನ್ನು ಒಂದು ದಿನದಲ್ಲಿ ಅಥವಾ ಒಂದು ತಿಂಗಳಲ್ಲಿ ಸಾಧಿಸಬಹುದು. ಕೆಲವೊಮ್ಮೆ ಅದು ಸಂಪೂರ್ಣ ವರ್ಷವನ್ನೇ ತೆಗೆದುಕೊಳ್ಳಬಹುದು.

ಈ ತರಹದ ಹುಬ್ಬುಗಳ ನಡುಕೇಂದ್ರದಲ್ಲಿ ಕೇಂದ್ರೀಕರಿಸುವಂತಹದನ್ನು ಒಳಗೊಂಡ ಅಭ್ಯಾಸಕ್ಕೆ *ತ್ರಿಕೂಟ* [1] ಅಭ್ಯಾಸವೆಂದು ಕರೆಯಲಾಗಿದೆ. ಅಭ್ಯಾಸಕಾರನು ಈ ತರಹದ ಅಭ್ಯಾಸವನ್ನು 32 ನಿಮಿಷಗಳವರೆಗೆ ಮುಂದುವರಿಸುವಲ್ಲಿ ಯಶಸ್ವಿಯಾದಾಗ ಅವನು ದಿವ್ಯ ಚಕ್ಷುವನ್ನು ಹೊಂದಿದವನಾಗುವನು. ಅವನು ಸುಲಭವಾಗಿ ಭೂತಕಾಲದಲ್ಲಿ ಹಣಿಕಿಹಾಕಿ ನೋಡಬಹುದು ಮತ್ತು ಆಚೆಯ ಮುಸುಕಾಗಿರುವ ಭವಿಷ್ಯವನ್ನೂ ನೋಡಬಹುದು. ಅವನು ಬೇರೆಯವರ ಯೋಚನೆಗಳನ್ನು ಮತ್ತು ಅನಿಸಿಕೆಗಳನ್ನು ಶೋಧಿಸಲೂಬಹುದು. ಅವನು ತನ್ನ ಮುಂದೆಯೇ ದೂರದಲ್ಲಿಯ ಮತ್ತು ಅಗೋಚರ ಸ್ಥಳಗಳಲ್ಲಿಯ ನಡೆಯುತ್ತಿರುವ ಸಂಗತಿಗಳನ್ನು ನೋಡಬಹುದು.

---

1. ತ್ರಿಕೂಟ: ಮೂರು-ತುದಿಯ ಗುಡ್ಡದ ಮೇಲೆ.

ಅವನು ದೇವರ ಪ್ರತಿಬಿಂಬ ಅಥವಾ ಭಾವನೆಯ ಮೇಲೆ ಸುಲಭವಾಗಿ ಏಕಾಗ್ರತೆವಹಿಸಿ ಧ್ಯಾನಿಸಲೂಬಹುದು.

**ಈ. ಕೆಂಪುಬಟ್ಟೆಯ ತ್ರಾಟಕ:**

ಒಂದು ಚೌಕಾಕಾರದ 6 ಅಂಗುಲ ಅಗಲ 6 ಅಂಗುಲ ಉದ್ದವಿರುವ ರಕ್ತಕೆಂಪಿನ ರೇಷ್ಮೆ ತುಂಡುಬಟ್ಟೆಯನ್ನು ತೆಗೆದುಕೊಳ್ಳಿ ಮತ್ತು ಅದನ್ನು ಒಂದು ತುಂಡು ಬಿಳೀ ಬಟ್ಟೆಯ ಮಧ್ಯದಲ್ಲಿ ಹೊಲೆಯಿರಿ. ಗೋಡೆಯ ಮೇಲೆ ಸ್ಥಿರವಾಗಿ ಇಡಿ. ರಕ್ತಕೆಂಪಿನ ಬಟ್ಟೆಯ ಮಧ್ಯದಲ್ಲಿ ಬಿಳೀ ಬಣ್ಣದಲ್ಲಿ ಒಂದು ಬಿಂದುವನ್ನು ಮಾಡಿ. ಈಗ ನಿಮ್ಮ ಕಣ್ಣನ್ನು ಈ ಬಿಳೀ ಬಿಂದುವಿನಮೇಲೆ ಸ್ಥಿರವಾಗಿಸಿ.

ಅಭ್ಯಸಿಸುವಾಗ ನಿಮ್ಮ ಮನಸ್ಸನ್ನು ಸಂಪೂರ್ಣವಾಗಿ ನಿಗ್ರಹಿಸಿ ಮತ್ತು ಸಮಗ್ರವಾಗಿ ಹತೋಟಿಯಲ್ಲಿಟ್ಟುಕೊಳ್ಳಿ. ನೀವು ಬಿಳಿಯ ಬಿಂದುವಿನ ಮೇಲೆ ದೃಷ್ಟಿಸುವುದನ್ನು ಮುಂದುವರಿಸಿದ ಹಾಗೆ ಆ ರಕ್ತಕೆಂಪಿನ ಬಟ್ಟೆಯು ನೀಲಿ ಬಣ್ಣಕ್ಕೆ ತಿರುಗುತ್ತಿರುವುದನ್ನು ಕಾಣುವಿರಿ. ಆ ನೀಲಿ ಬಿಂದುವು ಹೊಳೆಯಲು ಪ್ರಾರಂಭಿಸುವುದು. ನೀವು ಸಂಪೂರ್ಣ ಏಕಾಗ್ರತೆಯನ್ನು ಸಾಧಿಸಿದಾಗ ಆ ಬಿಳೀ ಬಿಂದುವು ಕಣ್ಣುಕುಕ್ಕುವ ಹಾಗೆ ಹೊಳೆಯಲು ಪ್ರಾರಂಭಿಸುವುದು. ಕೆಲವುಸಾರಿ ಅದು ನಮ್ಮ ದೃಷ್ಟಿಯಿಂದಲೂ ಅಳಿಸಿಹೋಗಬಹುದು.

ಓರ್ವರು ಕೆಂಪು ಬಟ್ಟೆಯ ಮೇಲೆ ಒಂದು ದೊಡ್ಡ ಬೀಜವನ್ನು ಇಟ್ಟು ಇದೇ ತರಹದ ಅಭ್ಯಾಸವನ್ನು ಮಾಡಬಹುದು.

ನಿಯಮಿತವಾದ ಮತ್ತು ಬಹಳ ಕಾಲದ ಅಭ್ಯಾಸದ ನಂತರ ಕೆಂಪು ನೀಲಿಯಾದಾಗ, ನೀವು ಖಚಿತವಾಗಿ ಯಶಸ್ವಿಯಾಗಿದ್ದೀರೆಂದು ಗಣನೆಗೆ ತೆಗೆದುಕೊಳ್ಳಬಹುದು. ಏಕೆಂದರೆ ನೀಲಿಯು ಅಭ್ಯಾಸಕಾರನ ಅಂತರ್ಬೆಳಕನ್ನು ಪ್ರತಿಬಿಂಬಿಸುವುದು.

ಈ ಅಭ್ಯಾಸವು ಅಂತರ್ಮನಸ್ಸನ್ನು ಬಹಿರ್ಮನಸ್ಸಿಗೆ ಜೋಡಿಸುವುದು. ಫಲಿತಾಂಶವಾಗಿ ಮನಸ್ಸಿನ ಕಣ್ಣಿನ ಮುಂದೆ ಬಹಳ ದೈವೀಕವಾದ ಆಲೋಚನೆಗಳು ಬರುವವು. ಕಣ್ಣುಮುಚ್ಚಿಕೊಂಡು ನೀವು ಅದ್ವಿತೀಯ ಸಾಧನಗಳನ್ನೂ ಮತ್ತು ಯೋಗಿಗಳನ್ನೂ ನೋಡಬಹುದು, ಹಾಗೆಯೇ ನದಿಗಳ ಮತ್ತು ಗುಡ್ಡಗಳ ದೃಶ್ಯಗಳನ್ನೂ ಸಹ ನೋಡಬಹುದು.ಅದು ಜ್ಞಾಪಕಶಕ್ತಿಯನ್ನು ಸಹ ಬಲಪಡಿಸುವುದು. ಅದು ಮಾನಸಿಕ ಉದ್ವೇಗವನ್ನು ದೂರಮಾಡುವುದು. ಸಮಯವು ತನ್ನ ಆಯಕಟ್ಟನ್ನು ಕಳೆದುಕೊಳ್ಳುವುದು. ಉದಾಹರಣೆಗೆ, ಅಭ್ಯಾಸಕ್ಕೆ ಒಂದು ಗಂಟೆ ಕಳೆದಿದ್ದರೂ ಅದು ಕೇವಲ ಹತ್ತು ನಿಮಿಷಗಳ ಹಾಗೆ ತೋರುವುದು. ಸುಸ್ತಾಗಿರುವ ಕಣ್ಣುಗಳ ನೋವನ್ನು ಬಾರದ ಹಾಗಿರಲು ಓರ್ವರು ಈ ತ್ರಾಟಕವನ್ನು ದಿನಕ್ಕೆ ಹತ್ತು ಸಾರಿಗಿಂತ ಹೆಚ್ಚು ಅಭ್ಯಸಿಸಬಾರದು.

**ಉ. ಬಿಂದು ತ್ರಾಟಕ:**

ಬಿಂದು ತ್ರಾಟಕಕ್ಕೆ ನಿಯಮಿತ ಅಭ್ಯಾಸದ ಅವಶ್ಯಕತೆ ಇರುತ್ತದೆ. ಅಭ್ಯಾಸದ ಕೊನೆಯಲ್ಲಿ ನೀವು ಕಣ್ಣುಗಳನ್ನು ತಣ್ಣೀರಿನಲ್ಲಿ ತೊಳೆದುಕೊಳ್ಳುವುದು ಉತ್ತಮವು. ಅದು ಜಡತನವನ್ನು ನಿವಾರಿಸುತ್ತದೆ. ಕಣ್ಣುಕುಕ್ಕುವಂತಹ ಬೆಳಕಿನಲ್ಲಿ ಈ ಅಭ್ಯಾಸವನ್ನು ಮಾಡಬಹುದು. ಬೆಳಗಿನ ಜಾವದ ಮುಂಚೆಯು ಈ ಅಭ್ಯಾಸಕ್ಕೆ ಸರಿಯಾದ ಸಮಯವು. ಓರ್ವನು ಈ ಅಭ್ಯಾಸವನ್ನು ಹಗಲಿನಲ್ಲಿ ಮಾಡಬೇಕಿದ್ದರೆ ಬಾಗಿಲು ಮುಚ್ಚಿದ ಕೋಣೆಯಲ್ಲಿ ಅಭ್ಯಸಿಸುವುದು ಉತ್ತಮವು.

ಒಂದು ದೊಡ್ಡ ಚಿತ್ರ ಪಟದ ಮೇಲೆ ಒಂದು ಬಿಂದುವನ್ನು ಹಾಕಿರಿ. ಅದನ್ನು ಎದುರಿನ ಗೋಡೆಯ ಮೇಲೆ ಅಂಟಿಸಿ. ಆ ಗೋಡೆಯಿಂದ ಎರಡು ಅಥವಾ ಮೂರು ಅಡಿ ದೂರದ ಸ್ಥಳದಲ್ಲಿ ಕೂತುಕೊಳ್ಳಿ. ಈಗ ನಿಮ್ಮ ಕಣ್ಣನ್ನು ಕಪ್ಪು ಬಿಂದುವಿನ ಮೇಲೆ ನೆಡಿರಿ.

ಸ್ವಲ್ಪ ಸಮಯದ ನಂತರ ಅಭ್ಯಾಸಕಾರನು ಆ ಕಪ್ಪು ಬಿಂದುವನ್ನು ಕಾಣುವುದಿಲ್ಲ. ಈ ತರಹದ ಒಂದು ಅವಸ್ಥೆಯನ್ನು ನೀವು ಕಂಡಾಗ, ನಿಮ್ಮ ಪರಿಶ್ರಮವು ಯಶಸ್ಸಿಯ ಕಿರೀಟವನ್ನು ಪಡೆದಿದೆ ಎಂಬುದಾಗಿ ತಿಳಿದುಕೊಳ್ಳಬಹುದು.

ಈಗ ಅಭ್ಯಾಸದಲ್ಲಿ ಒಂದು ಬದಲಾವಣೆಯನ್ನು ಪರಿಚಯಿಸಿಕೊಳ್ಳಿ. ಆ ಕಪ್ಪು ಬಿಂದು ಅಲ್ಲದೆ, ಆ ಬಿಂದುವಿನ ಸುತ್ತಲಿರುವ ಕಪ್ಪು ವೃತ್ತವೂ ಅಳಿಸಿ ಹೋಗಿರುವುದನ್ನು ಕಾಣುವನು. ಅದರ ಪ್ರತಿಯಾಗಿ ಉಜ್ವಲವಾದ ಗೆರೆಗಳು ಅಲ್ಲಲ್ಲಿ ಚಿಗುರುತ್ತಿರುವುದನ್ನು ನೋಡುವನು. ಪುನಃ ಅದು ನಿಮ್ಮ ಅಭ್ಯಾಸದ ಯಶಸ್ಸಿಯ ಚಿಹ್ನೆಯಾಗಿದೆ.

ಮತ್ತೊಂದು ಬದಲಾವಣೆಯನ್ನು ಪರಿಚಯಿಸಿ. ಕಪ್ಪು ಬಿಂದುವಿನ ಸುತ್ತ ಅದೇ ತರಹದ ಏಳು ಗೆರೆಗಳನ್ನು ಎಳೆಯಿರಿ. ಆ ಕಪ್ಪು ಬಿಂದುವು ಆ ಗೆರೆಗಳ ಕೇಂದ್ರ ಸ್ಥಾನದಲ್ಲಿದೆ ಎಂಬುದನ್ನು ನಿಶ್ಚಯಮಾಡಿಕೊಳ್ಳಿ.

ಈಗ ಆ ಕಪ್ಪು ಬಿಂದುವಿನ ಮೇಲೆ ನಿಮ್ಮ ಕಣ್ಣನ್ನು ದಿಟ್ಟಿಸಿ. ನಿಧಾನವಾಗಿ ಅಭ್ಯಾಸಕಾರನಿಗೆ ಆ ಕಪ್ಪು ಬಿಂದು ಮತ್ತು ಒಂದು ಅಥವಾ ಎರಡು ಗೆರೆಗಳು ಸುತ್ತಳತೆಯು ಅದೇ ಸ್ಥಳದಲ್ಲಿ ಇರುವಹಾಗೆ ಅನ್ನಿಸುವುದಿಲ್ಲ. ಅವನು ಆ ಅಭ್ಯಾಸದಲ್ಲಿ ಮುಂದುವರಿದ ಹಾಗೆ ಎಲ್ಲಾ ಏಳು ಸುತ್ತು ಗೆರೆಗಳು ಮಾಯವಾದ ಹಾಗೆ ಕಾಣುವನು. ನೀವು ಈಗಾಗಲೇ *ತುರಿಯಾವಸ್ಥೆ*[1]ಯಲ್ಲಿ ಪ್ರವೇಶಿಸಿರುವ ಹಾಗೆ ಅದು ಅರ್ಥೈಸುತ್ತದೆ. ಅದು ಆಹ್ಲಾದಕರ ಅವಸ್ಥೆಯು, ಏಕೆಂದರೆ ನಿಮ್ಮ ಸ್ವಂತ ಅಂತರ್ಬೆಳಕು ಮುಂದೆ ಪ್ರಜ್ವಲಿಸುವುದಕ್ಕೆ ಆ ಏಳು ಗೆರೆಗಳು ಮಾಯವಾದವು. ಒಳಗಿನ ಭವ್ಯತೆಯು ಆ ಕಾಗದದ ಮೇಲೆ ಎಂತಹ ಅದ್ವಿತೀಯವಾದ ಶಕ್ತಿಯೊಡನೆ ಪ್ರತಿಬಿಂಬಿಸಿತೆಂದರೆ ಆ ಕಪ್ಪು ಬಿಂದುವು ಇದ್ದಹಾಗೆ ಕಾಣುವುದಿಲ್ಲ. ಕಪ್ಪು ಬಿಂದುವಿನ ಸುತ್ತಲಿರುವ ಏಳು ಸುತ್ತಗೆರೆಗಳೂ ಸಹ ಇದ್ದಹಾಗೆ ಕಾಣುವುದಿಲ್ಲ. ಆ ಸ್ಥಳದಲ್ಲಿ ನೀವು ನೋಡುವಂತಹ ಉಜ್ವಲವಾದ ಮತ್ತು ಬಂಗಾರದ ಬೆಳಕು ನಿಮ್ಮ ಗೋಚರಕ್ಕೆ ಬಂದಂತಹ ಆ ಕಾಗದದ ಮೇಲೆ ಪ್ರತಿಬಿಂಬಿಸಿರುವಂತಹ ಅಂತರ್ಬೆಳಕು. ಅದನ್ನು ಅದ್ವಿತೀಯವಾದ ಸಾಧನೆಯೆಂದು ಪರಿಗಣಿಸಲಾಗಿದೆ.

ಈಗ ನೀವು ಹೆಚ್ಚಿನ ಮಟ್ಟದ ಅಭ್ಯಾಸಕ್ಕೆ ಮುಂದುವರಿಯಬೇಕು. ಒಂದು ಬಿಳೀ ಬೋರ್ಡ್‌ನ ತುಂಡನ್ನು ತೆಗೆದುಕೊಳ್ಳಿ, ಮಧ್ಯದಲ್ಲಿ ಒಂದು ಅಂಗುಲ ವ್ಯಾಸವಿರುವ ಕಪ್ಪು ಬಿಂದುವನ್ನು ಹಾಕಿರಿ. ನಿಧಾನವಾಗಿ ಅಭ್ಯಾಸಕಾರನು ಆ ದೊಡ್ಡ ಕಪ್ಪುಬಿಂದುವು ತೆಳ್ಳಗಾಗುತ್ತಿರುವಹಾಗೆ ಕಾಣುವನು. ಅಂತಹ ದೊಡ್ಡಬಿಂದುವು ಸಂಪೂರ್ಣ ಮಾಯವಾಗುವ ಸಮಯವೂ ಬರಬಹುದು. ವಾಸ್ತವದಲ್ಲಿ ಆ ದೊಡ್ಡ ಬಿಂದುವು ಸ್ವಲ್ಪ ಸಮಯದವರೆಗೆ ಕಾಣುವುದಿಲ್ಲ. ಆದರೆ ನಿಧಾನವಾಗಿ ಅದು ಸಣ್ಣಬಿಂದುವಿನಿಂದ ತನ್ನ ವಾಸ್ತವಿಕ ದೊಡ್ಡಬಿಂದುವಿನ ಗಾತ್ರಕ್ಕೆ ಪುನಃ ಬರುವುದು. ಆಕಾರದಲ್ಲಿನ ಕುಗ್ಗುವಿಕೆ ಮತ್ತು ಹಿಗ್ಗುವಿಕೆಯು ಅಭ್ಯಾಸದ ಯಶಸ್ಸಿಯ ಸಂಕೇತವಾಗಿದೆ. ಕುಗ್ಗುವಿಕೆಯು ನಿಮ್ಮ ಬಹಿರ್ಮನಸ್ಸು ಸುಪ್ತಾವಸ್ಥೆಗೆ ಬಂದು ನಿಮ್ಮ ಅಂತರ್ಮನಸ್ಸು ಚೇತನಗೊಳ್ಳುತ್ತಿದೆ ಎಂಬುದನ್ನು ಸಂಕೇತಿಸುತ್ತದೆ. ಅದೇ ಪ್ರಕಾರವಾಗಿ ಬಿಂದುವು ತನ್ನ ವಾಸ್ತವಿಕ ಆಕಾರಕ್ಕೆ ಬರುತ್ತಿರುವುದು,

1. ಬಹಳವಾಗಿ ಲೀನವಾಗಿರುವಂತಹ ಆಧ್ಯಾತ್ಮಿಕ ಪರವಶತೆ.

ನಮ್ಮ ಬಹಿರ್ಮನಸ್ಸು, ಪುನಃ ಚೇತನಗೊಳ್ಳುತ್ತಿದೆ ಮತ್ತು ತನ್ನ ವಾಸ್ತವಿಕ ಆಕಾರಕ್ಕೆ ಹಿಂದಿರುಗುತ್ತಿರುವುದನ್ನು ಅರ್ಥೈಸುತ್ತದೆ.

ಈಗಾಗಲೇ ವಿಮರ್ಷಿಸಿದಂತೆ, ಅಂತರ್ಮನಸ್ಸು ಚೇತನಗೊಂಡಾಗ ಮತ್ತು ಬಹಿರ್ಮನಸ್ಸು ಸುಪ್ತಾವಸ್ಥೆಗೆ ಬಂದಾಗ, ಅಭ್ಯಾಸಕಾರನು ಸ್ವಾಭಾವಿಕ ಅವಸ್ಥೆಗೆ ಬಂದಿರುವುದನ್ನು ತೋರಿಸುತ್ತದೆ. ಈಗ, ಈ ಅವಸ್ಥೆಯಲ್ಲಿ ಅವನು ದೂರದ ವಸ್ತುಗಳನ್ನು ಹತ್ತಿರದ ವಸ್ತುಗಳನ್ನು ನೋಡುವಹಾಗೆ ನೋಡಬಹುದು.

ಒಮ್ಮೆ ನಾನು ಬಿಂದು ತ್ರಾಟಕವನ್ನು ಅಭ್ಯಸಿಸುತ್ತಿರುವಾಗ ಕೆಳಗಿನ ಮೆಟ್ಟಿಲುಗಳ ಮೇಲೆ ಹೆಜ್ಜೆ ಸಪ್ಪಳಗಳನ್ನು ಕೇಳಿದೆನು. ಆಗ ಆ ಆಕಾರವು ಕುಗ್ಗುತ್ತಿರುವುದನ್ನು ಪರೀಕ್ಷಿಸುತ್ತಿದ್ದೆನು. ಬೇರೆ ಪದಗಳಲ್ಲಿ ನನ್ನ ಬಹಿರ್ಮನಸ್ಸು ಸುಪ್ತಾವಸ್ಥೆಗೆ ಇಳಿದಿತ್ತು ಮತ್ತು ಅಂತರ್ಮನಸ್ಸು ಚುರುಕಾದ ಚಟುವಟಿಕೆಯಲ್ಲಿತ್ತು. ನಾನು ಹೆಜ್ಜೆಯ ಶಬ್ದವನ್ನು ಕೇಳುತ್ತಿರುವ ಹಾಗೆ ನನಗೆ ಕಾನ್ಪುರ್ ಕಾಲೇಜಿನ ಪ್ರೊಫೆಸರ್ ಬರುತ್ತಿದ್ದಾರೆಂದು ಅನ್ನಿಸತೊಡಗಿತು, ಅವರ ಹೆಸರು ಹೀಗೀಗೆ ಇದೆ. ಅವರು ಒಂದು ಕಾಗದವನ್ನೂ ತರುತ್ತಿದ್ದಾರೆ ಮತ್ತು ಒಂದು ನಿರ್ದಿಷ್ಟವಾದ ಘಟನೆಯು ಅದರ ಮೇಲೆ ಬರೆದಿರುವುದಾಗಿ ನನಗೆ ಅನ್ನಿಸತೊಡಗಿತು. ನನ್ನ ಅಂತರ್ಮನವು ಆ ಘಟನೆಗಳಲ್ಲಿ ನೋಡಿತ್ತು.

ಆ ಅಪರಿಚಿತನು ನನ್ನ ಕೋಣೆಯಲ್ಲಿ ಬಂದತಕ್ಷಣ, ನಾನು ಅವರಿಗೆ ತಾವು ಕಾನ್ಪುರ ಕಾಲೇಜಿನ ಪ್ರೊಫೆಸರ್ ಮತ್ತು ತಮ್ಮ ಹೆಸರು ಹೀಗೀಗೆ ಎಂದು ಹೇಳಿದೆ. ಅವರು ನನಗೆ ಪರಿಚಯವಿರುವ ಒಬ್ಬ ವ್ಯಕ್ತಿಯಿಂದ ಪತ್ರವನ್ನು ತಂದಿರುವುದಾಗಿ ಮತ್ತು ಪತ್ರವು ಅವರ ಜೇಬಿನಲ್ಲಿ ಇರುವುದೆಂದು ನಾನು ಹೇಳಿದೆ. ಆ ಪತ್ರದಲ್ಲಿ ಐದು ಪ್ರಶ್ನೆಗಳು ಬರೆದಿರುವುದಾಗಿ ನಾನು ಹೇಳಿದೆ. ಆ ಐದು ನಿರ್ದಿಷ್ಟ ಪ್ರಶ್ನೆಗಳನ್ನೂ ಸಹ ನಾನವರಿಗೆ ತಿಳಿಸಿದೆ.

ಪ್ರಾಯಶಃ ವಾಚಕರಿಗೆ ಇದು ಸಂಪೂರ್ಣವಾಗಿ ವಿಸ್ಮಯಕಾರಿ ಎನಿಸಬಹುದು. ಆದರೆ ಆಗ, ಮುಚ್ಚಿದ ಕಣ್ಣುಗಳಿಂದ, ಬರುವಂತಹ ಪ್ರೊಫೆಸರ್ ಕಡೆ ನಾನು ನೋಡುತ್ತಿದ್ದೆ, ಅವರ ಸ್ಥಾನ, ಅವರ ಕಾಲೇಜ್ ಮತ್ತು ಅವರ ಜೇಬಿನಲ್ಲಿರುವ ಪತ್ರ. ಅದರೊಂದಿಗೆ ಅದರಲ್ಲಿರುವ ಪ್ರಶ್ನೆಗಳನ್ನು ಸಹ ನಾನು ನೋಡುತ್ತಿದ್ದೆ. ಈ ಪ್ರಶ್ನೆಗಳ ಪರಿವಿಡಿಗಳು ನನಗೆ ನನ್ನ ಅಂತರ್ಮನಸ್ಸಿನಿಂದ ಬಿಡುಗಡೆ ಮಾಡಲ್ಪಟ್ಟಿತು. ಹಾಗೂ ಸತ್ಯಾಂಶವೆಂದರೆ ಅವರನ್ನು ನಾನು ಹಿಂದೆ ಎಂದೂ ಕಂಡಿರಲಿಲ್ಲ.

ಅಂತಹ ಅನುಭವಗಳು ಈ ನಿರ್ದಿಷ್ಟ ತ್ರಾಟಕ ಕಲಾ ಕೌಶಲ್ಯವನ್ನು ನಿಯಮಿತವಾಗಿ ಅಭ್ಯಾಸಮಾಡುವವರಿಗೆ ಅಸಹಜವೇನೂ ಅಲ್ಲ. ಆ ಸಮಯದಲ್ಲಿ ಅಂತರ್ಮನಸ್ಸು ಸಂಪೂರ್ಣ ಅರಿವಿಗೆ ತಲುಪುತ್ತದೆ ಆದ್ದರಿಂದ ಅದು ಸಂಪೂರ್ಣ ಜಗತ್ತಿನಲ್ಲಿ ಆಕಾಶ ದ್ರವ್ಯದ ಹಾಗೆ ಹರಡುತ್ತದೆ. ಪರಿಣಾಮವಾಗಿ ಅವನು ಎಲ್ಲಾ ಪ್ರಕೃತಿ ಘಟನೆಗಳನ್ನು ವಾಸ್ತವಿಕ ಛಾಯೆಯಲ್ಲಿ ಕಾಣುವನು. ಆ ಪ್ರೊಫೆಸರ್ ಎಚ್ಚರಿಸಿರುವ ಅರಿವಿನ ಸಂಪರ್ಕದಲ್ಲಿ ಬಂದರೆ, ಅಂತರ್ಮನಸ್ಸು ಪ್ರೊಫೆಸರ್‌ನ ಜೀವನದ ಎಲ್ಲಾ ಘಟನೆಗಳನ್ನು ಅಪ್ಪಟ ಛಾಯೆಯಲ್ಲಿ ನೋಡುವುದು. ಇಂತಹ ಒಂದು ಅವಸ್ಥೆಯಲ್ಲಿ ಅಭ್ಯಾಸಕಾರನು ಪ್ರೊಫೆಸರ್‌ನ ಭೂತಕಾಲದಲ್ಲಿ ಹಣಕಿ ನೋಡಬೇಕೆಂದರೆ, ಅದು ತನ್ನಷ್ಟಕ್ಕೆ ತಾನೇ ಅಪ್ಪಟ ಛಾಯೆಯಲ್ಲಿ ತೋರಿಸುವುದು. ಹೆಚ್ಚಾಗಿ ಅದೇ ರೀತಿಯಲ್ಲಿ, ತಾನು ಪ್ರೊಫೆಸರ್‌ರವರ ಭವಿಷ್ಯದಲ್ಲಿ ನೋಡಬಯಸಿದಲ್ಲಿ, ಸಂಪೂರ್ಣ ಭವಿಷ್ಯವು ಸಜೀವವಾಗಿ ಈಚೆಗೆ ಬರುವುದು.

ಕಾಗದದ ಮೇಲಿನ ಕಪ್ಪು ಬಿಂದುವಿನ ಕುಗ್ಗುವುದು ಮತ್ತು ಹಿಗ್ಗುವುದು ಅಭ್ಯಾಸಕಾರನ ಖಚಿತ ಯಶಸ್ಸಿಯ ಚಿಹ್ನೆಯಾಗಿದೆ. ಅದು ಅಂತರ್ಮನಸ್ಸು ಎಚ್ಚೆತ್ತುಕೊಂಡು ಸಹಜವಾದ ಸ್ಥಿತಿಯಲ್ಲಿ ಯಾವುದು ಸಾಧ್ಯವಿಲ್ಲವೋ ಅದನ್ನು ನೋಡುತ್ತದೆ ಎಂದು ಸ್ಪಷ್ಟವಾಗಿ ತೋರಿಸುತ್ತದೆ. ಕಪ್ಪು

ಬಿಂದುವಿನ ಸುತ್ತಲಿನ ಗೆರೆಗಳ ಮುಂದಿನ ಬದಲಾವಣೆಗಳು ಅಂತರ್ಮನಸ್ಸು ಸುಪ್ತಾವಸ್ಥೆಗೆ ಮರಳುತ್ತಿದ್ದು ಮತ್ತು ಬಹಿರ್ಮನಸ್ಸು ತನ್ನ ಅರಿವನ್ನು ಹಿಂದೆಗೆದುಕೊಳ್ಳುತ್ತಿದೆ ಎಂಬುದನ್ನು ಸೂಚಿಸುತ್ತದೆ.

### ಉ. ಪ್ರತಿಬಿಂಬ ತ್ರಾಟಕ

ಓರ್ವನು ಈ ತ್ರಾಟಕವನ್ನು ಎಂಟು ಅಂಗುಲ ಉದ್ದ ಮತ್ತು ಆರು ಅಂಗುಲ ಅಗಲದ ಕನ್ನಡಿಯ ಸಹಾಯದಿಂದ ಅಭ್ಯಸಿಸುವನು. ಗೋಡೆಯ ಮೇಲೆ ನೇತಾಕಿ. ಕನಿಷ್ಠ ಮೂರು ಅಡಿ ದೂರದಲ್ಲಿ ನಿಮ್ಮ ಆಸನವನ್ನು ತೆಗೆದುಕೊಳ್ಳಿ. ಕೋಣೆಯಲ್ಲಿ ಅವಶ್ಯಕತೆಗಿಂತ ಹೆಚ್ಚಾಗಿ ಬೆಳಕಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಿ. ನೀವು ಕನ್ನಡಿಯ ಕಡೆ ನೋಡಿದಾಗ ನಿಮ್ಮ ಮುಖವು ಅದರಲ್ಲಿ ಪ್ರತಿಬಿಂಬಿಸಿರುವುದನ್ನು ಕಾಣುವಿರಿ. ಈಗ ಆ ಪ್ರತಿಬಿಂಬದಲ್ಲಿ ನಿಮ್ಮ ಹುಬ್ಬುಗಳ ನಡುವೆ ಮಧ್ಯದಲ್ಲಿ ನಿಮ್ಮ ಕಣ್ಣನ್ನು ಸ್ಥಿರವಾಗಿಸಿ. ನಿಧಾನವಾಗಿ ನೀವು ಪ್ರತಿಬಿಂಬವನ್ನು ಕಾಣುವುದಿಲ್ಲ. ನೀವು ಕೇವಲ ಕನ್ನಡಿಯನ್ನು ಕಾಣುವಿರಿ. ಈಗ ಈ ಪರಿಸ್ಥಿತಿಯಲ್ಲಿ ನಿಧಾನವಾದ ವೇಗದಲ್ಲಿ ಉಸಿರಾಡಿರಿ. ನಿಮ್ಮ ಉಸಿರಾಡುವುದು ಎಷ್ಟು ನಿಧಾನವಾಗಿರುತ್ತದೋ ಅಷ್ಟೇ ಬೇಗ ಪ್ರತಿಬಿಂಬವು ಮಾಯವಾಗುವುದು. ಸ್ವಲ್ಪ ಸಮಯದ ನಂತರ ಆ ಪ್ರತಿಬಿಂಬವು ಮತ್ತೆ ಗೋಚರವಾಗುವುದು. ಮತ್ತೊಮ್ಮೆ ನೀವು ಅದನ್ನು ದಿಟ್ಟಿಸಿ ನೋಡಿದರೆ ಅದು ಅದೃಷ್ಯವಾಗುತ್ತದೆ.

ನೀವು ಈ ರೀತಿಯಾಗಿ ಸುಮಾರು ಒಂದು ವರ್ಷ ಅಭ್ಯಸಿಸಬೇಕು. ಈ ತ್ರಾಟಕದ ತಂತ್ರವನ್ನು ಅಭ್ಯಸಿಸಬೇಕಾದರೆ ನೀವು ಯಾವುದೇ ಮಂತ್ರವನ್ನು ಉಚ್ಚರಿಸಬೇಕಾಗಿಲ್ಲ. ನೀವು ಈ ತಂತ್ರವನ್ನು ಮುಂದುವರಿಸಿದಾಗ ನೀವು ಕನ್ನಡಿಯಲ್ಲಿ ಬಹಳ ನವೀನ ದೃಷ್ಯಗಳನ್ನು ನೋಡಲಾರಂಭಿಸುವಿರಿ. ನೀವು ವಿಧವಿಧದ ದೃಷ್ಯಗಳನ್ನು ನೋಡಿದರೆ ನೀವು ನಿಮ್ಮ ಅಭ್ಯಾಸದಲ್ಲಿ ಯಶಸ್ವಿಯಾಗಿದ್ದೀರೆಂದು ಪರಿಗಣಿಸಬಹುದು. ಇದರ ಒಳ ಅರ್ಥವೇನೆಂದರೆ ನಮ್ಮ ಎಲ್ಲಾ ಹತ್ತಿಟ್ಟುಕೊಂಡ ಆಸೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಮರೆಯಾಗಿರುವ ಸುಪ್ತತೆಗೆ ಸಂಬಂಧಿಸಿದ ದೃಷ್ಯಗಳು ಕನ್ನಡಿಯಲ್ಲಿ ತ್ರಾಟಕದ ಮಾಧ್ಯಮದಿಂದ ಹೊರಬರುವವು. ಕೆಲವೊಮ್ಮೆ ನಾವು ಎಂತಹ ದೃಷ್ಯಗಳನ್ನು ನೋಡುತ್ತೇವೆಂದರೆ ನಮ್ಮ ಜ್ಞಾನಕ್ಕೆ ಅವು ಎಂದೂ ಬಂದಿರುವುದಿಲ್ಲ. ಆದರೆ ಅಂತರ್ಮನಸ್ಸು ಅವುಗಳನ್ನು ನೋಡಿರಬಹುದು. ಖಚಿತವಾಗಿ ಈ ಕಾರಣದಿಂದಲೇ ಅವೆಲ್ಲವೂ ಕನ್ನಡಿಯಲ್ಲಿ ಹೊರಬೀಳುವವು.

ತದನಂತರದಲ್ಲಿ ನೀವು ಅಭ್ಯಾಸವನ್ನು ಮುಂದುವರಿಸಿದಾಗ ಆ ದೃಷ್ಯಗಳು ಮಾಯವಾಗುವವು. ಏಕೆಂದರೆ ಬಹಿರ್ಮನಸ್ಸು ಎಲ್ಲೆಡೆಯೂ ಹರಡುತ್ತದೆ. ಈ ತರಹದ ಪರಿಸ್ಥಿತಿಯಲ್ಲಿ ಎಲ್ಲೇಯಾಗಲಿ, ಏನನ್ನೇಯಾಗಲಿ ಅದು ಏನನ್ನಾದರೂ ನೋಡಿದರೂ, ಅದು ತನ್ನಷ್ಟಕ್ಕೆ (ಅಂತರ್ಮನಸ್ಸು) ತಾನೇ ಪ್ರತಿಬಿಂಬವಾಗಿ ತಿರುಗುವುದು. ಈ ತರಹದ ಅವಸ್ಥೆಗೆ *ತುರಿಯಾವಸ್ಥೆ* ಎಂದು ಕರೆಯಲಾಗಿದೆ.

ಈ ತರಹದ ಅಭ್ಯಾಸಗಳಿಗೆ ಉಪಯೋಗಿಸಿರುವಂತಹ ಕನ್ನಡಿಯನ್ನು ಬೇರೆಯಾವುದಕ್ಕೂ ಉಪಯೋಗಿಸಬಾರದು. ನಮ್ಮ ಅಭ್ಯಾಸದ ನಂತರ ಆ ಕನ್ನಡಿಯನ್ನು ಒಂದು ಒಳ್ಳೆಯ ಬಟ್ಟೆಯಲ್ಲಿ ಸುತ್ತಿ ಅದನ್ನು ಸುರಕ್ಷಿತ ಸ್ಥಳದಲ್ಲಿರಿಸಬೇಕು.

ಈ ತಂತ್ರವು ಕಣ್ಣುಗಳಲ್ಲಿ ಹೊಳಪನ್ನು ಉತ್ಪಾದಿಸುವುದು ಮತ್ತು ಬೇಗನೇ ದೃಷ್ಟಿಯಲ್ಲಿ ದೈವೀಕ ಖಳೆ ಹುಟ್ಟುವುದು. ಈ ಒಂದು ಹೊಳಪಿನ ಸದ್ಗುಣದಿಂದ ಓರ್ವನು ಬೇಗನೇ ಸಮ್ಮೋಹನಕ್ಕೊಳಗಾಗ ಬಹುದು. ಪ್ರಾಣಿ ಪಕ್ಷಿಗಳು ಸಹ ಸಮ್ಮೋಹನಕ್ಕೊಳಗಾಗುವವು. ಈ ತರಹದ ಹೊಳಪನ್ನು ಬೆಳೆಸಿಕೊಂಡ ನಂತರ ಒಮ್ಮೆ ನೀವು ಯಾರ ಕಣ್ಣಲ್ಲಾದರೂ ನೋಡಿದರೆ ಅವನು ಯಾವುದೇ

ಉದ್ದೇಶಕ್ಕೆ ಅದು ಏನೇಯಾಗಿರಲಿ, ಒಪ್ಪುವನು. ಉದಾಹರಣೆಗೆ: ನೀವು ಕೆರಳಿದವನಲ್ಲಿ ನೋಟವನ್ನು ಬೀರಿದರೆ, ಅವನು ಶಾಂತನಾಗುತ್ತಾನೆ. ಕ್ರೂರಪ್ರಾಣಿಗಳೂ ಸಹ ನಿಮ್ಮ ಇಚ್ಛೆಯ ಪ್ರಕಾರವಾಗಿ ನಡೆದುಕೊಳ್ಳುತ್ತವೆ.

ನಿರ್ಜೀವ ವಸ್ತುಗಳೂ ಸಹ ಸಮ್ಮೋಹನ ವ್ಯಾಪ್ತಿಯಿಂದ ದೂರವಿಲ್ಲ. ಉದಾಹರಣೆಗೆ: ಒಂದು ಕರವಸ್ತ್ರ ಅಥವಾ ಉಂಗುರವನ್ನು ತೆಗೆದುಕೊಳ್ಳಿ. ಆದಕ್ಕೆ ಒಂದು ಸ್ಥಿರವಾದ ನೋಟವನ್ನು ಕೊಟ್ಟು, ಯಾರಾದರೂ ಆ ವಸ್ತುವಿನ ಮಾಲಿಕರನ್ನು ನೋಡಿದರೆ ಅವರು ಸಮ್ಮೋಹನಗೊಳ್ಳುತ್ತಾರೆಂದು ಆಜ್ಞಾಪಿಸಿರಿ. ಆಶ್ಚರ್ಯಕ್ಕೆ ಯಾರಾದರೂ ಇದನ್ನು ಮಾಡಿದವರು ತಮ್ಮಷ್ಟಕ್ಕೆ ತಾವೇ ಸಂಪೂರ್ಣ ಸಮ್ಮೋಹನಗೊಳ್ಳುವರು. ಒಮ್ಮೆ ನನ್ನೊಬ್ಬ ಸ್ನೇಹಿತನು ನನ್ನಲ್ಲಿಗೆ ಬಂದು ತಾನು ವರಿಷ್ಠ ಅಧಿಕಾರಿಯೊಬ್ಬರನ್ನು ನಾಳೆಯ ದಿನ ಕಾಣಬೇಕಾಗಿದೆಯೆಂದು ಹೇಳಿದನು. ತಾನು ಒಂದು ದೊಡ್ಡತಪ್ಪು ಮಾಡಿದುದಾಗಿಯೂ, ತಾನು ಆ ಅಧಿಕಾರಿಯಿಂದ ಸಿಟ್ಟನಿಂದ ಬೈಸಿಕೊಳ್ಳುವುದು ಖಚಿತವೆಂದು ಹೇಳಿದನು. ನಾನು ಅವನಿಗೆ ಧೈರ್ಯ ಕೊಟ್ಟೆ. ಅವನ ಒಂದು ಬೆರಳಲ್ಲಿದ್ದ ಅವನ ಒಂದು ಉಂಗುರವನ್ನು ನಾನು ತೆಗೆದುಕೊಂಡು ಹೋದೆ. ಯಾರೂ ಇಲ್ಲದ ಕೋಣೆಗೆ ಹೋದೆ ಮತ್ತು ಯಾರಾದರೂ ಆ ಉಂಗುರವನ್ನು ನೋಡಿದರೆ ಅದರ ಮಾಲಿಕರ ಪ್ರಭಾವಕ್ಕೊಳಗಾಗುವರು ಎಂದು ಅದಕ್ಕೆ ಆಜ್ಞಾಪಿಸಿದೆ.

ಅದನ್ನು ತಿರುಗಿ ಅದರ ಮಾಲಿಕನಿಗೆ ಕೊಟ್ಟೆ. ಆತನು, ಆ ಅಧಿಕಾರಿಯು ಬಹಳ ಕೋಪದಲ್ಲಿದ್ದು ಮತ್ತು ಅವನನ್ನು ಕೆಲಸದಿಂದ ತೆಗೆಯಲು ನಿರ್ಧರಿಸಿರುವುದಾಗಿ, ನನಗೆ ತಿಳಿಸಲು ಹಿಂದಿರುಗಿ ಬಂದನು. ಆದರೆ ಆತನು ಆ ಉಂಗುರವನ್ನು ನೋಡಿದಾಕ್ಷಣ ಶಾಂತನಾದನು. ಅವನಿಗೆ ಕೇವಲ ಒಂದು ಎಚ್ಚರಿಕೆಯನ್ನು ಕೊಟ್ಟು ಬಿಟ್ಟುಬಿಟ್ಟನು.

ನೀವು ಕರವಸ್ತ್ರ ಅಥವಾ ಉಂಗುರದಂತಹ ಯಾವುದಾದರೂ ವಸ್ತುವನ್ನು ಸಮ್ಮೋಹನಗೊಳಿಬಹುದು. ಅದರ ಲಾಭವು ಆ ವಸ್ತುವನ್ನು ಉಪಯೋಗಿಸುವವನಿಗೆ ಹೋಗುವುದು. ಆ ಸಮ್ಮೋಹನ ಪ್ರಭಾವವು ಮೂರುತಿಂಗಳವರೆಗೆ ಇರುವುದು. ಆದರೆ ಹಾಗೆ ಸಮ್ಮೋಹನಗೊಂಡ ವಸ್ತುವು ಮೊದಲೇ ತೊಳೆಯಲ್ಪಟ್ಟರೆ ಅದರ ಪ್ರಭಾವವು ಹೋಗುವುದು.

ಈಗಾಗಲೇ ಚರ್ಚಿಸಿದಂತಹ ಈ ತರಹದ ತ್ರಾಟಕ ತಂತ್ರವು ಪಕ್ಷಿಗಳನ್ನು ಮತ್ತು ಪ್ರಾಣಿಗಳನ್ನೂ ಸಹ ಪ್ರಭಾವಕ್ಕೊಳಗಾಗಿಸುವುದು. ನನ್ನ ತೋಟದಲ್ಲಿ ಕೂತುಕೊಂಡು ನಾನು ಮರದ ಎತ್ತರದ ಮೇಲೆ ಕೂತುಕೊಂಡ ಪಕ್ಷಿಯನ್ನು ಕೆಳಗೆ ಬರಲು ಇಚ್ಛಿಸಿದರೆ, ಅದು ಸ್ವಲ್ಪವೂ ಹಿಂದು ಮುಂದು ನೋಡದೆ ತಕ್ಷಣವೇ ಬಂದು ನನ್ನ ಅಂಗೈಯಲ್ಲಿರುವ ಕಾಳುಗಳನ್ನು ತಿನ್ನಲಾರಂಭಿಸುವುದು. ನವಿಲುಗಳನ್ನು ಒಳಗೊಂಡ ವಿಧವಿಧವಾದ ಪಕ್ಷಿಗಳ ಮೇಲೆ ಈ ತರಹದ ಪ್ರಯೋಗಗಳು ಯಶಸ್ವಿಯಾಗಿವೆ. ಒಮ್ಮೆ ಒಂದು ಕುಪಿತ ಗೂಳಿಯ ಮೇಲೆ ಕೇವಲ ನೋಟವೊಂದೇ ಅದನ್ನು ಯಥಾಸ್ಥಿತಿಗೆ ತಂದಿತು.

ಈ ಸಾಧನವು ಸಮಯವನ್ನು ದಾಟಿಹೋಗುತ್ತದೆ. ಮೂರುಗಂಟೆಯ ಉದ್ದ ಅಭ್ಯಾಸವು ಕೆಲವು ನಿಮಿಷಗಳ ಹಾಗೆ ಕಾಣುವ ಚುರುಕಾದ ಅನುಭವವಾಗುವುದು. ಇದು ಈ ಅಭ್ಯಾಸವು ನಮ್ಮಲ್ಲಿ ಒಂದು ತರಹದ ಪರಿಶುದ್ಧ ಆಹ್ಲಾದತೆಯನ್ನು ತುಂಬುವುದೆನ್ನುವುದನ್ನು ಅರ್ಥೈಸುತ್ತದೆ.

**೮೧. ಬೆಂಕಿ ತ್ರಾಟಕ:**

ಈಗಾಗಲೇ ವಿಮರ್ಷಿಸಿರುವಂತಹ ಎಲ್ಲಾ *ತ್ರಾಟಕ* ತಂತ್ರಗಳಲ್ಲಿ, *ಬೆಂಕಿ ತ್ರಾಟಕ*ವು ಕೇವಲ ಅತ್ಯುತ್ತಮವಾಗಿಲ್ಲದೆ, ಬಹಳ ಕಷ್ಟಕರವೂ ಸಹ ಆಗಿದೆ. ಸಾಧಾರಣ ಸಂಸಾರಸ್ಥರು ಈ ತ್ರಾಟಕದ

ಅಭ್ಯಾಸದಿಂದ ದೂರವಿರಲು ಆದೇಶಿಸಲಾಗಿದೆ. ಯಾರೊಬ್ಬನು ತನ್ನ ಲೈಂಗಿಕಾಸಕ್ತಿಗಳನ್ನು ಸಂಪೂರ್ಣವಾಗಿ ನಿಗ್ರಹಿಸಲ್ಪಟ್ಟಿರುವನೋ ಅವನು ಇದನ್ನು ಯಶಸ್ವಿಯಾಗಿ ಅಭ್ಯಸಿಸಬಹುದು. ಆದರೆ ಯಾವುದೇ ಸಂದರ್ಭದಲ್ಲಿ ಈ ಅಭ್ಯಾಸವನ್ನು ಒಬ್ಬ ಗುರುವಿನ ಮೇಲ್ವಿಚಾರಣೆಯಿಲ್ಲದೆ ಪ್ರಾರಂಭಿಸಬಾರದು.

ಒಂದು ಕತ್ತಲು ರಾತ್ರಿಯಲ್ಲಿ ದೂರದ ಒಂದು ಕಾಡಿಗೆ ಹೋಗಿ ಮೂರ್ನಾಲ್ಕು ಮರದ ಕೊರಡುಗಳನ್ನು ತೆಗೆದುಕೊಳ್ಳಿ. ಎಲ್ಲವನ್ನೂ ಒಟ್ಟಿಗೆ ಸೇರಿಸಿ ಬೆಂಕಿ ಹಚ್ಚಿ. ಜ್ವಾಲೆಗಳು ಎತ್ತರಕ್ಕೆ ಹೋಗಲು ಪ್ರಾರಂಭಿಸಿದಾಗ, ನಿಮ್ಮ ಪಕ್ಕೇ ನಾಲ್ಕೈದು ಅಡಿದೂರ ಸರಿದು ನಿಮ್ಮ ಕಣ್ಣನ್ನು ಎತ್ತರಕ್ಕೆ ಹೋಗುತ್ತಿರುವ ಜ್ವಾಲೆಗಳ ಮೇಲೆ ಸ್ಥಿರವಾಗಿಸಿ. ಈ ಅಭ್ಯಾಸವನ್ನು ಒಂದು ಗಂಟೆಯವರೆಗೆ ಅನುಸರಿಸಿ. ಸಾಕಷ್ಟು ಕಟ್ಟಿಗೆಯನ್ನು ಕಾಯ್ದಿರಿಸಿ ಏಕೆಂದರೆ ಜ್ವಾಲೆಗಳು ಕ್ಷೀಣಿಸಿದಾಗ ಆ ಕಟ್ಟಿಗೆಗಳನ್ನು ಪುನ: ಉಪಯೋಗಿಸಬಹುದು.

ಒಂದು ತಿಂಗಳ ಉದ್ದ ಅಭ್ಯಾಸದ ನಂತರ ಅಭ್ಯಾಸಕಾರನು ಆ ಕೆಂಪು ಜ್ವಾಲೆಗಳು ಅದೃಷ್ಯವಾಗಿ ಆ ಸ್ಥಳದಲ್ಲಿ ಉಜ್ವಲವಾದ ಹೊಳಪು ಉದ್ಭವಿಸಿದೆ ಎನ್ನುವುದನ್ನು ಗುರುತಿಸುವನು. ಈ ಬೆಳಕಿನಲ್ಲಿ ಅವನು ವಿಧವಿಧವಾದ ದೇವರ, *ಯಕ್ಷರ* [1]ಮತ್ತು *ಗಂಧರ್ವ* [2]ರ ಚಿತ್ರಗಳನ್ನು ನೋಡುವನು. ಕೆಲವೊಮ್ಮೆ ನಾವು *ಗೀತೆ*ಯಲ್ಲಿ ಮತ್ತು ಇತರೆ ಗ್ರಂಥಗಳಲ್ಲಿ ಓದಿರುವಂತಹ ದೃಷ್ಯಗಳನ್ನು ಕಾಣುತ್ತೇವೆ. ಈ ತಂತ್ರವನ್ನು ಅಭ್ಯಸಿಸುವಾಗ ನಾನು ಗೀತೆಯಲ್ಲಿ ವಿಮರ್ಷಿಸಿರುವಂತಹ ಮಹಾಭಾರತದ ಯುದ್ಧವನ್ನು ಕಂಡೆ.

ಯಾವುದೇ ಸಂದರ್ಭದಲ್ಲಿ ನಾವು ದೆವ್ವಗಳನ್ನು ಮತ್ತು ಪಿಶಾಚಿಗಳನ್ನು ಕಾಣುವುದಿಲ್ಲ. *ತ್ರಾಟಕವು* ದೇವರ ಕಡೆ ವಾಲಿರುವಂತಹ ಧ್ಯಾನವು.

ಮನುಷ್ಯ ದೇಹವು ಐದು ಮೂಲವಸ್ತುಗಳಿಂದ ಮಾಡಲ್ಪಟ್ಟಿದೆ: ಆಕಾಶ ದ್ರವ್ಯ, ಪೃಥ್ವಿ, ಗಾಳಿ, ಮತ್ತು ಅಗ್ನಿ. ಅದರಲ್ಲಿ *ಬೆಂಕಿ ತ್ರಾಟಕವು* ಎರಡು ಒಳಗೊಂಡ ಮೂಲವಸ್ತುಗಳನ್ನು ತೆಗೆಯುತ್ತದೆ ಅವು, ಪೃಥ್ವಿ ಮತ್ತು ಜಲ. *ಬೆಂಕಿ ತ್ರಾಟಕದ* ಸದ್ಗುಣದಿಂದ ಅಭ್ಯಾಸಕಾರನು ಉಳಿದ ಮೂಲವಸ್ತುಗಳನ್ನು ಒಗ್ಗೂಡಿಸಿ ಮೂರು ಮೂಲವಸ್ತುಗಳ ಲೋಕವನ್ನು ಪ್ರವೇಶಿಸುವನು. ಎಲ್ಲಾ ದೇವರುಗಳು ಈ ಮೂರು ವಸ್ತುಗಳಿಂದಲೇ ಮಾಡಲ್ಪಟ್ಟಿರುವರು. ಓರ್ವನು ಈ ಮೇಲೆ ಹೆಸರಿಸಿರುವಂತಹ ಎರಡು ವಸ್ತುಗಳನ್ನು ಹಿಂದೆ ಬಿಡಬೇಕು. ಆಗಲೇ ಓರ್ವನು ಅತ್ಯುತ್ತಮವಾದ ದೈವತ್ವವನ್ನು ಪಡೆಯುವನು. *ಬೆಂಕಿ ತ್ರಾಟಕದ* ಮುಖ್ಯ ಉಪಯೋಗವೆಂದರೆ ಓರ್ವನು ಸಾಧಾರಣವಾಗಿ ಅಗೋಚರವಾದ ಮತ್ತು ನಿರ್ಬಂಧಿತವಾದ ಸಾಮ್ರಾಜ್ಯದಲ್ಲಿ ಪ್ರವೇಶಿಸುವ ಶಕ್ತಿಯನ್ನು ಪಡೆದುಕೊಳ್ಳುತ್ತಾನೆ. ಐದು ಮೂಲವಸ್ತುಗಳಿಂದ ಮಾಡಲ್ಪಟ್ಟಿರುವ ಮನುಷ್ಯನು ಅಂತಹ ಮೂರು ವಸ್ತುಗಳಿಂದ ಮಾಡಲ್ಪಟ್ಟಿರುವ ಜಗತ್ತಿಗೆ ಹೋಗಲಾರನು. ಅವನು ಎಷ್ಟೇ ಎತ್ತರಕ್ಕೆ ಸಂಬಂಧಿಸಿದ ದೊಡ್ಡ ಯೋಗಿಯೇ ಆಗಿರಬಹುದು. ಜಗತ್ತಿನ ಬೇರೆ ಸಾಮ್ರಾಜ್ಯಗಳಿಗೆ ಪ್ರವೇಶಿಸುವ ಶಕ್ತಿಯನ್ನು ಸಂಪಾದಿಸುವ ಕೆಲಸಕ್ಕೆ ಈ ಎರಡು ಮೂಲವಸ್ತುಗಳನ್ನು ಕೈಬಿಡುವುದೇ ಕೇಂದ್ರವಾಗಿರುತ್ತದೆ. ಈ ಹೊರಹಾಕುವ ವಿಧಾನವು ಸಂಪೂರ್ಣವಾಗುವವರೆಗೂ ಓರ್ವನು ಲೌಕಿಕ ಕಟ್ಟುಪಾಡುಗಳಿಗೇ ಸೀಮಿತವಾಗಿರಬೇಕು. ಓರ್ವನು ಇದನ್ನು ಕೇವಲ *ಬೆಂಕಿ ತ್ರಾಟಕದಿಂದಲೇ* ಸಾಧಿಸಬಹುದು.

ಈ *ತ್ರಾಟಕದ* ಮೂಲಕವೇ ನಾನು ಬಹಳ ಕುಶಲ *ಯೋಗಿ*ಗಳನ್ನು ಕಂಡೆ. ನಾನು ಅವರಲ್ಲಿ

---

1 ಯಕ್ಷ:ದೇವಾಂಶ ಸಂಭೂತರ ಒಂದು ವರ್ಗ.

2 ಗಂಧರ್ವ:ಸಂಗೀತದಲ್ಲಿ ಮತ್ತು ಯುದ್ಧದಲ್ಲಿ ಪ್ರವೀಣತೆ ಹೊಂದಿರುವಂತಹ ದೇವಾಂಶ ಸಂಭೂತರು.

ತಕ್ಕಮಟ್ಟಿನ ಸಂಖ್ಯೆಯಲ್ಲೇ ನೋಡಿದರೆ ಇಲ್ಲವಾದರೆ ಅವರನ್ನು ನೋಡುವುದು ಕಷ್ಟಕರವಾಗಿತ್ತು. ಈ ತಂತ್ರದ ಸಹಾಯದಿಂದ ಓರ್ವನು ಹಿಮಾಲಯಗಳ ಗುಹೆಗಳ ದೂರದ ಬದುಕನ್ನು ನೋಡುವನು.

ಈ ತಂತ್ರದ ಇನ್ನೊಂದು ಪ್ರಮುಖ ಭಾವವೆಂದರೆ ನೀವು ಇದರ ಅಭ್ಯಾಸದಲ್ಲಿ ನಿರತರಾಗಿರುವಾಗ ಪ್ರಭಾವಶಾಲೀ *ಯೋಗಿ*ಗಳ ಗುಂಪೊಂದು ನಿಮ್ಮ ಸುತ್ತಲೂ ಸುಳಿದಾಡುತ್ತಿರುತ್ತದೆ. ಅವರ ಪ್ರಮುಖ ಕೆಲಸವೆಂದರೆ ನಿಮಗೆ ಎಲ್ಲಾ ರೀತಿಯಿಂದಲೂ ಸಹಾಯಕರಾಗುವುದು.

*ದೂರ ತ್ರಾಟಕದ ಉಪವಿಭಾಗಗಳು:*
ನಾವು ಈಗಾಗಲೇ ದೂರದ ತ್ರಾಟಕವನ್ನು ಚರ್ಚಿಸಿದ್ದೇವೆ. ಓರ್ವನು ಅದರ ಉಪವಿಭಾಗಗಳನ್ನು ಅಧ್ಯಯನ ಮಾಡುವುದೂ ಮುಖ್ಯವಾಗಿದೆ.

**ಅ. ದೃಷ್ಯ ತ್ರಾಟಕ:**
ದೂರದ ತ್ರಾಟಕವನ್ನು ದೃಷ್ಯ ತ್ರಾಟಕದಿಂದ ಪ್ರಾರಂಭಿಸಿ.
ಪ್ರಾತಃಕಾಲ ಬೇಗನೇ ಏಳುವುದು ಉತ್ತಮವು ಮತ್ತು ಬೆಳಗಿನ ಕೆಲಸಗಳನ್ನು ಮುಗಿಸಿದ ನಂತರ ನೇರವಾಗಿ ಕಾಡಿನ ಕಡೆ ಮುಂದುವರೆಯಿರಿ. ನಿಖರವಾಗಿ ಸೂರ್ಯನ ಉದಯವಾಗುತ್ತಿರುವಾಗ ನಿಮ್ಮ ದೃಷ್ಟಿಯನ್ನು ಮರದ ತುದಿಯಲ್ಲಿ ಸ್ಥಿರವಾಗಿಸಿ. ಈ ತ್ರಾಟಕವನ್ನು ಮರದ ಕೊನೆಯಲ್ಲಿ ಅಭ್ಯಸಿಸಿ. ಸ್ವಲ್ಪ ಸಮಯದ ನಂತರ ನೀವು ಮರವನ್ನೂ ಮತ್ತು ಅದರ ಕೊನೆಯನ್ನೂ ಕಾಣುವುದಿಲ್ಲ. ಎಲ್ಲಡೆಯಲ್ಲೂ ನೀವು ಕೇವಲ ಆಕಾಶವನ್ನು ನೋಡುವಿರಿ. ನಿಮ್ಮ ದೇಹವು ಒಳ್ಳೆ ಹಗುರಾಗಿ ಮತ್ತು ಬಹಳ ವೇಗದಲ್ಲಿ ಆಕಾಶದೆಲ್ಲಾ ತೇಲುತ್ತಿರುವುದಾಗಿ ನೀವು ಕಾಣುವಿರಿ. ಅದೇ ಸಮಯದಲ್ಲಿ ನೀವು ಹಿಂದೂ ಗ್ರಂಥಗಳಲ್ಲಿ ವಿಮರ್ಷಿಸಿರುವಂತಹ ದೃಷ್ಯಗಳನ್ನು ವಿಶದವಾಗಿ ನೋಡುವಿರಿ.

ಈ ಅವಸ್ಥೆಯಲ್ಲಿ ನೀವು ನಿಮ್ಮ ದೈಹಿಕ ಆಯಾಮದ ಎಲ್ಲಾ ಅರಿವುಗಳನ್ನೂ ಕಳೆದುಕೊಳ್ಳುವಿರಿ. ನೀವು ಉಚ್ಚಮಟ್ಟದಲ್ಲಿರುವ ಪ್ರಪಂಚವನ್ನು ಪ್ರವೇಶಿಸುವಿರಿ. ಈಗ ನೀವು ಕಳೆದು ಹೋದ ಘಟನೆಗಳನ್ನು ಜ್ಞಾಪಿಸಿಕೊಳ್ಳಲಾರಂಭಿಸುವಿರಿ. ನಿಮಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಲು ಶಕ್ತರಾಗುವಿರಿ. ಉದಾಹರಣೆಗೆ, ಇಂತಹ ಒಂದು ಸ್ಥಿತಿಯಲ್ಲಿ ನೀವು *ಕೈಲಾಸ ಪರ್ವತಕ್ಕೆ*[1] ಹೋಗಲು ಇಚ್ಛಿಸಿ ಅಲ್ಲಿ ಭಗವಂತನಾದ ಮಹದೇವನ ಪ್ರತ್ಯಕ್ಷ ದರ್ಶನವನ್ನು ಪಡೆಯಬಹುದು. ನಿಮ್ಮ ದೇಹವು ತೇಲುತ್ತಿರುವ ಹಾಗೆ ನಿಮಗೆ ಅನ್ನಿಸಿ ಕೈಲಾಸ ಪರ್ವತವು ನಿಮ್ಮ ದೇಹದ ಕೆಳಗೇ ಉಪಸ್ಥಿತವಾಗಿದೆ ಎಂದು ನಿಮಗೆ ಅನ್ನಿಸುವುದು. ನೀವು ಶಿವದೇವನನ್ನು ಮತ್ತು ಆತನ ಜೊತೆಯಲ್ಲಿರುವ ಪಾರ್ವತಿಯನ್ನು ನೋಡುವಿರಿ. ಇಂತಹ ಸಮಯದಲ್ಲಿ ನೋಡಿರುವಂತಹವುಗಳನ್ನು ಮಾತ್ರ ನಿಜವೆಂಬುದಾಗಿ ಪರಿಗಣಿಸಲಾಗಿದೆ.

ಈ ಅಭ್ಯಾಸದಲ್ಲಿ ಯಶಸ್ಸಿಯನ್ನು ಪಡೆದ ನಂತರ, ನೀವು ಯಾವುದೇ ವ್ಯಕ್ತಿಯ ಅಥವಾ ಚಿತ್ರದ ಮೇಲೆ ಏಕಾಗ್ರತೆಯನ್ನು ಪಡೆಯಲು ಶಕ್ತರಾಗುತ್ತೀರಿ. ನೀವು ಅವನ ಮೇಲೆ ನಿಯಂತ್ರಣವನ್ನು ಪಡೆಯಲು ಸಮರ್ಥರಾಗಿರುತ್ತೀರಿ. ಉದಾಹರಣೆಗೆ, ಈ ಅಭ್ಯಾಸದ ನಂತರ ನೀವು ಒಬ್ಬ ಹೆಂಗಸಿನ ಮೇಲೆ ತ್ರಾಟಕವನ್ನು ತಂದರೆ, ಆಕೆ ತಕ್ಷಣವೇ ನಿಮ್ಮ ವಶವಾಗುತ್ತಾಳೆ. ಆಕೆಯು ನಿಮಗೆ ಈಗಾಗಲೇ ಪರಿಚಯವಿರಲಿ ಬಿಡಲಿ ನೀವು ಕೊಟ್ಟಂತಹ ಎಲ್ಲಾ ಆಜ್ಞೆಗಳನ್ನೂ ಪಾಲಿಸುವಳು.

ಹೇಗಾದರೂ, ಅಭ್ಯಾಸಕಾರನು ಅಂತಹ ಅನೈತಿಕ ಕೃತ್ಯಗಳಲ್ಲಿ ತೊಡಗಬಾರದು.

---

1. **ಕೈಲಾಸ ಪರ್ವತ:** ಹಿಂದೂಗಳು ಪವಿತ್ರ ಸ್ಥಾನವೆಂದು ಪರಿಗಣಿಸಿರುವ ಟಿಬೆಟ್ಟಿನಲ್ಲಿರುವ ಒಂದು ಸ್ಥಳ.

## ಆ. ನಕ್ಷತ್ರ ತ್ರಾಟಕ [2]

ನಮ್ಮ ದೃಷ್ಟಿಗೆ ಒಂದು ಸೀಮೆ ಇರುತ್ತದೆ. ಈ ಸೀಮೆಯಾಚೆಯಿರುವ ಏನನ್ನೂ ನಮಗೆ ನೋಡಲಾಗುವುದಿಲ್ಲ. ನಕ್ಷತ್ರವು ದೂರದಲ್ಲಿ, ಬಹು ದೂರದಲ್ಲಿ ನೆಲೆಯಾಗಿದೆ. ಅದಕ್ಕಾಗಿ ಸಾಮಾನ್ಯ ದೃಷ್ಟಿಯಿಂದ ಅದನ್ನು ನೋಡಲಾಗುವುದಿಲ್ಲ.

ಹೇಗಾದರೂ ಅಭ್ಯಾಸಕಾರನು ರಾತ್ರಿಯಲ್ಲಿ ತನ್ನ ದೃಷ್ಟಿಯನ್ನು ಒಂದು ನಿರ್ದಿಷ್ಟವಾದ ನಕ್ಷತ್ರದ ಮೇಲೆ ಸ್ಥಿರವಾಗಿಸಬೇಕು. ಆತನು ಅಭ್ಯಾಸವನ್ನು ಮುಂದುವರಿಸಬೇಕು. ಆತನು ನಕ್ಷತ್ರವು ತನ್ನ ದೃಷ್ಟಿಯಿಂದ ಅದೃಷ್ಯವಾಗುತ್ತಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಬೇಕು.

ಕೆಲವು ದಿವಸಗಳ ಅಭ್ಯಾಸದ ನಂತರ ಆ ನಕ್ಷತ್ರವು ದಿನೇ ದಿನೇ ಹೆಚ್ಚು ದೃಷ್ಟಿಗೆ ಬರುತ್ತಿರುವುದನ್ನು ಆತನು ನೋಡುವನು. ಆ ನಕ್ಷತ್ರದಲ್ಲಿ ಸಾಮಾನ್ಯವಾಗಿ ಕಾಣದಂತಹ ದೃಷ್ಯಗಳನ್ನು ಆತನು ನೋಡಲಾರಂಭಿಸುವನು. ಕೆಲವೊಮ್ಮೆ ಆ ನಕ್ಷತ್ರವು ಅದೃಷ್ಯವಾಗಿ ಮತ್ತು ನಂತರ ಪುನಃ ದೃಷ್ಟಿಗೆ ಗೋಚರವಾಗುವುದು.

ಅಭ್ಯಾಸಕಾರನು ಈ ತರಹದ ಅಭ್ಯಾಸದೊಂದಿಗೆ ನಾಲ್ಕು ತಿಂಗಳು ಮುನ್ನಡೆಯಬೇಕು. ನಾವು ನೋಡಬಯಸಿದಂತಹ ಯಾವುದೇ ಸ್ಥಳವು ನಮ್ಮ ಮುಂದೆ ಸಂಪೂರ್ಣ ಸಜೀವವಾಗಿ ಬರುವುದು. ಅಭ್ಯಾಸಕಾರನು ದೆಹಲಿಯ ಕುತುಬ್ ಮಿನಾರ್‌ನನ್ನು ಯಾವತ್ತೂ ನೋಡಿಲ್ಲವೆಂದು ಭಾವಿಸಿ. ತನ್ನ ಕಣ್ಣುಗಳನ್ನು ಮುಚ್ಚಿ ಆತನು ಕುತುಬ್ ಮಿನಾರನ್ನು ಧ್ಯಾನಿಸಲು ಪ್ರಾರಂಭಿಸುವನು, ಅದು ಆತನ ಕಣ್ಣುಗಳ ಮುಂದೆ ಸಂಪೂರ್ಣ ಸಜೀವವಾಗಿ ಬಯಲಿಗೆ ಬರುವುದು.

ನನಗೆ ಈ ತರಹದ ಬಹಳ ಅನುಭವಗಳು ಆಗಿರುವವು. ಒಂದುದಿನ ಈ ತಂತ್ರವನ್ನು ಅಭ್ಯಸಿಸುತ್ತಿರುವಾಗ ನನ್ನ ಸ್ನೇಹಿತ ಯಶವಂತನು ಏನು ಮಾಡುತ್ತಿರಬಹುದೆಂದು ತಿಳಿಯಲು ಕೌತುಕನಾದೆ. ನಾನು ಕಣ್ಣುಗಳನ್ನು ಮುಚ್ಚಿದಾಗ ಅವನು ಟ್ಯಾಂಕ್ ಹತ್ತಿರ ಬಟ್ಟೆಬಿಚ್ಚುತ್ತಿರುವುದನ್ನು ನಾನು ನೋಡಿದೆ. ಅವನ ಸಂಪೂರ್ಣ ದೇಹವನ್ನು, ಆ ಟ್ಯಾಂಕ್ ಮತ್ತು ಒಂದು ಕಡೆ ಗುಂಪಾಗಿಸಿರುವ ಅವನ ಬಟ್ಟೆಗಳನ್ನೂ ನನಗೆ ಸ್ಪಷ್ಟವಾಗಿ ನೋಡಲಾಗುತ್ತಿತ್ತು.

ಹೆಚ್ಚುಕಡಿಮೆ ಆಗಲೇ ನಾನು ಸ್ವತಃ ಆ ಟ್ಯಾಂಕನ್ನು ತಲುಪಿದೆ. ನಾನು ಅವನನ್ನು ಅದೇ ಬಟ್ಟೆಯಲ್ಲಿ ಮತ್ತು ಅದೇ ಸ್ಥಳದಲ್ಲಿ ಖಚಿತವಾಗಿ ನೋಡಿದೆ. ನನ್ನ ದೃಷ್ಟಿಯಲ್ಲಿ ಅವನು ಆ ಟ್ಯಾಂಕಿನಲ್ಲಿ ಸ್ನಾನಮಾಡುತ್ತಿರುವುದನ್ನು ನೋಡಿದ ರೀತಿಯಲ್ಲೇ ನೋಡಿದೆ.

ಈ ಅಭ್ಯಾಸದ ನಂತರ ಅಭ್ಯಾಸಕಾರನು ಸಾವಿರಾರು ಮೈಲಿ ದೂರದ ಸಂಗತಿಗಳನ್ನು ನೋಡಬಹುದು. ಯು.ಎಸ್.ಅಧ್ಯಕ್ಷ ಕೆನಡಿಯವರು ಕೊಲೆಯಾದಾಗ, ನನ್ನ ಜೊತೆಯಲ್ಲಿದ್ದ ಕೆಲ ಪ್ರಮುಖ ಸಾಧಕರು ತಾವು ಕೊಲೆಯಾಗುವ ದೃಶ್ಯವನ್ನು ಸ್ಪಷ್ಟವಾಗಿ ಸಜೀವ ರೀತಿಯಲ್ಲಿ ನೋಡಿದುದಾಗಿ ಹೇಳಿದರು.

## ಇ. ಸೂರ್ಯ ತ್ರಾಟಕ:

ಬೆಂಕಿ ತ್ರಾಟಕ ಮತ್ತು ನಕ್ಷತ್ರ ತ್ರಾಟಕದ ಕಲಾ ಕೌಶಲ್ಯಗಳಲ್ಲಿ ಪ್ರವೀಣತೆಯನ್ನು ಪಡೆದಿರುವವರು ಇದನ್ನು ಅಭ್ಯಸಿಸಬೇಕು.

ಪ್ರಾರಂಭದಲ್ಲಿ ಈ ತ್ರಾಟಕದ ಅಭ್ಯಾಸವನ್ನು ಉದಯಿಸುತ್ತಿರುವ ಸೂರ್ಯನ ಮೇಲೆ ಪ್ರಾರಂಭಿಸಿ.

2. ನಕ್ಷತ್ರ ತ್ರಾಟಕ: ಓರ್ವನು ತನ್ನ ಅನುಕೂಲತೆಗಾಗಿ ಮೊದಲು ಚಂದ್ರನನ್ನು ದಿಟ್ಟಿಸ ಬೇಕು. ನಂತರದಲ್ಲಿ ಅವನಿಗೆ ನಕ್ಷತ್ರದ ಮೇಲ ದಿಟ್ಟಿಸುವುದು ಸುಲಭವಾಗುವುದು.

ಪ್ರಾರಂಭದಲ್ಲಿ ಸೂರ್ಯನ ಕಡೆ ನೇರವಾಗಿ ದಿಟ್ಟಿಸಲು ಕಷ್ಟವಾಗಬಹುದು. ಆದ್ದರಿಂದ, ನೀವು, ನೀರಿನಲ್ಲಿ ಅದರ ಪ್ರತಿಬಿಂಬವನ್ನು ದಿಟ್ಟಿಸುತ್ತಾ ಅಭ್ಯಾಸವನ್ನು ಪ್ರಾರಂಭಿಸಬಹುದು ನಂತರ ಒಂದು ಕನ್ನಡಿಯಲ್ಲಿ ಅದನ್ನು ದಿಟ್ಟಿಸಿರಿ. ಈ ಹಂತದಲ್ಲಿ ನೀವು ಸೂರ್ಯನ ಕಡೆ ನೇರವಾಗಿ ನೋಡಬಹುದು. ಅಭ್ಯಾಸದ ಸಮಯವನ್ನು ನಿಧಾನವಾಗಿ ಹೆಚ್ಚಿಸಬೇಕು. ಅದನ್ನು ಮೂವತ್ತು ನಿಮಿಷಗಳವರೆಗೆ ಹೆಚ್ಚಿಸಬಹುದು. ಕೊನೆಯದಾಗಿ ನಿಮ್ಮ ಕಣ್ಣನ್ನು ಮಧ್ಯಾಹ್ನದ ನಡುಹಗಲಿನ ಸೂರ್ಯನ ಮೇಲೆ ಸ್ಥಿರವಾಗಿಸಬಹುದು. ಆದರೆ ಪ್ರಾರಂಭದಲ್ಲಿ ಅದು 5 ರಿಂದ ಹತ್ತು ಕ್ಷಣಗಳಿಗಿಂತ ಹೆಚ್ಚಾಗಿರಬಾರದು.

ಸೂರ್ಯ ತ್ರಾಟಕವನ್ನು ಹತ್ತು ನಿಮಿಷಗಳವರೆಗೆ ಅಭ್ಯಸಿಸುವಂತಹ ಕೆಲ ಸಾಧಕರು ನನಗೆ ಗೊತ್ತು. ಈ ಕಲೆಯನ್ನು 32 ನಿಮಿಷಗಳವರೆಗೂ ಅಭ್ಯಾಸಮಾಡಬಲ್ಲ ವ್ಯಕ್ತಿಯು ನಿಜವಾಗಿಯೂ ದೈವೀಕ ದೃಷ್ಟಿಯಿಂದ ಕರುಣಿತನಾಗಿರುವನು.

ಸೂರ್ಯನು ಬಹಳ ಶಕ್ತಿಶಾಲಿಯಾಗಿರುವನು. ನಾವು ಸೂರ್ಯನ ಮೇಲೆ ತ್ರಾಟಕವನ್ನು ತಂದರೆ, ಸೂರ್ಯನ ತೇಜಸ್ಸು ಕಣ್ಣುಗಳ ಮೂಲಕ ನಮ್ಮ ದೇಹವನ್ನು ಪ್ರವೇಶಿಸುತ್ತದೆ. ಫಲಸ್ವರೂಪವಾಗಿ ನಿಮ್ಮ ದೇಹಗಳು ದೈವೀಕ ಕೃಪೆಗೆ ಒಳಗಾಗುತ್ತದೆ. ನಮ್ಮ ಕಣ್ಣುಗಳು ಎಷ್ಟು ಹೊಳಪಾಗಿರುತ್ತವೆಂದರೆ ಯಾರಿಗೇಯಾಗಲಿ ನಮ್ಮನ್ನು ಮುಖಾಮುಖಿಯಾಗಿ ನೋಡಲು ಧೈರ್ಯವಿರುವುದಿಲ್ಲ.

ಕಾಲಾವಧಿಯನ್ನು ಏಕ ಪ್ರಕಾರವಾಗಿ ಹೆಚ್ಚಿಸಬೇಕು. ನಾವು ಅದನ್ನು ಅನಾವಶ್ಯಕವಾಗಿ ಅವಸರಮಾಡಿದರೆ ಅದು ನಮ್ಮ ಕಣ್ಣುಗಳಿಗೆ ಹಾನಿಮಾಡಬಹುದು. ಓರ್ವನು ಬೆಂಕಿ ತ್ರಾಟಕದಲ್ಲಿ ಪ್ರವೀಣತೆಯನ್ನು ಪಡೆಯದೆ ಇವರಲ್ಲಿ ಹೆಚ್ಚಿನ ಕಾಲಾವಧಿಯನ್ನು ವಿನಿಯೋಗಿಸಿದರೆ ಕಣ್ಣನ್ನು ಕಳೆದುಕೊಳ್ಳುವ ಸಾಧ್ಯತೆ ಇರುತ್ತದೆ. ಒಳ್ಳೆಯದಕ್ಕೋಸ್ಕರ, ಓರ್ವನು ಈ ತಂತ್ರದ ಬಗ್ಗೆ ಬಹಳ ಜಾಗರೂಕನಾಗಿರಬೇಕು.

# ಅಧ್ಯಾಯ 6

## ಸಮ್ಮೋಹನ ಆಜ್ಞೆಗಳು

ಮೊದಲಿನ ಅಧ್ಯಾಯಗಳಲ್ಲಿ ನಾವು ಈ ಸಮ್ಮೋಹನ ಆಜ್ಞೆಯ ಪದವನ್ನು ನಿಜವಾಗಿಯೂ ಪದೇ ಪದೇ ಉಪಯೋಗಿಸಿದ್ದೇವೆ. ವಾಸ್ತವವಾಗಿ ಓರ್ವನು ಸಮ್ಮೋಹನ ವಿಜ್ಞಾನದ ಕ್ಷೇತ್ರದಲ್ಲಿ ಆಜ್ಞೆಯ ಮೂಲಕವೇ ಸಮ್ಮೋಹನ ಹತೋಟಿಯನ್ನು ಸಾಧಿಸುತ್ತಾನೆ ಮತ್ತು ಮಾಧ್ಯಮನು ಅಭ್ಯಾಸಕಾರನು ಉದ್ದೇಶಿಸಿದ ಹಾಗೆ ಪ್ರಯೋಗಿಸಲ್ಪಡುವನು.

ಮನುಷ್ಯನು ಬುದ್ಧಿವಂತ ಜೀವಿಯು ಮತ್ತು ಇಂದು ಅವನು ಈ ಬುದ್ಧಿಯಿಂದಲೇ ವಿಜ್ಞಾನದ ಕ್ಷೇತ್ರದಲ್ಲಿ ಯಶಸ್ಸಿಯ ಶಿಖರವನ್ನು ತಲುಪಿದ್ದಾನೆ ಮತ್ತು ಪ್ರಕೃತಿಯನ್ನು ತನ್ನ ಹತೋಟಿಗೆ ತೆಗೆದುಕೊಂಡಿದ್ದಾನೆ. ಅವನು ಮನುಷ್ಯ ದೇಹವನ್ನು ಹೆಚ್ಚಾಗಿ ಅಧ್ಯಯನ ಮತ್ತು ಅರ್ಥಮಾಡಿಕೊಳ್ಳುವುದು ಮುಖ್ಯವಾಗಿದೆಯೆಂದು ಗ್ರಹಿಸಲಾರಂಭಿಸಿದ್ದಾನೆ. ತನ್ನ ಈ ಮನುಷ್ಯ ದೇಹದ ಜ್ಞಾನವು ಸ್ವಲ್ಪವೇಯಾಗಿದೆಯೆಂದು ಕಂಡುಹಿಡಿದಿದ್ದಾನೆ. ವಿಷಯದಲ್ಲಿ ಕೊನೆಯಿಲ್ಲದ ಸಾಮರ್ಥ್ಯವಿದೆ. ಓರ್ವನು ಈ ವಿಜ್ಞಾನದಲ್ಲಿ ಆಳವಾಗಿ ಹೋಗಲು ಪ್ರಯತ್ನಿಸಿದ ಹಾಗೆಲ್ಲಾ, ನಮ್ಮ ಸಾಧನೆಗಳು ಹೆಚ್ಚಾಗುತ್ತವೆ, ದೇವರು ಈ ದೇಹವನ್ನು ಯಾವ ರೀತಿಯಲ್ಲಿ ಮಾದರಿಸಿದ್ದಾನೆಂದರೆ ಪ್ರತಿಯೊಂದು ಅಣುವೂ ಎಂದಿಗೂ ನಿಗೂಢವಾಗಿ ಉಳಿದಿದೆ. ನಾವು ಮನುಷ್ಯ ದೇಹದ ಅದ್ವಿತೀಯವಾದ ಕ್ಲಿಷ್ಟತೆಯನ್ನು ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದರೆ ಅದು ಒಂದು ಅಭೂತಪೂರ್ವವಾದ ಸಾಧನೆಯಾಗುತ್ತದೆ ಎಂದು ಓರ್ವನು ಗ್ರಹಿಸಿಕೊಳ್ಳಲಾರಂಭಿಸಿದ್ದಾನೆ.

ಓರ್ವನು ಆಳವಾಗಿ ವಿಚಾರ ಮಾಡಲಾರಂಭಿಸಿದಾಗ, ಓರ್ವನು ವಿಸ್ಮಯಗೊಳ್ಳುವಂತಹ ಸಾಧನೆಗಳೊಂದಿಗೆ ಬಂದನು. ಮನುಷ್ಯನ ದೇಹವನ್ನು ಶೋಧನೆಮಾಡುವಾಗ ಬಯಲಾದಂತಹ ಗೂಢತ್ವಗಳಲ್ಲಿ ಒಂದೆಂದರೆ ಅದು ಕೆಲ ಮೂಲವಸ್ತುಗಳನ್ನೊಳಗೊಂಡಿದೆ ಅವುಗಳನ್ನು ತಿಳಿಯಬಹುದಾದರೂ ನೋಡಲಾಗುವುದಿಲ್ಲ. ಉದಾಹರಣೆಗೆ: ಮನಸ್ಸಿನ ಅಸ್ತಿತ್ವವು ಅನುಮಾನದಾಚೆಗಿದೆ, ಆದರೆ ಸಂಪೂರ್ಣ ದೇಹವನ್ನು ಕತ್ತರಿಸಿದರೂ ಅದನ್ನು ನೋಡಲಾಗುವುದಿಲ್ಲ.

ಈ ಕ್ಷೇತ್ರದಲ್ಲಿ ವಿಸ್ತಾರವಾದ ಅನ್ವೇಷಣೆಗಳಿಂದ ಮನುಷ್ಯನ ದೇಹದಲ್ಲಿ ಕೇವಲ ಒಂದೇ ಮನಸ್ಸೆನ್ನುವುದಿಲ್ಲ ಆದರೆ ಹೊರಗಿನ ಮತ್ತು ಒಳಗಿನ ವಂಬ ಎರಡು ಮನಸ್ಸುಗಳಿವೆ ಎಂದು ನಮಗೆ ಗೊತ್ತಾಗಿದೆ. ನಾವು ಎಚ್ಚರವಾಗಿದ್ದಾಗ ಬಹಿರ್ಮನಸ್ಸು ಚುರುಕಾಗಿದ್ದು ಎಲ್ಲವನ್ನೂ ಅನುಭವಿಸುತ್ತದೆ. ಬುದ್ಧಿಯ ಸಹಾಯದಿಂದ ಅದು ನಿರ್ಣಯಗಳನ್ನು ತೆಗೆದುಕೊಳ್ಳುತ್ತದೆ. ಹೇಗಾದರೂ ನಿಮ್ಮ ನಿದ್ದೆಯಲ್ಲಿ ಅದು ಕಾರ್ಯನಿರ್ವಹಿಸುವುದನ್ನು ನಿಲ್ಲಿಸಿದಾಗ, ಅಂತರ್ಮನಸ್ಸು ಚುರುಕಾಗಿ ದೇಹವನ್ನು ರಕ್ಷಿಸಿಕೊಳ್ಳುವಂತಹ ಕೆಲಸಗಳನ್ನು ಕೈಗೊಳ್ಳುತ್ತದೆ. ಬಹಿರ್ಮನಸ್ಸು ಸುಪ್ತಾವಸ್ಥೆಯಲ್ಲಿರುತ್ತದೆ.

ಉದಾಹರಣೆಗೆ ನೀವು ಬೆಂಕಿಯ ಹತ್ತಿರ ಕೂತುಕೊಂಡಿರುತ್ತೀರಿ. ನಿಮ್ಮ ಯೋಚನೆಗಳಲ್ಲಿ ನಿಮ್ಮನ್ನು ನೀವೇ ಮರೆತಿದ್ದೀರಿ. ಅರಿವಿಲ್ಲದೆಯೇ ನಿಮ್ಮ ಬೆರಳು ಬೆಂಕಿಗೆ ಹತ್ತಿರವಾಗಿ ಹೋಗುತ್ತಲಿರುವುದನ್ನು ಕಾಣುವಿರಿ. ಹಾಗೆಯೇ ಅದು ಬೆಂಕಿಯನ್ನು ಮುಟ್ಟುವುದರಲ್ಲಿರುತ್ತದೆ, ಅದು ಹಿಂತೆಗೆದುಕೊಳ್ಳುತ್ತವೆ. ಕೈ ತನ್ನಷ್ಟಕ್ಕೆ ತಾನೇ ಆ ಕ್ಷೇತ್ರದಿಂದ ಹಿಂತೆಗೆದುಕೊಂಡುದುದನ್ನು ಕಾಣುತ್ತದೆ. ಈಗ ಬೆರಳನ್ನು ಬೆಂಕಿಯಿಂದ ಹಿಂತೆಗೆದುಕೊಳ್ಳುವ ಹಾಗೆ ಮಾಡಿದವರ್ಯಾರು? ಖಚಿತವಾಗಿ ನೀವಲ್ಲ, ಏಕೆಂದರೆ ನೀವು ಸಂಪೂರ್ಣವಾಗಿ ನಿಮ್ಮ ಯೋಚನೆಗಳಲ್ಲಿ ಮುಳುಗಿದ್ದಿರಿ ಮತ್ತು ನಿಮ್ಮ ಬೆರಳನ್ನು ಹಿಂತೆಗೆದುಕೊಳ್ಳುವಹಾಗೆ ಮಾಡಿದ್ದು ನಿಮ್ಮ ಅಂತರ್ಮನಸ್ಸು.

ಒಂದಲ್ಲ ಎರಡು ಮನಸ್ಸಿದ್ದರೂ ಸಹ ಈ ಮೊದಲೇ ವಾದಿಸಿದಂತೆ ಅಂಗಶೋಧಕರಿಗೆ ಮನಸ್ಸನ್ನು ಗುರುತಿಸಲಾಗಲಿಲ್ಲ. ಬಹುಶಃ ಅವರು ಮನಸ್ಸನ್ನು ಕಾಣಲಿಲ್ಲ. ಹೀಗಿದ್ದಾಗ್ಯೂ ಮನುಷ್ಯನ ದೇಹವು ಮನಸ್ಸನಿಂದೊಡಗೂಡಿದೆಂಬುದನ್ನು ಅವರು ಒಪ್ಪಿಕೊಳ್ಳುತ್ತಾರೆ. ಅದೊಂದು ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸುತ್ತದೆ.

ಮನುಷ್ಯನಿಗೂ ಪ್ರಾಣಿಗೂ ಬಹಳ ಹೋಲಿಕೆ ಇದೆ. ಎರಡೂ ತಿನ್ನುತ್ತವೆ, ಎರಡೂ ಮಲಗುತ್ತವೆ, ಎರಡೂ ಒಳಗೂ ಹೊರಗೂ ಉಸಿರಾಡುತ್ತವೆ. ಎರಡೂ ಚೇತನಗೊಂಡಿರುತ್ತವೆ ಮತ್ತು ಎರಡೂ ಜನ್ಮಕೊಡುತ್ತವೆ. ಆದರೂ ಮನುಷ್ಯನು ಎದ್ದು ಕಾಣುವ ಹಾಗೆ ಪ್ರಾಣಿಗಿಂತ ಬೇರೆಯಾಗಿದ್ದಾನೆ. ಮನುಷ್ಯನ ಹಾಗೆ ಪ್ರಾಣಿಯು ಈಕಡೆ ತೊಂದರೆಗಳ ಬಗ್ಗೆ ಚಿಂತಿಸುವುದೂ ಇಲ್ಲ. ವಿರುದ್ಧವಾಗಿ ಮನುಷ್ಯನು ಬೇರೆಯವರ ಸುಖದುಃಖಗಳನ್ನೂ, ಕ್ಷೇಮಶೋಕಗಳನ್ನು ಹಂಚಿಕೊಳ್ಳುತ್ತಾನೆ ಮತ್ತು ಚಿಂತಿಸುತ್ತಾನೆ. ಮನುಷ್ಯನಿಗೆ ಚಿಂತಿಸುವ ಸಾಮರ್ಥ್ಯವನ್ನು ಕೊಡುವುದು ಮನಸ್ಸು ಮತ್ತು ಮನುಷ್ಯ ಮತ್ತು ಪ್ರಾಣಿಗಳ ಭೇದವನ್ನು ಮಾಡುವುದು ಮನಸ್ಸು.

ಆದ್ದರಿಂದ ಅಂತರ್ಮನಸ್ಸು ಮನುಷ್ಯ ಜೀವನಕ್ಕೆ ಬಹಳ ನಿರ್ಣಾಯಕದ್ದಾಗಿದೆ. ತ್ವರಿತವಾಗಿ ಪ್ರತಿಕ್ರಿಯೆಯನ್ನು ಹೊರತರುವುದಲ್ಲದೆ ಅದು ಅನುಭವಿಸುದದನ್ನೆಲ್ಲಾ ತಾಳಿಕೊಳ್ಳುತ್ತದೆ. ಒಂದು ಸಹಜವಾದ ಉದಾಹರಣೆಯನ್ನು ತೆಗೆದುಕೊಳ್ಳಲು. ನಿಮ್ಮ ಒಬ್ಬ ಆರೋಗ್ಯವಾದ ಸ್ನೇಹಿತನಿಗೆ ತಾನು ದುಃಖಿಯಾಗಿ ಕಾಣುತ್ತಾನೆ ಮತ್ತು ಅವನ ಮುಖ ಮಂದವಾಗಿದೆ ಎಂದು ಹೇಳಿ. ನೀವು ಅವನಿಗೆ ತಾನು ಈಗಾಗಲೇ ಅಸ್ವಸ್ಥನಾಗಿದ್ದಾನೆ ಮತ್ತು ಬಹುಶಃ ಆತನು ಅಸ್ವಸ್ಥದ ಅಂಚಿನಲ್ಲಿದ್ದಾನೆಂದು ಆಜ್ಞಾಪಿಸಿ.

ಈ ಪದಗಳ ಅರ್ಥವಿರುವ ಹಾಗೆಯೇ ಅಂತರ್ಮನಸ್ಸು ಆ ಪದಗಳನ್ನು ಒಪ್ಪಿಕೊಳ್ಳುತ್ತದೆ. ಹೇಗಾದರೂ ಆತನ ಬಹಿರ್ಮನಸ್ಸು ನೀವು ಹೇಳಿದುದಕ್ಕೆ ವಿರೋಧಿಸುವ ಹಾಗೆ ಕಾಣುತ್ತದೆ. ಅದು ನೀವು ಆ ಪದಗಳನ್ನು ನಿರ್ಲಕ್ಷ್ಯವಾಗಿ ಉಚ್ಚರಿಸಿರಬೇಕೆಂದು ವಾದಿಸುವ ಹಾಗೆ ವಿಮರ್ಶಿಸಿದ ಹಾಗೆ ಕಾಣುತ್ತದೆ. ಅದು ಮನುಷ್ಯನು ಅಸ್ವಸ್ಥನೇ ಅಲ್ಲವೆಂದು ವಾದಿಸುತ್ತದೆ. ಆದರೆ ಯಾವುದೇ ಸಂದರ್ಭದಲ್ಲಿ ಅಂತರ್ಮನಸ್ಸು ಮುಖವು ನಿಜವಾಗಿಯೂ ಮಂದವಾಗಿದೆಯೆಂದು ಆಜ್ಞಾಪಿಸುವ ವೇಗದಲ್ಲಿರುತ್ತದೆ. ಅವನು ಮಂದತೆಯನ್ನು ಹಾಗೆ ಹೇಳಿರುವುದಕ್ಕಿಂತ ಮುಂಚೆಯೇ ಗುರುತಿಸಿರಬಹುದು.

ನೀವು ಏನನ್ನು ಹೇಳಿದಿರೋ ಅದನ್ನೇ ಮೂರುನಾಲ್ಕು ಜನ ಪುನಃ ಉಚ್ಚರಿಸಿದರೆ, ಅಂತರ್ಮನವು ಈ ಆಜ್ಞೆಗಳನ್ನು ಸಂಪೂರ್ಣವಾಗಿ ಒಪ್ಪಿ ಮತ್ತು ಅವನು ಅದರ ಪ್ರಭಾವಕ್ಕೊಳಗಾಗುವನು. ಅವನು ನಿಜವಾಗಿಯೂ ಅಸ್ವಸ್ಥನಾಗಿರುವ ಹಾಗೆ ಭಾವಿಸಲಾರಂಭಿಸುವನು. ಆದಿನ ಅವನು ಏನೇನನ್ನು ಮಾಡಿದ್ದಾನೋ ಅದು ಅವನನ್ನು ಹೆಚ್ಚು ದಣಿವಾಗುವ ಹಾಗೆ ಮಾಡುತ್ತದೆ. ಪ್ರಾಯಶಃ ನಿತ್ರಾಣ ಮತ್ತು ಹೆಚ್ಚು ಕಳವಳಗೊಂಡು—ಇದೆಲ್ಲವೂ ಅಂತರ್ಮನಸ್ಸಿನ ನಿರ್ವಹಣೆಗೆ ಸೀಮಿತವಾಗಿದೆ.

ತದ್ವಿರುದ್ಧವಾಗಿ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳಲು, ಒಂದು ನಿರ್ದಿಷ್ಟ ದಿನದಂದು ನೀವು ಘೋರವಾಗಿ ದುಃಖ ಮತ್ತು ಕಳವಳಕ್ಕೊಳಗಾಗಿರುವಿರಿ. ಅದೇ ಸಮಯದಲ್ಲಿ ನಿಮ್ಮ ಆಪ್ತ ಮಿತ್ರನೊಬ್ಬನು ಬರುವನು. ಅದು ನಿಮ್ಮನ್ನು ಉಲ್ಲಾಸಿತರನ್ನಾಗಿಸುತ್ತದೆ, ಉಲ್ಲಾಸದಿಂದ ನಿಮ್ಮ ಮುಖ ಅರಳುತ್ತದೆ. ನಿಮ್ಮ ಧ್ವನಿ ಮಧುರ ಮತ್ತು ಉಲ್ಲಾಸಮಯವಾಗುತ್ತದೆ. ನಿಮ್ಮ ವರ್ಣೋಚ್ಚಾರಣೆಯು ಎಷ್ಟು ನಯವಾಗಿರುತ್ತದೆಂದರೆ ನೀವು ಮೊದಲಿಗಿಂತಲೂ ಹೆಚ್ಚು ಆರೋಗ್ಯಕರರಾಗಿರುವ ಹಾಗೆನ್ನಿಸುತ್ತದೆ.

ನಾನು ಈ ತರಹದ ಘಟನೆಗಳನ್ನು ಬಹಳ ಸಾರಿ ಪರೀಕ್ಷಿಸಿದ್ದೇನೆ. ನಮ್ಮ ಹಳ್ಳಿಯ ಒಬ್ಬ ಮನುಷ್ಯನು ಯಾವುದೇ ಚೇಳುಕಡಿದ ವ್ಯಕ್ತಿಯನ್ನು ವಾಸಿಮಾಡುವುದರಲ್ಲಿ ಒಂದು ಪವಾಡಯುತ ಶಕ್ತಿಯನ್ನು

ಹೊಂದಿದವನಾಗಿದ್ದಾನೆ ಎಂದು ಹೇಳಲಾಗಿತ್ತು. ಹಳ್ಳಿಯ ಜನರು ಇದನ್ನು ನಂಬಿದ್ದರು. ಚೇಳುಕಡಿದ ಮನುಷ್ಯನನ್ನು ಅವನಲ್ಲಿಗೆ ಕರೆದುಕೊಂಡು ಬರಲಾಗುತ್ತಿತ್ತು. ಆತನು ಕೆಲವು ಮಂತ್ರಗಳನ್ನು ಸ್ವಲ್ಪಮಟ್ಟಿಗೆ ಅಸಂಬದ್ಧವಾಗಿ ಎರಡು ಮೂರು ನಿಮಿಷದವರೆಗೆ ಉಚ್ಚರಿಸುತ್ತಿದ್ದನು. ಆತನು ಗಾಯಗೊಂಡ ಸ್ಥಳದಲ್ಲಿ ಒತ್ತಿ ತೀಡುತ್ತಲೂ ಇದ್ದನು. ಆ ಭಾಗವು ಕೆಂಪಗಾಗುತ್ತಿತ್ತು. ಅಲ್ಲದೆ ಕೇವಲ ಮೂರು ನಾಲ್ಕು ನಿಮಿಷಗಳ ಸಮಯದಲ್ಲಿ ಚೇಳಿಗೆ ಬಲಿಯಾದವನಿಗೆ ನೋವು ಕಡಿಮೆಯಾದ ಹಾಗೆ ಅನ್ನಿಸಲಾರಂಭಿಸುವುದು ಮತ್ತು ಆತನು ಮನೆಗೆ ಉಲ್ಲಾಸಿತನಾಗಿ ಹಿಂದಿರುಗುವನು.

ಒಂದು ದಿನ ನಾನು ಆತನಿಗೆ ನಿಕಟವಾದಾಗ ನೀನು ನಿನ್ನ ರೋಗಿಗಳನ್ನು ವಾಸಿಮಾಡುವಾಗ ಹೇಳುವ ಮಂತ್ರವನ್ನು ನನಗೆ ಹೇಳುವೆಯಾ? ಎಂದು ಕೇಳಿದೆ. ನನಗೆ ಸಿಕ್ಕ ಉತ್ತರವು ದಿಘ್ಭ್ರಮೆಗೊಳಿಸುವಂತಹುದಾಗಿತ್ತು . *'ಮಂತ್ರ'* ಆತನು ಹೇಳಿದ, *'ಮಂತ್ರವೇ* ಇಲ್ಲ, ವಾಸ್ತವದಲ್ಲಿ ಚೇಳಿಗೆ ಬಲಿಯಾದವನು ನನ್ನಲ್ಲಿಗೆ ಬಂದಾಗ ನಾನು ಅವನಲ್ಲಿ ಕೊಳಕಾದ ಭಾಷೆಯಲ್ಲಿ ಬಡಬಡಿಸುತ್ತೇನೆ!' ಎಲ್ಲಾ ರೋಗಿಗಳೂ ಒಂದೇ ರೀತಿಯಲ್ಲಿ ವಾಸಿಯಾಗುತ್ತಿರುವುದು ತನಗೇ ಆಶ್ಚರ್ಯಕರವಾಗಿದೆಯೆಂದು ಸಹ ಆತನು ಹೇಳಿದನು.

ನಂತರ ಅವನು ಆ ನೋವು ಮಂತ್ರದಿಂದ ಹೋಗಿರುವುದಿಲ್ಲ ಎಂದು ಗುಟ್ಟಾಗಿ ಹೇಳಿದನು. ಅದು ವಾಸಿಯಾಗಲು ಕಾರಣವೆಂದರೆ ಅವರು ತಾನು ಅಗಾಧವಾದ *ತಾಂತ್ರಿಕನು* ಮತ್ತು ಅಂತಹ ನೋವುಗಳನ್ನು ತೆಗೆಯುವುದು ಆತನಿಗೆ ಹುಡುಗಾಟವು ಎಂದು ಸಂಪೂರ್ಣವಾದ ನಂಬಿಕೆಯೊಂದಿಗೆ ಬಂದಿದುದು. ಕೇವಲ ಆಜ್ಞೆಯು ನೋವನ್ನು ನಿರ್ಮೂಲನೆ ಮಾಡುತ್ತದೆ. ವಾಸ್ತವದಲ್ಲಿ ಆ ಮಾಂತ್ರಿಕ ವೈದ್ಯನಿಗೆ ಕೇವಲ ಬೆರಳುಗಳ ಸ್ಪರ್ಶದಿಂದ ನೋವನ್ನು ಹೊರದೂಡುವಂತಹ ಸಾಬೀತು ಪಡಿಸುವಂತಹ ಸಾಮರ್ಥ್ಯವಿದೆ ಎಂಬುದನ್ನು ಅಂತರ್ಮನಸ್ಸು ಒಪ್ಪಿಕೊಳ್ಳುತ್ತದೆ. ಆದ್ದರಿಂದ ಅದರ ನಿರ್ಮೂಲನೆಗೆ ಮಂತ್ರವಲ್ಲ ಆಜ್ಞೆಯೇ ಕಾರಣವಾಗಿರುತ್ತದೆ.

ಬಹಳ ವೈದ್ಯರುಗಳು ಜಟಿಲವಾದ ಮನುಷ್ಯನ ದೇಹದಲ್ಲಿನ ನೋವನ್ನು ಕಂಡುಹಿಡಿಯಲು ವಿಫಲರಾಗುತ್ತಾರೆ. ಆದರೆ ಅಂತರ್ಮನಸ್ಸು ಈ ವಿಷಯದಲ್ಲಿ ವಿಫಲವಾಗುವುದಿಲ್ಲ. ಅದು ಕಂಡುಹಿಡಿದು ನೋವನ್ನು ನಿರ್ಮೂಲನೆಮಾಡುತ್ತದೆ.

ಸಮ್ಮೋಹನ ಆಜ್ಞೆಗಳ ನಿರ್ವಹಣೆಯ ಅಭಿಪ್ರಾಯವೆಂದರೆ ಅಂತರ್ಮನಸ್ಸಿನ ಆಲೋಚನೆಯು. ದೇಹದ ಅಗೋಚರ ಭಾಗಕ್ಕೆ ಅಂತರ್ಮನಸ್ಸು ತಲುಪಿದ ಹಾಗೆ, ಅದೇ ರೀತಿಯಲ್ಲಿ ಅದು ವಿಶ್ವದ ಗೋಪ್ಯ ಭಾಗಕ್ಕೆ ಕೆಲವೇ ಕ್ಷಣಗಳಲ್ಲಿ ಪ್ರಯಾಣಿಸಬಹುದು. ಅದು ಒಂದೇ ಕ್ಷಣದಲ್ಲಿ ಸಾವಿರಾರು ಮೈಲಿ ಪ್ರಯಾಣಿಸಿ ದೂರದ ಸ್ಥಳದಲ್ಲಿರುವ ವ್ಯಕ್ತಿಯನ್ನು ನೋಡುತ್ತದೆ. ಉದಾಹರಣೆಗೆ ತೆಗೆದುಕೊಳ್ಳಿ, ವಿದೇಶದಲ್ಲಿರುವ ಒಬ್ಬ ವ್ಯಕ್ತಿಯು ತನ್ನ ಹೆಂಡತಿ ಅಥವಾ ಮಕ್ಕಳು ಅಥವಾ ಮನೆಯಲ್ಲಿರುವ ಯಾವುದೇ ವ್ಯಕ್ತಿಯ ಬಗ್ಗೆ ಚಿಂತಿಸುತ್ತಾನೆ, ಒಂದೇ ಕ್ಷಣದಲ್ಲಿ ಅವರು ಅವನ ಗೋಚರಕ್ಕೆ ಬರುತ್ತಾರೆ. ಅದರ ಅರ್ಥವೇನೆಂದರೆ ಅವನು ತನ್ನ ಬಂಧುಬಳಗದ ಬಗ್ಗೆ ಯೋಚಿಸಿದನು, ಅಂತರ್ಮನಸ್ಸು ಅವರನ್ನು ತಲುಪಿತು. ಆಗ ಅವನ ಕಣ್ಣುಗಳು ಮುಚ್ಚಿರಬಹುದು. ಅವನ ಅಂತರ್ಮನಸ್ಸು ನೋಡಿದುದನ್ನು ಅವನು ಅನುಭವಿಸಲಾರಂಭಿಸುವನು.

ಅಂತರ್ಮನಸ್ಸು ದೂರದ ಸ್ಥಳದಲ್ಲಿರುವ ಕೂತುಕೊಂಡಿರುವ ವ್ಯಕ್ತಿಗಳನ್ನು ನೋಡಿದ ಹಾಗೆ, ಅದು ಒಬ್ಬ ವ್ಯಕ್ತಿಗೆ ಒಂದು ನಿರ್ದಿಷ್ಟ ಕೆಲಸವನ್ನು ಆಜ್ಞಾಪಿಸಲೂಬಹುದು ಅಥವಾ ಅಪ್ಪಣೆಮಾಡಬಹುದು. ಅದಕ್ಕೆ ಒಂದು ವಿಶಿಷ್ಟ ರೀತಿಯ ಅಭ್ಯಾಸದ ಅವಶ್ಯಕತೆ ಇರುತ್ತದೆ.

ಅವಶ್ಯಕವಿರುವುದೇನೆಂದರೆ ಬಹಿರ್ಮನಸ್ಸಿನ ಹತೋಟಿಗೆ ಅಂತರ್ಮನಸ್ಸನ್ನು ತರುವುದು. ಸಾಮಾನ್ಯವಾಗಿ ಅದು ಬಹಿರ್ಮನಸ್ಸಿನ ಹತೋಟಿಯಲ್ಲಿರುವುದಿಲ್ಲ. ಏಕೆಂದರೆ ಅದರಲ್ಲಿ ಎರಡೂ ಘೋರವಾದ ಮತ್ತು ಸಹಿಸಿಕೊಳ್ಳುವಂತಹ ವೇಗವಿದೆ. ಹೇಗಾದರೂ ಒಂದು ವಿಶಿಷ್ಟರೀತಿಯ ತಂತ್ರದ ಅಭ್ಯಾಸವನ್ನು ಅನುಸರಿಸಿ, ಅಂತರ್ಮನಸ್ಸನ್ನು ಹತೋಟಿಗೆ ತಂದರೆ ಓರ್ವನು ವಿಸ್ಮಯಗೊಳ್ಳುವಂತಹ ಫಲಿತಾಂಶವನ್ನು ಕಾಣಬಹುದು. ಸಾಧಾರಣವಾಗಿ ಸಮ್ಮೋಹನ ಪ್ರಭಾವದಲ್ಲಿ ದೂರದಲ್ಲಿ ಕೂತುಕೊಂಡಿರುವಂತಹ ಹೆಂಡತಿ ಮಕ್ಕಳನ್ನು ನೋಡುವ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳುತ್ತೇವೆ. ಬೇರೆ ಪದಗಳಲ್ಲಿ ನಾವು ಮೊದಲೇ ನೋಡಿರುವಂತಹ ಸ್ಥಳಗಳನ್ನು ಮತ್ತು ವ್ಯಕ್ತಿಗಳನ್ನು ಮಾತ್ರ ನೋಡುತ್ತೇವೆ. ಆದರೆ ಅಂತರ್ಮನಸ್ಸನ್ನು ಖಚಿತವಾದ ಹತೋಟಿಗೆ ತೆಗೆದುಕೊಂಡಾಗ ಓರ್ವನಿಗೆ ಹಿಂದೆಂದೂ ನೋಡದಂತಹ ಸ್ಥಳಗಳನ್ನು ನೋಡಲಾಗಬೇಕು. ಅಂತರ್ಮನಸ್ಸನ್ನು ನಿಯಂತ್ರಿಸಿದರೆ ಪ್ರಪಂಚದಲ್ಲಿರುವ ಯಾವುದೇ ಮೂಲೆಯಲ್ಲಿರುವ ಘಟನೆಯನ್ನೂ ನೋಡಬಹುದು.

ನಾವು ಕೇವಲ ನಿಷ್ಕ್ರಿಯ ಪ್ರೇಕ್ಷಕರಾಗಲು ಅವಶ್ಯಕತೆಯಿರುವ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳುವುದೊಂದೇ ಅಲ್ಲ. ನಾವು ಆ ಘಟನೆಯಲ್ಲಿ ಆಪ್ತ ಬರಲೂಬಹುದು. ಉದಾಹರಣೆಗೆ, ಮೈಲಿ ಮೈಲಿ ದೂರದಲ್ಲಿ ವಾಸಿಸುವಂತಹ ನಿಮ್ಮ ಸ್ನೇಹಿತರೊಬ್ಬರನ್ನು ಪ್ರಭಾವಕ್ಕೊಳಗಾಗಿಸಬಹುದು. ಅಂತರ್ಮನಸ್ಸಿನ ಸಹಾಯದಿಂದ ನೀವು ಅವನನ್ನು ನೋಡಬಹುದು. ಅದೇ ಸಮಯದಲ್ಲಿ ನಿಮ್ಮ ಅಂತರ್ಮನಸ್ಸು ನಿಮ್ಮ ಕೈಯಲ್ಲಿದ್ದರೆ ನೀವು ಬಯಸಿದ ಹಾಗೆ ಅವನು ನಡೆದುಕೊಳ್ಳುವ ಹಾಗೆ ಮಾಡಬಹುದು.

ಈಗ ಮುಖ್ಯವಾದ ಪ್ರಶ್ನೆಯೆಂದರೆ:ನಾವು ಅಂತರ್ಮನಸ್ಸಿನ ಮೇಲೆ ಹೇಗೆ ಹತೋಟಿಯನ್ನು ಸಂಪಾದಿಸಬಹುದು? ಅದಕ್ಕೆ ಒಂದೇ ಉತ್ತರವು: ಓರ್ವನು ಸಮ್ಮೋಹನಾಜ್ಞೆಯ ಸಹಾಯದಿಂದ ಅದನ್ನು ಸಾಧಿಸಬಹುದು.

ನಮಗೆ ಅಂತರ್ಮನಸ್ಸನ್ನು ಹತೋಟಿಗೆ ತಂದುಕೊಡುವ ಶಕ್ತಿಯು ಮೂಲಭೂತವಾಗಿ ಸಮ್ಮೋಹನ ಆಜ್ಞೆಗಳು. ಈ ಮನಸ್ಸಿನ ಸಾಮರ್ಥ್ಯದಿಂದಲೇ ನಾವು ಏನನ್ನಾದರೂ ಮಾಡಬಹುದು. ಸಮ್ಮೋಹನ ಆಜ್ಞೆಯ ಭಾವನೆಯು ತೋರಿಕೆಗೆ ಬಹಳವೇ ಸರಳವೆನಿಸಬಹುದು. ವಾಸ್ತವದಲ್ಲಿ, ಹೇಗಾದರೂ ಅದನ್ನು ಸಾಧಿಸುವುದು ಬಹಳ ಕಷ್ಟಕರವು. ಅದಕ್ಕೆ ಬಹಳ ಕಷ್ಟಕರವಾದ ಮತ್ತು ನಿಯಮಿತ ಅಭ್ಯಾಸದ ಅವಶ್ಯಕತೆಯಿರುತ್ತದೆ. ಕೇವಲ ನಿಯಮಿತ ಅಭ್ಯಾಸದ ನಂತರ ಅದನ್ನು ನಮ್ಮ ಹತೋಟಿಗೆ ತೆಗೆದುಕೊಳ್ಳಬಹುದು.

ವಿಶಾಲವಾಗಿ ಮನುಷ್ಯ ದೇಹದಲ್ಲಿ ಮೂರು ಅಗೋಚರವಾದ ಭಾಗಗಳಿವೆ ಅಂತರ್ಮನಸ್ಸು, ಬಹಿರ್ಮನಸ್ಸು ಮತ್ತು ಬುದ್ಧಿಶಕ್ತಿ. ನಿಮಗೆ ಇವುಗಳಲ್ಲಿ ಸಮಗ್ರವಾದ ಅನ್ಯೋನ್ಯತೆ ಬೇಕಾಗುತ್ತದೆ. ಬಹಿರ್ಮನಸ್ಸು ಅಷ್ಟು ಸುಲಭವಾಗಿ ಆಜ್ಞೆಗಳನ್ನು ಸ್ವೀಕರಿಸುವುದಿಲ್ಲ. ಗುಣದ ಅನುಸಾರವಾಗಿ ಅದು ವಾದಿಸುತ್ತದೆ. ಹೇಗಾದರೂ, ಅಂತರ್ಮನಸ್ಸು ಯಾವುದೇ ಆಜ್ಞೆಯನ್ನು ಸುಲಭವಾಗಿ ಒಪ್ಪುತ್ತದೆ.

ಒಂದು ನಿದರ್ಶನವನ್ನು ತೆಗೆದುಕೊಳ್ಳಿ, ಒಬ್ಬ ರೋಗಿಯ ಹತ್ತಿರ ಹೋಗಿ ಅವನು ಇನ್ನು ಅಸ್ವಸ್ಥ್ಯವಾಗಿಲ್ಲವೆಂದು ಹೇಳಿ. ಅವನ ಬಹಿರ್ಮನಸ್ಸು ಅದನ್ನು ಒಪ್ಪುವುದಿಲ್ಲ. ಅವನು ಹಿಮ್ಮೆಟ್ಟಿ: ನೀನು ತಪ್ಪು, ನಾನು ಉತ್ತಮವಾಗಿಲ್ಲ, ನನಗೆ ವಿಪರೀತವಾದ ತಲೆನೋವಿದೆ. ನನಗೆ ಕೀಲುಗಳ ನೋವು. ನಾನು ಆರೋಗ್ಯವಾಗಿದ್ದೇನೆಂದು ನೀನು ಹೇಗೆ ಹೇಳುತ್ತೀಯ?

ನಂತರ ಒಬ್ಬ ವೈದ್ಯನು ಬಂದು ಅದೇ ರೋಗಿಗೆ ನೀನು ಲವಲವಿಕೆಯುಂದಿದ್ದೀಯ ಎಂದು ಹೇಳುತ್ತಾನೆ. ಬಹಿರ್ಮನಸ್ಸಿಗೆ ಈಗ ತಾನು ಇನ್ನೂ ಆರಾಮವಾಗಿಲ್ಲವೆಂದು ವಾದಿಸಬೇಕೆನಿಸುವುದು. ಆದರೆ ಬುದ್ಧಿಶಕ್ತಿಯು

ಈಗ ಮೇಲುಗೈಯಾಗುತ್ತದೆ. ಏಕೆಂದರೆ ಬುದ್ಧಿಶಕ್ತಿಯು ವೈದ್ಯನು ನಿಷ್ಣಾತನೆಂದು ಗ್ರಹಿಸಿದೆ. ಅವನಿಗೆ ದೈಹಿಕ ನೋವುಗಳ ಬಗ್ಗೆ ಹೆಚ್ಚಾಗಿ ಗೊತ್ತು. ಅವನ ಅಭಿಪ್ರಾಯವು ಹೆಚ್ಚು ಅಧಿಕಾರಯುತವಾಗಿರಬೇಕು. ಬುದ್ಧಿಶಕ್ತಿಯು ಹೀಗೆ ಆಜ್ಞಾಪಿಸಿದಾಗ, ಬಹಿರ್ಮನಸ್ಸು ಸುತ್ತುವರೆದು ಈಗ ಅದು ಸರಿಮಾಡುತ್ತಿದೆ ಎನ್ನುವ ಸ್ಥಿತಿಗೆ ಬರುವುದು. ಬಹಿರ್ಮನಸ್ಸು ಒಪ್ಪಿಕೊಂಡಾಗ, ಅಂತರ್ಮನಸ್ಸಿನ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಏಕೆಂದರೆ ಅದು ಯಾವಾಗಲೂ ಮರುಮಾತಿಲ್ಲದೆ ಎಲ್ಲಾ ಆಜ್ಞೆಗಳನ್ನೂ ಸ್ವೀಕರಿಸುವುದು.

ಸಮ್ಮೋಹಕನ ಪಾತ್ರವು ಈ ಮೇಲೆ ಹೇಳಿದ ವೈದ್ಯನ ಪಾತ್ರಕ್ಕೆ ತದ್ರೂಪವಾಗಿದೆ. ಬಹಿರ್ಮನಸ್ಸು ವೈದ್ಯನು ಹೇಳಿದ ಪ್ರಕಾರವಾಗಿ ನಡೆಯುತ್ತದೆಂದು ಈಗಾಗಲೇ ಗೊತ್ತಾಗಿದೆ. ಈ ಕಾರಣಕ್ಕೊಂದೇ ಬುದ್ಧಿಶಕ್ತಿಯು ಮಧ್ಯ ಪ್ರವೇಶಿಸುತ್ತದೆ. ಹೆಚ್ಚಾಗಿ ಇದೇ ರೀತಿಯಲ್ಲಿ ಮಾಧ್ಯಮನಿಗೆ ಸಮ್ಮೋಹಕನಲ್ಲಿ ನಂಬಿಕೆ ಬರುವವರೆಗೂ ಈಕಡೆ ಬಹಿರ್ಮನಸ್ಸು ಆಕಡೆ ಅಂತರ್ಮನಸ್ಸು ಎರಡೂ ಸಮ್ಮೋಹಕನು ಕೊಡಲ್ಪಟ್ಟ ಆಜ್ಞೆಗಳನ್ನು ಸ್ವೀಕರಿಸುವುದಿಲ್ಲ.

ಒಂದು ಉದಾಹರಣೆಯನ್ನು ತೆಗೆದುಕೊಳ್ಳಲು, ಸಮ್ಮೋಹಕನು ನಿಮಗೆ ನಿದ್ರೆ ಬರುತ್ತಿದೆಯೆಂದು ಆಜ್ಞಾಪಿಸುವನು. ವಿರೋಧವಾಗಿ ನಿಮ್ಮ ಮನಸ್ಸು ಇಲ್ಲ,'ಮಾಧ್ಯಮ'ನಿಗೆ ನಿದ್ರೆ ಬರುವ ಹಾಗಾಗುತ್ತಿಲ್ಲ ಎಂದು ವಾದಿಸುವ ಸಾಧ್ಯತೆ ಇದೆ. ಈ ವಿಷಯದಲ್ಲಿ ಮನಸ್ಸು ಅಡ್ಡ ಬಂದು ಉದ್ದೇಶವನ್ನು ಹಿಂದೆ ತಳ್ಳುವುದು. ಸಮ್ಮೋಹಕನಲ್ಲಿ ಆಳವಾದ ನಂಬಿಕೆ ಇದ್ದಾಗ ಮಾಧ್ಯಮನು ತನಗೆ ನಿದ್ರೆ ಬರುತ್ತಿರುವುದಾಗಿ ಒಪ್ಪುವನು. ಬಹಿರ್ಮನಸ್ಸು ಪ್ರಭಾವಕ್ಕೊಳಗಾದಾಗ ಅಂತರ್ಮನಸ್ಸಿನ ಪ್ರಶ್ನೆಯು ಉದ್ಭವಿಸುವುದೇ ಇಲ್ಲ. ಇಂತಹ ಸ್ಥಿತಿಯಲ್ಲಿ ಬಹಿರ್ಮನಸ್ಸು ಸಂಪೂರ್ಣವಾಗಿ ನಿಶ್ಚೇತನಗೊಳ್ಳುವುದು ಮತ್ತು ಅಂತರ್ಮನಸ್ಸು ಚೇತನಗೊಂಡು ಉದ್ದೇಶಿಸಿರುವ ಎಲ್ಲಾ ಆಜ್ಞೆಗಳನ್ನೂ ಅನುಸರಿಸುವುದು.

ಬಹಿರ್ಮನಸ್ಸನ್ನು ಶಾಂತವಾಗಿಸಿದಾಗ ಅಥವಾ ನಿದ್ರೆಗೆ ಹಾಕಿದಾಗ ಅಂತರ್ಮನಸ್ಸು ಉನ್ನತವಾದ ಎತ್ತರವನ್ನು ತಲುಪುವುದು ಮತ್ತು ಹೆಚ್ಚಾಗಿ ಚೇತನಗೊಳ್ಳುವುದು. ಉದಾಹರಣೆಗೆ ಯಾವಾಗ ನೀವು ರಾತ್ರಿಯಲ್ಲಿ ಮಲಗುತ್ತೀರೋ, ನಿಮ್ಮ ಬಹಿರ್ಮನಸ್ಸು ನಿದ್ರೆಗೆ ಹೋಗುವುದು. ಅನುರೂಪವಾಗಿ ಅಂತರ್ಮನಸ್ಸು ಚೇತನಕ್ಕೆ ಪುಟಿದು ದೂರಕ್ಕೆ ಪ್ರಯಾಣಿಸುವುದನ್ನು ಪ್ರಾರಂಭಿಸುವುದು. ಕನಸುಗಳ ಮಾಧ್ಯಮದಿಂದ ನೀವು ದೃಷ್ಯಗಳನ್ನು ನೋಡಲು ಪ್ರಾರಂಭಿಸುವಿರಿ. ಈ ಕನಸುಗಳು ನಿಮ್ಮ ಅಂತರ್ಮನಸ್ಸು ಏನನ್ನು ನೋಡಿದೆ ಮತ್ತು ನೋಡುತ್ತಿದೆ ಎನ್ನುವುದಲ್ಲದೇ ಬೇರೇನೂ ಅಲ್ಲ.

ಅಂತರ್ಮನಸ್ಸಿಗೆ ಈಚೆ ಸಮಯ ಆಚೆ ಸ್ಥಳ ಯಾವುದೂ ಲೆಕ್ಕಕ್ಕಿಲ್ಲ. ಒಂದು ಕ್ಷಣದಲ್ಲಿ ಅದು ಸಾವಿರಾರು ಮೈಲಿ ಪ್ರಯಾಣಿಸುವುದು. ತದ್ರೂಪವಾಗಿ ಅದು ಭೂತಕಾಲಕ್ಕೆ ಹೋಗಬಲ್ಲದು ಮತ್ತು ಹಲವು ವರ್ಷಗಳ ಹಿಂದೆ ನಡೆದಿರುವ ಘಟನೆಗಳನ್ನು ನೋಡುವುದು. ಅದು ಭವಿಷ್ಯವನ್ನೂ ನೋಡುವುದು ತಕ್ಷಣದ ಭವಿಷ್ಯ ಅಥವಾ ದೂರದ ಭವಿಷ್ಯಗಳನ್ನೂ ಅದು ನೋಡುವುದು.

ನೀವು ಕನಸಿನಲ್ಲಿ ನೋಡಿದಂತಹ ಘಟನೆ ಆಗಿನ ದಿನಗಳಲ್ಲೊಂದು ದಿನ ನಿಜವಾಗಬಹುದು. ಆ ಘಟನೆಯು ನಿಮ್ಮ ನಿಜ ಜೀವನದಲ್ಲಿ ಸ್ವಲ್ಪದಿನಗಳ ಹಿಂದೆಯೇ ನಿಮ್ಮ ಕನಸಿನಲ್ಲಿ ಹೆಚ್ಚಾಗಿ ನೋಡಿದಹಾಗೆಯೇ ತನ್ನಷ್ಟಕ್ಕೆ ತಾನೇ ಹೊರಬರುವುದನ್ನು ನೋಡಲು ನೀವು ಚಕಿತರಾಗುವಿರಿ. ಅದರಲ್ಲಿ ಚಕಿತರಾಗುವುದೇನೂ ಇಲ್ಲ, ಏಕೆಂದರೆ ಅಂತರ್ಮನಸ್ಸು ಆ ಸನ್ನಿಹಿತವಾಗಿರುವ ಘಟನೆಯನ್ನು ನೋಡಿದೆ. ಅದನ್ನು ನೀವು ಜ್ಞಾಪಿಸಿಕೊಂಡಿರಿ.

ನಿಮ್ಮ ಅಂತರ್ಮನಸ್ಸು ನಿಮ್ಮ ಹತೋಟಿಯಲ್ಲಿ ಇಲ್ಲದಿರುವಾಗ ಮಾತ್ರ ಈ ಪರಿಸ್ಥಿತಿ ವೃದ್ಧಿಯಾಗುತ್ತದೆ. ಅಂತರ್ಮನಸ್ಸು ನೋಡಿದ ಎಲ್ಲಾ ದೃಷ್ಯಗಳನ್ನು ನಾವು ನೋಡಬೇಕು. ಅದಕ್ಕೆ ವಿರುದ್ಧವಾಗಿ ಅಂತರ್ಮನಸ್ಸು

ನಿಮ್ಮ ಹತೋಟಿಯಲ್ಲಿದ್ದರೆ ಅದರ ಕಾರಣತ್ವದ ಮೂಲಕ ನೀವು ನಿಮ್ಮಷ್ಟಕ್ಕೇ ಬೇಕಾದ ದೃಷ್ಯಗಳನ್ನೇ ನೋಡುವಿರಿ. ಒಬ್ಬ ನಿರ್ದಿಷ್ಟ ವ್ಯಕ್ತಿಯು ಯಾವಾಗ ಮತ್ತು ಎಲ್ಲಿ ಮದುವೆಯಾಗುವನೆಂದು ನೀವು ನೋಡಲಿಚ್ಛಿಸಿರುವುದನ್ನು ಕಲ್ಪಿಸಿಕೊಂಡರೆ, ಅಂತರ್ಮನಸ್ಸು ಕೂಡಲೇ ಅವನ ಉದ್ದೇಶವನ್ನು ಹಿಡಿದುಕೊಂಡು ಅವನು ಒಂದು ನಿರ್ದಿಷ್ಟ ಸ್ಥಳದಲ್ಲಿ, ನಿರ್ದಿಷ್ಟ ಹುಡುಗಿಯನ್ನು ಮುಂತಾದವುಗಳನ್ನು ನೋಡುತ್ತದೆ. ಇದು ಅಂತರ್ಮನಸ್ಸು ಹತೋಟಿಯಲ್ಲಿದ್ದಾಗ ಮಾತ್ರ ಸಾಧ್ಯ. ನಮ್ಮ ಧರ್ಮಗ್ರಂಥದಲ್ಲಿ ಇದನ್ನು *ದಿವ್ಯದೃಷ್ಟಿ* ಎಂದು ಕರೆಯಲಾಗಿದೆ.

ಬಹಳ ಸಾರಿ ನಾವು ನಮ್ಮ ಪ್ರೀತಿಯ ಮತ್ತು ಹತ್ತಿರದ ವ್ಯಕ್ತಿಯ ಬಗ್ಗೆ ಚಿಂತಿಸುತ್ತಾ ಇರುವಾಗ, ನಾವು ಹಠಾತ್ತಾಗಿ ಆ ಒಂದು ನಿರ್ದಿಷ್ಟ ವ್ಯಕ್ತಿಯ ಒಂದು ನೋಟವು ನಮ್ಮ ಮುಂದೆ ಹೊಳೆದ ಹಾಗೆ ಕಾಣುವುದು. ಕೂಡಲೇ ಒಬ್ಬ ಹೆಂಗಸಿಗೆ ವಿದೇಶದಲ್ಲಿರುವ ತನ್ನ ಗಂಡನು ಅಸ್ವಸ್ಥನಾದ ಹಾಗೆ ಅನ್ನಿಸುವುದು. ಆಕೆಯು ಯಾವುದೇ ಧ್ಯಾನವನ್ನು ಅಭ್ಯಸಿಸಲಿಲ್ಲ ಆಕಡೆ ಯಾವುದೇ ಆಜ್ಞೆಯನ್ನು ಕೊಡಲಿಲ್ಲ. ಆಕೆಯು ಅಸಮಾಧಾನದಿಂದಿದ್ದಾಳೆ. ಆಕೆಯ ಗಂಡನು ಅಸ್ವಸ್ಥನಾಗಿರುವ ಹಾಗೆ ಆಕೆಗೆ ತಂತಿ ಸಂದೇಶಬರುವುದು. ಆಕೆಗೆ ಆ ಸುಳಿವು ಹೇಗೆ ಗೊತ್ತಾಯಿತು, ಆಕೆ ವಿಸ್ಮಯಗೊಳ್ಳುತ್ತಾಳೆ. ನೀವು ಅಂತರ್ಮನಸ್ಸಿನ ಮೇಲೆ ಹತೋಟಿಯನ್ನು ತೆಗೆದುಕೊಂಡರೆ ಆ ರೀತಿಯ ಪೂರ್ವಶಂಕೆಯಾಗುವುದು ಅಸಾಧಾರಣವೇನೂ ಅಲ್ಲ. ಹತೋಟಿಗೆ ತಂದ ಅಂತರ್ಮನಸ್ಸು ಭೂತಕಾಲವನ್ನು ಮತ್ತು ಭವಿಷ್ಯಕಾಲ ಎರಡನ್ನೂ ತಿಳಿಸುವುದು.

ಅಂತರ್ಮನಸ್ಸನ್ನು ಹತೋಟಿಗೆ ತರುವ ಸಾಧನವೆಂದರೆ ಸಮ್ಮೋಹನಾಜ್ಞೆಯು. ಸಮ್ಮೋಹನದಿಂದ ಮಾತ್ರ ನಾವು ಸಮ್ಮೋಹನ ಆಜ್ಞೆಯ ಸಂಪೂರ್ಣ ಅರ್ಥವನ್ನು ತಿಳಿದುಕೊಳ್ಳಬಹುದು.

ಸಮ್ಮೋಹನ ಆಜ್ಞೆಯ ಹೊರತು ನಾವು ಸಮ್ಮೋಹನ ವಿಧಾನವನ್ನು ಪೂರ್ಣಗೊಳಿಸಲಾಗುವುದಿಲ್ಲ, ಈ ವಿಧಾನವನ್ನು ಅನುಸರಿಸಿ ಸಮ್ಮೋಹಕನು ಬೇರೆಯವರನ್ನು ಸಮ್ಮೋಹನಗೊಳಿಸಿ ತಾನೂ ಸಹ ಸಮ್ಮೋಹನಗೊಳ್ಳಬಹುದು.

## ಸಮ್ಮೋಹನದ ವರ್ಗಾವಣೆಗಳು

ಸಮ್ಮೋಹನದಿಂದ ಮಾಡಲ್ಪಟ್ಟ ಕೆಲವು ಚಾಲನೆಗಳು ಸಮ್ಮೋಹನದ ವರ್ಗಾವಣೆಗಳು. ಅದರ ಉದ್ದೇಶವು 'ಮಾಧ್ಯಮ' ನಿಗೆ ಸಮ್ಮೋಹನಗೊಳಿಸುವುದು ಅಥವಾ ಅಸಮ್ಮೋಹನಗೊಳಿಸುವುದು. ಅದರ ಅರ್ಥವೆಂದರೆ ನಮ್ಮ ಸ್ವಾಧೀನದಲ್ಲಿರುವ ಶಕ್ತಿಯನ್ನು ಬೇರೆಯವರಲ್ಲಿ ವಿಸ್ತಾರಗೊಳಿಸುವುದು.

ಕಳೆದ ಪುಟಗಳಲ್ಲಿ ನಾವು ಈಗಾಗಲೇ ಹೇಗೆ ಡಾ.ಮೆಸ್ಮರ್‌ರವರು ಪ್ರತಿಯೊಬ್ಬ ವ್ಯಕ್ತಿಯು ಇಂದ್ರಿಯದಿಂದ ಆಕರ್ಷಣೆಯುತನಾಗಿದ್ದಾನೆಂದು ಸಾಬೀತು ಪಡಿಸಿರುವುದನ್ನು ಚರ್ಚಿಸಿದ್ದೇವೆ. ಅವನ್ನು ನಾವು ಬೇರೆ ಮನುಷ್ಯ ದೇಹಗಳಿಗೆ ವರ್ಗಾಯಿಸಿ ಅಥವಾ ಚಾಲನೆಮಾಡಬಹುದು. ನಾವು ಪ್ರತಿವ್ಯಕ್ತಿಯಲ್ಲೂ ಸಹಜವಾಗಿರುವಂತಹ ಶಕ್ತಿಯು ಇರುತ್ತದೆ ಮತ್ತು ಅದನ್ನು ಮುಂದೆ ಹೆಚ್ಚಿಸಿಕೊಳ್ಳಬಹುದು ಎಂದು ಸಹ ಚರ್ಚಿಸಿದ್ದೇವೆ. ಈ ವ್ಯಾಯಾಮಕ್ಕೆ ನಿಯಮಿತವಾದ ಅಭ್ಯಾಸದ ಅವಶ್ಯಕತೆ ಇರುತ್ತದೆ. ಇದಕ್ಕೋಸ್ಕರ ನಾವು ಶಕ್ತಿ ಚಕ್ರದ ಉಪಯೋಗವನ್ನು ಮಾಡಬೇಕು. ನಾವು ತ್ರಾಟಕದ ಉಪಯೋಗವನ್ನೂ ಮಾಡಬಹುದು. ಒಮ್ಮೆ *ಚಕ್ರದ* ಅಥವಾ *ತ್ರಾಟಕದ* ನಿಯಮಿತ ಅಭ್ಯಾಸವನ್ನು ಮಾಡಿದರೆ ನಮ್ಮಲ್ಲಿ ಸಹಜವಾಗಿರುವ ಆಕರ್ಷಣೆಯು ಎಷ್ಟು ಬಲವಾಗುತ್ತದೆಂದರೆ ನಾವು ಯಾರನ್ನೇಯಾವರು ಒಂದು ಕ್ಷಣದಲ್ಲಿ ಸಮ್ಮೋಹನಗೊಳಿಸಬಹುದು.

ಓರ್ವ ಕುಶಲವಾದ ಸಾಧುವು ರೋಗಿಯ ಹಣೆಯ ಮೇಲೆ ಮುಟ್ಟಿದರೆ ರೋಗಿಗೆ ಬಹಳ

ಉಪಶಮನವಾದಂತಾಗುತ್ತದೆ. ಅದು ಬೆರಳುಗಳ ಸಾಧನದ ಮೂಲಕವಾಗಿ ಪಡೆದಂತಹ ಆಕರ್ಷಣೆಯಲ್ಲದೆ ಬೇರೇನೂ ಅಲ್ಲ.

ನಿಮ್ಮ ವ್ಯಕ್ತಿತ್ವದಲ್ಲಿ ನೀವು ತ್ರಾಟಕದ ಮಾಧ್ಯಮದಿಂದ ಆಕರ್ಷಣ ಶಕ್ತಿಯನ್ನು ಹೆಚ್ಚಿಸಿಕೊಂಡಾಗ, ನೀವು ಅದನ್ನು ಬೇರೆಯವರಿಗೆ ವರ್ಗಾಯಿಸಬಹುದು. ಈ ಒಂದು ಕೃತ್ಯಕ್ಕೆ ಸಮ್ಮೋಹನದ ವರ್ಗಾವಣೆಯೆಂದು ಕರೆಯಲಾಗಿದೆ.

ಈ ತರಹದ ಸಾಮರ್ಥ್ಯವನ್ನು ನೆರವೇರಿಸಲು 'ಮಾಧ್ಯಮ'ನನ್ನು ನಿಮ್ಮ ಮುಂದೆ ಕೂತುಕೊಳ್ಳುವಹಾಗೆ ಮಾಡಿ. ನೀವು ನಿಮ್ಮ ಇಂದ್ರಿಯ ಆಕರ್ಷಣೆಯನ್ನು ಮಾಧ್ಯಮನಲ್ಲಿ ವರ್ಗಾಯಿಸಬೇಕಾಗಿರುತ್ತದೆ. ಅದಕ್ಕಾಗಿ ಅವನ ಮುಂದೆಯೇ ನಿಂತುಕೊಳ್ಳಿ. ನಿಮ್ಮ ಬೆರಳುಗಳನ್ನು ಅಗಲಿಸಿ ಎಷ್ಟು ಸಾಧ್ಯವಾಗುತ್ತದೋ ಅಷ್ಟು ದೂರ ಚಾಚಿರಿ. ಈಗ ನಿಮ್ಮ ಬೆರಳುಗಳ ಮೇಲೆ ಕಣ್ಣುಗಳನ್ನು ಸ್ಥಿರವಾಗಿಸಿ ನಿಮ್ಮ ಷ್ಟಕ್ಕೆ ನೀವೇ ನಿಮ್ಮಲ್ಲಿರುವ ಆಕರ್ಷಣ ಶಕ್ತಿಯು ನಿಮ್ಮ ಬೆರಳುಗಳಿಗೆ ಹರಿಯುತ್ತಿದೆ ಎಂದು ಆಜ್ಞಾಪಿಸಿಕೊಳ್ಳಿ. ಸ್ವಲ್ಪಹೊತ್ತಿನ ನಂತರ ನಿಮ್ಮ ಬೆರಳುಗಳಲ್ಲಿ ಒಂದು ತರಹದ ಸಂವೇದನೆ ಆದಹಾಗೆಯೆನ್ನಿಸುವುದು. ನೀವು ಅದೇ ಆಜ್ಞೆಯನ್ನು ಸ್ವಲ್ಪ ಹೊತ್ತಿನವರೆಗೆ ಮುಂದುವರಿಸಿದರೆ ನಿಮ್ಮ ಸಂಪೂರ್ಣ ದೇಹವನ್ನು ಅದೇ ತರಹದ ಸಂವೇದನೆಯು ತೆಗೆದುಕೊಂಡ ಹಾಗೆ ಭಾಸವಾಗುವುದು. ನಿರ್ದಿಷ್ಟವಾಗಿ ಕಣ್ಣುಗಳಲ್ಲಿ ಮತ್ತು ಬೆರಳುಗಳಲ್ಲಿ ಆ ರೀತಿಯ ಸಂವೇದನೆಯು ತೀಕ್ಷ್ಣವಾಗಿರುವ ಹಾಗೆ ತಿಳಿಯುತ್ತದೆ. ನಿಮ್ಮ ಬೆರಳುಗಳಲ್ಲಿ ಸಂವೇದನೆಯು ತೀಕ್ಷ್ಣವಾಗಿರುವುದನ್ನು ನೀವು ಕಂಡುಕೊಂಡಾಗ ನೀವು ನಿಮ್ಮ ಬೆರಳುಗಳನ್ನು 'ಮಾಧ್ಯಮ'ನ ಹಣೆಯ ಮೇಲೆ ಹಾಕಿ ಅವನಿಗೆ ನಿಮ್ಮಲ್ಲಿ ಸಹಜವಾಗಿರುವ ಆಕರ್ಷಣೆ ಶಕ್ತಿಯು ಬೆರಳುಗಳ ಮೂಲಕ ಅವನ ದೇಹಕ್ಕೆ ಹರಿಯುತ್ತಿದೆ ಎಂದು ಆಜ್ಞಾಪಿಸಿ. ಹಾಗೆಯೇ 'ಮಾಧ್ಯಮ'ನಿಗೆ ತಾನು ಶಕ್ತಿಯನ್ನು ಎಳೆದುಕೊಳ್ಳುತ್ತಿದ್ದಾನೆ ಅದಕ್ಕಾಗಿ ದೇಹದಲ್ಲೆಲ್ಲಾ ಸಂವೇದನೆಯಾಗುತ್ತಿದೆ ಎಂದು ಆಜ್ಞಾಪಿಸಿ.

ಸ್ವಲ್ಪ ಹೊತ್ತಿನ ನಂತರ ನೀವು ಸಂಪೂರ್ಣ ಶಾಂತರಾದ ಹಾಗೆ ನಿಮಗೆ ಅನ್ನಿಸುವುದು. ಆ ಸಂವೇದನೆಯು ಹೋಗಿದೆ. ನೀವು ಹರುರಾಗಿರುವ ಹಾಗೆ ಅನ್ನಿಸಲು ಪ್ರಾರಂಭಿಸುವುದು. ಈ ಒಂದು ಬದಲಾವಣೆಯ ಅರ್ಥವೆಂದರೆ ನೀವು ವರ್ಜಿಸಬಹುದಾದಂತಹ ಆಕರ್ಷಣ ಶಕ್ತಿಯು ನಿಮ್ಮ ಮಾಧ್ಯಮನಲ್ಲಿ ಹೋಗಿದೆ.

ಮತ್ತೊಮ್ಮೆ ನೀವು ನಿಮ್ಮ ಆಕರ್ಷಣೆ ಶಕ್ತಿಯನ್ನು ಮಾಧ್ಯಮನಲ್ಲಿ ವರ್ಗಾಯಿಸಬೇಕಾದರೆ ನೀವು ಅದೇ ರೀತಿಯ ವ್ಯಾಯಾಮವನ್ನು ಮಾಡಬೇಕಾಗುವುದು. ಈ ರೀತಿ ನಿಮ್ಮ ಆಕರ್ಷಣೆ ಶಕ್ತಿಯನ್ನು ವಿಸ್ತಾರಗೊಳಿಸಿ ಅದನ್ನು ಬೇರೆಯವರಿಗೆ ವರ್ಗಾಯಿಸುವ ಈ ರೀತಿಯ ಚಾಲನೆಯನ್ನು ಅನುಸರಿಸಿ ನೀವು ಯಾರನ್ನೇಯಾದರು ರೋಗದಿಂದ ಮುಕ್ತಗೊಳಿಸಬಹುದು. ನೀವು ಅವನಿಗೆ *ದಿವ್ಯ ದೃಷ್ಟಿ*ಯನ್ನೂ ಕೊಡಬಹುದು. ಭಾರತೀಯ ಶಾಸ್ತ್ರಗಳಲ್ಲಿ ಇದನ್ನು ***ಶಕ್ತಿ ಪಾತ***ಎಂದು ಕರೆಯಲಾಗಿದೆ.

'ಮಾಧ್ಯಮ'ನು ಈ ತರಹದ ಕ್ರಿಯೆಯನ್ನು ಅನುಸರಿಸಿ ಸಮ್ಮೋಹಕನು ಪಡೆದುಕೊಳ್ಳುವಂತಹ ಎಲ್ಲಾ ಲಾಭಗಳನ್ನೂ ಪಡೆದು ಕೊಳ್ಳಬಹುದು.

ಆಕರ್ಷಣ ಶಕ್ತಿಯನ್ನು ವರ್ಗಾಯಿಸುವ ಪ್ರಾರಂಭದ ಪ್ರಯತ್ನಕ್ಕೆ ಅಂದಾಜು 10 ರಿಂದ 15 ನಿಮಿಷಗಳು ಬೇಕಾಗುವುದು. ಬೇರೆಯವರಿಗೆ ಆಕರ್ಷಣೆ ಶಕ್ತಿಯನ್ನು ವರ್ಗಾಯಿಸಲು ಬಯಸುವ ಓರ್ವನು ದಿನಕ್ಕೆ 2 ರಿಂದ 3 ವ್ಯಾಯಾಮಗಳಿಗಿಂತ ಹೆಚ್ಚು ಮಾಡಬಾರದು.

ಈ ತರಹದ ಶಕ್ತಿಯನ್ನು ಪಡೆದುಕೊಂಡ ನಂತರ ಓರ್ವನು ನಿಜವಾಗಿಯೂ ಉನ್ನತದ ಆಧ್ಯಾತ್ಮಿಕ ಗುರುವಿನ ಪದವಿಗೆ ಮುಟ್ಟುತ್ತಾನೆ. ತನ್ನ ಶಿಷ್ಯನಿಗೆ ತನ್ನ ಎಲ್ಲಾ ಜ್ಞಾನ ಮತ್ತು ಶಕ್ತಿಯನ್ನು ವರ್ಗಾಯಿಸುವ ಸಂಪೂರ್ಣ ಶಕ್ತಿಯಿಂದ ಒಡಗೂಡುತ್ತಾನೆ.

# ಅಧ್ಯಾಯ 7

## ಇಚ್ಛಾ ಶಕ್ತಿ (ಮನೋ ಬಲ)

ಮನುಷ್ಯನ ಜೀವನವು ಕೊನೆಯಿಲ್ಲದ ಬಯಕೆಗಳ ರಾಶಿಯಾಗಿದೆ. ಮನುಷ್ಯನು ವಿವಿಧವಾದ ಬಹಳ ಬಯಕೆಗಳ ಮನಸ್ಸುಳ್ಳವನಾಗಿದ್ದಾನೆ. ಪೂರ್ಣಗೊಂಡ ಬಯಕೆಗಳು ಆತನಿಗೆ ಅತೀ ಸುಖವನ್ನು ಕೊಡುವ ಉಗಮಸ್ಥಾನ ಸಹ ಆಗಿದೆ. ಆದರೂ ಕೆಲವು ಬಯಕೆಗಳು ದುಂದುಜೀವನದ ಹಾದಿಯನ್ನು ಹಿಡಿದುಕೊಂಡು ಹೋಗುವವು.

ಕೆಲವೊಮ್ಮೆ ಅವನು ತನ್ನ ಬಯಕೆಗಳನ್ನು ತೀರಿಸಿಕೊಳ್ಳಲು ಪ್ರಯತ್ನಿಸುವನು ಮತ್ತು ಬಹಳ ಸಂದರ್ಭಗಳಲ್ಲಿ ಬೇರೆ ವ್ಯಕ್ತಿಗಳ ಬಯಕೆಗಳನ್ನು ತೀರಿಸಲು ಪ್ರಯತ್ನಿಸುವನು. ಬೇರೆಯವರ ಬಯಕೆಗಳನ್ನು ತೀರಿಸಲು ಇಚ್ಛಿಸಿದಾಗ ಅವನು ಒಂದು ವಿಚಿತ್ರರೀತಿಯ ಸುಖವನ್ನು ಪಡೆಯುವನು. ಆದರೂ ಅವನ ಸ್ವಂತ ಜೀವನದಲ್ಲಿ ಅವನಿಗೆ ಕೆಲವು ಕಡ್ಡಾಯ ಬಯಕೆಗಳನ್ನು ತೀರಿಸಿಕೊಳ್ಳುವುದಕ್ಕಾಗಿ ಅವನು ಎಲ್ಲವನ್ನೂ ಮಾಡುತ್ತಾನೆ. ಅವನ ಬಯಕೆಗಳನ್ನು ತೀರಿಸಿಕೊಳ್ಳಲು ಅವನ ಕೈಯಲ್ಲಿ ಆಗದಿದ್ದಾಗ, ಒಂದು ವಿಚಿತ್ರ ರೀತಿಯ ಅವಿಶ್ರಾಂತಿಯು ಅವನನ್ನು ನುಂಗುತ್ತದೆ.

ಮನುಷ್ಯನು ಯಾವಾಗಲೂ ಬಯಕೆಗಳ ದೊಡ್ಡಗುಂಪಿನಿಂದ ಬಾಧಿತನಾಗಿರುತ್ತಾನೆ. ನಾವು ಹೆಚ್ಚು ತೋರಿಕೆಯವರಾದಾಗ ಬಯಕೆಗಳ ಸಂಖ್ಯೆಯೂ ಹೆಚ್ಚಾಗಿರುತ್ತದೆ. ಮನಸ್ಸಿನ ಮೇಲೆ ಕನಿಕರವಿಲ್ಲದ ಹತೋಟಿಯನ್ನು ಪಡೆಯಬೇಕು. ಇದು ನಮ್ಮನ್ನು ಯಾವುದೇ ತರಹದ ತೊಂದರೆ, ಅಡೆತಡೆಗಳಿಂದ ಕಾಪಾಡುವುದು. ಕೆಲವೊಮ್ಮೆ ನಮ್ಮ ಒಂದು ಚಿಕ್ಕ ಬಯಕೆಯನ್ನು ತೀರಿಸಿಕೊಳ್ಳಲು ನಮ್ಮ ಜೀವನದ ಹೆಚ್ಚಿನ ಭಾಗವನ್ನು ವ್ಯಯಿಸುತ್ತೇವೆ. ಕೊನೆಗೊಮ್ಮೆ ನಮ್ಮ ಆಸೆಯನ್ನು ತೀರಿಸಿಕೊಂಡಾಗ ನಮಗೆ ಎಷ್ಟು ಸಂತೋಷ ಸಿಗುತ್ತದೆಂದು ತಿಳಿದುಕೊಂಡಿರುತ್ತೇವೋ ಅಷ್ಟು ಸಿಗುವುದಿಲ್ಲ.

ನಾವು ಎಲ್ಲಾ ತರಹದ ಬಯಕೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಬೇಕು. ನಾವು ಎಲ್ಲಾ ತರಹದ ಹಾದಿಬಿಟ್ಟ ಮತ್ತು ದೊಡ್ಡ ಸಂಖ್ಯೆಯ ಬಯಕೆಗಳನ್ನು ಒಗ್ಗೂಡಿಸಿ ಈ ಅಸ್ತಿತ್ವಕ್ಕೆ ಬಂದ ವಸ್ತುವನ್ನು ಸಂಸ್ಕರಿಸಲು ಪ್ರಯತ್ನಿಸಬೇಕು. ನಾವು ನಮ್ಮ ಬಯಕೆಗಳನ್ನು ಹೆಚ್ಚು ಉತ್ತಮವಾಗಿ ಒಗ್ಗೂಡಿಸಿದಷ್ಟು, ನಮ್ಮ ಆಧ್ಯಾತ್ಮಿಕ, ಸಾಮಾಜಿಕ ಮತ್ತು ದೈಹಿಕ ಪೂರ್ಣತೆಯು ಹೆಚ್ಚು ಬಲವಾಗುವುದು.

ನಮ್ಮ ಅನೇಕ ಬಯಕೆಗಳಿಂದ ನಾವು ಈಗಾಗಲೇ ಬಾಧಿತರಾಗಿದ್ದೇವೆ ಎಂದು ನಾನು ಈಗಾಗಲೇ ವಾದಿಸಿದ್ದೇನೆ. ನಾವು ಸಹಜವಾದ ಹುರುಳಿಲ್ಲದವರಾದುದರಿಂದಲೇ ಎಲ್ಲಾ ಬಯಕೆಗಳಿಗೆ ಆಶ್ರಯಕೊಡುತ್ತೇವೆ. ಅದರ ಒತ್ತಡ ಎಷ್ಟಾಗಿರುತ್ತದೆಂದರೆ ನಾವು ಕೆಲವೊಮ್ಮೆ ಮಾನಸಿಕ ತುಲನೆಯನ್ನು ಕಳೆದುಕೊಳ್ಳುತ್ತೇವೆ. ಅವಶ್ಯಕತೆ ಇರುವುದೆಂದರೆ ನಮ್ಮಲ್ಲಿರುವ ತೋರಿಕೆಯ ಸ್ವಭಾವವನ್ನು ಬಿಟ್ಟು ಈಚೆ ಬರಬೇಕು. ಈಗ ನಾವು ಬಯಕೆಗಳ ದಾಸರಾಗಿದ್ದೇವೆ. ಬಹುಶಃ ಆ ವಿಷಯದಲ್ಲಿ, ಬಯಕೆಗಳು ನಮ್ಮ ದಾಸವಾಗುವವು. ನಾವು ಅವುಗಳನ್ನು ನಾವು ಇಚ್ಛಿಸಿದ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಆಯ್ದುಕೊಳ್ಳಬಹುದು.

ಬಹಳ ವಿಧದ ಜನಗಳಿದ್ದಾರೆ. ಕೆಲವರಿಗೆ ಬಲವಾದ ಇಚ್ಛಾಶಕ್ತಿ ಇಲ್ಲ, ಫಲಸ್ವರೂಪವಾಗಿ ಅವರು ಬಯಕೆಗಳಿಂದ ನುಂಗಲ್ಪಟ್ಟು ಬಯಕೆಗಳ ದಾಸರಾಗುತ್ತಾರೆ. ಅವರಲ್ಲಿ ದೊಡ್ಡ ಸಂಖ್ಯೆಯ ಬಯಕೆಗಳು ಸಂಚಾರಮಾಡುತ್ತಲೇ ಇರುತ್ತವೆ. ಅವರಲ್ಲಿ ಆತ್ಮವಿಶ್ವಾಸದ ಅಭಾವವೂ ಇರುತ್ತದೆ. ಪರಿಣಾಮವಾಗಿ

ಅವರು ತಮ್ಮ ಬಯಕೆಗಳನ್ನು ತೀರಿಸಿಕೊಳ್ಳುವುದರಲ್ಲಿ ಯಶಸ್ವಿಯಾಗುವುದಿಲ್ಲ. ಅವರ ಜೀವನವು ಒಂದು ರೀತಿಯ ಅಸಮತೋಲನೆಯಲ್ಲಿ ಮತ್ತು ಕುಗ್ಗಿದ ಯಾತನೆಗೆ ಇಳಿಯುವುದು. ಇದರ ಪ್ರತಿರೂಪವಾಗಿ ದೃಢವಾದ ಇಚ್ಛಾಶಕ್ತಿಯಿರುವ ವ್ಯಕ್ತಿಗಳೂ ಇದ್ದಾರೆ. ಅವರು ಬಲವಾದ ಬಯಕೆಗಳನ್ನು ನಿಯಂತ್ರಿಸಬಲ್ಲರು. ಅಂತಹವರು ಒಂದು ಕಬ್ಬಿಣದ ಕೈಯಿಂದ ಹಾನಿಕಾರಕ ಮತ್ತು ಸಮಾಜವಿರೋಧವಾದ ಬಯಕೆಗಳನ್ನು ಹತ್ತಿಟ್ಟುಕೊಳ್ಳುವರು. ಅವರು ಸಾಮಾಜಿಕವಾಗಿ ಪ್ರಾಮುಖ್ಯಹೊಂದಿದ ಬಯಕೆಗಳನ್ನು ಮಾತ್ರ ತೀರಿಸಿಕೊಳ್ಳಲು ಬಯಸುವರು. ಈ ಮಾಧ್ಯಮದಿಂದ ಅವರು ಸಮಾಜಕ್ಕೆ ಸೇವೆ ಸಲ್ಲಿಸಿ ಪ್ರಖ್ಯಾತರಲ್ಲಿ ಸೇರುವರು.

ಕ್ಷೀಣ ಇಚ್ಛಾಶಕ್ತಿಯವರು ಯಾವಾಗಲೂ ಇಂದ್ರಿಯ ಅಥವಾ ಕಾಮಸುಖದ ಜ್ಞಾನದ ಹತೋಟಿಯಲ್ಲಿರುವರು. ಅವರಲ್ಲಿ ಯಾವುದೇ ತರಹದ ಆತ್ಮವಿಶ್ವಾಸವಿರುವುದಿಲ್ಲ. ಅವರು ಆತ್ಮಾಸೆಯಿಂದ ಅವರ ಬಯಕೆಗಳ ಹಿಂದೆಯೇ ಹೋಗುತ್ತಾ ಇರುವರು. ಅವರು ನಿಧಾನವಾದ ಜೀವನದಲ್ಲಿರುವರು. ಅವರಲ್ಲಿ ದೊಡ್ಡ ಆಕಾಂಕ್ಷೆಗಳು ಇರುವುದಿಲ್ಲ. ಅವರು ಕ್ಷೀಣ ಇಚ್ಛಾಶಕ್ತಿಯವರಾಗಿರುವುದರಿಂದ ಅವರಲ್ಲಿ ಅಂತಹ ದೊಡ್ಡ ಆಕಾಂಕ್ಷೆಗಳು ಯಾವಾಗಲಾದರೂ ಬಂದರೆ ಅವರು ಅವುಗಳನ್ನು ಕಾಣದಂತಿರುವರು.

ಮನುಷ್ಯನು ಪೂರ್ಣತೆಯನ್ನು ಮತ್ತು ಉತ್ಕೃಷ್ಟತೆಯನ್ನು ಸಾಧಿಸಲು ತನ್ನ ಬಯಕೆಗಳನ್ನು ನಿಯಂತ್ರಿಸಲು ಒಂದು ನಿರ್ದಿಷ್ಟವಾದ ಶಕ್ತಿಯನ್ನು ವೃದ್ಧಿಸಿಕೊಳ್ಳಬೇಕು. ಮನುಷ್ಯನು ಸಹಜವಾಗಿಯೇ ಸಂಪೂರ್ಣವಾಗಿ ಅಸಾಧ್ಯವೆಂದು ಕಾಣುವಂತಹುದನ್ನು ತನ್ನ ಬಯಕೆಗಳನ್ನು ನಿಯಂತ್ರಿಸುವುದರ ಮೂಲಕ ಸಾಧಿಸಿರುವನು. ಅವನಿಂದ ಹಿಮಾಲಯದ ತುದಿಯನ್ನು ಜಯಿಸಲಾಯಿತು; ಅವನಿಂದ ಸಹಾರಾ ಮರಳುಗಾಡನ್ನು ಮತ್ತು ವಿಶಾಲವಾದ ಮತ್ತು ಭಯಾನಕವಾದ ಸಮುದ್ರಗಳ ವಿಸ್ತೀರ್ಣವನ್ನು ದಾಟಲಾಯಿತು. ಅಸಾಧ್ಯವಾದ ಅದ್ಭುತಗಳನ್ನು ನೋಡುತ್ತಾ ಅವನು ಸಾಧಿಸಿದನು, ಅವನಿಂದ ಅದು ಹೇಗೆ ಮಾಡಲಾಯಿತು ಎಂದು ತಿಳಿದುಕೊಳ್ಳುವುದು ಕಷ್ಟಕರವೇನಲ್ಲ. ಅದು ಕೇವಲ ಅವನ ಇಚ್ಛಾಶಕ್ತಿಯು ಅವನಿಗೆ ಏನು ಬೇಕೋ ಅದನ್ನು ತಂದುಕೊಟ್ಟಿತು, ಸಾಧ್ಯವಿರುವುದೋ ಅಸಾಧ್ಯವಿರುವುದೋ ಈ ಕೊನೆಗೆ ಅವನು ತನ್ನ ಶಕ್ತಿ ಎಲ್ಲವನ್ನೂ ಬಗ್ಗಿಸಿದನು, ತನ್ನ ಎಲ್ಲಾ ಬಯಕೆಗಳನ್ನೂ ಹತ್ತಿಟ್ಟುಕೊಂಡು ಕಷ್ಟಪಟ್ಟನು. ಅವನ ಹಾದಿಯಲ್ಲಿ ಬರುವ ಎಲ್ಲಾ ತರಹದ ಅಪಾಯಗಳನ್ನು ಅವನು ಕ್ಷುಲ್ಲಕವೆಂದು ಪರಿಗಣಿಸಿದನು. ನಿಜ ಅವನು ಬಹಳ ಅಡಚಣೆಗಳನ್ನು ಎದುರಿಸಿದನು. ಆದರೆ ಅವನು ನಿಶ್ಚಯವಾಗಿ ಹಿಂದೆ ಬೀಳಲಿಲ್ಲ. ಅವನು ಪರಾಭವವನ್ನು ಎಂದೂ ಒಪ್ಪಲಿಲ್ಲ. ಯಾವುದೇ ಒಂದು ಬಯಕೆಯು ಬಂದಾಕ್ಷಣ ಅದನ್ನು ಹತ್ತಿಡುತ್ತಿದ್ದನು. ಅವನಿಗೆ ಒಂದು ಸ್ಪಷ್ಟವಾದ ಗುರಿಯಿದ್ದಿತು ಮತ್ತು ಅವನು ಒಂದೇ ಮನಸ್ಸಿನ ಶ್ರದ್ಧೆಯಿಂದ ಆ ಕೊನೆಯಕಡೆ ಮುನ್ನಡೆದನು.

ಮೂಲಭೂತವಾಗಿ ಮುಖ್ಯವಾದುದೆಂದರೆ ನಮಗೆ ನಮ್ಮ ಸಾಮರ್ಥ್ಯದ ವಾಸ್ತವದ ಗುರುತಿರಬೇಕು. ನಮ್ಮಲ್ಲಿ ಅಭಾವ ಏನಿದೆ ಎನ್ನುವುದನ್ನು ನಾವು ತಿಳಿದುಕೊಳ್ಳಬೇಕು. ನಮ್ಮ ಜೀವನವನ್ನು ಅಷ್ಟೊಂದು ಸಾಮಾನ್ಯ ಮಾಡಿರುವಂತಹ ಕಾರಣಗಳೇನು ಮತ್ತು ನಾವು ನಮ್ಮ ಯೋಚನೆಗಳನ್ನೂ, ಮನಸ್ಸನ್ನೂ ನಮ್ಮ ಹತೋಟಿಯಲ್ಲಿ ಹೇಗೆ ತರಬಹುದು.

ನಾವು ದೃಢವಾದ ಇಚ್ಛಾಶಕ್ತಿಯವರಾಗುವ ಅವಶ್ಯಕತೆ ಇದೆ. ನಾವು ಒಂದು ನಿರ್ದಿಷ್ಟ ಮಟ್ಟದ ಸಂಕಲ್ಪವನ್ನು ವೃದ್ಧಿಸಿಕೊಳ್ಳದ ಹೊರತು ನಾವು ಯಾವುದೇ ಕಾರ್ಯದಲ್ಲಿ ಯಶಸ್ವಿಯಾಗಲಾರೆವು. ನಾವು ಯಾವುದೇ ಕಾರ್ಯವನ್ನು ಕೈಗೆತ್ತಿಕೊಂಡಾಗ ಕೆಲವು ಕಷ್ಟಗಳನ್ನು ಮತ್ತು ಅಡಚಣೆಗಳನ್ನು ಎದುರಿಸುವ ಸಾಧ್ಯತೆಗಳಿರುತ್ತವೆ. ನಾವು ಗಟ್ಟಿಮನಸ್ಸಿನವರಾಗದಿದ್ದರೆ ಆ ಕೆಲಸವನ್ನು ಕೈಬಿಡುವ ಸಾಧ್ಯತೆಯಿರುತ್ತದೆ. ಅದಕ್ಕಾಗಿ ದೃಢ ಸಂಕಲ್ಪದ ಅರಿವಿನಿಂದ ನಾವು ಸಾಕಷ್ಟು ಮುಂಚಿತವಾಗಿಯೇ ಕಾರ್ಯವನ್ನು ಯೋಜಿಸಬೇಕು.

ನಾವು ಕಾರ್ಯವನ್ನು ಪ್ರಾರಂಭಿಸಿದಾಗ ಏನಾದರಾಗಲಿ ಅದನ್ನು ಸಂಪೂರ್ಣಗೊಳಿಸುವ ದೃಢ ಸಂಕಲ್ಪವಿರಬೇಕು. ಕಾರ್ಯ ಮುಗಿಸುವವರೆಗೂ ನಾವು ಯಾವುದೇ ಕೃಷತೆ ಅಥವಾ ಸಡಿಲತೆಯನ್ನು ವೃದ್ಧಿಸಿಕೊಳ್ಳಬಾರದು. ಈ ಮನೋಬಲದಿಂದ ಮಾತ್ರ ನಾವು ಜೀವನದಲ್ಲಿ ಯಶಸ್ವಿಯಾಗುತ್ತೇವೆ.

ವಿಜ್ಞಾನಿಗಳು ಬಯಕೆಗಳಿಗೂ ನಮ್ಮ ಉಸಿರಾಟಕ್ಕೂ ಹತ್ತಿರವಾದ ಸಂಬಂಧವಿದೆ ಎಂದು ಕಂಡುಹಿಡಿದಿದ್ದಾರೆ. ಪ್ರತಿಯೊಂದು ಉಸಿರಾಟವೂ ಬಯಕೆಯನ್ನು ಹುಟ್ಟಿಸುತ್ತದೆ. ನಾವು ಹೆಚ್ಚು ಉಸಿರನ್ನು ತೆಗೆದುಕೊಂಡ ಹಾಗೆ ಬಯಕೆಗಳ ಸಂಖ್ಯೆಯೂ ಹೆಚ್ಚುತ್ತದೆ. ಆದ್ದರಿಂದ ನಾವು ಹೆಚ್ಚಾಗಿ ಉಸಿರಾಡದಿದ್ದರೆ ನಮ್ಮ ಜೀವನದಲ್ಲಿ ಹೆಚ್ಚಿನ ಬಯಕೆಗಳು ಇರುವುದಿಲ್ಲ.

ನಮ್ಮ ಉಸಿರಾಟವನ್ನು ನಿಯಂತ್ರಿಸುವ ಹೆಚ್ಚು ಪರಿಣಾಮಕಾರಿ ಮತ್ತು ಅಧಿಕಾರಯುತವಾದುದೆಂದರೆ ಪ್ರಾಣಾಯಾಮವು ಉಸಿರಾಟದ ಮೇಲೆ ಪರಿಣಾಮಕಾರಿಯಾದ ಹತೋಟಿಯಿಂದಲೇ ಪ್ರಖ್ಯಾತ ಸಾಧುಗಳು ಮತ್ತು ಧ್ಯಾನಸ್ಥರು ತಮ್ಮ ಬಯಕೆಗಳ ಮೇಲೆ ಸಂಪೂರ್ಣ ಹತೋಟಿಯನ್ನು ಪಡೆದಿದ್ದರು. ಅದಲ್ಲದೆ ಅವರಲ್ಲಿ ವಿರುದ್ಧವಾದ ಮತ್ತು ಸಾಂಸಾರಿಕ ಬಯಕೆಗಳನ್ನು ನಿಗ್ರಹಿಸಲು ಎಡೆಮಾಡುವಂತಹ ಬಲವಾದ ಇಚ್ಛಾಶಕ್ತಿ ಇದೆ.

ಬಲವಾದ ಇಚ್ಛಾಶಕ್ತಿಯನ್ನು ಅಭಿವೃದ್ಧಿಪಡಿಸಲು ನಾವು ದೈಹಿಕವಾಗಿ ಬಲಶಾಲಿಗಳೂ ಆರೋಗ್ಯವಂತರಾಗುವ ಅವಶ್ಯಕತೆ ಇರುತ್ತದೆ. ನಾವು ಬಯಕೆಗಳಿಂದ ಮುಕ್ತರಾದಾಗ ಮಾತ್ರ ಬಲವಾದ ಆರೋಗ್ಯವಾದ ದೇಹ ಪ್ರಕೃತಿಯನ್ನು ಸಾಧಿಸಬಹುದು.

ಆತಂಕವು ಹೇಗೆ ಚಿಗುರುತ್ತದೆ? ಅದು ನಮ್ಮ ಸಾಮಾಜಿಕವಾಗಿ ಮತ್ತು ನೀತಿಯುತವಾಗಿ ಖಂಡನಾರ್ಹವಾದ ಕೆಲಸವನ್ನು ಮಾಡುವ ಪ್ರಯತ್ನಗಳಿಂದಾಗಿ. ನಾವು ಅಂತಹ ಕೆಲಸವನ್ನು ಮಾಡಿದಾಗ ಗುಪ್ತವಾಗಿಡಲು ಪ್ರಯತ್ನಿಸುತ್ತೇವೆ. ಅದು ಬಯಲಾದರೆ ನಮ್ಮ ದೇಹವನ್ನು ಕಪಟತನಕ್ಕೆ ಇಳಿಸುವುದು ಎನ್ನುವ ಭಯದಿಂದ

ಆದ್ದರಿಂದ, ಜೀವನವು ಸಮತೋಲನವುಳ್ಳದ್ದಾಗಿರಬೇಕು. ಮೊದಲಿಗೆ ಸಮಾಜ ಒಪ್ಪದಿರುವುದನ್ನು ನಾವು ಮಾಡಬಾರದು. ಅಕಸ್ಮಾತ್ ಈ ರೀತಿ ಮಾಡಿದ್ದರೆ ಅದನ್ನು ಹತ್ತಿಟ್ಟುಕೊಳ್ಳಬಾರದು. ಮನುಷ್ಯನು ತಪ್ಪು ಮಾಡುವುದು ಸಹಜ, ನಾವು ಭವಿಷ್ಯದಲ್ಲಿ ತಪ್ಪು ಮಾಡದಿರುವ ಹಾಗೆ ಹೆಚ್ಚು ಜಾಗ್ರತೆವಹಿಸಬೇಕು.

**ಮನೋಬಲವನ್ನು ಹೇಗೆ ಸಮೃದ್ಧಗೊಳಿಸಬೇಕು.?**

ಒಂದು ಬಲವಾದ ಮನೋಬಲವು ಓರ್ವನ ಜೀವನದ ಯಶಸ್ಸಿಯ ನಿರ್ಣಾಯಕದ್ದಾಗಿದೆ. ಅದು ಬಲವಾದ ಮನೋಬಲದ ಸದ್ಗುಣದಿಂದಲೇ ಓರ್ವನು ತನ್ನ ಬಯಕೆಗಳನ್ನು ಹತ್ತಿಟ್ಟುಕೊಳ್ಳುವನು. ನಾವು ಬಿಗುವು ರಹಿತ ಮತ್ತು ಬಲವಾದ ಮನೋಬಲವನ್ನು ಸಾಧಿಸಲು ಅನುಸರಿಸಬೇಕಾದ ಕೆಲವು ಪದ್ಧತಿಗಳಿವೆ.

೧. ಮುಚ್ಚಿದ ಕೋಣೆಯಲ್ಲಿ ಪ್ರವೇಶಿಸಿ. ಅದರಲ್ಲಿ ಮಂದ ಬೆಳಕು ಮತ್ತು ಸೌಮ್ಯಸಂಗೀತವಿರಬೇಕು. ನೀವು ಈ ಪದ್ಧತಿಯನ್ನು ಅಭ್ಯಸಿಸುವಾಗ ಬೇರೆ ಯಾರೂ ಬಾಗಿಲನ್ನು ತಟ್ಟುವುದನ್ನು ಅಥವಾ ಬೇರೆ ಯಾವುದೇ ರೀತಿಯ ಅಡಚಣೆಗಳನ್ನು ಮಾಡುವುದಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಿ.

ಬಟ್ಟೆಗಳನ್ನು ಬಿಚ್ಚಿ ನಿಮ್ಮ ಷ್ಟಕ್ಕೆ ನೀವೇ ಹಾಸಿಗೆಯ ಮೇಲೆ ಚಾಚಿಕೊಳ್ಳಿ. ನಿಮ್ಮ ದೇಹ ಸಡಿಲಾಗಿರುವುದನ್ನು ನೋಡಿಕೊಳ್ಳಿ. ಈಗ ನಿಮ್ಮ ಪಾದಗಳು ಸಂಪೂರ್ಣವಾಗಿ ಸಡಿಲವಾಗಿ ಮತ್ತು ಅವುಗಳಿಂದ ಏನನ್ನೂ ಮಾಡಲಾಗುತ್ತಿಲ್ಲವೆಂದು ನಿಮಗೇ ಆಜ್ಞಾಪಿಸಿಕೊಳ್ಳಿ. ಈಗ ನೀವು ಬೇರೆ ಅಂಗಗಳಾದ ನಡುವು, ಹೃದಯ, ಎದೆ, ಹೊಟ್ಟೆ ಮತ್ತು ಕೈಗಳು ಒಂದಾದ ನಂತರ ಇನ್ನೊಂದಕ್ಕೆ ಅವುಗಳೂ ಸಹ ಸಡಿಲಾದ ಹಾಗೆ ಆಜ್ಞಾಪಿಸಿ. ಅದರಲ್ಲಿ ಯಾವುದೂ ಅಲುಗಾಡದ ಹಾಗೆ ನಿಮ್ಮ ಗಮನಕ್ಕೆ ಬರಬಾರದು. ಕೊನೆಗೆ ನಿಮ್ಮ ಮನಸ್ಸಿಗೆ

ಅದು ಸಡಿಲವಾಗುತ್ತಿದೆ ಮತ್ತು ಅದಕ್ಕೆ ಯಾವುದೇ ಬಯಕೆ ಅಥವಾ ಯೋಚನೆ ಇಲ್ಲವೆಂದು ಆಜ್ಞಾಪಿಸಿ. ಕೊನೆಯಲ್ಲಿ ನೀವು ತೂಕಡಿಸುತ್ತಿದ್ದೀರಿ ಹಾಗೂ ಬಹುಶಃ ಇನ್ನೇನು ನಿದ್ದೆ ಬಂದುಬಿಡುತ್ತದೆ ಎಂದು ನಿಮಗೇ ಆಜ್ಞಾಪಿಸಿಕೊಳ್ಳಿ. ಕೆಲವೇ ನಿಮಿಷಗಳಲ್ಲಿ ನೀವು ನಿದ್ದೆ ಹೋಗುವಿರಿ.

ಈ ಪ್ರಯೋಗಕ್ಕೆ ಪ್ರಚಂಡವಾದ ಪ್ರಾಮುಖ್ಯತೆ ಇದೆ. ಪ್ರತಿಯೊಂದು ಅಂಗವೂ ನೀವು ಆಜ್ಞಾಪಿಸಿದ ಹಾಗೆ ಅನುಸರಿಸುವುದು. ಮೆದುಳಿಗೆ ಸಹ ಆಲೋಚನೆ ರಹಿತವಾಗಿರಲು ಆಜ್ಞಾಪಿಸಲಾಗುವುದು. ಸಂಪೂರ್ಣ ಬುದ್ಧಿ ಅಥವಾ ಮನಸ್ಸು ನಿಮ್ಮ ಆಜ್ಞೆಯ ಅಡಿಯಲ್ಲಿರುವುದು. ಹೀಗೆ ನೀವು ನಿಮ್ಮ ಮನಸ್ಸನ್ನು ನಿಮ್ಮ ಸಂಪೂರ್ಣ ಹತೋಟಿಯಲ್ಲಿ ತಂದುಕೊಳ್ಳುವಿರಿ.

೨. ನೀವು ಕೆಟ್ಟ ಹವ್ಯಾಸಕ್ಕೆ ತಗುಲಿ ಕೊಂಡಿದ್ದರೆ ಅಥವಾ ಒಲವಿದ್ದರೆ ಅದನ್ನು ಒಂದು ಕಾಗದದ ಮೇಲೆ ಬರೆಯಿರಿ ಅಲ್ಲದೆ ಅದನ್ನು ನಿಮ್ಮ ಕಣ್ಣಿಗೆ ಹೊಡೆಯುವಂತಹ ಒಂದು ಸ್ಥಳದಲ್ಲಿ ಇಡಿರಿ. ಉದಾಹರಣೆಗೆ ನೀವು ಬರೆಯುವ ಮೇಜು, ಅದರ ಉತ್ತಮ ಸ್ಥಳ. ನೀವು ಸರಪಳಿಯಾಗಿ ಧೂಮಪಾನ ಮಾಡುವಿರೆಂದು ತಿಳಿಯೋಣ. ಅದನ್ನು ಬಿಡಲು ನೀವು ಬಹಳ ಪ್ರಯತ್ನಿಸಿದಿರಿ ಆದರೆ ಆಗಲಿಲ್ಲ. ಈಗ ನೀವು ಕಾಗದದ ಮೇಲೆ ಬರೆಯಿರಿ, 'ಏನಾದರಾಗಲಿ, ನಾನು ಈ ದಿನದಿಂದ ಧೂಮಪಾನ ಮಾಡುವುದಿಲ್ಲ' ಅದನ್ನು ನಿಮ್ಮ ಬರೆಯುವ ಮೇಜಿನ ಮೇಲೆ ಇಡಿರಿ. ನಿಮ್ಮಷ್ಟಕ್ಕೆ ನೀವೇ ನಿಮ್ಮ ಮನಸ್ಸು ಸಾಮರ್ಥ್ಯವುಳ್ಳದ್ದಾಗಿದೆ ಮತ್ತು ನಿಮಗೆ ಅದರ ಮೇಲೆಯೇ ಹತೋಟಿ ಇದೆ ಎಂದು ಆಜ್ಞಾಪಿಸಿಕೊಳ್ಳಿ. ನೀವು ಯಾವುದೇ ಸಂದರ್ಭದಲ್ಲಿ ಧೂಮಪಾನ ಮಾಡುವುದಿಲ್ಲ. ನಿಮಗೆ ನೀವೇ ದಿನಕ್ಕೆ 3 ರಿಂದ 4 ಸಾರಿ ಆಜ್ಞಾಪಿಸಿಕೊಳ್ಳಿ. ನಿಮಗೆ ಧೂಮಪಾನ ಮಾಡಬೇಕೆನ್ನುವ ಇಚ್ಛೆ ಮೇಲುಗೈ ಆದಾಗಲೆಲ್ಲ. ನೀವು ಮೇಜಿನ ಕಡೆ ನೋಡಿಕೊಂಡು, ಯಾವುದೇ ಸಂದರ್ಭದಲ್ಲಿ ನೀವು ಧೂಮಪಾನ ಮಾಡುವುದಿಲ್ಲ ಎಂದು ಆಜ್ಞಾಪಿಸಿಕೊಳ್ಳಿ.

ರಾತ್ರಿ ನೀವು ಮಲಗುವ ಮುಂಚೆ ನೀವು ಧೂಮಪಾನ ಮಾಡುವುದಿಲ್ಲವೆಂದು ಆಜ್ಞಾಪಿಸಿಕೊಳ್ಳಿ. ನಿಮ್ಮಲ್ಲಿ ತಲೆನೋವು ಅಥವಾ ಬಿಗುವು ಅಥವಾ ಸೋಮಾರಿತನ ವೃದ್ಧಿಯಾದರೂ ನಿಮ್ಮ ಅಚಲ ನಿರ್ಧಾರಕ್ಕೆ ನೀವು ಅಂಟಿಕೊಳ್ಳಿ.

ನಿಮ್ಮ ಅಚಲ ನಿರ್ಧಾರ ಹಾಗೆಯೇ ಉಳಿದರೆ, ನೀವು ಖಚಿತವಾಗಿ ಧೂಮಪಾನವನ್ನು ಬಿಟ್ಟುಬಿಡುವಿರಿ. ಅದು ನಿಮ್ಮ ಮನೋಬಲವು ದಿನೇದಿನೇ ಶಕ್ತಿಯುತವಾಗುತ್ತಿದೆ ಎನ್ನುವ ಸಂಕೇತವಾಗಿದೆ. ಅದು ನಿಮಗೆ ತುಂಬಾ ಹರ್ಷವನ್ನು ಸಹ ಕೊಡುತ್ತದೆ.

೩. ಪುಸ್ತಕದಿಂದ ಯಾವುದಾದರೂ ಐದು ಸಾಲುಗಳನ್ನು ನಿಮ್ಮ ಮುಂದೆ ಹಾಕಿಕೊಳ್ಳಿ. ಒಂದು ಗಡಿಯಾರವನ್ನು ಇಟ್ಟುಕೊಳ್ಳಿ. ಈಗ ಈ ಐದು ಸಾಲುಗಳನ್ನು ಕೇವಲ ಹತ್ತು ನಿಮಿಷಗಳಲ್ಲಿ ಕಂಠಪಾಠ ಮಾಡುವಹಾಗೆ ಶಪಥ ತೆಗೆದುಕೊಳ್ಳಿ. ಈಗ ಜೋರಾಗಿ ಹೇಳದೆ ಆ ಪದಗಳನ್ನು ಪುನರುಚ್ಚರಿಸಿ. ನೀವು ಹತ್ತು ನಿಮಿಷಗಳಲ್ಲಿ ಅವನ್ನು ಕಲಿಯಬೇಕೆಂದು ಆಜ್ಞಾಪಿಸಿಕೊಳ್ಳಿ. ನೀವು ನೀವಾಗೇ ಆ ಸಾಲುಗಳನ್ನು ಹತ್ತು ನಿಮಿಷಗಳಲ್ಲಿ ಕಲೆತಿರುವ ಹಾಗೆ ನೋಡಿಕೊಳ್ಳುವಿರಿ. ನೀವು ಈ ಅಭ್ಯಾಸವನ್ನು ಮುಂದುವರಿಸಿದ ಹಾಗೆ ಆ ಸಮಯವನ್ನು ಪ್ರಗತಿಯಲ್ಲಿ ಇಳಿಸುತ್ತಾ ಬನ್ನಿ ಹತ್ತು ನಿಮಿಷಗಳಿಂದ ಎಂಟಕ್ಕೆ ,ಎಂಟರಿಂದ ಆರಕ್ಕೆ ಹಾಗೆಯೇ. ಬೇಗನೇ ನೀವು ಯಾವುದೇ ಐದು ಸಾಲುಗಳನ್ನು ಒಂದು ನಿಮಿಷದೊಳಗೆ ಕಲೆಯುವ ಹಂತಕ್ಕೆ ತಲುಪುವಿರಿ.

೪. ನೀವು ಸೈಕಲ್ಲಿನ ಮೇಲೆ ಒಂದು ನಿರ್ದಿಷ್ಟ ಸ್ಥಳವನ್ನು ಮುಟ್ಟುವ ಸಮಯವನ್ನು ನೋಡಿಕೊಳ್ಳಿ. ನೀವು ಎರಡು ಕಿ.ಮಿ.ಗಳನ್ನು ಹತ್ತು ನಿಮಿಷದಲ್ಲಿ ಪಟಾಯಿಸುವಿರೆಂದು ತೆಗೆದುಕೊಳ್ಳೋಣ. ಈಗ ನೀವು ಪ್ರಗತಿಯಲ್ಲಿ ಸಮಯವನ್ನು ಇಳಿಸಲು ಪ್ರಾರಂಭಿಸಿ. ನೀವು ಉಸಿರಾಟಕ್ಕೆ ಹೆಚ್ಚು ದಣಿವಾಗದೆ ಅಥವಾ

ತೇಕದ ಇರುವಹಾಗೆ, ನೀವು ಖಚಿತವಾಗಿ ಅದೇ ಅಂತರವನ್ನು ಕಡಿಮೆ ಸಮಯದಲ್ಲಿ ವಟಾಯಿಸುವಿರಿ.

೫. ನೀವು 1000 ದಿಂದ 1ಕ್ಕೆ ವಿರುದ್ಧವಾಗಿ ಎಣಿಸಲು ಪ್ರಾರಂಭಿಸಿ. ಈ ಕೆಲಸಕ್ಕೆ 10 ನಿಮಿಷಗಳಿಗಿಂತ ಹೆಚ್ಚು ತೆಗೆದುಕೊಳ್ಳದಹಾಗೆ ನಿಶ್ಚಯಿಸಿ. ಈಗ ಈ ಎಣಿಕೆಯನ್ನು ಕೇವಲ 8 ನಿಮಿಷಗಳಲ್ಲಿ ಮಾಡುವೆನೆಂದು ಅಚಲ ನಿರ್ಧಾರವನ್ನು ತೆಗೆದುಕೊಳ್ಳಿ. ನೀವು ಈ ಕಾರ್ಯವನ್ನು ಇನ್ನೂ ಕಡಿಮೆ ಸಮಯದಲ್ಲಿ ಸಾಧಿಸಿದರ ಅದು ನಿಮ್ಮ ದೃಢವಾದ ಮನೋಬಲದ ಸಂಕೇತವೆಂದು ನೀವು ಪರಿಗಣಿಸಬಹುದು.

ನೀವು ಒಂದು ಕೆಲಸವನ್ನು ಹೇಳಿದ ಸಮಯಕ್ಕಿಂತ ಕಡಿಮೆ ಸಮಯದಲ್ಲಿ ಮಾಡುವೆನೆಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಅದು ನೀವು ನಿಮ್ಮ ಮೇಲೆಯೇ ಸಂಪೂರ್ಣ ಹತೋಟಿಯನ್ನು ಸಂಪಾದಿಸಿರುವುದನ್ನು ತೋರಿಸುವುದು.

ನೀವು ಇನ್ನೊಂದು ಆಸಕ್ತಿಯ ಅಭ್ಯಾಸವನ್ನು ಮಾಡಬಹುದು. ಒಂದು ಗಡಿಯಾರವನ್ನು ನಿಮ್ಮ ಮುಂದ ಇಟ್ಟುಕೊಳ್ಳಿ. ಒಂದು ಸ್ವಲ್ಪವೂ ಅಲುಗಾಡದೆ ಒಂದು ಸ್ಥಳದಲ್ಲಿ ಕೂತುಕೊಂಡು ಅದರ ಮೇಲೆ ನಿಮ್ಮ ಕಣ್ಣನ್ನು ಸ್ಥಿರವಾಗಿಸಿ. ಈ ಒಂದು ನಿಯೋಜಿತ ಸಮಯದಲ್ಲಿ ನಿಮ್ಮ ಮುಖದ ಮೇಲೆ ಒಂದು ನೊಣ ಕೂತುಕೊಂಡರೂ ನೀವು ಒಂದು ಅಂಗುಲ ಸಹ ಅಲುಗಾಡಬಾರದು. ಬೇರೆ ಪದಗಳಲ್ಲಿ ನಿಮಗೆ ಯಾವುದೇ ತರಹದ ಅಡಚಣೆಯಾದರೂ ನಿಮ್ಮ ಅಚಲ ನಿರ್ಧಾರಕ್ಕೆ ಯಾವುದೇ ಸಂದರ್ಭದಲ್ಲಿ ಅಂಟಿಕೊಂಡಿರಬೇಕು. ನಿಮ್ಮ ಅಚಲ ನಿರ್ಧಾರಕ್ಕೆ ಸಡಿಲತನವು ಗೊತ್ತಿರಬಾರದು.

ನೀವು ಒಂದು ಕಾರ್ಯನಿಮಿತ್ತ ಅಚಲ ನಿರ್ಧಾರದೊಂದಿಗೆ ಹೋದರೆ, ನೀವು ಅದನ್ನು ನಿಯೋಜಿತ ಸಮಯದಲ್ಲೇ ಸಾಧಿಸುವಿರಿ.

೬. ಮೇಲೆ ಹೇಳಿದ ಅಭ್ಯಾಸಗಳು ಸುಶಿಕ್ಷಿತಗೊಂಡ ಮೇಲೆ, ಅಭ್ಯಾಸಕಾರನು ಗಾಬರಿಗೊಳಿಸುವಂತಹ ಕಷ್ಟಕಾರ್ಯಗಳನ್ನು ಅಥವಾ ಸಾಧಾರಣವಾಗಿ ಬಹಳ ಸಮಯ ತೆಗೆದುಕೊಳ್ಳುವಂತಹ ಕೆಲಸಗಳನ್ನು ತೆಗೆದುಕೊಳ್ಳಬೇಕು.

ಅಭ್ಯಾಸಕಾರನು ಕನಿಷ್ಠ ಒಂದು ತಿಂಗಳು ಬೇಕಾಗುವಂತಹ ಕೆಲಸವನ್ನು ತೆಗೆದುಕೊಳ್ಳಬೇಕು ಹಾಗೂ ಅದನ್ನು ಒಂದು ತಿಂಗಳೊಳಗೇ ಮುಗಿಸಬೇಕು.

ಅದೇ ರೀತಿ ಅಭ್ಯಾಸಕಾರನು ಒಂದು ನಿರ್ದಿಷ್ಟ ಆದಾಯವನ್ನು ಒಂದು ನಿರ್ದಿಷ್ಟ ಸಮಯದೊಳಗೆ ಪಡೆಯಬೇಕೆಂದುಕೊಳ್ಳಬೇಕು. ತಾನು ಏನಾದರೂ ಕಷ್ಟಗಳನ್ನು ಎದುರಿಸಲಿ, ಆ ಸಮಯದೊಳಗೇ ಅಷ್ಟನ್ನು ಗಳಿಸಬೇಕು.

ಓರ್ವನು ಒಂದು ಕಾರ್ಯವನ್ನು ನಿಯೋಜಿತ ಸಮಯದೊಳಗೆ ಸಾಧಿಸಲು ಬಹಳ ಕಷ್ಟಗಳನ್ನು ಮತ್ತು ಅಡಚಣೆಗಳನ್ನು ಎದುರಿಸಬೇಕಾಗಬಹುದು. ಏನೇ ಕಷ್ಟಗಳು ಬಂದರೂ ಅವನು ಕೈಬಿಡಬಾರದು. ಅವನಿಗೆ ತನ್ನ ಮನೋಬಲದ ಮೇಲೆ ಸಂಪೂರ್ಣ ಹತೋಟಿಯಿದ್ದರೆ, ಅವನು ಖಚಿತವಾಗಿ ಅದನ್ನು ಸಾಧಿಸುವನು.

## ಮನೋಬಲದಲ್ಲಿ ಕಂಪನ:

ನಾವು ಈಗಾಗಲೇ ಚರ್ಚಿಸಿದಹಾಗೆ, ನಮ್ಮ ಮನುಷ್ಯದೇಹದಲ್ಲಿ ಹೊರಗಿನ ಮತ್ತು ಒಳಗಿನವೆಂಬ ಎರಡು ಮನಸ್ಸುಗಳಿವೆ. ಒಬ್ಬ ವ್ಯಕ್ತಿಯು ಚುರುಕಾಗಿದ್ದಾಗ ಅವನ ಬಹಿರ್ಮನಸ್ಸು ಅರಿವಿನಲ್ಲಿದ್ದು ಮತ್ತು ಅಂತರ್ಮನ ಕಡಿಮೆ ಚುರುಕಾಗಿರುವುದು. ಆದರೆ ಆ ವ್ಯಕ್ತಿಯು ನಿದ್ದೆಹೋದ ತಕ್ಷಣ, ಅಂತರ್ಮನಸ್ಸು ಹೆಚ್ಚು ಚುರುಕಾಗಿ ಹಿಂದೆಂದೂ ನೋಡದ ದೃಷ್ಯಗಳನ್ನು ನೋಡಲಾರಂಭಿಸುವುದು. ಕನಸು ಈ

ಅಂತರ್ಮನಸ್ಸಿನ ಪ್ರಯಾಣದ ಫಲಿತಾಂಶವಾಗಿದೆ.

ವಿಶ್ವದ ಅರಿವಿರುವ ಮತ್ತು ಚೇತನವಿರುವ ಎಲ್ಲಾ ವಸ್ತುಗಳೂ ಕಂಪನಗೊಳ್ಳುತ್ತವೆ. ಅವುಗಳೆಲ್ಲವಕ್ಕೂ ಕಂಪನವು ನಿರ್ಣಾಯಕದ್ದಾಗಿರುತ್ತವೆ, ಅದು ಗಾಳಿ ಅಥವಾ ಆಕಾಶ ಅಥವಾ ಧ್ವನಿಯಾಗಿರಲಿ. ಕಂಪನವು ಅಲೆಗಳಿಗೆ ಎಡೆಮಾಡುತ್ತದೆ. ಪರಿಣಾಮವಾಗಿ ಅಲೆಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸಲು ಸಹಾಯ ಮಾಡುತ್ತದೆ. ನೀವು ಮಾತಾಡಿದಾಗ ನಿಮ್ಮ ಧ್ವನಿಯ ಅಲೆಗಳು ಹೊರಕ್ಕೆ ಪ್ರಯಾಣಿಸುತ್ತವೆ. ಪರಿಣಾಮವಾಗಿ ಬೇರೆಯವರು ನಿಮ್ಮ ಧ್ವನಿಯನ್ನು ಕೇಳುತ್ತಾರೆ. ಏಕೆಂದರೆ ಶಬ್ದದ ಅಲೆಗಳು ಬೇರೆಯವರ ಕಿವಿಗಳಿಗೆ ತಗಲುತ್ತವೆ. ನೀವು ಜೋರಾಗಿ ಮಾತಾಡಿದಷ್ಟು ನಿಮ್ಮ ಶಬ್ದದ ಅಲೆಗಳು ಇನ್ನೂ ದೂರಕ್ಕೆ ಪ್ರಯಾಣಿಸುತ್ತವೆ.



*ಸಮ್ಮೋಹನದ ಅಡಿಪಾಯ : ಮನೋಬಲದಲ್ಲಿ ಕಂಪನ*

ಹಾಗೆಯೇ ನಿಮ್ಮ ಮನೋಬಲವು ಬಲವಾಗಿದ್ದರೆ, ಅದು ಬೇರೆಯವರ ಮೇಲೆ ಪರಿಣಾಮವನ್ನು ಬೀರಬೇಕು. ಬಲವಾದ ಮನೋಬಲವು ಹೆಚ್ಚು ಪರಿಣಾಮಕಾರಿಯಾಗಿರುವುದು. ವಿರುದ್ಧವಾಗಿ, ಕ್ಷೀಣ ಮನೋಬಲವಿರುವವರು ಯಾವುದೇ ವ್ಯಾಪ್ತಿಯಲ್ಲಿ ಪರಿಣಾಮವನ್ನು ಬೀರುವುದಿಲ್ಲ.

ಈದಿನ ಓರ್ವನು ತನ್ನ ಬಲವಾದ ಮನೋಬಲವನ್ನು ಸಾವಿರಾರು ಮೈಲಿ ಆಚೆಗೆ ಕಳುಹಿಸಬಹುದೆಂದು ಅನುಮಾನದಾಚೆಗೆ ಸಾಬೀತಾಗಿದೆ. ಓರ್ವನು ತನ್ನ ಪರಿಣಾಮಕ್ಕೆ ಸಾವಿರಾರು ಮೈಲಿ ಆಚೆಯಿರುವ ಯಾವುದೇ ವ್ಯಕ್ತಿಯಿಂದ ಕೇವಲ ಮನೋಬಲದಿಂದ ತೆಗೆದುಕೊಳ್ಳಲೂಬಹುದು. ಒಮ್ಮೆ ಅವನು ನಿಮ್ಮ ಮನೋಬಲದ

ದಾಳಿಗೆ ಈಡಾದರೆ, ಓರ್ವನು ಇನ್ನೊಂದು ಕಡೆಯಿಂದ ಏನನ್ನಾದರೂ ಮಾಡಿಸಿಕೊಳ್ಳಬಹುದು.

ಆದ್ದರಿಂದ ಅದು ಓರ್ವನಿಗೆ ಬಲವಾದ ಮನೋಬಲವನ್ನು ಕೊಟ್ಟರೆ ಸಾವಿರಾರು ಮೈಲಿ ದೂರವಿರುವ ವಸ್ತುಗಳ ಮೇಲೆ ಪಸರಿಸುವ ಪರಿಣಾಮವನ್ನು ಬೀರಿ ಯಾವ ವ್ಯಕ್ತಿಯನ್ನಾದರೂ ಓರ್ವನ ಪ್ರಭಾವಕ್ಕೆ ತರಬಹುದೆಂದು ಅಧೀಕೃತವಾಗಿದೆ. ಈ ಘೋಷಣೆಯನ್ನು ಪರೀಕ್ಷಿಸಲು, ನೀವು ಒಂದು ಅಥವಾ ಎರಡು ಪ್ರಯೋಗಗಳನ್ನು ಮಾಡಬಹುದು. ನಿಮ್ಮ ಊರಿನಲ್ಲೇ ನೆಲೆಸಿರುವಂತಹ ನಿಮ್ಮ ಓರ್ವ ಸ್ನೇಹಿತನನ್ನು 'ಮಾಧ್ಯಮ'ನನ್ನಾಗಿ ಮಾಡಿ. ಮೊದಲು ನೀವು ಏಕಾಂತದ ಒಂದು ಕೋಣೆಯಲ್ಲಿ ಹೋಗಿ ಹಾಸಿಗೆಯ ಮೇಲೆ ಮಲಗಿಕೊಳ್ಳಿ. ಕೋಣೆಯಲ್ಲಿ ಮಂದಬೆಳಕಿರಬೇಕು. ಈಗ ನಿಮ್ಮ ದೇಹವನ್ನು ಸಡಿಲಿಸಿ. ಕಣ್ಣುಗಳನ್ನು ಮುಚ್ಚಿ. ನಿಮ್ಮ ಸ್ನೇಹಿತನ ಮುಖವನ್ನು ಊಹಿಸಿಕೊಂಡು ಮುಖಾಮುಖಿ ನೋಡಿಕೊಳ್ಳಿ. ನಿಮ್ಮ ಕಣ್ಣುಗಳು ನಿಶ್ಚಯವಾಗಿ ಸಂಪೂರ್ಣ ಮುಚ್ಚಿದುದಾಗಿ ಖಚಿತಪಡಿಸಿಕೊಳ್ಳಿ.

ಈಗ ನಿಮ್ಮ ಸ್ನೇಹಿತನ ಮುಖಕ್ಕೆ ತನ್ನಷ್ಟಕ್ಕೆ ತಾನೇ ಏನನ್ನಾದರೂ ಕುಡಿಯುವುದಕ್ಕೆ ಅಥವಾ ಸಿಗರೇಟನ್ನು ಹಚ್ಚಿಕೊಳ್ಳಲು ಅಥವಾ ತನ್ನಷ್ಟಕ್ಕೆ ತಾನೇ ಆಜ್ಞಾಪಿಸಿದ ಹಾಗೆ ಏನನ್ನಾದರೂ ಮಾಡಲು ಆಜ್ಞಾಪಿಸಿ.

ನಿಮ್ಮ ಆಜ್ಞೆಯ ಪರಿಣಾಮ ಏನಾಯಿತೆಂದು ಖಚಿತಪಡಿಸಿಕೊಳ್ಳಲು ನೀವು ಅವನನ್ನು ದೂರವಾಣಿಯಲ್ಲಿ ಸಂಪರ್ಕಿಸಿ ಕೆಲವು ನಿಮಿಷಗಳ ಹಿಂದೆ ಆತನು ಏನು ಮಾಡಿದನೆಂದು ಕೇಳುವುದು ಉತ್ತಮವು. ನಿಜವಾಗಿಯೂ ನಿಮ್ಮ ಸ್ನೇಹಿತನು ಕೆಲವು ನಿಮಿಷಗಳ ಹಿಂದೆ ಏನನ್ನಾದರೂ ಕುಡಿದಿದ್ದರೆ ಅಥವಾ ಸಿಗರೇಟನ್ನು ಹಚ್ಚಿದ್ದರೆ ನಿಮ್ಮ ಪ್ರಯೋಗವು ಸಫಲವಾಯಿತೆಂದು ನೀವು ತೆಗೆದುಕೊಳ್ಳಬಹುದು. ನಿಮ್ಮ ಮೊದಲನೆಯ ಪ್ರಯತ್ನವು ಅಸಫಲವಾದರೆ ನೀವು ಅಸಮಾಧಾನ ಪಡಬೇಕಾದುದೇನೂ ಇಲ್ಲ. ಹಲವಾರು ಪದೇಪದೇಯ ಪ್ರಯತ್ನಗಳ ನಂತರವೂ ನೀವು ಸಫಲವಾಗದಿದ್ದರೆ ನಿಮ್ಮ ಮನೋಬಲದಲ್ಲಿ ಎಲ್ಲಿಯೋ ಅಡ್ಡಿ ಇರಬೇಕೆಂದು ಅರ್ಥ.

ಕೊನೆಗೆ ನಿಮ್ಮ ಊರಿನಲ್ಲೇ ನೆಲೆಸಿರುವಂತಹ ನಿಮ್ಮ ಸ್ನೇಹಿತನ ಮೇಲೆ ಪ್ರಯೋಗವು ಯಶಸ್ವಿಯಾದಾಗ, ನಿಮ್ಮ ಗಮನವನ್ನು ಬೇರೆಯಾವುದೋ ಊರಿನಲ್ಲಿರುವಂತಹ ಸ್ನೇಹಿತರೋ ಅಥವಾ ಬಂಧುಗಳೋ ಅಥವಾ ಪರಿಚಯಸ್ಥರ ಮೇಲೋ ಬದಲಾಯಿಸಿ. ನಿಮ್ಮ ಕೋಣೆಯಲ್ಲಿ ಕೂತುಕೊಂಡು ಅವರು ನಿಮಗೆ ದೂರವಾಣಿಯ ಮೂಲಕ ಆ ನಿಮಿಷವೇ ಸಂಪರ್ಕಿಸಲಿ ಅಥವಾ ನಿಮ್ಮನ್ನು ನೋಡಲು ಹೊರಡಲಿ ಎಂದು ಆಜ್ಞಾಪಿಸಿ.

ನಿಮ್ಮ ಆಜ್ಞೆಯು ದೂರದ ಮನುಷ್ಯನ ಮೇಲೆ ಪರಿಣಾಮ ಬೀರಿದೆ ಎಂದು ನೀವು ಗಮನಿಸುವಿರಿ. ಅವನು ನಿಮ್ಮ ಆಜ್ಞೆಯ ಅನುಸಾರವಾಗಿ ನಡೆದುಕೊಳ್ಳಲು ಅಣಿಯಾಗುತ್ತಿರುವನು. ನಿಜವಾಗಿಯೂ, ಅವನು ಅದನ್ನು ಮಾಡುವವರೆಗೂ ಒಂದು ಮಟ್ಟದಲ್ಲಿ ಅಸಮಾಧಾನವಿರುತ್ತದೆ.

ಅದೇ ರೀತಿ ನಿಮ್ಮ ಪ್ರತಿಕೂಲದವರ ಮೇಲೆ ನೀವು ಅವರಿಗೆ ವೈರತ್ವವನ್ನು ಹಿಂತೆಗೆದುಕೊಂಡಿದೆಯಾದ್ದರಿಂದ ನೀವು ಪ್ರಾಮಾಣಿಕ ಸಂಬಂಧವನ್ನು ನಿಮ್ಮೊಂದಿಗೆ ಹಿಂದಕ್ಕೆ ತರಬೇಕು ಎಂದು ಆಜ್ಞಾಪಿಸಬಹುದು. ಒಬ್ಬ ಸ್ನೇಹಿತನಿಗೆ ಅವನು ನಿಮ್ಮ ಮೇಲೆ ಅತ್ಯಂತ ಪ್ರೀತಿಯನ್ನು ವೃದ್ಧಿಸಿಕೊಂಡಿದ್ದಾನೆ ಹಾಗೂ ನಿಮ್ಮನ್ನು ನೋಡುವವರೆಗೂ ಆತನಿಗೆ ಯಾವುದೇ ಶಾಂತಿ ಇಲ್ಲವೆಂದು ಆಜ್ಞಾಪಿಸಬಹುದು.

ಇದೇ ರೀತಿಯ ಹಲವಾರು ಪ್ರಯೋಗಗಳನ್ನು ಮಾಡಬಹುದು. ಆ ತರಹದ ಪ್ರಯೋಗಗಳಿಂದ ನಿಮ್ಮ ಮನೋಬಲವನ್ನು ನೀವು ಪರೀಕ್ಷಿಸಿಕೊಳ್ಳಬಹುದು. ನಿಜ, ಪ್ರಾರಂಭದಲ್ಲಿ ಈ ಕೆಲಸ ಸ್ವಲ್ಪ ಪ್ರಯಾಸಕರವು. ಅದು ಬಹಳ ಸಮಯ ತೆಗೆದುಕೊಳ್ಳಬಹುದು. ಆದರೆ ನೀವು ಅದನ್ನು ಮಧ್ಯದಲ್ಲಿಯೇ ಬೇಸರದಿಂದ ಬಿಟ್ಟುಬಿಡುವ ಬಲವಾದ ಕಾರಣವೇನೂ ಇಲ್ಲ. ನೀವು ಪ್ರಾರಂಭದಲ್ಲಿ ವಿಫಲರಾದರೂ ನಂತರ ಯಶಸ್ವಿಯಾಗುವಿರೆಂಬ ಭರವಸೆ ಇರಬೇಕು.

ನೀವು ಆ ತರಹದ ಪ್ರಯೋಗಗಳಲ್ಲಿ ಯಶಸ್ವಿಯಾದ ನಂತರ ಹಿಂದೆ ಕೂತುಕೊಳ್ಳಬಾರದು. ನೀವು ಇನ್ನೂ ಕಷ್ಟಕರವಾದ ಪ್ರಯೋಗಗಳೊಂದಿಗೆ ಮುನ್ನುಗ್ಗಬೇಕು ಹಾಗೂ ಪವಾಡಗಳನ್ನು ಸಾಧಿಸಲು ಪ್ರಯತ್ನಿಸಬೇಕು. ಉದಾಹರಣೆಗೆ ಒಂದು ಹಾರುತ್ತಿರುವ ಹಕ್ಕಿಯನ್ನು ಕೆಳಕ್ಕೆ ತರಬಹುದು. ನೀವು ಒಂದು ಜ್ವಾಲೆಯನ್ನು ಅದರ ಹತ್ತಿರ ಹೋಗದೇ ನಂದಿಸಬಹುದು. ನೀವು ವೇಗವಾಗಿ ಹೋಗುತ್ತಿರುವ ರೈಲನ್ನು ನಿಲ್ಲಿಸಬಹುದು.

ನಮ್ಮ ಇತಿಹಾಸವು ಈ ತರಹದ ಸಾಧನೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ದಾಖಲು ಮಾಡಿದೆ. ಅದರ ಬಗ್ಗೆ ಪವಾಡವೆನ್ನುವುದೇನೂ ಇಲ್ಲ. ಅಲ್ಲದೆ ಅದನ್ನು ಈಕಡೆ ಯಾವುದೇ ಮೋಡಿಯು ನಿರ್ವಹಿಸುವುದಿಲ್ಲ. ಈ ಸಂಪೂರ್ಣ ಕೆಲಸವನ್ನು ನಿಮ್ಮ ಮನೋಬಲಕ್ಕೇ ಮೀಸಲಾಗಿಸಬಹುದು. ಬಲವಾದ ಮನೋಬಲವನ್ನು ಕೊಟ್ಟರೆ ನೀವು ಅಸಾಧ್ಯ ಸಂಗತಿಗಳನ್ನು ಸಾಧಿಸಬಹುದು.

ಬಲವಾದ ಇಚ್ಛಾಶಕ್ತಿಯನ್ನು ಮುಂದೆ ವೃದ್ಧಿಸಿಕೊಳ್ಳಲು ನಾವು ಈ ಕೆಳಗಿನ ಹೆಜ್ಜೆಗಳನ್ನು ಉಪದೇಶಿಸುತ್ತೇವೆ

೧. ಒಂದು ನಿಯಮದಂತೆ ಕಡಿಮೆ ಮಾತಾಡಿ. ನೀವು ಹೆಚ್ಚು ಮಾತಾಡಿದ ಹಾಗೆ ನಿಮ್ಮ ದೇಹದಲ್ಲಿ ಸ್ವಾಭಾವಿಕವಾಗಿರುವ ಶಕ್ತಿಯು ಹೆಚ್ಚಾಗಿ ಹಾಳಾಗುವುದು. ಆ ವಿಷಯದಲ್ಲಿ ನೀವು ಕಳೆದುಕೊಂಡ ಶಕ್ತಿಯನ್ನು ಮತ್ತೆ ಪಡೆಯಬೇಕಾದರೆ ಬಹಳ ಶ್ರಮ ಪಡಬೇಕಾಗುತ್ತದೆ. ಅದಕ್ಕಾಗಿ ಶ್ರೇಷ್ಠವಾದುದೇನೆಂದರೆ ನಿಮ್ಮಲ್ಲಿ ಸ್ವಾಭಾವಿಕವಾಗಿರುವ ಶಕ್ತಿಯನ್ನು ರಕ್ಷಿಸಿಕೊಳ್ಳುವುದು.

೨. ಒಂದು ನಿಯಮದಂತೆ ಅನಕ್ಷರಸ್ಥರ, ತಿಳಿಗೇಡಿಗಳ ಮತ್ತು ಕ್ಷೀಣಮನೋಬಲದವರ ಜೊತೆಯಲ್ಲಿ ಇರಬೇಡಿರಿ. ಅಂತಹ ಜನರು ನಮ್ಮಲ್ಲಿ ನಿರಾಶೆಯ ಭಾವನೆಗಳನ್ನು ತುಂಬುತ್ತಾರೆ. ಅವರು ತಮ್ಮ ಸ್ವಂತ ಜೀವನದಲ್ಲಿ ವಿಫಲರಾಗಿರುತ್ತಾರೆ. ಅವರು ಬೇರೆಯವರನ್ನೂ ಅದೇ ರೀತಿ ವಿಫಲರಾಗುವುದನ್ನು ನೋಡ ಬಯಸುತ್ತಾರೆ. ಅಂತಹ ಮೂಲಗಳಿಂದ ದೂರವಿರಿ.

೩. ನಿಮ್ಮ ಸಮಯದಲ್ಲಿನ ಒಂದು ಭಾಗವನ್ನು ಆಳವಾದ ಏಕಾಂತತೆಯಲ್ಲಿ ಕಳೆಯಿರಿ. ನಿಮ್ಮೊಡನೆ ಯಾರೂ ಮಾತನಾಡುವುದಿಲ್ಲ ಮತ್ತು ನಿಮ್ಮ ದಾರಿಗೆ ಯಾರೂ ಅಡಚಣೆಗಳನ್ನು ತರುವುದಿಲ್ಲ.

೪. ನಿಮ್ಮ ಆಲೋಚನೆಗಳನ್ನು ಮತ್ತು ರಹಸ್ಯಗಳನ್ನು ಯಾರಿಗೂ ತಿಳಿಸಬೇಡಿರಿ. ನಿಮಗೆ ಸಿಟ್ಟು ಬರುತ್ತಿದ್ದರೆ, ಸಿಟ್ಟಿನ ಮೇಲೆ ಹತೋಟಿಯನ್ನು ಸಂಪಾದಿಸಲು ಪ್ರಯತ್ನಿಸಿ. ನಗೆ ಚಟಾಕಿಯಲ್ಲೂ ಸಹ, ಉದ್ವೇಗದ ಪರಿಸ್ಥಿತಿಯಲ್ಲಿ ನಿಮ್ಮ ಷ್ಟಕ್ಕೆ ನೀವೇ ನಿಗ್ರಹಿಸಿಕೊಳ್ಳಬೇಕು.

೫. ತನ್ನ ಬಗ್ಗೆ ಗೋಪ್ಯತೆಯನ್ನು ಸಾಬೀತು ಸಾಧಿಸಿರುವಂತಹ ಓರ್ವನು ಸಮಾಜದಲ್ಲಿ ಹೆಚ್ಚಿನ ಸ್ಥಾನವನ್ನು ಪಡೆಯುವನು. ನೀವು ನಿಮ್ಮ ಸ್ನೇಹಿತರ ಮತ್ತು ಹತ್ತಿರದವರ ರಹಸ್ಯಗಳನ್ನು ಹಂಚಿಕೊಂಡರೆ ಎಂತಹ ಪ್ರಚೋದನೆಯಿದ್ದರೂ ಬಹಿರ್ವಡಿಸುವುದಿಲ್ಲ. ಆಕಸ್ಮಾತ್ ಒಂದು ಹಂತದಲ್ಲಿ ಸಂಬಂಧವು ತಣ್ಣಗಾದರೂ ಸಹ ನೀವು ವಿಶ್ವಾಸಘಾತರಾಗುವುದಿಲ್ಲ. ನೀವು ಒಂದು ರಹಸ್ಯವಾಗಿಯೇ ಉಳಿಯಬೇಕು. ನೀವು ಅದನ್ನು ಹೆಚ್ಚು ಮಾಡಿದಷ್ಟು, ನಿಮ್ಮ ಗೌರವವು ಹೆಚ್ಚುತ್ತದೆ.

೬. ಒಂದು ಆವೇಶರಹಿತದ ಮುಖವನ್ನು ತಾಳಿ. ಯಾರಾದರೂ ನಿಮಗೆ ಒಂದು ಗೋಪ್ಯ ವಿಷಯವೆಂದು ನಿಮಗೆ ತಿಳಿಸುತ್ತಿದ್ದಾರೆಂದು ಊಹಿಸಿ. ಬಹುಶಃ ಅದು ನಿಮಗೆ ಮೊದಲೇ ಗೊತ್ತಿರುವುದು. ಆದರೂ ನೀವು ನಿಮ್ಮ ಮುಖದ ಮೇಲೆ ಬಹಳ ಗೋಪ್ಯದ ವಿಷಯವು ಬಹಳ ಗೋಪ್ಯದ ವಿಷಯವಲ್ಲವೆಂದು ತೋರಿಸಬಾರದು. ನೀವು ಎಂತಹ ಆವೇಶರಹಿತ ಮುಖವನ್ನು ತಾಳಬೇಕೆಂದರೆ ಆ ಗೋಪ್ಯವಾದ ವಿಷಯವನ್ನು ನೀವು ಮೊದಲಸಾರಿಗೆ ಕೇಳುತ್ತಿರುವಿರೆಂದು ಅವನಿಗೆ ಮನವೊಲಿಸಬೇಕು.

೭. ಅಸಾಧಾರಣ ಉಡುಪನ್ನು ಹಾಕಿಕೊಂಡು ಪ್ರದರ್ಶಿಸಲು ಪ್ರಯತ್ನಿಸಬೇಡಿರಿ. ಸಾಧಾರಣವಾದ ಉಡುಪನ್ನೇ ನೀವು ಹಾಕಿಕೊಳ್ಳಬೇಕು. ನೀವು ಅನುಪಮವಾಗಿ ಕಾಣಲು ಹೋದರೆ ನೀವು ಹೆಚ್ಚಾಗಿ ಸಮಾಜದಲ್ಲಿ ಬೆರೆಯಲಾಗುವುದಿಲ್ಲ. ಸಮಾಜವು ಮಾಮೂಲಾಗಿ ಹಾಕಿಕೊಳ್ಳುವುದಂತಹುದನ್ನು ನೀವು ತೊಡದಿದ್ದರೆ ನಿಮಗೆ ನಂಬಿಕೆಯಲ್ಲಿ ಸ್ಫೂರ್ತಿಕೊಡಲಾಗುವುದಿಲ್ಲ. ಯಾವುದೇ ಸಮ್ಮೋಹಕನು ತಾನು ಹೆಚ್ಚಿನ ಸಂಖ್ಯೆಯ ಸಮಾಜದ ನಂಬಿಕೆಯನ್ನು ಗಳಿಸದ ಹೊರತು ತನ್ನ ಕಲೆಯಲ್ಲಿ ಯಶಸ್ವಿಯಾಗಲಾಗುವುದಿಲ್ಲ.

೮. ನಿಮ್ಮ ಮನಸ್ಸನ್ನು ಆಲೋಚನೆರಹಿತವಾಗಿಸಲು ಪ್ರಯತ್ನಿಸಿ. ನಾವು ಈಗಾಗಲೇ ಈ ಪದ್ಧತಿಯನ್ನು ಹಿಂದಿನ ಪುಟಗಳಲ್ಲಿ ವಿಮರ್ಷಿಸಿದ್ದೇವೆ. ಪುನಃ ಪುನಃದ ಪ್ರಯೋಗಗಳಿಂದ ನಿಮ್ಮ ಸಾಧನೆಯನ್ನು ಒಗ್ಗೂಡಿಸಿ. ಅದು ನಿಮ್ಮ ಮುಖದ ಮೇಲೆ ದೈವೀಕ ಖಳೆಯನ್ನು ಸೃಷ್ಟಿಸುವುದು. ಅದು ನಿಮಗೆ ಅವಶ್ಯಸಮತೋಲನವನ್ನು ಕೊಡುವುದು. ಅದು ನಿಮ್ಮ ಜ್ಞಾಪಕಶಕ್ತಿಯನ್ನು ಹೆಚ್ಚಿಸುವುದು. ಮೆದುಳು ಶಕ್ತಿಯುತವಾಗುವುದು. ಅನಾವಶ್ಯಕ ಯೋಚನೆಗಳು ಹೊರದೂಡಲ್ಪಡುವವು. ಬೇಕಾಗಿರುವ ಯೋಚನೆಗಳು ಮಾತ್ರ ನಿಮ್ಮ ಮನಸ್ಸಿನಲ್ಲಿರುವವು.

೯. ಸಮ್ಮೋಹಕನ ಪ್ರಧಾನ ಸಲಕರಣೆಯೆಂದರೆ ಕಣ್ಣು ಎಂದು ನಾವು ಈಗಾಗಲೇ ಚರ್ಚಿಸಿದ್ದೇವೆ. ಕಣ್ಣಿನ ಸಲಕರಣೆಯುತದಿಂದ ಸಮ್ಮೋಹಕನು ಯಾರನ್ನಾದರೂ ಸಮ್ಮೋಹನಗೊಳಿಸಲಿಚ್ಛಿಸುವನು. ಒಂದು ಕೊಟ್ಟಂತಹ ವಸ್ತುವನ್ನು ಬಹಳ ಹೊತ್ತಿನವರೆಗೂ ದಿಟ್ಟಿಸಿ ನೋಡುವ ಸಾಮರ್ಥ್ಯವನ್ನು ಪಡೆದುಕೊಳ್ಳಲು ಶಕ್ತಿಚಕ್ರವನ್ನು ಅಭ್ಯಸಿಸಿ. ಇದು ನಿಮ್ಮ ಕಣ್ಣುಗಳನ್ನು ಒಂದು ವಿಶಿಷ್ಟರೀತಿಯ ಆಕರ್ಷಣ ಶಕ್ತಿಯುತವನ್ನಾಗಿಸುತ್ತದೆ. 'ಮಾಧ್ಯಮ'ನಿಗೆ ನಿಮ್ಮ ಶಕ್ತಿಗೆ ವಶವಾಗುವುದು ಬಿಟ್ಟರೆ ಬೇರೆದಾರಿಯೇ ಕಾಣುವುದಿಲ್ಲ.

ಈ ಪದ್ಧತಿಗಳನ್ನು ಅನುಸರಿಸಿ ಅಭ್ಯಾಸಕಾರನು ತನ್ನ ಮನೋಬಲವನ್ನು ತನ್ನ ಹತೋಟಿಗೆ ತಂದುಕೊಳ್ಳಬೇಕು. ಅದು ಅವನ ಜೀವನದ ಗಮನಾರ್ಹ ಸಾಧನೆಯು. ಅವನಿಗೆ ಈ ಮಾಧ್ಯಮದಿಂದ ಯಶಸ್ಸು ದೊರೆಯುತ್ತದೆ.

•

# ಅಧ್ಯಾಯ 8

## ನ್ಯಾಸ ಧ್ಯಾನ

ಜೀವನದಲ್ಲಿ ವರ್ಗಗಳ ಉನ್ನತಿಯನ್ನು ಮತ್ತು ಸಮತೋಲನೆಯನ್ನು ತರಲು ವಿಶ್ವದಲ್ಲಿ ಶಿಫಾರಸು ಮಾಡಿರುವಂತಹ ಎಲ್ಲಾ ಪದ್ಧತಿಗಳಲ್ಲಿ ನ್ಯಾಸ ಧ್ಯಾನವೇ ಅತೀ ಪ್ರಾಮುಖ್ಯವಾದುದು. ನ್ಯಾಸದ ಸಾಧನೆಯಿಂದ ಓರ್ವನು ತನ್ನ ದೇಹದ ಎಲ್ಲಾ ಅತೀ ಮಹತ್ವದ ಕೇಂದ್ರಗಳ ಮೂಲಕ ತನ್ನ ಅರಿವನ್ನು ವೃದ್ಧಿಪಡಿಸಿಕೊಳ್ಳಬಹುದು.

ಈ ಕೆಳಗಿನ 26 ಮಹತ್ವದ ಕೇಂದ್ರಗಳೇ ಮನುಷ್ಯನ ದೇಹದಲ್ಲಿ ಒದಗಿರುವಂತಹುವು.

೧)ಪಾದಗಳು..2 (೨)ಕಣಕಾಲುಗಳು (ಮೀನ ಖಂಡಗಳು) ..2 (೩) ತೊಡೆಗಳು.2 (೪)ಜನನೇಂದ್ರಿಯ..1 (೫)ಹೊಕ್ಕಳು. 1 (೬)ಹೃದಯ..1 (೭)ಶ್ವಾಸಕೋಶಗಳು..2 (೮)ಭುಜಗಳು..2 (೯)ಬಲ ಅಂಗೈ, ಕೈ ಮತ್ತು ಬಲಭುಜ..3 (೧೦)ಎಡ ಅಂಗೈ, ಕೈ ಮತ್ತು ಎಡಭುಜ..3 (೧೧)ಕಣ್ಣುಗಳು..2 (೧೨)ಕಿವಿಗಳು..2 (೧೩)ಬಾಯಿ..1 (೧೪) ಮೂಗು..1 (೧೫)ಕಣ್ಣುಹುಬ್ಬುಗಳು...1........ಆದ್ದರಿಂದ ಒಟ್ಟು 26

ಓರ್ವನ ಜೀವನದಲ್ಲಿ ಉನ್ನತಿಯ ವಿಧಾನವು ಈ ಮಹತ್ವದ ಕೇಂದ್ರದ ಮೂಲಕವೇ ಆಗುವುದು. ಆದ್ದರಿಂದ ಓರ್ವನು ತನ್ನ ದೇಹವನ್ನು ಮತ್ತು ಅದರಲ್ಲಿ ಹೂತಿರುವಂತಹ ಈ 26 ಮಹತ್ವದ ಕೇಂದ್ರಗಳನ್ನು ಸಹ ಗುರುತಿಸುವ ಅವಶ್ಯಕತೆ ಇರುತ್ತದೆ.

ಈ ಕೇಂದ್ರಗಳ ಬಗ್ಗೆ ನಾವು ಬಹಳ ತಿಳಿದುಕೊಂಡಿದ್ದರೂ ಸಹ ನಾವು ಅವುಗಳ ಮೇಲೆ ಪ್ರತಿಬಿಂಬಿಸುವುದಿಲ್ಲ ಎನ್ನುವುದೇ ಸತ್ಯ. ಉದಾಹರಣೆಗೆ, ನಾವು ಕಾರ್ಯನಿರತರಾಗಿದ್ದಾಗ ಈ ಮೇಲೆ ಹೇಳಿದ ಮಹತ್ವದ ಕೇಂದ್ರಗಳ ಬಗ್ಗೆ ಲಕ್ಷ್ಯವಹಿಸುವುದೇ ಇಲ್ಲ. ಏನಾದರೊಂದು ನಿರ್ದಿಷ್ಟ ಘಟನೆ ನಡೆದಾಗ ಮಾತ್ರ ನಮ್ಮ ಮನಸ್ಸು ಈ ಮಹತ್ವದ ಕೇಂದ್ರಗಳ ಕಡೆಗೆ ತಿರುಗುತ್ತದೆ. ಈಗ ಓರ್ವನ ಪಾದದಲ್ಲಿ ಒಂದು ಮಳೆ ಚುಚ್ಚಿಕೊಳ್ಳುತ್ತದೆ, ಇದು ಓರ್ವನನ್ನು ಕೂತುಕೊಳ್ಳವ ಹಾಗೆ ಮಾಡಿ ಪಾದವು ದೇಹದ ಒಂದು ಅಂಗವಾಗಿದೆ ಎಂದು ಮೊನಚಾಗಿ ಅರಿವಾಗುವ ಹಾಗೆ ಮಾಡುತ್ತದೆ. ಇಲ್ಲವಾದರೆ ನಾವು ಹಾಗೆಯೇ ಅದರ ಬಗ್ಗೆ ಕಾಳಜಿ ವಹಿಸುವುದಿಲ್ಲ.

ನನ್ನ ಕಡೆಯಿಂದ ನಾನು ಎಲ್ಲಾರೀತಿಯಿಂದ ಒತ್ತಿ ಹೇಳಲಿಚ್ಚಿಸುವುದೇನೆಂದರೆ ನಾವು ಸುಮಾರಾಗಿ ಈ ದೇಹದ ಎಲ್ಲಾ ಮಹತ್ವದ ಕೇಂದ್ರಗಳ ಕಡೆಗೆ ನಿಯಮಿತವಾಗಿ ಗಮನವನ್ನು ಕೊಡಬೇಕು. ಒಂದು ನಿರ್ದಿಷ್ಟವಾದ ಅಂಗವನ್ನು ನಾವು ಸರಿಯಾಗಿ ನೋಡಿಕೊಳ್ಳದಿದ್ದರೆ ಅದು ಅಚೇತನಗೊಳ್ಳುವುದು ಸಹಜವಲ್ಲದೆ ಬೇರೇನೂ ಅಲ್ಲ. ಹಲವಾರು ದಶಕಗಳ ಹಿಂದೆ ಮನುಷ್ಯನಲ್ಲಿ ಒಂದು ನಿರ್ದಿಷ್ಟ ಚೇತನಯುಕ್ತ ನರದ ಪ್ರದೇಶ ಒಂದಿತ್ತು ಎಂದು ನಾನು ಈ ಮೊದಲೇ ಚರ್ಚಿಸಿದ್ದೇನೆ. ಅವನು ಈ ನರದ ಸಹಾಯದಿಂದ ಯಾವುದೇ ಹೆಚ್ಚಿನ ಶ್ರಮವಿಲ್ಲದೆ ಭೂತಕಾಲವನ್ನು ಮತ್ತು ಭವಿಷ್ಯವನ್ನೂ ನೋಡುತ್ತಿದ್ದನು. ಆದರೆ ಅವನು ಈ ಸಂಸಾರ ಕಾರ್ಯಗಳಲ್ಲಿ ಮುಳುಗಿ ಈ ನರವನ್ನು ಅಭಿವೃದ್ಧಿಪಡಿಸುವುದನ್ನು ಅಲಕ್ಷಿಸಿದನು, ಅದು ನಿಧಾನವಾಗಿ ಅಚೇತನಗೊಂಡಿತು. ಅದಕ್ಕೆ ಒಪ್ಪಿಸಿದಂತಹ ಸಹಜ ಕೆಲಸವನ್ನೂ ಅದು ಮಾಡಲು ನಿಲ್ಲಿಸಿತು.

ಈವತ್ತಿಗೂ ಮನುಷ್ಯನ ಮೆದುಳಿನಲ್ಲಿ ಈ ನರದ ಉಪಸ್ಥಿತಿ ಇದೆ. ವೈದ್ಯಕೀಯ ವಿಜ್ಞಾನಿಗಳು ಇದನ್ನು ಗುರುತಿಸಿದ್ದಾರೆ, ಆದರೆ, ಅದು ಜೀವಂತವಾಗಿದ್ದರೆ ಅಚೇತನಗೊಂಡೇ ಇದೆ. ಅದೇ ರೀತಿ, ನಮ್ಮ ದೇಹದಲ್ಲಿ ಒದಗಿರುವಂತಹ, ಈ 26 ಮಹತ್ವದ ಕೇಂದ್ರಗಳಿಗೆ ನಾವು ಗಮನವರಿಸದೆ ಅಭಿವೃದ್ಧಿ ಪಡಿಸದಿದ್ದರೆ, ಓರ್ವನು, ಕಾರಣಾತ್ಮಕವಾಗಿ, ಎಲ್ಲವೂ ಅಲ್ಲದಿದ್ದರೂ, ಕೆಲವು ಮಾತ್ರ, ಅವು ಜೀವಂತವಾಗಿದ್ದರೂ ಅಚೇತನ ಗೊಳ್ಳಬಹುದೆಂಬ ಭೀತಿಪಡುತ್ತಾನೆ. ಆ ವಿಷಯದಲ್ಲಿ ನಾವು ಈ ಎಲ್ಲಾ ಕೇಂದ್ರಗಳಿಂದ ಲಾಭವನ್ನು ಪಡೆಯುತ್ತಾ ಮುಂದುವರಿಯಲಾರೆವು. ಆದ್ದರಿಂದ, ನಾನು ಓದುಗರಿಗೆ, ಕನಿಷ್ಠಪಕ್ಷ ದಿನಕ್ಕೆ ಒಮ್ಮೆಯಾದರೂ ಈ ಕೇಂದ್ರಗಳ ಕಡೆಗೆ, ಅವುಗಳನ್ನು ಚೇತನಯುಕ್ತವಾಗಿಡಲು,ಗಮನವರಿಸಲು ಒತ್ತಾಯಿಸುತ್ತೇನೆ.

ಯಾವುದೇ ಅಂಗಕ್ಕಿಂತ ಹೆಚ್ಚಾಗಿ ಮನುಷ್ಯನ ಮನಸ್ಸು ಬಾಹ್ಯ ಚಟುವಟಿಕೆಗಳಲ್ಲಿ ಲೀನವಾಗಿದೆ. ಪರಿಣಾಮವಾಗಿ ಅವನು ಈ ಒಳಗಿನ ರಚನೆಯಲ್ಲಿ ಹೂತುಕೊಂಡಿರುವ ಈ ಕೇಂದ್ರಗಳ ಕಡೆಗೆ ಗಮನಹರಿಸಲು ಲಕ್ಷ್ಯವಹಿಸುವುದಿಲ್ಲ. ನಾವು ಅಂತರ್ಮನಸ್ಸನ್ನು ಕನಿಷ್ಠ ದಿನಕ್ಕೆ ಒಂದು ಸಾರಿ ಚೇತನಗೊಳಿಸಿ ಈ ಮಹತ್ವದ ಕೇಂದ್ರಗಳ ಕಡೆಗೆ ಗಮನಹರಿಸಿದ್ದೇಯಾದರೆ ನಾವು ಖಚಿತವಾಗಿ ಆರೋಗ್ಯಕರವಾಗಿ ಬೆಳೆಯುತ್ತೇವೆ. ಅಲ್ಲದೆ, ಮನುಷ್ಯನು ಈ ದೇಹದಲ್ಲಿ ಒದಗಿರುವಂತಹ ಪ್ರಾಣಶಕ್ತಿಯನ್ನು ಈ ಕೇಂದ್ರಗಳಲ್ಲಿ ಸರಿಯಾಗಿ ಚಾಲನೆಮಾಡಿರುವುದನ್ನು ನಿಶ್ಚಯಿಸಿ ಅವುಗಳನ್ನು ಪುನಃ ಶಕ್ತಿಯುತ ಮಾಡಬಹುದು. ಆ ಸಂದರ್ಭದಲ್ಲಿ ನಮಗೆ ಆರೋಗ್ಯವೆನಿಸುತ್ತದೆ. ಅವನು ರೋಗಗಳಿಂದ ಮುಕ್ತನಾಗುವನು. ಫಲಿತಾಂಶವಾಗಿ ಅವನು ತನಗೆ ಹೆಚ್ಚಿನ ಯಶಸ್ಸಿನ ಜೀವನವನ್ನು ಕೊಡುವಂತಹ ತನ್ನ ಆಕರ್ಷಣ ಶಕ್ತಿಯನ್ನು ವೃದ್ಧಿಸಿಕೊಳ್ಳುವನು.

ಈ ಕಳೆದ ಪುಟಗಳಲ್ಲಿ ನಾನು ಈಗಾಗಲೇ ನ್ಯಾಸವನ್ನು ಚರ್ಚಿಸಿರುವೆನು. ಇಲ್ಲವೆನ್ನುವದಕ್ಕಿಂತ ಹೆಚ್ಚಾಗಿ ಆಗಾಗ, ಮಾಡುವುದಕ್ಕಿಂತ ಹೆಚ್ಚಾಗಿ ಮಾತನಾಡುವುದು ಸುಲಭವು. ಆದರೆ, ಅಭ್ಯಾಸಕಾರನು ಈ ನ್ಯಾಸದ ಪ್ರಯೋಗವನ್ನು ಕಲಿಯುವುದರಲ್ಲಿ ಯಶಸ್ವಿಯಾದರೆ ತನ್ನ ಬಹಳ ತೊಂದರೆಯ ಸಮಸ್ಯೆಗಳಿಂದ ದೂರವಾಗಿಬಿಡುವನು ಎನ್ನುವುದರಲ್ಲಿ ನನಗೆ ಸಂಪೂರ್ಣ ಖಚಿತತೆ ಇದೆ.

ಉದಾಹರಣೆಗೆ ನಿಮಗೆ ತಲೆಯಲ್ಲಿ ಒಡೆಯುವಂತಹ ನೋವಿದೆ. ನಿಮಗೆ ನ್ಯಾಸವನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂದು ಗೊತ್ತಿದ್ದರೆ ಈ ಹೊಲಸಾದ ತಲೆನೋವಿನಿಂದ ಕೆಲವೇ ಕ್ಷಣಗಳಲ್ಲಿ ಮುಕ್ತರಾಗಬಹುದು.

ನಾನು ಈ ಕೆಳಗಿನ ಸಾಲುಗಳಲ್ಲಿ ಬಹಳವಾಗಿ ಅಭ್ಯಾಸದಲ್ಲಿರುವ ಪದ್ಧತಿಯ ಮುಖ್ಯ ಅಂಶಗಳನ್ನು ಕೊಡಲಿಚ್ಛಿಸುತ್ತೇನೆ.

ಅಭ್ಯಾಸಕಾರನು ರಾತ್ರಿ ಮಲಗುವಾಗ ಮತ್ತು ಬೆಳಿಗ್ಗೆ ಏಳುವಾಗ ಸಡಿಲವಾದ ಬಟ್ಟೆಗಳನ್ನು ಹಾಕಿಕೊಂಡರಬೇಕು. ಈಗ ನೀವು ನಿಮ್ಮ ಪಕ್ಕೇ ಹಾಸಿಗೆಯ ಮೇಲೆ ನೇರವಾಗಿ ಚಾಚಿಕೊಳ್ಳಿ. ನಿಮ್ಮ ದೇಹವು ಎಷ್ಟು ಸಡಿಲವಾಗಿರಬೇಕೆಂದರೆ ಅದರಲ್ಲಿ ಶಕ್ತಿಯೇ ಉಳಿದಿಲ್ಲ ಎನ್ನುವ ಹಾಗಿರಬೇಕು. ನೀವು ಈ ಕಡೆ ಕಣ್ಣನ್ನು ಮಿಳುಕಿಸಬಾರದು. ಈ ಭಂಗಿಗೆ ಶವಾಸನವೆಂದು ಕರೆಯುತ್ತಾರೆ_ ಸತ್ತ ಮನುಷ್ಯನ ಭಂಗಿಯು.

ಈಗ ನಿಮ್ಮ ಉಸಿರನ್ನು ಹತೋಟಿಗೆ ತನ್ನಿ. ನಿಮ್ಮ ಶ್ವಾಸಕೋಶದಲ್ಲಿರುವ ಗಾಳಿಯನ್ನೆಲ್ಲಾ ರೇಚಕಮಾಡಿ. ನಿಧಾನವಾಗಿ ಶುದ್ಧಗಾಳಿಯನ್ನು ಒಳಗೆ ತೆಗೆದುಕೊಳ್ಳಿ. ಈ ತರಹ ಮಾಡುತ್ತಿದ್ದ ಹಾಗೆ ನಿಮಗೆ ಆಹ್ಲಾದತೆಯ ಅರಿವಾಗುವುದು. ನೀವು ನಿಧಾನವಾಗಿ ಉಸಿರಾಡುತ್ತಿರುವುದನ್ನು ಖಚಿತಪಡಿಸಿಕೊಳ್ಳಿ.

ಇದಾದ ನಂತರ ಒಳಗಿನ ಮತ್ತು ಹೊರಗಿನ ಮನಸ್ಸುಗಳೆರಡನ್ನೂ ಒಟ್ಟಿಗೇ ಉತ್ತೇಜಿತಗೊಳಿಸಿ. ಬೇರ ಪದಗಳಲ್ಲಿ ಸಂಪೂರ್ಣ ಧ್ಯಾನದಿಂದ ಎಲ್ಲಾ 26 ಮಹತ್ವದ ಕೇಂದ್ರಗಳ ಮೇಲೆ ಈ ಅಧ್ಯಾಯದ ಮೊದಲಿಗೆ ಕೊಟ್ಟಂತಹ ಕ್ರಮದಲ್ಲಿ ಏಕಾಗ್ರತೆವಹಿಸಿ. 20 ಕ್ಷಣಗಳವರೆಗೂ ಓಂ ಚೈತನ್ಯ ಚೈತನ್ಯ ಸ್ವಾಹಾ ಎನ್ನುವ ಮಂತ್ರವನ್ನು ಉಚ್ಚರಿಸುತ್ತಾ ಹೋಗಿ. ನೀವು ಒಂದು ಮಹತ್ವದ ಕೇಂದ್ರದಿಂದ ಇನ್ನೊಂದು ಮಹತ್ವದ ಕೇಂದ್ರಕ್ಕೆ ಏಕಾಗ್ರತೆಯನ್ನು ವಹಿಸುತ್ತಾ ಹೋದ ಹಾಗೆಲ್ಲಾ ನಿಧಾನವಾಗಿ ಇದನ್ನು ಉಚ್ಚರಿಸಬೇಕು. ನೀವು ಪಾದಗಳಿಂದ ಪ್ರಾರಂಭಿಸಿ ಹೇಳಿದಂತಹ ಕ್ರಮದಲ್ಲೇ ಕಟ್ಟುನಿಟ್ಟಾಗಿ ಮೇಲಕ್ಕೆ ಚಲಿಸಬೇಕು.

ನೀವು ಅದೇ ಭಂಗಿಯಲ್ಲಿ ಉಳಿದುಕೊಳ್ಳಿ. ಹಾಸಿಗೆ ಮೇಲೆಯೇ ಮಲಗಿಕೊಂಡಿರಿ. ನೀವು ಪ್ರತಿ ಒಂದು ಕೇಂದ್ರಕ್ಕೂ 20 ಕ್ಷಣಗಳನ್ನು ನಿಯೋಜಿಸಿ ಆ ಮಂತ್ರವನ್ನು ಜಪಿಸುತ್ತಿರುವಾಗ, ನೀವು ಆ ನಿರ್ದಿಷ್ಟ ಅಂಗವು ಚೇತನಯುಕ್ತವಾಗುತ್ತಿದೆ ಹಾಗೂ ಆ ಕೇಂದ್ರದಲ್ಲಿ ನಿರ್ದಿಷ್ಟ ತರಹದ ಅರಿವು ಉದ್ಭವಿಸುತ್ತಿದೆ ಎಂದು ಆಜ್ಞಾಪಿಸಿಕೊಳ್ಳಿ.

ಮೊದಲು ನೀವು ಈ ಎಲ್ಲಾ 26 ಕೇಂದ್ರಗಳಿಗೂ ಏರುವ ಕ್ರಮದಲ್ಲಿ ಹೋಗಿ ಮತ್ತು ಅದೇ ರೀತಿ ಇಳಿಯುವ ಕ್ರಮದಲ್ಲಿ ಹಾಗೆಯೇ ಮುಟ್ಟುತ್ತಾ ಬನ್ನಿ. ಹೀಗೆ ನೀವು ಒಂದು ಕ್ರಮಾನುಗತಿಯನ್ನು ಮುಗಿಸಿದ್ದೀರಿ.

ನೀವು ಅದನ್ನು ನಿಯಮಿತವಾಗಿ ಅಭ್ಯಸಿಸಬೇಕು. ಕೆಲವೇ ದಿನಗಳಲ್ಲಿ ನಿಮ್ಮ ದೇಹದಲ್ಲೆಲ್ಲಾ ಒಂದು ವಿಶಿಷ್ಟ ರೀತಿಯ ಶಕ್ತಿಯು ಹರಿಯುತ್ತಿರುವ ಹಾಗೆ ನಿಮಗೆ ಅರಿವಾಗುವುದು. ನೀವು ಹೆಚ್ಚು ಉತ್ಸಾಹಕರೂ ಹಾಗೂ ಚೇತನರೂ ಆಗಿರುವಹಾಗೆ ಅನ್ನಿಸುವುದು. ನಿಮ್ಮಲ್ಲಿರುವ ಸಹಜ ಆಕರ್ಷಣೆ ಶಕ್ತಿಯೂ ಸಹ ವೃದ್ಧಿಯಾಗುತ್ತಲಿವೆ. ಒಂದು ನಿರ್ದಿಷ್ಟ ರೀತಿಯ ಆಕರ್ಷಣೀಯವಾದ ತೇಜೋವಲಯವು ನಿಮ್ಮ ಮುಖದಲ್ಲಿ ಸ್ಥಾಪಿತವಾಗಿ ನೀವು ಜನರನ್ನು ಅಂದುಕೊಂಡಕ್ಕಿಂತ ಮುಂಚಿತವಾಗಿಯೇ ಪ್ರಭಾವಿತಗೊಳಿಸಬಹುದು.

ಈ ಅಭ್ಯಾಸದಿಂದ ಬಹಳ ಮತ್ತು ವಿವಿಧ ತರಹದ ಲಾಭಗಳು ಕೂಡಿಕೊಳ್ಳುವವು. ನಿಮ್ಮ ದೇಹಕ್ಕೆ ಒಟ್ಟಾಗಿ ಸಂಪೂರ್ಣವಾದ ಬಿಡುವು ಸಿಗುವುದು. ಅದು ನಿಮ್ಮ ಅಣುಕೋಶಗಳನ್ನು ಪುನಃ ಶಕ್ತಿಯುತ ಮಾಡುವುದು. ನೀವು ನಿದ್ರಾನಾಶದಿಂದ ಪೀಡಿತರಾಗಿದ್ದರೆ ನಿಮ್ಮ ನಿದ್ರೆಯು ಹಿಂದಿರುಗುವುದು. ಅಲ್ಲದೆ, ಶಕ್ತಿಯನ್ನು ಪಡೆಯುತ್ತಿರುವಂತಹ ಪ್ರಾಣಶಕ್ತಿಯು ವಿಸ್ತಾರವಾಗಿ ದೇಹದ ಎಲ್ಲಾ ಭಾಗಗಳನ್ನು ಮುಟ್ಟುತ್ತಾ ಪಸರಿಸುವುದು. ಫಲಿತಾಂಶವಾಗಿ ಎಲ್ಲಾ ಭಾಗಗಳು ಚೇತನಯುಕ್ತವಾಗುವವು. ಅವು ಒಂದಕ್ಕೊಂದು ನೆರವಾಗಿ ಸಂಪೂರ್ಣ ದೇಹ ರಚನೆಯ ವಿಧಾನಕ್ಕೆ ಸಹಾಯಕವಾಗುವವು. ಯಾವುದೇ ಕಾರಣಕ್ಕೆ ಅದನ್ನು ಗಮನಾರ್ಹವಾದ ಸಾಧನೆ ಎಂದು ಪರಿಗಣಿಸಬೇಕು.

ಈ ಅಭ್ಯಾಸವು ಅಪಚನ, ಹೊಟ್ಟೆಯ ಅಸಮಾನತೆಗಳನ್ನು, ರಕ್ತ ಹೀನತೆ, ಸಂಧಿವಾತ, ತಲೆನೋವು ಮುಂತಾದ ದೀರ್ಘಕಾಲದ ವ್ಯಾಧಿಗಳನ್ನು ದೂರಮಾಡುವುದು.

ನಿಮಗೆ ಯಾವಾಗಲಾದರೂ ದೈಹಿಕವಾಗಿ ನೋವಾದರೆ ನೀವು ಅದೇ ಶವಾಸನದ ಭಂಗಿಯಲ್ಲಿ ಮಲಗಿಕೊಳ್ಳಿ. ನೀವು ಕೃತಿಮದ ಭಾಗದಲ್ಲಿ ಏಕಾಗ್ರತೆ ವಹಿಸಬೇಕು. ಅದಕ್ಕೆ ತೊಂದರೆಯು ಹೋಗಿದೆ ಮತ್ತು ಇನ್ನುಮುಂದೆ ಅಲ್ಲಿ ಯಾವುದೇ ನೋವಿರುವುದಿಲ್ಲವೆಂದು ಆಜ್ಞಾಪಿಸಿ. ಅಭ್ಯಸಿಸುವವನು 10 ರಿಂದ 15 ಕ್ಷಣಗಳಲ್ಲಿ ಅಲ್ಲಿ ನೋವು ಹೋಗಿ ಆ ಬೇನೆಯಿಂದ ಅವನು ಮುಕ್ತನಾಗಿರುವುದನ್ನು ಕಾಣುವನು.

ನೀವು ಈ ಅಭ್ಯಾಸವನ್ನು ನಿಮಗೆ ಬೇಕಾದ ಸ್ಥಳದಲ್ಲಿ ಮಾಡಬಹುದು. ಯಾವುದೇ ಸಂದರ್ಭದಲ್ಲಿ ಅಲ್ಲಿ ಸಂಪೂರ್ಣವಾದ ಶಾಂತಿ ಆವರಿಸಿದೆ ಎಂದು ಖಚಿತಪಡಿಸಿಕೊಳ್ಳಿ. ಯಾವುದೇ ನೊಣ ಅಥವಾ ಸೊಳ್ಳೆಗಳು

ಅಲ್ಲಿ ಹಾರಾಡುತ್ತಿರಬಾರದು, ನೀವು ಸಡಿಲವಾದ ಬಟ್ಟೆಗಳನ್ನು ಹಾಕಿಕೊಂಡಿರಬೇಕು. ಆ ಅಭ್ಯಾಸದ ಸಮಯದಲ್ಲಿ ಸಮತೋಲನವಾದ ಸಸ್ಯಾಹಾರದ ಊಟವನ್ನು ತೆಗೆದುಕೊಳ್ಳಿ. ಅಭ್ಯಾಸದ ಸಮಯದಲ್ಲಿ ಖಾಲಿಹೊಟ್ಟೆ ಇರುವುದು ನಿಮ್ಮ ಮಹತ್ವದ ಕೇಂದ್ರಗಳ ಮೇಲೆ ಹೆಚ್ಚು ಹೊತ್ತು ಏಕಾಗ್ರತೆವಹಿಸಲು ಸಹಾಯ ಮಾಡುತ್ತದೆ.

ನಾನು ದೇಹದ ಮಹತ್ವದ ಕೇಂದ್ರಗಳನ್ನು ಚೇತರಿಸಲು ಲೆಕ್ಕಹಾಕಿರುವ ಪದ್ಧತಿಯನ್ನು ಹೇಳಿದ್ದೇನೆ. ಆದರೂ ಅದು ಅಷ್ಟು ಸುಲಭವಲ್ಲ. ಓರ್ವನು ವಿವಿಧ ತರಹದ ಅಡಚಣೆಗಳನ್ನು ಎದುರಿಸಬೇಕಾಗುವುದು.

i) ಪದೇ ಪದೇ ಪ್ರಯತ್ನಿಸಿದಾಗ್ಯೂ ಮನಸ್ಸು ಏಕಾಗ್ರತೆವಹಿಸಲು ನಿರಾಕರಿಸುವುದು. ಕೆಲವೊಮ್ಮೆ, ಪದೇ, ಪದೇ ಪ್ರಯತ್ನಿಸಿದನಂತರ, ಕೇವಲ ಅರ್ಧಕ್ಷಣದಲ್ಲೇ ಅದು ಏಕಾಗ್ರತೆವಹಿಸುವುದು.

ii) ನಾವು ಏಕಾಗ್ರತೆವಹಿಸಲು ಪ್ರಯತ್ನಿಸಿದ ಹಾಗೆ, ಎಲ್ಲಾ ತರಹದ ನಿಷ್ಪ್ರಯೋಜಕ ಯೋಚನೆಗಳು ನಮ್ಮ ಮನಸ್ಸನ್ನು ಆಕ್ರಮಿಸುವವು.

iii) ದೇಹವನ್ನು ಸಡಿಲಿಸುವ ಪದ್ಧತಿಯು ಕಡಿಮೆ ಕಷ್ಟಕರವೇನೂ ಅಲ್ಲ. ಪದೇ ಪದೇ ನಿಯಮಿತವಾದ ಪ್ರಯತ್ನಗಳ ನಂತರವೂ ಓರ್ವನು ಎಲ್ಲೋ ಯಾವುದೋ ಒಂದು ಮಹತ್ವದ ಕೇಂದ್ರವು ತನ್ನಷ್ಟಕ್ಕೇ ಚೇತರಿಸಿ ಕೊಂಡಿರುವುದನ್ನು ಕಾಣುವನು. ನಾವು ಕೆಲವೊಮ್ಮೆ *ಶವಸಾಧನವನ್ನು* ಅದು ಇರಬೇಕಾಗಿರುವ ರೀತಿಯಲ್ಲಿ ಸಾಧಿಸಲಾಗುವುದಿಲ್ಲ.

iv) ನೀವು ಮನಸ್ಸಿನ ಏಕಾಗ್ರತೆಯನ್ನು ಸಾಧಿಸಿ ಅದನ್ನು ಒಂದು ವಸ್ತುವಿನ ಮೇಲೆ ಸ್ಥಿರವಾಗಿಸಿದರೆ, ಅದು ಬೇರೆ ವಸ್ತುವಿಗೆ ಹಾರಿದುದನ್ನು ನೀವು ಗಮನಿಸುವಿರಿ. ನಾನು ಒಂದೊಂದು ಕೇಂದ್ರಕ್ಕೂ 15 ರಿಂದ 20 ಕ್ಷಣಗಳನ್ನು ಮೀಸಲಿಡಬೇಕೆಂದು ತಿಳಿಸಿದ್ದೇನೆ. ಈ ವಿಧಾನವು ಬಹಳ ಕ್ಲಿಷ್ಟವಾಗಿದ್ದು ಓರ್ವನು ಪದೇ ಪದೇ ಅಭ್ಯಸಿಸಿದ ನಂತರವೇ ಅದು ಸಾಧ್ಯವಾಗುತ್ತದೆ.

(v) ಬಹಳಸಾರಿ ಅಭ್ಯಾಸಕಾರನು ಮಹತ್ವದ ಕೇಂದ್ರಗಳ ಕ್ರಮವನ್ನು ಮರೆಯುತ್ತಾನೆ. ಈ ವಿಫಲತೆಯು ತೊಂದರೆಗಳಿಗೆ ಎಡೆಮಾಡುತ್ತದೆ.

(vi) 26 ಕೇಂದ್ರಗಳ ಮೇಲೆ ಏಕಾಗ್ರತೆಯನ್ನು ವಹಿಸಬೇಕಾಗಿರುವಂತಹ ಈ ಧ್ಯಾನವು ಸಮಯವನ್ನು ತಿನ್ನುತ್ತದೆ. ಅಲ್ಲದೆ ಅಂತರ್ಮನಸ್ಸು ಮತ್ತು ಬಹಿರ್ಮನಸ್ಸು ಎರಡನ್ನೂ ಒಂದೇ ಕೇಂದ್ರದಲ್ಲಿಡುವುದು ಬಹಳ ಕಷ್ಟಕರವು. ಅದು ಕೇವಲ ನಿಯಮಿತವಾದ ಅಭ್ಯಾಸವನ್ನು ಬಹಳ ಸಮಯದವರೆಗೆ ಎಳೆದಾಗ ಮಾತ್ರ ನಾವು ಎರಡೂ ಮನಸ್ಸುಗಳಲ್ಲಿ ಬಹಳ ಹೊತ್ತಿನವರೆಗೆ ಏಕಾಗ್ರತೆಯನ್ನು ತರಬಹುದು. ನಾನು ಈ ಮೊದಲೇ ತಿಳಿಸಿರುವಂತಹ ಕ್ರಮವನ್ನು ಆಚರಿಸಬೇಕು.

(vii) ಕೆಲವೊಮ್ಮೆ ಅಭ್ಯಾಸಕಾರನು ದೇಹವನ್ನು ಸಡಿಲಿಸಿದಾಗ ಮತ್ತು ಎರಡೂ ಮನಸ್ಸುಗಳ ಏಕಾಗ್ರತೆಗೆ ಆ ಮಹತ್ವದ ಕೇಂದ್ರಗಳ ಮೇಲೆ ಒಂದಾದನಂತರ ಇನ್ನೊಂದನ್ನು ತರುತ್ತಾನೆ, ಪ್ರಭಾವಕ್ಕೊಳಕ್ಕಾಗಿ ನಿದ್ರೆ ಹೋಗುವನು. ಬಹಳ ಹೊತ್ತಿನ ನಂತರ ಎಚ್ಚರಗೊಂಡಾಗ ಅವನು ಎಲ್ಲವನ್ನೂ ಮರೆತಿರುತ್ತಾನೆ.

(viii) ನೀವು ಒಂದು ಅನುಕ್ರಮವನ್ನು ಮುಗಿಸಿದಾಗ, ನಿಮ್ಮ ದೇಹವು ಎಷ್ಟೊಂದು ಜಡವಾಗಿರುತ್ತದೆಂದರೆ ನಿಮಗೆ ಕೆಲವು ಪ್ರಯತ್ನಗಳ ನಂತರವೂ ಏಳಲಾಗುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅಭ್ಯಾಸಿಸುವವನು ದೇಹವನ್ನು ಯಥಾಸ್ಥಿತಿಯಲ್ಲಿ ಬಿಟ್ಟು ಅದನ್ನು ಸಾವಕಾಶವಾಗಿ ಚೇತರಿಸಬೇಕು.

ನೀವು ಒಂದು ಅನುಕ್ರಮವನ್ನು ಮುಗಿಸಿದರೆ, ನಿಮಗೆ ಬಹಳ ಹಗುರವೆನಿಸುವುದು, ಒಂದು ವಿಚಿತ್ರವಾದ

ಆಹ್ಲಾದತೆಯು ನಿಮ್ಮನ್ನು ಆವರಿಸುವುದು ಮತ್ತು ನೀವು ಎತ್ತರದ ಅಲೆಗಳಲ್ಲಿ ತೇಲುತ್ತಿರುವ ಹಾಗೆ ಅನ್ನಿಸುವುದು.

ಈ ವಿಧಾನದಲ್ಲಿ ಮನಸ್ಸು ಚಿಂತೆರಹಿತ ಮತ್ತು ಉದ್ರೇಕರಹಿತವಾಗಿ ಬೆಳೆಯುವುದು. ನಿಮ್ಮ ಮೆದುಳಿನಲ್ಲಿರುವ ನಾಡಿಗಳು ಚೇತನಗೊಳ್ಳುವವು. ಫಲಿತಾಂಶವಾಗಿ ನಿಮ್ಮ ಜ್ಞಾಪಕವು ಶಕ್ತಿಯುತವಾಗುವುದು.

ಅಭ್ಯಸಿಸುವಾಗ, ನಿಮಗೆ ನೀವೇ ಆಜ್ಞಾಪಿಸಿಕೊಳ್ಳುವುದೊಳ್ಳೆಯದು: ನಾನು ಏನನ್ನೆಲ್ಲಾ ಮಾಡುತ್ತಿದ್ದೇನೋ ಅದು ನನ್ನ ಸ್ವಂತ ಸಂತೋಷಕ್ಕೋಸ್ಕರ ಅಥವಾ ದೇವರ ಮೇಲಿನ ಭಕ್ತಿಯಿಂದ. ಕಟ್ಟಕಡೆಗೆ ಈ ದೇಹವು ಭಗವಂತನ ಕೊಡುಗೆಯಾಗಿದೆ. ದೇಹದ ಮಹತ್ವದ ಕೇಂದ್ರಗಳನ್ನು ಚೇತರಿಸುವುದರ ಮೂಲಕ ನಾನು ಮನುಷ್ಯನು ದೇವರಲ್ಲಿ ಲೀನವಾಗುವ ವಿಧಾನವನ್ನು ತ್ವರಿತವಾಗಿಸುತ್ತಿದ್ದೇನೆ.

ಅಂತಹ ಉಚ್ಚ ಆಲೋಚನೆಗಳಿಂದ ಸಮೃದ್ಧಿಗೊಂಡ ನೀವು ನಿಮ್ಮ ಅಭ್ಯಾಸದಲ್ಲಿ ಯಶಸ್ವಿಯಾಗುವಿರಿ. ಅದು ನಿಮ್ಮ ಪ್ರಾಣಶಕ್ತಿಯನ್ನು ಹೆಚ್ಚು ಉತ್ತಮವಾದ ಕೆಲಸಕ್ಕೆ ವಿನಯೋಗಿಸುತ್ತದೆ.

ಈಗ ನಾನು ಧ್ಯಾನದ ಬಗ್ಗೆ ಚರ್ಚಿಸಲು ಇಚ್ಛಿಸುತ್ತೇನೆ. ಈ ತರಹದ ಅಭ್ಯಾಸದಲ್ಲಿ ನಾವು ಈಗಾಗಲೇ ಶ್ವಾಸದ ಪ್ರಾಮುಖ್ಯತೆ ಬಗ್ಗೆ ವಿಮರ್ಶಿಸಿದ್ದೇವೆ. ಧ್ಯಾನವು ಕಡಿಮೆ ಪ್ರಾಮುಖ್ಯತೆಯದೇನಲ್ಲ. ನಾವು ಮನಸ್ಸು ನಿರ್ದಿಷ್ಟ ಬಿಂದುವಿನ ಮೇಲೆ ಸ್ಥಾಪಿಸುವಲ್ಲಿ ಯಶಸ್ವಿಯಾದರೆ ಅದು ಸುತ್ತಮುತ್ತಲೆಲ್ಲಾ ಆಳವಾದ ಮತ್ತು ಪಸರಿಸುವಂತಹ ಪರಿಣಾಮವನ್ನು ಬೀರುವ ಸಾಧ್ಯತೆ ಇದೆ. ಅದು ಸುಮಾರು ಇಪ್ಪತ್ತು ರಂಧ್ರಗಳಿರುವ ಒಂದು ಬಿಂದಿಗೆ ಇದ್ದ ಹಾಗೆ. ಈ ಎಲ್ಲಾ ರಂಧ್ರಗಳಿಂದಲೂ ನೀರು ಹೊರಚಿಮ್ಮುವುದು. ಬಿಂದಿಗೆಗೆ ಒಂದೇ ಒಂದು ರಂಧ್ರವಿದ್ದರೆ ನೀರು ಕೇವಲ ಒಂದೇ ಒಂದು ರಂಧ್ರದಿಂದ ಹೊರಹರಿಯುತ್ತಿತ್ತು. ಇಪ್ಪತ್ತು ರಂಧ್ರಗಳಿರುವ ಬಿಂದಿಗೆಯಲ್ಲಿ ಒತ್ತಡವು ಚೂರುಚೂರಾಗುವುದು ಹಾಗೆಯೇ ಇನ್ನೊಂದು ಬಿಂದಿಗೆಯಲ್ಲಿ ಒತ್ತಡವು ಚೂರಾಗುವುದಿಲ್ಲ. ಆದ್ದರಿಂದ ನಂತರದ ವಿಷಯದಲ್ಲಿ ವೇಗದ ಪ್ರಮಾಣವು ಹೆಚ್ಚಾಗುತ್ತದೆ.

ಮನುಷ್ಯನ ಮನಸ್ಸೂ ಸಹ ಸರಿಯಾಗಿ ಆ ಬಿಂದಿಗೆಯ ರೀತಿಯಲ್ಲೇ ಕೆಲಸಮಾಡುತ್ತದೆ. ಇಪ್ಪತ್ತು ಬಯಕೆಗಳು ಅಥವಾ ಆಲೋಚನೆಗಳಿದ್ದರೆ, ಒತ್ತಡವು ತುಂಡಾಗುವುದು. ಇಂತಹ ಸ್ಥಿತಿಯಲ್ಲಿ ನೀವು ಯಾರನ್ನಾದರೂ ಹರಸಿದರೆ ಅಥವಾ ಶಪಿಸಿದರೆ ಪರಿಣಾಮವು ಪೂರ್ಣವ್ಯಾಪ್ತಿಯದಿದ್ದ ಹಾಗೆ ತುಂಡಾದ ಮೂಲದಿಂದಿರುವುದಿಲ್ಲ. ಆದರೆ, ಒಮ್ಮೆ ನಾವು ಸಂಪೂರ್ಣ ಮನಸ್ಸನ್ನು ಒಂದೇ ಯೋಚನೆ ಅಥವಾ ಗುರಿಯಲ್ಲಿ ನೆಲೆಸಿದರೆ, ಆ ಗುರಿಯ ಮೇಲೆ ಅದು ಹೆಚ್ಚಿನ ಪರಿಣಾಮವನ್ನುಂಟುಮಾಡಲೇಬೇಕಾಗುತ್ತದೆ.

ಹಳೆಯ ಕಾಲದಲ್ಲಿ ಋಷಿಗಳು ಈ ಪದ್ಧತಿಯಲ್ಲಿ ಪಾರಂಗತರಾಗಿದ್ದರು. ಅವರ ಎಲ್ಲಾ ಯೋಚನೆಗಳನ್ನು ಅಥವಾ ಪ್ರವೃತ್ತಿಗಳನ್ನು ಒಂದೇ ವಸ್ತುವಿನ ಮೇಲೆ ಏಕಾಗ್ರತೆವಹಿಸುತ್ತಿದ್ದರು. ಆದ್ದರಿಂದ ಅಂತಹ ಹಳೆಯ ಕಾಲದ ವ್ಯಕ್ತಿಗಳಿಂದ ಹೇಳಲ್ಪಟ್ಟದ್ದು ವರವೋ ಅಥವಾ ಶಾಪವೋ ಅವಶ್ಯವಾಗಿ ಒಂದು ವಿಶಾಲವಾದ ಪರಿಣಾಮವನ್ನುಂಟು ಮಾಡಲೇ ಬೇಕಿತ್ತು.

ಧ್ಯಾನವೆಂದರೆ ಒರ್ವನ ಮನಸ್ಸನ್ನು ಸಂಪೂರ್ಣ ಹತೋಟಿಯಲ್ಲಿ ತರುವುದನ್ನು ಬಿಟ್ಟರೆ ಬೇರೇನೂ ಅಲ್ಲ. ನೀವು ಒಂದು ಕ್ಷಣ ನಿಂತು ಪ್ರತಿಬಿಂಬಿಸಲು ಪ್ರಾರಂಭಿಸಿದರೆ ಯೋಚನೆಗಳ ಗುಂಪು ನಿಮ್ಮ ಮನಸ್ಸಿನಲ್ಲಿ ಹೊಯ್ದಾಡುವುದನ್ನು ನಿಲ್ಲಿಸಲು ನಿಮಗೆ ಸಾಧ್ಯವಾಗುತ್ತಿಲ್ಲವೆಂದು ನಿಮಗೆ ಗೊತ್ತಾಗುವುದು. ಬೇರೆ ಪದಗಳಲ್ಲಿ ನಮಗೆ ಕೇವಲ ಒಂದು ನಿಮಿಷ ನಮ್ಮ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಲಾಗದಿದ್ದರೆ, ನಾವು ಬಹಳ ಹೊತ್ತಿನವರೆಗೆ ಮುಂದುವರಿಯುವ ಅಭ್ಯಾಸಗಳಲ್ಲಿ ಹತೋಟಿಯನ್ನು ಪಡೆಯಲು ಹೇಗೆ ಉದ್ದೇಶಿಸಬಹುದು?

ಆದ್ದರಿಂದ, ಅದು, ಉದ್ದವಾದ ಮತ್ತು ಒಂದೇಕೇಂದ್ರ ಅಭ್ಯಾಸವನ್ನು ಒಳಗೊಂಡಿದೆ. ಏಕೆಂದರೆ ಓರ್ವನು ತನ್ನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳದೆ ಏನನ್ನೂ ಸಾಧಿಸಲಾಗುವುದಿಲ್ಲ. ಭಾರತೀಯ ಯೋಗ ಪದ್ಧತಿಯಲ್ಲಿ ಓರ್ವನ ಮನಸ್ಸಿನ ಮೇಲೆ ಹತೋಟಿಯನ್ನು ಸಾಧಿಸಿಕೊಳ್ಳಲು ಹಲವಾರು ಪದ್ಧತಿಗಳನ್ನು ಉಪದೇಶಿಸಲಾಗಿದೆ.

### ತಂತ್ರ ೧

ನಿಮ್ಮಷ್ಟಕ್ಕೆ ನೀವೇ ಒಂದು ಮಂಚದ ಮೇಲೆ ಅಥವಾ ನೆಲದ ಮೇಲೆ ಒಂದು ದಪ್ಪನೆಯ ಮೆತ್ತೆಯ ಮೇಲೆ ಚಾಚಿಕೊಳ್ಳಿ. ನಿಮ್ಮ ಕಣ್ಣುಗಳನ್ನು ಮುಚ್ಚಿ. ನೀವು ನಿಮ್ಮ ಮನಸ್ಸಿನಲ್ಲಿ ಏಕಾಗ್ರತೆಯನ್ನು ತರಲು ಪ್ರಯತ್ನಿಸಬೇಕು. ಯಾವುದೇ ತರಹದ ಅವಸರವಿಲ್ಲ ಮತ್ತು ಯಾವುದೇ ತಾಳ್ಮೆಗೆಡುವುದಿಲ್ಲ. ನೀವು ಸ್ವಲ್ಪ ಸಮಯವನ್ನು ನಿಯೋಜಿಸಿದರೆ ಮಾತ್ರ ನೀವು ಬಯಸಿದಂತಹ ಏಕಾಗ್ರತೆಯನ್ನು ಪಡೆಯಲು ಸಾಧ್ಯ.

ನಿಮ್ಮಲ್ಲಿ ಏಕಾಗ್ರತೆ ಬಂದಾಗ, ನಿಮ್ಮ ಬಲಗೈಯ ತೋರುಬೆರಳನ್ನು ಬಾಗಿಸಿ. ಹೀಗೆ ಮಾಡುವಾಗ ನಿಮ್ಮ ಎಲ್ಲಾ ಅರಿವನ್ನು ಮತ್ತು ಮನಸ್ಸಿನ ಸೂಕ್ಷ್ಮತೆಗಳನ್ನು ಆ ಕೆಲಸದಲ್ಲಿ ಮಗ್ನವಾಗುವಹಾಗೆ ನಿಶ್ಚಯಿಸಿ. ಬೇರೆಯಾವುದೇ ಯೋಚನೆ ನಿಮ್ಮ ಮನಸ್ಸಿನಲ್ಲಿ ಬರಬಾರದು. ತೋರು ಬೆರಳನ್ನು ಬಾಗಿಸುವುದೇ ಒಂದೇ ಕೇಂದ್ರದ ಏಕಾಗ್ರತೆಯು, ಉಳಿದದ್ದೆಲ್ಲವನ್ನೂ ಅಮುಖ್ಯಗೊಳಿಸಿ.

ಈಗ ಮಧ್ಯದ ಬೆರಳನ್ನು ಬಾಗಿಸಲು ಆಯ್ದುಕೊಳ್ಳಿ. ನೀವು ಅದೇ ಏಕಾಗ್ರತೆಯನ್ನು ನಿಶ್ಚಯಿಸಿಕೊಳ್ಳಿ. ಈಗ ಉಳಿದ ಬೆರಳುಗಳನ್ನು ಬಾಗಿಸಲು ಮುಂದುವರಿಯಿರಿ, ಹಾಗೆಯೇ ಅದೇ ಮಾನಸಿಕ ಏಕಾಗ್ರತೆಯನ್ನು ಖಚಿತ ಪಡಿಸಿಕೊಳ್ಳಿ.

ಅದೇ ಪದ್ಧತಿಯನ್ನು ಅನುಸರಿಸಿ ಆ ವ್ಯಾಯಾಮವನ್ನು ಎಡಗೈ ಬೆರಳುಗಳಿಂದ ಪುನಃಮಾಡಿ.

ಈಗ ಬೆರಳುಗಳನ್ನು ನೇರವಾಗಿಸುವ ಕಾರ್ಯವನ್ನು ಅವನ್ನು ಬಾಗಿಸುವ ರೀತಿಯಲ್ಲೇ ತೆಗೆದುಕೊಳ್ಳಿ. ನೀವು ತೋರ ಬೆರಳನ್ನು ನೇರವಾಗಿಸುತ್ತಿರುವಾಗ, ನೀವು ಒಂದೇ ಕೇಂದ್ರದ ಕ್ರಿಯೆಯ ಮೇಲೆ ಸಂಪೂರ್ಣ ಏಕಾಗ್ರತೆಯನ್ನು ಸಾಧಿಸಿರಬೇಕು. ಹಾಗೆಯೇ ಮುಂದಿನ ಮತ್ತು ಇನ್ನೊಂದು ಬೆರಳುಗಳಿಗೆ ಮುನ್ನಡೆಯಿರಿ. ನಿಮಗೆ ಬೇಕಾದಷ್ಟು ಸಮಯವನ್ನು ತೆಗೆದುಕೊಳ್ಳಿ. ಒಂದು ಆಳವಾದ ಮತ್ತು ಒಂದೇ ಕೇಂದ್ರದ ಮಾನಸಿಕ ಏಕಾಗ್ರತೆಯನ್ನು ಪಡೆಯುವುದೇ ನಿಮ್ಮ ಪ್ರಮುಖ ಉದ್ದೇಶವು.

ಯಾವುದೇ ಹಂತದಲ್ಲಿ ತಾಳ್ಮೆಗೆಡಬೇಡಿರಿ. ಪ್ರಾರಂಭದ ಮಾನಸಿಕ ಏಕಾಗ್ರತೆಯನ್ನು ಪಡೆಯಲು ನೀವು ಈ ಅಭ್ಯಾಸವನ್ನು ದಿನಕ್ಕೆ 5 ರಿಂದ 6 ಸಾರಿ ಮಾಡಬಹುದು.

### ತಂತ್ರ ೨

ನಿಮ್ಮ ಬೆನ್ನಿನ ಮೇಲೆ ಹಾಸಿಗೆಯಲ್ಲಿ ಚಾಚಿಕೊಂಡು ಮಲಗಿಕೊಳ್ಳಿ. ಹಾಸಿಗೆಯ ಮೇಲೆ ದಿಂಬಾಗಲೀ ದುಪ್ಪಟಿಯಾಗಲೀ ಇಲ್ಲವೆಂದು ಖಚಿತಪಡಿಸಿಕೊಳ್ಳಿ. ಎರಡೂ ಕಾಲುಗಳನ್ನು ನೇರವಾದ ಭಂಗಿಯಲ್ಲಿ ಚಾಚಿ. ನಿಮ್ಮ ಎಡಗೈಯನ್ನು ನಿಮ್ಮ ದೇಹಕ್ಕೆ ಸಮಾಂತರದಲ್ಲಿಡಿರಿ, ಹಾಗೆಯೇ ಬಲಗಡೆಯದನ್ನು ಎಷ್ಟು ಸಾಧ್ಯವಾಗುತ್ತದೋ ಅಷ್ಟು ಚಾಚಿರಿ.

ಈ ಹಂತದಲ್ಲಿ ನೀವು ನಿಧಾನವಾಗಿ ದೇಹವನ್ನು ಸಡಿಲವಾಗಲು ಬಿಡಿ. ಈಗ ನಿಮ್ಮ ಅಂತರ್ಮನಸ್ಸಿಗೆ, ನಿಮ್ಮ ಸ್ವಂತ ಬಲಗೈ ಮೇಲೆ ಎದ್ದು ನಿಮ್ಮ ಎದೆಯ ಮೇಲೆ ಬರಬೇಕು ಎಂದು ಆಜ್ಞಾಪಿಸಿ. ನೀವು ಯಾವುದೇ ವ್ಯಗ್ರತೆಗೆ ಒಳಪಡಬಾರದು. ನಿಮ್ಮ ಮನಸ್ಸಿಗೆ ಯಾವುದೇ ಆಲೋಚನೆಯೇ ಬರಬಾರದು. ನಿಮ್ಮ ಬಲಗೈಯನ್ನು ನೀವೇ ಎಬ್ಬಿಸಬಾರದು.

ಒಂದು ದಿನ ನಾನು ಧ್ಯಾನಕ್ಕೆ ಕೂತುಕೊಂಡು ಹೆಚ್ಚೆಂದರೆ ಎರಡು ನಿಮಿಷವಾಗಿತ್ತು ಆಗ ಬಾಬಾರವರು ಕೂಡಲೇ ಒಳ್ಳೆಯ ತೊಂದರೆಗೀಡಾದರು. ಅವರಿಗೆ ನನ್ನ ಹೆಂಡತಿ ಮತ್ತು ಮಗನು ರಾಮೇಶ್ವರಕ್ಕೆ ಹೋಗಿದ್ದು ಗೊತ್ತಿತ್ತು. ಅವರು ಮಹಡಿಗೆ ಧಾವಿಸಿ ನನ್ನ ಮಗಳಾದ ಸರೋಜಳನ್ನು ಕೂಗಿದರು. ಅವರು ಹೇಳಿದರುತ ಮಗೂ, ಸೊಸೆಯು (ನನ್ನ ಹೆಂಡತಿಯನ್ನು ಉಲ್ಲೇಖಿಸಿ) ರಾಮೇಶ್ವರಕ್ಕೆ ಹೋಗಿದ್ದಾಳೆ. ಆಕೆ ಬಿಂದಿಗೆಯನ್ನು ಮರೆತುಹೋಗಿದ್ದಾಳೆ ಎಂದು ದಯವಿಟ್ಟು ನೋಡು.

ಸರೋಜಳು ಒಳಗೆ ಹೋಗಿ ತನ್ನ ತಾಯಿಯು ಬಿಂದಿಗೆಯನ್ನು ಲಕ್ಷ್ಯಕೊಡದೇ ಬಿಟ್ಟುಹೋಗಿರುವುದನ್ನು ನೋಡಿದಳು. ಬಿಂದಿಗೆಯು ದೇವರ ಮನೆಯ ಮಾಮೂಲು ಸ್ಥಳದಲ್ಲಿಯೇ ನೆಲೆಸಿತ್ತು. ಬಾಬಾರವರು ಹೇಳಿದರು: ಸರಿ, ನನಗೆ ಬಿಂದಿಗೆಯನ್ನು ಕೊಡು, ಬಡಪಾಯಿ ಸೊಸೆಯು ಈ ಸದ್ಯ ದೇವರ ಮುಂದೆ ಕೂತುಕೊಂಡು ಮರೆತದ್ದಕ್ಕಾಗಿ ಪೇಚಾಡುತ್ತಿರುವಳು.

ಸರೋಜಳು ಬಿಂದಿಗೆಯನ್ನು ಬಾಬಾರವರಿಗೆ ಕೊಟ್ಟಳು. ಅವರು ಅದನ್ನು ತೆಗೆದುಕೊಂಡು ಹೊರನುಗ್ಗಿದರು. ಸರೋಜಳು ಅವರನ್ನು ನಮ್ಮ ಮನೆಯ ಕಾಂಪೌಂಡ್ ಕಡೆ ಹೋಗುವುದನ್ನು ನೋಡಿದ್ದಳು. ಸುಮಾರು 7 ರಿಂದ 8 ನಿಮಿಷಗಳಲ್ಲಿ ಅವರು ಬಿಂದಿಗೆ ಇಲ್ಲದೇ ಹಿಂದಿರುಗಿದರು. ಅವರು ಕೋಣೆಯಲ್ಲಿ ಪುನಃ ಅವರ ಸ್ಥಳದಲ್ಲಿ ಕೂತುಕೊಂಡರು. ಅವರು ಜೋರಾಗಿ ಉಸಿರುಬಿಡುತ್ತಿದ್ದರು. ಅವರು ದೇಹದಲ್ಲೆಲ್ಲಾ ಬೆವರುತ್ತಿದ್ದರು. ಅವರು ಬಹಳ ದೂರದವರೆಗೆ ಓಡಿದ ಹಾಗೆ ಕಾಣುತ್ತಿದ್ದರು. ನಾನು ಕೇಳಿದೆ: ಬಾಬಾ, ವಿಷಯವೇನು? ನೀವು ಯಾಕೆ ಆಯಾಸ ಪಡುತ್ತಿದ್ದೀರಿ? ಅವರು ಹೇಳಿದರು: ನಿಜವಾಗಿಯೂ ವಯಸ್ಸಾದವರಿಗೆ ನಿಮ್ಮಂತಹ ಮಕ್ಕಳಿದ್ದರೆ ಓಡಬೇಕಾಗುತ್ತದೆ.

ಬಾಬಾರವರು ಉಸಿರಾಡುವುದನ್ನು ಮುಂದುವರಿಸಿದರು. ಅವರನ್ನು ಆ ಸ್ಥಿತಿಯಲ್ಲಿ ನೋಡಲು ನನಗೆ ದಿಗಿಲಾಯಿತು. ಅವರು ಮುಂದೆ ಹೇಳಿದರು: ನೀನು ಸೊಸೆಯನ್ನು ಮತ್ತು ಮಗನನ್ನು *ರಾಮೇಶ್ವರಕ್ಕೆ* ಕಳುಹಿಸಿದ್ದೀಯ. ಬಿಂದಿಗೆಯನ್ನು ಹಿಂದೆಯೇ ಬಿಡಲಾಗಿತ್ತು. ಅಲ್ಲಿ ಸೊಸೆಯು ಮರೆತಿದ್ದಕ್ಕಾಗಿ ಬಹಳ ಪಶ್ಚಾತ್ತಾಪದಿಂದ ಪೇಚಾಡುತ್ತಿದ್ದಾಳೆ. ಅದಕ್ಕಾಗಿ ನಾನು ಅದನ್ನು ಅವಳಿಗೆ ಮುಟ್ಟಿಸಬೇಕಾಯಿತು.

ಸಾಯಂಕಾಲ ಸರೋಜಳು ಬಾಬಾರವರು ಬಿಂದಿಗೆಯೊಂದಿಗೆ ಹೊರಗಡೆ ಹೋದುದನ್ನು ತಿಳಿಸಿದಳು. ಅವಳು ಅವರನ್ನು ಕಾಂಪೌಂಡು ಗೋಡೆಯವರೆಗೆ ಹೋಗುವುದನ್ನು ನೋಡಿದ್ದಳು. ಅವರೊಂದಿಗೆ ಆ ಬಿಂದಿಗೆಯೂ ಇರುವುದನ್ನು ಅವಳು ಗುರುತಿಸಿದ್ದಳು. ಅವರು ಸುಮಾರು 10 ನಿಮಿಷಗಳಲ್ಲಿ ತಿರುಗಿ ಬಂದರು. ಅವರು ಬಿಂದಿಗೆಯೊಂದಿಗಿರಲಿಲ್ಲ.

ನಾನು ಪೂರ್ಣ ವಿಧಾನವನ್ನು ನೋಡಿದೆ. ನನ್ನಪ್ರಕ್ಕೆ ನಾನು ಧ್ಯಾನದಲ್ಲಿದ್ದೆ. ಬಾಬಾರವರು ಮಾನಸಿಕವಾಗಿ ಆರಾಮರಾಗಿದ್ದರು. ಆದ್ದರಿಂದ ಅವರು ನನ್ನ ಹೆಂಡತಿ ಮರೆತಿರುವುದನ್ನು *ಲಗಮ್ ಸಾಧನ*ದ ಮೂಲಕ ನೋಡಿದ್ದರು. ವಾಯೂವಿ ವಿದ್ಯೆಯ ಸಹಾಯದಿಂದ, ಅವರು ದೈಹಿಕವಾಗಿ ರಾಮೇಶ್ವರ ಗುಡಿಯವರೆಗೆ ಹೋಗಿ, ಬಿಂದಿಗೆಯನ್ನು ನನ್ನ ಹೆಂಡತಿಗೆ ಕೊಟ್ಟರು.

ಮುಂದಿನವಾರ ನನ್ನ ಹೆಂಡತಿ ಮತ್ತು ಮಗ ಮನೆಗೆ ಹಿಂದಿರುಗಿದಾಗ, ನನ್ನ ಮಗನಿಗೆ ಬಾಬಾರವರನ್ನು ಗುರುತಿಸಲು ಹೆಚ್ಚು ಸಮಯಬೇಕಾಗಲಿಲ್ಲ. ಅವನು ಎಂದನು:ಅಮ್ಮ ನಮಗೆ ಬಿಂದಿಗೆಯನ್ನು ತಂದುಕೊಟ್ಟವರು ಈ ಬಾಬಾರವರೆ.

ನನ್ನ ಹೆಂಡತಿ ಸಂಪೂರ್ಣ ಕಥೆಯನ್ನು ವಿವರಿಸಿದಳು: ನಾನು ರಾಮೇಶ್ವರವನ್ನು ಮುಟ್ಟಿದಾಗ ಬಿಂದಿಗೆಯನ್ನು ಬಿಟ್ಟು ಬಂದಿರುವುದನ್ನು ನೋಡಿಕೊಂಡೆ. ಭಾರದಿಂದ ನಾನು ಗುಡಿಯನ್ನು ತಲುಪಿ ದೇವರ ಮುಂದೆ ಅಳಲು ಪ್ರಾರಂಭಿಸಿದೆ. ನಾನು ಪೇಚಾಡುತ್ತಿದ್ದಾಗ, ನನ್ನನ್ನು ಯಾರೋ ಕರೆಯುವುದನ್ನು ಕೇಳಿಸಿಕೊಂಡೆ.

ನನ್ನ ಮಗನು ಬಾಗಿಲ ಕಡೆ ನುಗ್ಗಿದನು. ಒಬ್ಬ ಬಾಬಾರವರು ಬಿಂದಿಗೆಯೊಂದಿಗೆ ಅಲ್ಲಿ ನಿಂತಿದ್ದರು. ಅವರು ನನ್ನ ಮಗನಿಗೆ ಹೇಳಿದರು: ಇದನ್ನು ತಾಯಿಯವರಿಗೆ ಕೊಡು. ಜೋಧಪುರದಿಂದ ನಾರಾಯಣರವರು ಕಳುಹಿಸಿದ್ದಾರೆಂದು ತಿಳಿಸು. ನನ್ನ ಮಗನು ಆ ಬಿಂದಿಗೆಯನ್ನು ಕೊಟ್ಟಾಗ ನನಗೆ ಹರ್ಷವಾಯಿತು. ನಾನೇ ಬಾಬಾರವರನ್ನು ನೋಡಲು ಹೊರಗೆ ನಡೆದೆ. ಅಷ್ಟರಲ್ಲೇ ಅವರು ಆ ಸ್ಥಳವನ್ನು ಬಿಟ್ಟಿದ್ದರು.

ಬಾಬಾರವರು ಒಂದು ಸರಳ ಮುಗುಳ್ನಗೆಯನ್ನು ಬೀರಿದರು. ನಾನು ನನ್ನ ಹೆಂಡತಿಗೆ ಮತ್ತು ಕುಟುಂಬದ ಇತರ ಸದಸ್ಯರಿಗೂ ಬಾಬಾರವರ ಬಗ್ಗೆ ಹೇಳಿದೆ ನಿರ್ದಿಷ್ಟವಾಗಿ ಅವರು ನನಗೆ ದಟ್ಟವಾದ ಕಾಡಿನಲ್ಲಿ ಮಾನಸಸರೋವರದ ಯಾತ್ರೆಯಲ್ಲಿ ಹೇಗೆ ಜೊತೆಯಾಗಿದ್ದರೆಂದು ತಿಳಿಸಿದೆ.

ಈ ವಾಯಾವಿ ವಿದ್ಯೆ ಎಂದರೇನು? ಅದು ಮೇಲೆ ಹೇಳಿದ ಅಭ್ಯಾಸದ ಸಂಘಟನೆಯ ರೂಪವಲ್ಲದೆ ಬೇರೇನೂ ಅಲ್ಲ. ನಾನು ಹೇಳಲು ಇಚ್ಛಿಸುವುದೇನೆಂದರೆ, ಅಭ್ಯಸಿಸುವವನು ಈ ತರಹದ ಧ್ಯಾನದ ನಿಯಮಿತವಾದ ಅಭ್ಯಾಸವನ್ನು ಮುಂದುವರಿಸಿದರೆ ಇದೇ ತರಹದ ಅದ್ವಿತೀಯವಾದ ಪರಿಣಾಮಗಳನ್ನು ಪಡೆಯಬಹುದು. ಒಂದು ಕೊಟ್ಟಂತಹ ಸ್ಥಳದಲ್ಲಿ ಕೂತುಕೊಂಡು ಅವನು ಹಲವಾರು ದೇಹಗಳನ್ನು ಊಹಿಸಿ ಕೊಳ್ಳಬಹುದು ಹಾಗೂ ಅವನ ಬಹಳ ದೇಹಗಳನ್ನು ಬೇರೆ ಸ್ಥಳಗಳಿಗೆ ಒಂದೇ ಸಮಯದಲ್ಲಿ ತಲುಪುವ ಹಾಗೆ ಮಾಡಬಹುದು.

ಅಲ್ಲಿ ಇತರ ಲಾಭಗಳೂ ಸಹ ಇವೆ. ಅವನು ನಿಯಮಿತವಾದ ಅಭ್ಯಾಸವನ್ನು ಮುಂದುವರಿಸಿದರೆ ಪ್ರಾಕೃತಿಕವಾಗಿ ನಿಜವಾಗಿ ದೈವೀಕವಾಗಿರುವಂತಹ ಆನಂದ ಪರವಶತೆಯನ್ನು ಪಡೆಯುವನು. ಅವನು ದೇವರಲ್ಲಿ ಲೀನವಾದಾಗ ಅವನು ತನ್ನಲ್ಲಿಯೇ ದೇವತ್ವದ ಮೂಲಗಳಲ್ಲಿ ಕೆಲವು ಪಾಲುಗಳನ್ನು ಪಡೆದುಕೊಳ್ಳುವನು. ಏಕೆಂದರೆ ಭಕ್ತನು ಮತ್ತು ಭಗವಂತನು ಒಂದು ಅವಿಭಾಗದ ಪೂರ್ಣತೆಯಲ್ಲಿ ಸಂಪೂರ್ಣವಾದ ಗುರುತನ್ನು ಸ್ಥಾಪಿಸುವರು. ಭಕ್ತನೂ ಸಹ ಭಗವಂತನ ಹಾಗೆ ಒಂದು ವಿಶಿಷ್ಟರೀತಿಯ ಸುವಾಸನೆಯನ್ನು ಬೀರುವನು.

ಮಾನಸಿಕ ಸಮತಲದಲ್ಲಿ ನೀವು ಅವನೊಡನೆ ಒಂದಾಗುವಿರಿ. ನಿಮ್ಮ ದೇಹವು ಅಷ್ಟ ಗಂಧವನ್ನು ಹೊರಸೂಸುವುದು ಅದು ದೈವೀಕ ಸುವಾಸನೆಯಲ್ಲದೆ ಬೇರೇನೂ ಅಲ್ಲ.

ಬಹಳ ಋಷಿಗಳು ಮತ್ತು ಅಸಾಧಾರಣವಾದ ಯೋಗಿಗಳು ಸಹ ಈ ತರಹದ ಸುವಾಸನೆಯನ್ನು ಹೊರಸೂಸುತ್ತಾರೆಂದು ತಿಳಿದು ಓರ್ವರು ಆಶ್ಚರ್ಯ ಪಡಬಾರದು. ಅದೆಲ್ಲವೂ ಈ ರೀತಿಯ ಧ್ಯಾನದ ಪರಿಣಾಮವು.



# ಅಧ್ಯಾಯ 9

# ವಿರಕ್ತದ ಮನಸ್ಸು

ಹಿಂದಿನ ಅಧ್ಯಾಯಗಳಲ್ಲಿ ನಾವು ಮಾಡಿದಂತಹ ಸಮಗ್ರವಾದ ಶೋಧನೆಯಿಂದ ಮನಸ್ಸು ಮನುಷ್ಯನ ದೇಹದಲ್ಲಿ ಮುಖ್ಯವಾದ ಕೇಂದ್ರ ಸ್ಥಾನವನ್ನು ಪಡೆದಿದೆ ಎನ್ನುವುದನ್ನು ಸಂಕೇತಿಸುತ್ತದೆ. ಮನಸ್ಸೆಂಬ ಸಲಕರಣೆಯ ಮೂಲಕ ನಾವು ಅಸಾಧ್ಯವಲ್ಲದಿದ್ದರೂ, ಬಹಳ ಕಷ್ಟಕರವೆಂದು ಕಾಣಿಸುವ ಕೆಲಸಗಳನ್ನು ಮಾಡುತ್ತಿದ್ದೇವೆ.

ಈ ಮೊದಲೇ ಸ್ಥಾಪಿಸಿದಂತೆ, ಬಹಿರ್ಮನಸ್ಸು ನಮ್ಮ ಸಾಮಾನ್ಯ ಜೀವನವನ್ನು ಸಾಗಿಸಲು ಹೊಣೆಯಾಗಿದೆ. ಇನ್ನೊಂದು ಕಡೆ, ಎಲ್ಲಾ ರೀತಿಯಿಂದಲೂ ಬಲವಾದ ಅಂತರ್ಮನಸ್ಸು, ದೈವೀಕ ಪೂರ್ಣತೆ ಕ್ಷೇತ್ರದಲ್ಲಿ ಮನುಷ್ಯನ ಗೆಲುವುಗಳಿಗೆ ಪೂರ್ಣ ಹೊಣೆಯಾಗಿದೆ. ಸಮ್ಮೋಹನದ ಕೆಲಸಕ್ಕಾಗಿ ಅಂತರ್ಮನಸ್ಸು ಮುಖ್ಯವಾದ ಸಲಕರಣೆಯಾಗಿದೆ.

ಮನಸ್ಸು ಯಾವಾಗಲೂ ಚುರುಕಾಗಿ ಮತ್ತು ಸಾಧಾರಣವಾಗಿ ಯಾವತ್ತೂ ವಿಚಾರಗಳ ಅಥವಾ ಯೋಚನೆಗಳ ರಹಿತವಾಗಿರುವುದಿಲ್ಲವೆಂದು ನಾವು ಈಗಾಗಲೇ ಚರ್ಚಿಸಿದ್ದೇವೆ. ಆದರೂ ಸ್ವಲ್ಪ ಪರಿಶ್ರಮದಿಂದ ನಿಯಮಿತವಾದ ಅಭ್ಯಾಸವನ್ನು ಮಾಡಿದರೆ ಖಚಿತವಾಗಿ ನಾವು ಯೋಚನೆರಹಿತ ಮನಸ್ಸನ್ನು ಪಡೆಯಬಹುದು. ಮನಸ್ಸಿನ ಈ ಒಂದು ಅವಸ್ಥೆಯನ್ನು ಸಾಧಿಸಲು ಅದು ಒಂದು ದೊಡ್ಡ ಮಹತ್ಕಾರ್ಯವಾಗುವುದು. ಯೋಚನೆರಹಿತ ಮನಸ್ಸನ್ನು ಪಡೆದುಕೊಳ್ಳುವುದರಿಂದ ನಾವು ಮನಸ್ಸಿಗೆ ಒಂದು ಮಟ್ಟದ ವಿರಾಮವನ್ನು ನಿಶ್ಚಯಿಸಬಹುದು. ಅದೇ ಸಮಯದಲ್ಲಿ ನಾವು ಅದನ್ನು ಒಂದು ಸಲಕರಣೆಯಾಗಿ ನಮ್ಮ ಎಲ್ಲಾ ಮಾನಸಿಕ ಶಕ್ತಿಗಳನ್ನು ಒಂದು ನಿರ್ದಿಷ್ಟ ವಸ್ತುವಿನ ಮೇಲೆ ಏಕಾಗ್ರತೆ ವಹಿಸಲು ಉಪಯೋಗಿಸಬಹುದು. ನಾವು ಮನಸ್ಸಿನ ಎಲ್ಲಾ ಗಮನವನ್ನು ಒಂದು ನಿರ್ದಿಷ್ಟ ಯೋಚನೆಯ ಮೇಲೆ ಕೇಂದ್ರೀಕರಿಸಲು ಸಮರ್ಥರಾದಾಗ ಮನಸ್ಸಿನ ವೇಗವು ಒಂದು ಮೊನಚಾದ ಮೇಲ್ಮುಖವನ್ನು ಪಡೆಯುತ್ತದೆ.

ಸಾಧಾರಣವಾಗಿ ಈ ತರಹದ ಮನಸ್ಸನ್ನು ವಿರಕ್ತದ ಮನಸ್ಸು ಎಂದು ಕರೆಯಲಾಗಿದೆ. ಈ ತರಹದ ಮನಸ್ಸನ್ನು ಹೊಂದಲು ಯೋಗ ಮತ್ತು ಧ್ಯಾನದ ಅಭ್ಯಾಸವನ್ನು ಒಳಗೊಂಡಿದೆ, ವಿಶೇಷವಾಗಿ ಈ ಕೆಳಗಿನ ಪದ್ಧತಿಗಳು ಮತ್ತು ಪ್ರಾಣಾಯಾಮಗಳು.

## ತಂತ್ರ ೧

ಎರಡೂ ಕೈಗಳನ್ನು ಚಾಚಿರಿ. ಎರಡೂ ಕೈಗಳನ್ನು ಚಾಚಿಕೊಂಡು ಸ್ವಲ್ಪಹೊತ್ತು ನಿಲ್ಲಿರಿ. ಎರಡೂ ಅಂಗೈಗಳು ನೆಲಕ್ಕೆ ಮುಖವಾಗಿವೆ ಎಂದು ನಿಶ್ಚಯಿಸಿಕೊಳ್ಳಿ. ಹಾಗೂ ಕೈಗಳು ನೇರವಾಗಿವೆ. ಈಗ ನಿಧಾನವಾಗಿ ಉಸಿರನ್ನು ಒಳಗೆ ತೆಗೆದುಕೊಳ್ಳಿ. ಕೊನೆಯದಾಗಿ ನಿಧಾನವಾಗಿ ಉಸಿರನ್ನು ಹೊರಬಿಡಿರಿ.

## ತಂತ್ರ ೨

ಎರಡೂ ಕೈಗಳನ್ನು ನೇರವಾಗಿ ಚಾಚಿ. ಸ್ವಲ್ಪ ಹೊತ್ತು ಹಾಗೆಯೇ ನಿಂತುಕೊಂಡಿರಿ. ಈಗ ಕೈಗಳನ್ನು ನಿಧಾನವಾಗಿ ತಲೆಯಕಡೆ ತೆಗೆದುಕೊಂಡು ಹೋಗಿ. ಕೈಗಳು ಮೇಲಕ್ಕೆ ಹೋದಾಗ, ನಿಧಾನವಾಗಿ ಉಸಿರಾಡಿ. ಶ್ವಾಸಕೋಶದಲ್ಲಿ ಸಂಗ್ರಹವಾಗಿರುವಂತಹ ಎಲ್ಲಾ ಗಾಳಿಯನ್ನು ನಿಮ್ಮ ಕೈಲಾದಷ್ಟು ಒತ್ತಡದಲ್ಲಿ ಹೊರಹಾಕಿ. ನೀವು ಹೊರಗೆ ಉಸಿರನ್ನು ಬಿಡುತ್ತಿರುವಾಗ ಈ ರೀತಿಯ ಪ್ರಯತ್ನವನ್ನು ಮಾಡಬೇಕೆಂಬುದನ್ನು ಗಮನದಲ್ಲಿಟ್ಟುಕೊಳ್ಳಿ. ಇನ್ನೊಂದು ನೀವು ಪೂರಕ ಮಾಡುವಾಗ ನಿಧಾನವಾಗಿ ಉಸಿರನ್ನು ತೆಗೆದುಕೊಳ್ಳಬೇಕು.

## ತಂತ್ರ ೩

ಮುಂದಕ್ಕೆ ನಿಮ್ಮ ಕೈಗಳನ್ನು ಚಾಚಿ. ಎರಡು ಅಂಗೈಗಳು ಒಂದಕ್ಕೊಂದು ಮುಖಾಮುಖಿಯಾಗಿರಬೇಕು. ಬೆರಳುಗಳು ಬಿಡಿಯಾಗಿರಬೇಕು. ಬೇಗನೇ ಉಸಿರನ್ನು ತೆಗೆದುಕೊಂಡು. ನಿಧಾನವಾಗಿ ಉಸಿರನ್ನು ಬಿಡಿರಿ.

## ತಂತ್ರ ೪

ಎರಡು ಅಂಗೈಗಳನ್ನು ಮುಖಾಮುಖಿಯಾಗಿ ಇಡಿರಿ. ಅವುಗಳನ್ನು ನಿಮ್ಮ ಎದೆಯಕಡೆ ಮುಖವಾಗಿಸಿ, ಬೆರಳುಗಳನ್ನು ತಳಕುಹಾಕಿ (ಒಂದರೊಳಗೊಂದು) ಸಂಪೂರ್ಣವಾಗಿ ಉಸಿರನ್ನು ಬಿಟ್ಟು ಮತ್ತು ಉಸಿರನ್ನು ತೆಗೆದುಕೊಳ್ಳಿ ಮತ್ತು ಅದೇ ವೇಗದಲ್ಲಿ ಉಸಿರನ್ನು ಬಿಡಿರಿ.

## ತಂತ್ರ ೫

ಎರಡೂ ಕೈಗಳ ಬೆರಳುಗಳನ್ನು ತಳಕುಹಾಕಿ, ಎರಡೂ ಕೈಗಳನ್ನು ಮುಗಿಲಕಡೆಗೆ ಎಷ್ಟಾಗುತ್ತದೋ ಅಷ್ಟು ಮೇಲಕ್ಕೆ ಎಸೆಯಿರಿ. ಈಗ ಆಳವಾಗಿ ಉಸಿರಾಡಿ. ನಿಧಾನವಾಗಿ ಮತ್ತು ಸ್ಥಿರವಾಗಿ ಉಸಿರನ್ನು ಹೊರಗೆ ಬಿಡಿರಿ.

ಮೇಲೆ ಹೇಳಿರುವಂತಹ ಐದು ತಂತ್ರಗಳು ಬಹಳ ಸಾಧಾರಣವಾಗಿ ಕಾಣುವವು. ಆದರೆ ಅವಕ್ಕೆ ವಿಶಿಷ್ಟವಾದ ಪ್ರಾಮುಖ್ಯತೆ ಇದೆ. ಅದು ಉಸಿರಾಟವನ್ನು ವ್ಯವಸ್ಥಿತ ಮಾಡುತ್ತದೆ ಮತ್ತು ನಾವು ಉಸಿರಾಟವನ್ನು ವ್ಯವಸ್ಥಿತ ಮಾಡುವಲ್ಲಿ ಯಶಸ್ವಿಯಾಗುತ್ತೇವೆ. ನಿಯಂತ್ರಿತ ಉಸಿರಾಟವು ಮನಸ್ಸಿನಲ್ಲಿ ಯೋಚನೆಗಳನ್ನು ಉದ್ಭವಿಸುವುದನ್ನು ನಿಯಂತ್ರಿಸುತ್ತದೆ ಎಂದು ಹೇಳಬೇಕಾಗಿಲ್ಲ.

•

ಇದಕ್ಕೆ ವಿರುದ್ಧವಾಗಿ ನೀವು ಮಾಡಬೇಕಾಗಿರುವುದೇನೆಂದರೆ ಸುಮ್ಮನೆ ನಿಮ್ಮ ಅಂತರ್ಮನಸ್ಸಿಗೆ ಆಜ್ಞಾಪಿಸಬೇಕು. ಅಂತರ್ಮನಸ್ಸು ನಿಮ್ಮ ಅಪ್ಪಣೆಯನ್ನು ನೀವು ಆಜ್ಞಾಪಿಸಿದ ತಕ್ಷಣ ಅನುಸರಿಸುವುದೋ ಇಲ್ಲವೋ ಅದು ನೀವು ಪಡೆದುಕೊಂಡಿರುವಂತಹ ನಿಮ್ಮ ಮಾನಸಿಕ ಏಕಾಗ್ರತೆಯನ್ನು ಅವಲಂಭಿಸುತ್ತದೆ.

ನಿಮ್ಮ ಕೈ ತನ್ನಷ್ಟಕ್ಕೇ ತಾನು ಎದ್ದು ನಿಮ್ಮ ಎದೆಯ ಮೇಲೆ ವಿಶ್ರಮಿಸಿಕೊಳ್ಳುವುದನ್ನು ನೀವು ಕಾಣುವಿರಿ.

ಈಗ, ಈ ಹಂತದಲ್ಲಿ ಇನ್ನೊಂದು ಪ್ರಯೋಗವನ್ನು ತೆಗೆದುಕೊಳ್ಳಿ. ನಿಮ್ಮ ಅಂತರ್ಮನಸ್ಸಿಗೆ ಚಳಿಯಾಗುತ್ತಿದೆ ಎಂದು ಆಜ್ಞಾಪಿಸಿ. ಕೆಲವೇ ಕ್ಷಣಗಳಲ್ಲಿ ನಿಮಗೆ ಸಂಪೂರ್ಣವಾಗಿ ಚಳಿಯಾಗುವುದು ಮತ್ತು ನೀವು ಹೊದ್ದುಕೊಳ್ಳಲು ಒಂದು ಕಂಬಳಿಯನ್ನು ಹುಡುಕುವಿರಿ.

ಈ ವ್ಯಾಯಾಮವನ್ನು ದಿನಕ್ಕೆ ಎರಡು ಅಥವಾ ಮೂರು ಸಾರಿ ಮಾಡುವುದೊಳ್ಳೆಯದು.

**ತಂತ್ರ ೩**

ಹಾಸಿಗೆಯ ಮೇಲೆ ಚಾಚಿಕೊಂಡು ಮಲಗಿ ಒಂದೇ ಒಂದು ವಾಕ್ಯದ ಮೇಲೆ ಏಕಾಗ್ರತೆ ವಹಿಸಿ. ಉದಾಹರಣೆಗೆ ನೀವು 'ದೇವರು ಒಬ್ಬವನು' ಎನ್ನುವ ವಾಕ್ಯವನ್ನು ತೆಗೆದುಕೊಳ್ಳಬಹುದು. ಈ ವಾಕ್ಯವನ್ನು ಧ್ಯಾನಿಸುತ್ತಿರುವಾಗ ನೀವು ಸಂಪೂರ್ಣ ಏಕಾಗ್ರತೆಯನ್ನು ಅದಕ್ಕೆ ಅನ್ವಯಿಸುತ್ತಿದ್ದೀರಿ ಹಾಗೂ ನೀವು ಯಾವುದೇ ಯೋಚನೆಯನ್ನು ನಿಮ್ಮ ಮನಸ್ಸಿನಲ್ಲಿ ಬರಲು ಬಿಡುತ್ತಿಲ್ಲ ಎನ್ನುವುದನ್ನು ಖಚಿತಪಡಿಸಿಕೊಳ್ಳಿ. ನಿಮ್ಮ ಗಮನಕ್ಕೆ ಯಾವುದೇ ಅಡಚಣೆಗೆ ಅವಕಾಶಕೊಡದೆ ಈ ವಾಕ್ಯವನ್ನು ಧ್ಯಾನಿಸುತ್ತಾ ಹೋಗಿ.

ಯಾವುದೇ ಸಂದರ್ಭದಲ್ಲಿ ಏಕಾಗ್ರತೆಯು ನಿರಂಕುಶವಾಗಿರಬೇಕು. ನೀವು ಅಭ್ಯಸಿಸುತ್ತಿರುವಾಗ ಯಾರಾದರೂ ನಡೆದುಕೊಂಡು ಒಳಗೆ ಬರಬಹುದು. ನಿಮ್ಮ ಏಕಾಗ್ರತೆಗೆ ಅಳತೆಗೋಲೆಂದರೆ ನಿಮಗೆ ಅವರ ಹೆಜ್ಜೆ ಸಪ್ಪಳವು ಕೇಳಿಸಿರಬಾರದು. ಅದು ನಿಮ್ಮ ಏಕಾಗ್ರತೆಯು ಈಗ ನಿರಂಕುಶವಾಗಿದೆ ಎನ್ನುವ ಖಚಿತ ಸಂಕೇತವು.

ನಿಧಾನವಾಗಿ ನೀವು ಅಭ್ಯಾಸವನ್ನು ಹೆಚ್ಚಿಸಬೇಕು. ಅದು ನಿಮ್ಮ ಏಕಾಗ್ರತೆಯನ್ನು ಒಂದೇ ಕೇಂದ್ರದಲ್ಲಿ ಸ್ಥಿರವಾಗಿಸಲು ನಿಮ್ಮ ಸಹಜವಾದ ಮಾನಸಿಕ ಸಾಮರ್ಥ್ಯವನ್ನು ವೃದ್ಧಿಸುತ್ತದೆ.

**ತಂತ್ರ ೪**

ಈ ಅಭ್ಯಾಸವನ್ನು ನೀವು ರಾತ್ರಿ ಮಲಗಲು ತೆರಳಿದಾಗ ಅಭ್ಯಸಿಸಲು ಆಯ್ದುಕೊಳ್ಳಿ. ಆರಾಮವಾಗಿ ಹಾಸಿಗೆಯ ಮೇಲೆ ಮಲಗಿಕೊಂಡು ಕಣ್ಣುಗಳನ್ನು ಮುಚ್ಚಿಕೊಳ್ಳಿ. ಈಗ, ನೀವು ಆದಿನ ಮಾಡಿದುದನ್ನೆಲ್ಲಾ ಸಂಕ್ಷಿಪ್ತವಾಗಿ ಹೇಳಿಕೊಳ್ಳಿ, ಸರಿಯಾಗಿ ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗಿಕೊಳ್ಳುವವರೆಗೂ. ನೀವು ಮಾಡಿದ ಕೆಲಸಗಳನೆಲ್ಲಾ ನೀವು ಮಾಡಿದ ಕ್ರಮದ ರೀತಿಯಲ್ಲೇ ಸಂಕ್ಷಿಪ್ತವಾಗಿ ಹೇಳಿಕೊಳ್ಳಬೇಕು. ಉದಾಹರಣೆಗೆ ನೀವು ಬೆಳಿಗ್ಗೆ ಎದ್ದಿರಿ. ಮೊದಲು ನಿಮ್ಮ ಎಡಗಾಲು ನೆಲವನ್ನು ಮುಟ್ಟಿತೋ ಅಥವಾ ಬಲಗಾಲೋ. ನೀವು ಸ್ನಾನದ ಕೋಣೆಗೆ ಹೋದಿರಿ. ಅಲ್ಲಿ ನೀವು ಮೊದಲು ಏನು ಮಾಡಿದಿರಿ? ನಂತರ ನೀವು ಕಛೇರಿಗೆ ಹೋದಿರಿ. ಕಛೇರಿಯಲ್ಲಿ ನೀವು ಮೊದಲು ಯಾರನ್ನು ನೋಡಿದಿರಿ? ಅವನು ಏನೆಂದು ಹೇಳಿದನು? ನೀವು ಅವನನ್ನು ಹೇಗೆ ಎದುರಿಸಿದಿರಿ? ಬೇರೆ ಇನ್ನಾರು ನಿಮ್ಮನ್ನು ಕಂಡರು? ನೀವು ಊಟದಲ್ಲಿ ಏನನ್ನು ತಿಂದಿರಿ? ಎಂದು ಮತ್ತೆ ಹೇಳಿಕೊಳ್ಳಬೇಕು. ನಿಮ್ಮ ಹೆಂಡತಿ ನಿಮಗೆ ಏನನ್ನು ಹೇಳಿದಳೆಂದು ಅಕ್ಷರಶಃ ಜ್ಞಾಪಿಸಿಕೊಳ್ಳಲು ಪ್ರಯತ್ನಿಸಿ. ನೀವು ನಿಮ್ಮ ಹೆಂಡತಿಗೆ ಏನನ್ನು ಹೇಳಿದಿರಿ ಎನ್ನುವುದನ್ನು ಸಹ ಜ್ಞಾಪಿಸಿಕೊಳ್ಳಲು ಸಹ ಪ್ರಯತ್ನಿಸಿ.

ಬೆಳಿಗ್ಗೆಯಿಂದ ರಾತ್ರಿವರೆಗೆ ದಿನದ ಚಟುವಟಿಕೆಗಳನ್ನೆಲ್ಲಾ ನೀವು ಮಾಡಿದ ಕ್ರಮದಲ್ಲೇ ಪ್ರತಿ ಒಂದನ್ನೂ

ಮತ್ತೆ ಹೇಳಿಕೊಳ್ಳಬೇಕು. ಆ ಕ್ರಮವು ತಪ್ಪಬಾರದು.

ನಿಮ್ಮ ಯಶಸ್ಸಿಯ ಮೊದಲ ಚಿಹ್ನೆ ಎಂದರೆ ನಿಮಗೆ ದಿನದ ಚಟುವಟಿಕೆಗಳನ್ನೆಲ್ಲಾ ಮತ್ತೆ ಹೇಳಲಿಕ್ಕಾಗುವುದು. ಈ ಅಭ್ಯಾಸವನ್ನು ಹೆಚ್ಚಿಸಲು ಪ್ರಯತ್ನಿಸಿ. ಸ್ವಲ್ಪ ದಿನಗಳ ನಂತರ ನಿಮಗೆ ಎಲ್ಲಾ ಚಟುವಟಿಕೆಗಳನ್ನು ಅದೇ ಕ್ರಮದಲ್ಲಿ ಹೆಚ್ಚು ಶ್ರಮವಿಲ್ಲದೆ ಜ್ಞಾಪಿಸಿಕೊಳ್ಳಲಾಗುವುದು.

ಈಗ ನೀವು ಹಿಂದಿನ ದಿನ ಏನೇನೆಲ್ಲಾ ಮಾಡಿದಿರೆಂದು ಮತ್ತೆ ಹೇಳಿಕೊಳ್ಳಲು ಪ್ರಯತ್ನಿಸಬಹುದು. ಎಷ್ಟು ಸಾಧ್ಯವಾಗುತ್ತದೋ ಅಷ್ಟು ಹಿಂದೆ ಹೋಗಿರಿ.

ನಿಜವಾಗಿಯೂ ಈ ಅಭ್ಯಾಸವು ಒಳ್ಳೆ ಪ್ರಯಾಸಕರದ್ದಾಗಿದೆ. ಹೇಗಾದರೂ ಅದು ಮನಸ್ಸಿಗೆ ದೃಢವಾದ ಏಕಾಗ್ರತೆಯನ್ನು ನಿಶ್ಚಯಿಸುತ್ತದೆ. ನೀವು ಅದನ್ನು ಹೆಚ್ಚು ಮಾಡಿದಷ್ಟು ಉತ್ತಮವು.

ತಂತ್ರ ೫

ವಿಶಾಲವಾಗಿ ಈ ತಂತ್ರವು ನಾಲ್ಕನೆಯ ತಂತ್ರಕ್ಕೆ ಪೂರಕವಾಗಿದೆ. ರಾತ್ರಿ ನೀವು ಮಲಗುವುದಕ್ಕೆ ತೆರಳಿದಾಗ ಹಾಸಿಗೆಯ ಮೇಲೆ ಚಾಚಿಕೊಳ್ಳಿ. ಕಣ್ಣುಗಳನ್ನು ಮುಚ್ಚಿ. ನೀವು ಯಾರನ್ನು ಮೊದಲು ನೋಡಿದಿರಿ ಎಂದು ಮತ್ತೆ ಹೇಳಲು ಪ್ರಯತ್ನಿಸಿ. ನೀವು ಹಿಂದಿನ ದಿನ ಮನೆಯಿಂದ ಕಛೇರಿಗೆ ಯಾವಾಗ ತೆರಳಿದಿರಿ. ಯಾರನ್ನು ಮೊದಲು ನೋಡಿದಿರಿ? ಯಾರೊಡನೆ ಮೊದಲು ಮಾತಾಡಿದಿರಿ? ಅವನ ಉಡುಪು ಹೇಗಿತ್ತು? ಅವನು ನಿಮಗೆ ಏನನ್ನು ಹೇಳಿದನು? ನೀವು ಉತ್ತರದಲ್ಲಿ ಏನು ಹೇಳಿದಿರಿ, ಪದ ಪದವನ್ನೂ ಮತ್ತೆ ಹೇಳಲು ಪ್ರಯತ್ನಿಸಿ.

ನೀವು ಮುಂದೆ ಹೊರಟಾಗ, ನೀವು ಒಂದು ಕಾರನ್ನು ಕಂಡಿರಿ. ಅದರ ನಂಬರು ಏನಿತ್ತು? ಅದರಲ್ಲಿ ಎಷ್ಟು ಜನ ಕೂತುಕೊಂಡಿದ್ದರು? ನೀವು ಇನ್ನೂ ಮುಂದೆ ಹೋದಾಗ ಎಡಗಡೆಯ ಬಹಳ ಕಟ್ಟಡಗಳನ್ನು ನೋಡಿದಿರಿ. ಅವು ಯಾವ ತರಹದ ಕಟ್ಟಡಗಳಾಗಿದ್ದವು? ನೀವು ಯಾವುದಾದರೂ ನಿರ್ದಿಷ್ಟ ವಸ್ತುವನ್ನು ಬಲಗಡೆ ನೋಡಿದಿರಾ? ಅಲ್ಲಿ ನಿರ್ದಿಷ್ಟ ವ್ಯಕ್ತಿಯೊಬ್ಬನು ನಿಂತುಕೊಂಡಿದ್ದನೆ?

ಅದೇ ಕ್ರಮದಲ್ಲಿ ಮತ್ತೆ ಹೇಳಲು ಪ್ರಯತ್ನಿಸಿ. ಈ ಅಭ್ಯಾಸವು ಮೊದಲನೆಯದಕ್ಕಿಂತ ಸ್ವಲ್ಪಮಟ್ಟಿಗೆ ಕಷ್ಟಕರವು. ಆದರೆ ನೀವು ಸ್ವಲ್ಪ ಪರಿಶ್ರಮತೆಯಿಂದ ನಿಮ್ಮಷ್ಟಕ್ಕೆ ನೀವೇ ನಿವೇದಿಸಿಕೊಳ್ಳಬೇಕು. ನೀವು ಯಶಸ್ವಿಯಾಗುವಿರಿ.

ಓರ್ವನ ಜೀವನದಲ್ಲಿ ಅದಕ್ಕೆ ಅಪರೂಪದ ಮಹತ್ವವಿದೆ. ಉದಾಹರಣೆಗೆ ನಿಮಗೆ ಕೊಟ್ಟಂತಹ ಪುಸ್ತಕದ ಪುಟದಲ್ಲಿ ನೀವು ಒಂದು ನೋಟವನ್ನು ಬೀರುವಿರಿ. ನೀವು ಅದರ ಅನುಕ್ರಮಣಿಕೆಯನ್ನು ಮತ್ತೆ ಓದದೆ ಜ್ಞಾಪಕದಲ್ಲಿಟ್ಟುಕೊಳ್ಳುವಿರಿ. ನಿಮಗೆ ಒಬ್ಬರು ಒಂದು ಸಂಖ್ಯೆಯನ್ನು ಹೇಳಬಹುದು. ಅದರಲ್ಲಿ ಎಷ್ಟಾದರೂ ಅಂಕಿಗಳಿರಬಹುದು. ಆದರೂ ನೀವು ಅದನ್ನು ಜ್ಞಾಪಕದಲ್ಲಿಟ್ಟುಕೊಳ್ಳುವಿರಿ.

ಈ ಪದ್ಧತಿಯು ನಿಮಗೆ ನಿರಂಕುಶವಾದ ಏಕಾಗ್ರತೆಯನ್ನು ಕೊಡುತ್ತದೆ. ಅದರಲ್ಲಿ ಅದರದೇ ಆದ ಆಹ್ಲಾದತೆಯೂ ಸಹ ಇದೆ. ಯಾವಾಗ, ನೀವು ಮೊದಲ ಸಾರಿಗೆ ಮನೆಯಿಂದ ಕಛೇರಿಗೆ ಹೊರಡುವಿರೋ, ನಿಮ್ಮ ಬಹಿರ್ಮನಸ್ಸು ಎಲ್ಲೋ ಸುತ್ತಾಡುತ್ತಲಿತ್ತು. ನಿಜ, ನಿಮ್ಮ ಕಾಲುಗಳು ನಿಮ್ಮನ್ನು ಹೊತ್ತುಕೊಂಡು ಹೋದವು, ಆದರೆ ನಿಮ್ಮ ಮನಸ್ಸು ನಿಮ್ಮನ್ನು ದಾರಿಯಲ್ಲಿ ಹಾದುಹೋದಂತಹ ಮನುಷ್ಯರನ್ನು ಗಮನಿಸಲಿಲ್ಲ. ನೀವು ಅವರನ್ನು ನೋಡಿದರೂ ಸಹ ಅವರ ಆಕಾರವನ್ನು ಸಹ ನೆನಪಿಡಲಿಲ್ಲ, ಏಕೆಂದರೆ ಮನಸ್ಸು ಎಲ್ಲೋ ಹೊಯ್ದಾಡುತ್ತಲಿತ್ತು.

ಈಗ ನಿಮ್ಮ ಮನಸ್ಸು ಎಚ್ಚೆತ್ತುಕೊಂಡು ಜಾಗರೂಕವಾಗಿರುತ್ತದೆ. ಅದು ಲಕ್ಷ್ಯವಹಿಸಿ ಎಲ್ಲಾ ವ್ಯಕ್ತಿಗಳನ್ನೂ ಗಣನೆಗೆ ತೆಗೆದುಕೊಂಡು ಎಲ್ಲಾ ಆಕಾರಗಳನ್ನೂ ಉಳಿಸುಕೊಳ್ಳಲು ಪ್ರಯತ್ನಿಸುತ್ತದೆ.

**ತಂತ್ರ ೬**

ಈ ತಂತ್ರವು ಅದರ ಕ್ಲಿಷ್ಟತೆಯಲ್ಲಿ ಬೇರೆಲ್ಲವನ್ನೂ ಮೀರಿಸುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ. ಹೇಗಾದರೂ ನಿಯಮಿತವಾದ ಅಭ್ಯಾಸವು ಎಲ್ಲಾ ಯಶಸ್ಸಿಯನ್ನು ಕೊಡುತ್ತದೆ.

ಈ ಪದ್ಧತಿಯನ್ನು ಮಾನಸಿಕಪೂಜೆ ಎಂದು ಕರೆಯಲಾಗಿದೆ. ಅಭ್ಯಸಿಸುವವನು ಸ್ನಾನವನ್ನೂ ಸೇರಿ ತನ್ನ ಮುಂಜಾನೆಯ ಎಲ್ಲಾ ಕೆಲಸಗಳನ್ನು ಮುಗಿಸಿದ ನಂತರ ತನ್ನ ಆಸನದ ಮೇಲೆ ಕೂತುಕೊಳ್ಳಬೇಕು. ಅವನು ನಿಧಾನವಾಗಿ ಕಣ್ಣುಮುಚ್ಚಿದ ಹಾಗೆ ವಿಚಾರರಹಿತ ಮನಸ್ಸನ್ನು ಪಡೆಯಲು ಪ್ರಯತ್ನಿಸಬೇಕು.

ಈಗ ನಿಮ್ಮ ಮುಂದೆ ನೀವು ಪೂಜೆ ಮಾಡುವಂತಹ ದೇವರ ಆಕಾರವನ್ನು ತಂದುಕೊಳ್ಳಿ. ಆಕಾರವನ್ನು ನಿಮ್ಮ ಮುಂದೆ ದೃಷ್ಟಿಪತಕ್ಕೆ ಬರುವ ಹಾಗೆ ತಂದುಕೊಳ್ಳಿ. ಅದು ನಿಮ್ಮ ಮುಂದೆ ಸ್ಫುಟವಾದ ಆಕಾರದಲ್ಲಿ ನಿಂತುಕೊಂಡ ಹಾಗೆ ಕಾಣಿಸಬೇಕು. ಬೇರೆ ಯಾವ ವಿಚಾರ ಅಥವಾ ಯಾವುದೇ ರೀತಿಯ ಅಡಚಣೆ ನಿಮ್ಮ ಮನಸ್ಸನ್ನು ಪ್ರವೇಶಿಸಲು ಅವಕಾಶ ಕೊಡಬಾರದು. ನನ್ನ ಸ್ವಂತ ವಿಷಯದಲ್ಲಿ ಸಾಧಾರಣವಾಗಿ ನೋಡುವಂತಹ ವಾಸ್ತವ ರೂಪದ ಜೀವಂತ ದೇಹಧಾರಣೆಯ ಆಕಾರವನ್ನು ನೋಡುತ್ತೇನೆ. ಅದಕ್ಕೆ ಸ್ನಾನ ಮಾಡಿಸುತ್ತೇನೆ. ಅದನ್ನು ಮೆತ್ತನೆಯ ರೇಷ್ಮೆ ಬಟ್ಟೆಯಲ್ಲಿ ಒರಸುತ್ತೇನೆ. ವರ್ಣರಂಜಿತ ಉಡುಪನ್ನು ಅದಕ್ಕೆ ತೊಡಿಸುತ್ತೇನೆ. ಶುದ್ಧವಾದ ವಸ್ತುಗಳಿಂದ ಅದನ್ನು ಶೃಂಗರಿಸುತ್ತೇನೆ. ಅದರ ಪಾದಗಳಲ್ಲಿ ಬಣ್ಣಬಣ್ಣದ ಹೂವುಗಳನ್ನು ಹಾಕುತ್ತೇನೆ. ಆ ಆಕಾರದ ಮುಂದೆ ದೀಪ ಹಚ್ಚುತ್ತೇನೆ. ನಾವು ಸಾಧಾರಣವಾಗಿ ಪೂಜೆಯ ಒಂದು ಭಾಗದಲ್ಲಿ ಮಾಡುವಹಾಗೆ ಹೂವನ್ನೂ ಹಣ್ಣುಗಳನ್ನೂ ಅದರ ಮುಂದ ಇಡುತ್ತೇನೆ.

ಈ ಎಲ್ಲಾ ಕೆಲಸಗಳನ್ನೂ ನಾನು ನನ್ನ ಆಸನದ ಮೇಲೆ ಕೂತುಕೊಂಡಾಗ ಮಾಡುತ್ತೇನೆ. ಈ ಸಂಪೂರ್ಣ ಕೆಲಸ ಜಾಸ್ತಿ ಅಲ್ಲದಿದ್ದರೂ ಅರ್ಧಗಂಟೆ ತೆಗೆದುಕೊಳ್ಳುತ್ತದೆ. ಈ ತರಹದ ಪೂಜಾಯುಕ್ತ ಕೆಲಸವನ್ನು ಮಾಡುವಾಗ ನನಗೆ ಒಂದು ನಿರ್ದಿಷ್ಟರೀತಿಯ ಆಹ್ಲಾದತೆಯು ದೊರೆಯುತ್ತದೆ.

ಆ ಸಮಯದಲ್ಲಿ ನನ್ನ ಮನಸ್ಸಿಗೆ ಏನೂ ಬರುವುದಿಲ್ಲ. ವಸ್ತುವು ನನ್ನ ಮುಂದಿದೆ. ನಾನು ವಸ್ತುವನ್ನು ಮಾತ್ರ ನೋಡುತ್ತೇನೆ. ನಾನು ವಿಧವಿಧವಾದ ಪೂಜೆಯ ಸಾಮಾನುಗಳನ್ನು ಸಹ ನೋಡುತ್ತೇನೆ. ನಾನು ದೇವಸ್ಥಾನದಲ್ಲಿ ನನ್ನ ದೇವರಿಗೆ ನಿವೇದಿಸಲ್ಪಟ್ಟಂತಹ ದೃಷ್ಯವನ್ನೇ ನೋಡುತ್ತೇನೆ. ನಾನು ಪೂಜೆಯಲ್ಲಿ ಒಂದು ನಿರ್ದಿಷ್ಟವಾದ ಮಂತ್ರವನ್ನೇ ಜಪಿಸುತ್ತೇನೆ. ನನ್ನ *ಮಂತ್ರವು*: ಓಂ ಗಂ ಗಣಪತಯೇ ನಮಃ ಆಗಿದೆ.

ಅಭ್ಯಾಸಕಾರನು ಇದರ ಮೂಲಕ ಒಂದು ಅಪರೂಪವಾದ ಸಾಮರ್ಥ್ಯವನ್ನು ಸಾಧಿಸಿಕೊಳ್ಳಲಿ ಎಂದು ತಿಳಿಸಲು ನಾನು ಈ ಪೂಜೆಯ ಪರಿಸ್ಫುಟವಾದ ವಿವರವನ್ನು ಕೊಟ್ಟಿದ್ದೇನೆ.

ನೀವು ಈ ಸಾಲುಗಳನ್ನು ಓದಿದಾಗ ಈ ಅಭ್ಯಾಸವು ಹೇಳಿರುವಷ್ಟು ಕಷ್ಟಕರವಲ್ಲವೆಂದು ಊಹಿಸಿಕೊಳ್ಳಬಹುದು. ಅದು ನಿಜವಾಗಿಯೂ ಬಹುಕಷ್ಟದ್ದು. ಅದಕ್ಕೆ ಬಹಳ ದಿನಗಳ ನಿಯಮಿತವಾದ ಅಭ್ಯಾಸ ಬೇಕಾಗಿರುತ್ತದೆ. ಈ ಧ್ಯಾನವು ಹೆಚ್ಚಿನ ಮಟ್ಟದ್ದು. ಅದರಲ್ಲಿ ಆಳವಾದ ಲಾಭಗಳಿವೆ. ಆ ವಸ್ತುಗಳು ನಮಗೆ ಭೌತಿಕ ಲಾಭಗಳನ್ನೊಂದೇ ಕೊಡುವುದಿಲ್ಲ. ನಿಮ್ಮ ದೇವರಿಗೆ ನೀವು ಅರ್ಪಿಸುವಂತಹ ದೀಪವು ನಿಮ್ಮಲ್ಲಿಯೇ ಮತ್ತು ಹೊರಗೆ ಕೂತುಕೊಂಡಿರಬಹುದಾದಂತಹ ಜನಗಳಲ್ಲಿಯೂ ಸಹ ಒಂದು ಅಂತರ್ಬೆಳಕನ್ನು ಹರಡಿಸುತ್ತದೆ. ಆ ಹೂವುಗಳು, ದ್ರವ್ಯಗಳು ಮತ್ತು ಪೂಜೆಯ ಎಲ್ಲಾ ವಸ್ತುಗಳು

ಹೊರಗಿನ ಮತ್ತು ಒಳಗಿನ ಜನಗಳಲ್ಲಿ ಹರಡುವಂತಹ ಆಧ್ಯಾತ್ಮಿಕ ಸುವಾಸನೆಯನ್ನು ಹೊರಗೆ ಕಳಿಸುತ್ತವೆ.

ಅದು ಒಂದು ನಿರ್ದಿಷ್ಟ ರೀತಿಯ ತೃಪ್ತಿಯನ್ನು ಕೊಡುತ್ತದೆ. ನಾನು ನನ್ನ ದೇವರಿಗೆ ಊಟವನ್ನು ನಿವೇದಿಸಿದಾಗ, ನಾನು ಒಂದು ರೀತಿಯ ಆಹ್ಲಾದತೆಯನ್ನು ಪಡೆಯುತ್ತೇನೆ.

ತದನಂತರದಲ್ಲಿ ನಾನು ನನ್ನ ಏಕಾಗ್ರತೆಯನ್ನು ಸಂಪೂರ್ಣವಾಗಿ ಆ ಆಕಾರದ ಮೇಲೆ ತಂದಾಗ. ಆ ಆಕಾರವನ್ನು ನಾನು ನೋಡುವುದೇ ಇಲ್ಲ. ನಾನು ಆ ದೇವರನ್ನೇ ಎಲ್ಲಾ ರೀತಿಯ ಘನತೆ ಮತ್ತು ಭವ್ಯತೆಯಲ್ಲಿ ನೋಡುತ್ತೇನೆ. ನಾನು ಅವನ ಧ್ಯಾನದ ಕಣ್ಣುಗಳನ್ನೂ ಮತ್ತು ಮುಗುಳ್ನಗೆಯ ತುಟಿಗಳನ್ನೂ ನೋಡುತ್ತೇನೆ. ಅದೊಂದು ಅಪರೂಪದ ದೃಶ್ಯವು, ಭಗವಂತನ ಮತ್ತು ಭಕ್ತನ ಅಂತರವು ಕಿರಿಯದಾಗಿರುತ್ತದೆ. ಒಂದು ವಿಧದಲ್ಲಿ ಭಕ್ತನು ತನ್ನಷ್ಟಕ್ಕೆ ತಾನೇ ಭಗವಂತನಲ್ಲಿ ಸಂಪೂರ್ಣವಾಗಿ ಲೀನವಾಗಿರುವುದನ್ನು ಕಾಣುವನು.

ಈ ಧ್ಯಾನದಲ್ಲಿ ಇದು ಕೊನೆಯ ಹಂತವು. ನೀವು ಇನ್ನೂ ಹೆಚ್ಚಿನ ಹಂತವನ್ನು ತಲುಪಬಹುದು. ನೀವು ಸಾಧಿಸಿಕೊಂಡ ಸಂಪೂರ್ಣ ಅಧೀನತೆಯಲ್ಲಿ ನೀವು ನಿಮ್ಮದೇ ಒಂದಕ್ಕಿಂಥ ಹೆಚ್ಚಿನ ದೇಹವನ್ನು ಪಡೆದುಕೊಳ್ಳಬಹುದು—ಎರಡು ಅಥವಾ ಮೂರು ಎನ್ನಿರಿ. ನಿಮಗೆ ನೀವೇ ದೇವರ ಸಂಪೂರ್ಣ ದೃಷ್ಯವನ್ನು ನಿಮಗೆ ಒದಗಿರುವಂತಹ ಒಂದೇ ದೇಹದ ಎರಡು ಕಣ್ಣುಗಳಿಂದ ನೋಡಲಾಗುವುದಿಲ್ಲವೆಂದು ಆಜ್ಞಾಪಿಸಿಕೊಳ್ಳಿ. ಆದ್ದರಿಂದ ನಿಮಗೆ ನೀವೇ ಎರಡು ಅಥವಾ ಮೂರು ದೇಹಗಳಲ್ಲಿ ಪುನಃ ಸುವ್ಯವಸ್ಥಿತ ಗೊಳಿಸಿಕೊಳ್ಳುವ ಅವಶ್ಯಕತೆ ಇದೆ. ನಿಮ್ಮ ಸ್ಥಳದಲ್ಲಿ ಎರಡು ಮೂರು ದೇಹಗಳು ಆಗಿರುವುದನ್ನು ನೋಡಲು ಮತ್ತು ಪ್ರತಿದೇಹವೂ ದೇವರ ಪೂಜಾಯುತ ದೃಷ್ಯವನ್ನು ಪಡೆಯಲು ಪ್ರಯತ್ನಿಸುತ್ತಿರುವುದನ್ನು ನೋಡಿ ನಿಮಗೆ ಆಶ್ಚರ್ಯವಾಗುವುದು.

ಈ ಧ್ಯಾನವು ನಿಮಗೆ ಬಹಳ ದೇಹಗಳನ್ನು ಊಹಿಸಿಕೊಳ್ಳುವ ಶಕ್ತಿಯನ್ನು ಕೊಡುವುದು. ಒಂದು ಕೊಟ್ಟಂತಹ ಸ್ಥಳದಲ್ಲಿ ನೀವು ಕೂತುಕೊಂಡು ನಿಮ್ಮ ಇನ್ನೊಂದು ದೇಹವನ್ನು ದೂರದ ಸ್ಥಳಕ್ಕೆ ಯಾರನನ್ನಾದರೂ ನೋಡಿ ಮಾತಾಡಿಸಲು ಕಳುಹಿಸಬಹುದು. ನಿಮ್ಮ ಒಂದು ದೇಹವು ಏನೇನೆಲ್ಲಾ ಮಾಡಲು ಸಮರ್ಥವಾಗಿರುವುದೋ ಅದನ್ನೆಲ್ಲಾ ಆ ದೇಹವು ಮಾಡುವುದು.

ನನ್ನ ಸ್ವಂತ ಜೀವನದ ನಿದರ್ಶನವನ್ನು ನಿಮ್ಮಲ್ಲಿ ನಿವೇದಿಸುತ್ತಾ ನಾನು ಈ ಅಂಶವನ್ನು ವಿಮರ್ಶಿಸುತ್ತೇನೆ. ಧರ್ಮಗ್ರಂಥಗಳಲ್ಲಿ ಓರ್ವನು ಗಂಗೋತ್ರಿಯ ನೀರನ್ನು ರಾಮೇಶ್ವರದಲ್ಲಿರುವ ಶಿವನ ದೇವಸ್ಥಾನದಲ್ಲಿ ಅರ್ಪಿಸಿದರೆ ಅಗಾಧವಾದ ಲಾಭಗಳು ದೊರೆಯುತ್ತವೆ ಎಂದು ಹೇಳಲಾಗಿದೆ. ಹೋದ ವರ್ಷ ನಾನು ಗಂಗೋತ್ರಿಗೆ ನನ್ನ ಹೆಂಡತಿ ಮತ್ತು ನನ್ನ ಕುಟುಂಬದ ಇತರ ಸದಸ್ಯರೊಡನೆ ಹೋಗಿದ್ದೆ. ನಾನು ಒಂದು ಬಿಂದಿಗೆಯ ತುಂಬ ಪವಿತ್ರವಾದ ಗಂಗಾ ಜಲವನ್ನು ರಾಮೇಶ್ವರದಲ್ಲಿರುವ ಶಿವನಿಗೆ ಅರ್ಪಿಸಲು ತಂದೆ.

ನಾನಾ ವಿಧದ ಕೆಲಸಗಳಲ್ಲಿ ನಾನು ಕಾರ್ಯನಿರತನಾಗಿದ್ದರಿಂದ ನನಗೆ ಈ ವರ್ಷ ರಾಮೇಶ್ವರಕ್ಕೆ ಹೋಗಲಾಗಲಿಲ್ಲ. ಆದ್ದರಿಂದ ನನ್ನ ಹೆಂಡತಿ ಮತ್ತು ಮಗನನ್ನು ರಾಮೇಶ್ವರಕ್ಕೆ ಶಿವನಿಗೆ ಗಂಗೋತ್ರಿಯ ಪವಿತ್ರ ಜಲವನ್ನು ಅರ್ಪಿಸಲು ಕಳುಹಿಸಿದೆ.

ಖಚಿತವಾಗಿ, ಅದೇ ಸಮಯದಲ್ಲಿ ಹರಿ ಓಂ ಬಾಬಾ ಎನ್ನುವ ಅತಿಥಿಗಳು ನನ್ನಲ್ಲಿದ್ದರು. ಕೆಳಗಿನ ಒಂದು ಕೋಣೆಯಲ್ಲಿ ನಾನು ಧ್ಯಾನಿಸುತ್ತಿದ್ದೆ. ಹತ್ತಿರದಲ್ಲಿಯೇ ಬಾಬಾರವರು ಸಹ ಒಂದು ಆಸನದಲ್ಲಿ ಕೂತುಕೊಂಡಿದ್ದರು. ನನ್ನ ಕುಟುಂಬದ ಇತರೆ ಸದಸ್ಯರೆಂದರೆ ನನ್ನ ಮಗಳು, ನನ್ನ ಸಣ್ಣಮಗ ಮತ್ತು ನನ್ನ ಸೊಸೆ.

**ಹೆಚ್ಚಿನ ಅಭ್ಯಾಸಗಳು.**

ಯಾರನ್ನಾದರೂ ಒಂದು ಕೋಣೆಯಲ್ಲಿ ಕುರ್ಚಿಯ ಮೇಲೆ ಕುಳ್ಳಿರಿಸಿ. ಹಾಗೆಯೇ ನೀವು ಅವನ ಮುಂದೆಯೇ ನಿಂತುಕೊಂಡಿರಿ. ಯಾವುದೇ ಸಂದರ್ಭದಲ್ಲಿ ಅವನು ನಿಮ್ಮ ವ್ಯಕ್ತಿತ್ವದ ಪರಿಣಾಮಕ್ಕೆ ಒಳಗಾಗಿರುವನೆಂದು ಖಚಿತಪಡಿಸಿಕೊಳ್ಳಬೇಕು. ಅಲ್ಲದೆ, ಅವನಿಗೆ ನಿಮ್ಮ ಸಾಮರ್ಥ್ಯಗಳ ಮೇಲೆ ಆಳವಾದ ನಂಬಿಕೆ ಇರಬೇಕು.

ಅವನಿಗೆ ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳಲು ಹೇಳಿ. ಈಗ ನಿಮ್ಮ ಎಲ್ಲಾ ಇಚ್ಛಾಶಕ್ತಿ ಅಥವಾ ಮನೋಬಲವನ್ನು ಬಲಮಾಡಿಕೊಂಡು ಅವನಿಗೆ ತನ್ನ ಕಣ್ಣುಗಳು ಮುಚ್ಚಿವೆ ಏನೇಯಾದರೂ ಅವನು ಎಷ್ಟೇ ಪ್ರಯತ್ನಿಸಿದರೂ ಅವನಿಗೆ ತೆರೆಯಲಾಗುವುದಿಲ್ಲವೆಂದು ಆಜ್ಞಾಪಿಸಿ. ನೀವು ಆಜ್ಞೆಯನ್ನು ಕೊಟ್ಟಾಗ ಅವನು ಕಣ್ಣುಗಳನ್ನು ತೆರೆಯಲು ಪ್ರಯತ್ನಿಸುವನು. ಅವನು ವಿಫಲನಾಗುವನು. ಅವನಿಂದ ಕಣ್ಣುಗುಡ್ಡೆಗಳನ್ನೂ ಚಲಿಸಲಾಗುವುದಿಲ್ಲ. ಕಾರಣವು ಸ್ಪಷ್ಟವಾಗಿದೆ. ಏಕೆಂದರೆ ನಿಮ್ಮ ಅಂತರ್ಮನಸ್ಸು ಅವನ ಅಂತರ್ಮನಸ್ಸಿಗೆ ಅವನು ತನ್ನ ಕಣ್ಣುಗಳನ್ನು ಮುಚ್ಚಿದ್ದಾನೆಂದು ಆಜ್ಞೆಯನ್ನು ನೆಟ್ಟಿದೆ. ಅವನು ಎಷ್ಟೇ ಪ್ರಯತ್ನಿಸಿದರೂ ಹೇಗೇಯಾದರೂ ಕಣ್ಣುಗಳನ್ನು ತೆರೆಯಲಾಗುವುದಿಲ್ಲ.

ನೀವು ಇಂತಹ ಪ್ರಯೋಗಗಳಲ್ಲಿ ಯಶಸ್ವಿಯಾಗದಿದ್ದರೆ ಅದಕ್ಕೆ ಕಾರಣವು ನಿಮ್ಮಲ್ಲಿರುವ ಮನೋಬಲದ ಅಭಾವಕ್ಕೇ ಮೀಸಲಾಗಿಡಬೇಕು.

ನಿಮ್ಮ ಯಶಸ್ವಿಯು ನೀವು ಅಂತರ್ಮನಸ್ಸನ್ನು ವಿಚಾರಮುಕ್ತ ಮಾಡುವುದರಲ್ಲಿ ನಿಮ್ಮ ಸಾಮರ್ಥ್ಯಕ್ಕೆ ಅಲ್ಲದೆ ನೀವು ನಿಮ್ಮ ಶಕ್ತಿಯುತವಾದ ಇಚ್ಛಾಶಕ್ತಿಯನ್ನು ಒಂದುಗೂಡಿಸುವ ಸಾಮರ್ಥ್ಯಕ್ಕೂ ಸಮಪ್ರಮಾಣದಲ್ಲಿರುತ್ತದೆ.

ಇಂತಹ ಪ್ರಾರಂಭಿಕ ಪ್ರಯೋಗಗಳಲ್ಲಿ ನೀವು ಯಶಸ್ವಿಯಾದ ನಂತರ ನೀವು ಒಬ್ಬ ವ್ಯಕ್ತಿಯನ್ನು ಸಮ್ಮೋಹನಗೊಳಿಸಲು ಪ್ರಯತ್ನಿಸಬೇಕು. ನೀವು ಓರ್ವನನ್ನು ಸಮ್ಮೋಹನಗೊಳಿಸುವಲ್ಲಿ ಯಶಸ್ವಿಯಾದ ನಂತರವೇ ಹೆಚ್ಚಿನ ಜನರನ್ನು ಸಮ್ಮೋಹನಗೊಳಿಸಲು ಇಚ್ಛಿಸಬೇಕು.

ಸಮ್ಮೋಹನ ನಿದ್ರೆಯು ಕಡಿಮೆ ಪ್ರಾಮುಖ್ಯತೆಯದೇನೂ ಅಲ್ಲ ಎನ್ನುವುದನ್ನು ಗಣನೆಗೆ ತೆಗೆದುಕೊಳ್ಳುವುದು ಉತ್ತಮವು. ಸಾಧಾರಣ ನಿದ್ರೆಯಲ್ಲಿ ಓರ್ವನು ಆರೋಗ್ಯಕರವಾಗಿ ನಿದ್ರಿಸುವನು. ನಾವು ಹೇಳಿದುದಕ್ಕೆ ಪ್ರತಿಕ್ರಿಯಿಸುವುದಿಲ್ಲ. ನಾವು ಏನಾದರೊಂದು ಮೊನಚಾದ ವಸ್ತುವಿನಿಂದ ಚುಚ್ಚಿದಾಗ ಮಾತ್ರ ಅವನು ಅತೀ ಗಾಬರಿಯಿಂದ ಎಗರುವನು. ಅವನು ತಾನು ನಿದ್ರೆಹೋಗಿರುವುದನ್ನು ಕಾಣುವನು . ಪ್ರತಿಕೂಲವಾಗಿ ನಾವು ಯಾರನ್ನಾದರೂ ಸಮ್ಮೋಹನ ನಿದ್ರೆಗೆ ತಂದರೆ, ಅನುಮಾನವಿಲ್ಲದೆ ಅವನ ಬಹಿರ್ಮನಸ್ಸು ನಿದ್ರೆಗೆ ಹೋಗುವುದು. ಆದರೆ ಅವನ ಅಂತರ್ಮನಸ್ಸು ವಿಶಾಲವಾಗಿ ಎಚ್ಚೆತ್ತುಕೊಂಡಿರುವುದು. ಪುನಃ ಅದು ಸಮ್ಮೋಹಕನ ಪ್ರಭಾವಕ್ಕೊಳಗಾಗಿರುವುದು. ಆದ್ದರಿಂದ ಸಮ್ಮೋಹನದಿಂದ ನಿದ್ರೆಹೋದ ವ್ಯಕ್ತಿಯು ಸಮ್ಮೋಹಕನ ಪ್ರಶ್ನೆಗಳಿಗೆ ಉತ್ತರಿಸುವನು. ಹೇಗಾದರೂ, ಸಹಜವಾದ ನಿದ್ರೆಯಲ್ಲಿ ಓರ್ವರು ಆ ರೀತಿಯ ನಿದರ್ಶನಗಳನ್ನು ಕಾಣಲಾರರು.

ಬಹಿರ್ಮನಸ್ಸು ಒಳ್ಳೆಯ ಮತ್ತು ಕೆಟ್ಟದೆಂಬ ಭೇದಗಳನ್ನು ಕಾಣುತ್ತದೆ. ಅದು ತನ್ನ ಬುದ್ಧಿವಂತಿಕೆ ಮತ್ತು ಚಾತುರ್ಯದ ಸದ್ಗುಣದಿಂದ ಏನನ್ನಾದರೂ ಮಾಡುತ್ತದೆ ಅಥವಾ ಪ್ರತಿಕ್ರಿಯಿಸುತ್ತದೆ. ಹೇಗಾದರೂ ಸಮ್ಮೋಹನಾವಸ್ಥೆಯಲ್ಲಿ ಮನುಷ್ಯನಿಗೆ ಯಾವುದೇ ಬುದ್ಧಿವಂತಿಕೆ ಇರುವುದಿಲ್ಲ. ಅವನು ಸುಮ್ಮನೇ ಆಜ್ಞೆಗಳನ್ನು ಅನುಸರಿಸುತ್ತಾನೆ. ಉದಾಹರಣೆಗೆ, ಸಮ್ಮೋಹಕನು ಅವನಿಗೆ ತನ್ನ ಹಿಂದೆ ಒಂದು ನವಿಲು ಇದೆ ಎಂದು ಹೇಳುತ್ತಾನೆ. ಅವನು ಪ್ರಶ್ನೆಮಾಡದೇ ನವಿಲಿನ ಇರುವಿಕೆಯನ್ನು ಒಪ್ಪಿಕೊಳ್ಳುತ್ತಾನೆ.

ಸಮ್ಮೋಹನಕ್ಕೆ ಒಳಗೊಂಡ ವ್ಯಕ್ತಿಯನ್ನು ' ತಂಗಿ 'ಎಂದು ಉಪಯೋಗಿಸಿದರೆ, ಅವನು ಒಬ್ಬ ಹೆಂಗಸಿನ ಹಾಗೆಯೇ ಪ್ರತಿಕ್ರಿಯಿಸುತ್ತಾನೆ.

ಸಮ್ಮೋಹನಾವಸ್ಥೆಯಲ್ಲಿ ವ್ಯಕ್ತಿಯು ಸರಿಯಾಗಿ ಮಾತನಾಡಬಲ್ಲನು. ಅವನಿಗೆ ಕೇಳಿದಂತಹ ಪ್ರಶ್ನೆಗಳಿಗೆ ಸರಿಯಾಗಿ ಉತ್ತರಿಸುವನು. ಬಹಿರ್ಮನಸ್ಸು ಎಚ್ಚರವಿಲ್ಲದ ಕಾರಣ, ಅವನು ಸುಮ್ಮನೇ ಸುಳ್ಳು ಹೇಳಲಾಗುವುದಿಲ್ಲ.

ಸಮ್ಮೋಹನಕ್ಕೊಳಗೊಂಡವನ ಅಂತರ್ಮನಸ್ಸು ಸಮ್ಮೋಹಕನ ಆಜ್ಞೆಗಳಿಗೆಲ್ಲಾ ವಿಮರ್ಶಿಸದೆ ಪ್ರತಿಕ್ರಿಯಿಸುವುದು. ಅದೇ ಸ್ಥಳದಲ್ಲಿ ಬೇರೆ ಜನರೂ ಸಹ ಅವನಿಗೆ ಆಜ್ಞೆಗಳನ್ನು ಕೊಡುತ್ತಾ ನಿಂತುಕೊಂಡಿದ್ದರೆ, ಸಮ್ಮೋಹನಗೊಂಡವನು ಅವರ ಆಜ್ಞೆಗಳನ್ನು ಪಾಲಿಸುವುದಿಲ್ಲ. ಏಕೆಂದರೆ ಮಾಧ್ಯಮನ ಅಂತರ್ಮನಸ್ಸು ಕೇವಲ ಸಮ್ಮೋಹಕನಲ್ಲಿ ಜೋಡಣೆಗೊಂಡಿದೆ.

**ಸಮ್ಮೋಹನದ ಹಂತಗಳು.**

ಸಮ್ಮೋಹನಾವಸ್ಥೆಯಲ್ಲಿ 'ಮಾಧ್ಯಮ'ನಲ್ಲಿ ಒಂದು ನಿರ್ದಿಷ್ಟವಾದ ನಿದ್ರೆಯನ್ನು ತರಲಾಗಿರುತ್ತದೆ. ಪರಿಣಾಮವಾಗಿ ಅವನ ಅಂತರ್ಮನಸ್ಸು ನಿದ್ರೆಗೆ ಹೋಗುತ್ತದೆ. ಪ್ರತಿಕೂಲವಾಗಿ ಅವನ ಅಂತರ್ಮನಸ್ಸು ಸಂಪೂರ್ಣವಾಗಿ ಚೇತನಗೊಂಡು ಎಚ್ಚರವಾಗಿಯೇ ಇರುತ್ತದೆ.

ಪ್ರಭಾವದ ಪ್ರಾರಂಭದ ಹಂತಗಳಲ್ಲಿ 'ಮಾಧ್ಯಮ 'ನು ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುವನು. ಅವನಿಗೆ ಸಂಪೂರ್ಣವಾಗಿ ಸಡಿಲವೆನಿಸುವುದು. ಅವನ ತುಟಿಗಳ ಮೇಲೆ ಒಂದು ಸರಳವಾದ ಮುಗುಳ್ನಗೆ ಇರುತ್ತದೆ, ಅದು ಅವನು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾನೆಂದು ಸಂಕೇತಿಸುತ್ತದೆ. ಅವನಿಗೆ ಈ ಅವಸ್ಥೆಯಲ್ಲಿ ಕಣ್ಣನ್ನು ತೆರೆಯಲು ಹೇಳಿದರೆ, ಅವನು ಕಣ್ಣುಗಳನ್ನು ತೆರೆಯುತ್ತಾನೆ. ಆದರೆ ಹಾಗೆ ಅವನು ಸ್ವಲ್ಪ ಪ್ರಯತ್ನದಿಂದ ಮಾಡುತ್ತಾನೆ. ವಾಸ್ತವದಲ್ಲಿ, ಆ ಅವಸ್ಥೆಯಲ್ಲಿ ಅವನು, ನಿದ್ರೆ ಮಾಡುವುದರಲ್ಲಿ ಸಂತೋಷಿಸುತ್ತಾನೆ. ಅವನು ತನ್ನ ಕಣ್ಣುಗಳನ್ನು ಮುಚ್ಚಿಕೊಂಡರೆ ತನಗೆ ಹೆಚ್ಚು ಸಡಿಲವಾದಂತಾಗುತ್ತದೆ. ಅವನ ಉಸಿರಾಟ ಸೌಮ್ಯವಾಗಿರುವುದು. ಈ ಅವಸ್ಥೆಯಲ್ಲಿ ನೀವು ಅವನಿಗೆ ಆಜ್ಞಾಪಿಸಿದುದನ್ನೆಲ್ಲಾ ಅವನು ಒಪ್ಪುವನು.

ಎರಡನೇ ಹಂತವು ಇನ್ನೂ ಗಾಢವಾಗಿರುವುದೆಂದು ಹೇಳಲಾಗಿದೆ. ಈ ಅವಸ್ಥೆಯಲ್ಲಿ ಸಮ್ಮೋಹನ ನಿದ್ರೆಯು ಇನ್ನೂ ಆಳವಾಗಿರುವುದು. ಅವನ ಕಣ್ಣುಗುಡ್ಡೆಗಳು ಮೇಲಕ್ಕೆ ಹೋಗುವವು, ಕೈಗಳು ಮತ್ತು ಕಾಲುಗಳು ಭಾರವಾಗುವವು, ಉಸಿರಾಟವು ನಿಧಾನವಾಗಿ ಅವನು ತನ್ನ ಕಣ್ಣುಗಳನ್ನು ಪದೇ ಪದೇ ಪ್ರಯತ್ನಿಸಿದ ನಂತರವೂ ತೆರೆಯಲಾಗುವುದಿಲ್ಲ.

ಈ ರೀತಿಯ ಒಂದು ಅವಸ್ಥೆಯಲ್ಲಿ, ನೀವು ಅವನಿಗೆ ಅವನು ತನ್ನ ಕೈಗಳನ್ನು ಇಂತಿಂತಹ ಸ್ಥಳಗಳಲ್ಲಿ ಇಡಲು ಆಜ್ಞಾಪಿಸುವುದು ಒಳ್ಳೆಯದು. ಅವನು ಅದೇ ರೀತಿ ನಡೆದುಕೊಳ್ಳುತ್ತಾನೆ. ಅವನ ಕೈಗಳನ್ನು ನೇರವಾಗಿ ಎತ್ತಲು ಹೇಳಿ. ಅವನು ಆ ವಿಧಾನದಲ್ಲಿ ಯಾವುದೇ ಅಡಚಣೆಯನ್ನು ಕಾಣದೆ ಹಾಗೆ ಮಾಡುವನು.

ಮೂರನೇ ಹಂತಕ್ಕೆ ಸಂಪೂರ್ಣ ಹಂತವೆಂದು ಹೇಳಲಾಗಿದೆ. ಇಲ್ಲಿ ಓರ್ವನಿಗೆ 'ಮಾಧ್ಯಮ'ನು ಮೊದಲ ಎರಡು ಹಂತಗಳಲ್ಲಿ ಕಾಣುವ ಎಲ್ಲಾ ಅವಸ್ಥೆಗಳನ್ನೂ ಕಾಣಲ್ಪಡುವವು. ಈ ಹಂತದಲ್ಲಿ 'ಮಾಧ್ಯಮ'ನ ನಿದ್ರೆಯನ್ನು ಇನ್ನೂ ಆಳಕ್ಕೆ ತೆಗೆದುಕೊಂಡು ಹೋಗಲಾಗುವುದು ಮತ್ತು ಅವನಿಗೆ ಪದೇ ಪದೇ ಪ್ರಯತ್ನಿಸಿದ ನಂತರವೂ ತನ್ನ ದೇಹವನ್ನೂ ಸಡಿಲಿಸಲಾಗುವುದಿಲ್ಲ.

ಅವನಿಗೆ ಕೇಳಿದಂತಹ ಪ್ರಶ್ನೆಗಳಿಗೆಲ್ಲಾ ಸರಿಯಾಗಿಯೇ ಉತ್ತರಿಸುವನು. ಅವನು ಸುಳ್ಳನ್ನು ಹೇಳಲು

ಇಚ್ಛೆವುಳ್ಳವನಾಗಿದ್ದರೂ ಒಂದೂ ಸುಳ್ಳನ್ನೂ ಹೇಳಲಾರನು. ಅವನು ಅರಿವಿಗೆ ಬಂದಾಗ ಈ ತರಹದ ಯಾವುದೇ ವಿಚಾರಗಳನ್ನು ನೆನಪಿನಲ್ಲಿಟ್ಟುಕೊಳ್ಳಲಾರನು.

## ಸಮ್ಮೋಹನಗೊಳಿಸುವುದು ಹೇಗೆ ?

ನನ್ನ ಸ್ವಂತ ವೈಯಕ್ತಿಕ ಅನುಭವದಿಂದ ಓರ್ವವ್ಯಕ್ತಿಯನ್ನು ಸಮ್ಮೋಹನಕ್ಕೆ ಒಳಪಡಿಸಲು ಸಾಯಂಕಾಲದ ಸಮಯವೇ ಒಳ್ಳೆಯದೆಂದು ನಾನು ಒತ್ತಿ ಹೇಳಬೇಕಾಗಿದೆ. ನಿಶ್ಚಲವಾದ ಮತ್ತು ಶಾಂತವಾದ ವಾತಾವರಣವು ಸಮ್ಮೋಹನದ ಪ್ರಯೋಗಗಳಿಗೆ ಹಿತಕರವಾಗಿರುತ್ತದೆ.

ಒಂದು ವ್ಯವಸ್ಥಿತ ಮತ್ತು ಸ್ವಚ್ಛ, ಸುಂದರವಾಗಿ ಎದ್ದು ಕಾಣುವ ಕೋಣೆಯನ್ನು ಆಯ್ದುಕೊಳ್ಳಿ. ಬೇಕಿಲ್ಲದ ವಸ್ತುಗಳು ಆ ಕೋಣೆಯಲ್ಲಿ ಇರಬಾರದು. ಅಲ್ಲಿ ಬಹಳ ಶೆಖೆಯಾಗಿದ್ದರೆ, ಫ್ಯಾನ್ ಸಾಧಾರಣವಾದ ವೇಗದಲ್ಲಿರಬೇಕು. ಮಧುರವಾದ ಮತ್ತು ಸುಖಕರವಾದ ಸುವಾಸನೆಯು ಶ್ರೇಷ್ಠವಾಗಿ ಅಭ್ಯಾಸಕ್ಕೆ ಸರಿಹೊಂದುವುದು. ಅತಿಯಾಗಿ ಮಾತನಾಡುವ ಮತ್ತು ವಾದಿಸುವಂತಹ ವ್ಯಕ್ತಿಗಳನ್ನು ಕೋಣೆಯಿಂದ ಆಚೆಗೆ ಇರಲು ಹೇಳಬೇಕು.

'ಮಾಧ್ಯಮ'ನಿಗೆ ಒಂದು ಅನುಕೂಲಕರವಾದ ಕುರ್ಚಿಯಲ್ಲಿ ಕೂತುಕೊಳ್ಳಲುಹೇಳಬೇಕು. ಅವನ ದೇಹದ ಎಲ್ಲಾ ಅಂಗಗಳನ್ನು ಅದರಲ್ಲೂ ಕೈಕಾಲುಗಳನ್ನು ಸಡಿಲಗೊಳಿಸಲು ಹೇಳಬೇಕು. ಅವನಿಗೆ ಕೈಕಾಲುಗಳನ್ನು ಚಾಚಿದ ರೀತಿಯಲ್ಲಿ ಸಡಿಲಗೊಳಿಸಲು ಹೇಳಿ. ಅವನಿಗೆ 100 ರಿಂದ 1 ರವರೆಗೆ ಎಣಿಸಲು ಹೇಳಿ. ಅದು ಅವನನ್ನು ಸೂಕ್ಷ್ಮವಾಗಿ ಎಚ್ಚೆತ್ತುಕೊಳ್ಳುವ ಹಾಗೆ ಮಾಡುತ್ತದೆ ಹಾಗೂ ಅವನ ಮನಸ್ಸನ್ನು ಒಂದೇ ಯೋಚನೆಯಾದ ವಿರುದ್ಧವಾಗಿ ಎಣಿಸುವುದರ ಮೇಲೆ ಕೇಂದ್ರೀಕೃತವಾಗುವ ಹಾಗೆ ಮಾಡುತ್ತದೆ.

ಈಗ ಸಮ್ಮೋಹಕನು ಅವನ ಎದುರಿನಲ್ಲಿ ನಿಂತುಕೊಳ್ಳಬೇಕು. ಸಮ್ಮೋಹಕನ ಹೊರನೋಟವು ಘನವಾಗಿದ್ದು ಆಳವಾಗಿ ಪ್ರತಿಬಿಂಬಿಸುವಂತಿರಬೇಕು. ಅವನಿಗೆ ನಿಮ್ಮ ಕಣ್ಣುಗಳಲ್ಲಿ ನೋಡಲು ಹೇಳಿರಿ. ನೀವು ಅವನ ಕಣ್ಣುಗಳಲ್ಲಿ ನೋಡಬೇಕು. ನೀವು ಹಾಗೆ ಮಾಡುತ್ತಿರುವಾಗ ಮಧುರವಾದ ಮತ್ತು ಗಂಭೀರವಾದ ಧ್ವನಿಯಲ್ಲಿ: ನೋಡು, ನಿದ್ರೆಹೋಗುವುದರಲ್ಲಿದ್ದೀಯ, ನಾನು, ಹೆಚ್ಚಾಗಿ, ಸ್ಪಷ್ಟವಾಗಿ ನಿನ್ನ ಕಣ್ಣುಗಳು ಭಾರವಾಗುತ್ತಿರುವುದನ್ನು ನೋಡುತ್ತಿದ್ದೇನೆ. ಬೇಗನೇ ನೀನು ಆಳವಾದ ನಿದ್ರೆಗೆ ಹೋಗುವವನಿದ್ದೀಯ. ವಾಸ್ತವದಲ್ಲಿ ನೀನು, ನಿನ್ನಷ್ಟಕ್ಕೇ ಮಲಗಿ ಕೊಳ್ಳಬೇಕೆಂದಿದ್ದೀಯ. ಕಣ್ಣುಗಳನ್ನು ಮುಚ್ಚು. ನಿದ್ರೆಮಾಡು. ಮಲಗಿಕೊ! ಮಲಗಿಕೊ!! ಮಲಗಿಕೋ!!! ಎಂದು ಹೇಳಿರಿ.

ನೀವು ಈ ಭಂಗಿಗಳನ್ನು ಆಜ್ಞಾಪಿಸುತ್ತಿರುವಾಗ, ಮಾಧ್ಯಮನ ಕಣ್ಣುಗಳು ನಿದ್ರಿತವಾಗುವುದನ್ನು ನೀವು ನೋಡುವಿರಿ ಮತ್ತು ಅವನು ಇನ್ನೇನು ನಿದ್ರೆಹೋಗುವುದರಲ್ಲಿದ್ದಾನೆ. ನಂತರ ನೀವು ಕುರ್ಚಿಯಲ್ಲಿ ಕೂತುಕೊಂಡು ವಿರಾಮವನ್ನು ಪಡೆಯಿರಿ.

ನೀವು ಆಜ್ಞಾಪಿಸುದುದೆಲ್ಲಾ ಸ್ಪಷ್ಟ ಮತ್ತು ಅನುಮಾನವಿಲ್ಲದ ಭಾಷೆಯಲ್ಲಿ ಇರುವುದನ್ನು ಖಚಿತಪಡಿಸಿಕೊಳ್ಳಿ. ಆಜ್ಞೆಗಳು ಯಾವತ್ತೂ ನಿರ್ದಿಷ್ಟವಾಗಿರಬೇಕು ಹಾಗೂ ಯಾವಾಗಲೂ ನಕಾರಾತ್ಮಕವಾಗಿರಬಾರದು.

ನನ್ನ ಅನುಭವದಲ್ಲಿ ಸಮ್ಮೋಹಕನು ಈ ಹಂತದಲ್ಲಿ ಒಂದು ತಪ್ಪನ್ನು ಮಾಡುವ ಸಂಭವವಿದೆ. 'ಮಾಧ್ಯಮ'ನು ನಿಜವಾಗಿಯೂ ಸಮ್ಮೋಹನಗೊಂಡಿದ್ದಾನೋ ಮತ್ತು ಸಮ್ಮೋಹನ ನಿದ್ರೆಗೆ ಹೋಗಿದ್ದಾನೋ ಎಂದು ತನಗೇ ಖಚಿತವಾಗಿರುವುದಿಲ್ಲ.

ಸಮ್ಮೋಹಕನ ಮನಸ್ಸು ಈ ತರಹದ ಆಲೋಚನೆಗಳಿಂದ ಆಕ್ರಮಣಗೊಂಡ ಕ್ಷಣವೇ ಆ ಅಂತರ್ಮನಸ್ಸು 'ಮಾಧ್ಯಮ'ನಲ್ಲಿ ನೇರವಾದ ತಾಕಲಾಟವಾಗಿ ಹಾಗೂ ಮಾಧ್ಯಮನ ಮನಸ್ಸಿನೊಡನೆ ಈ ವಿರುದ್ಧ

ಯೋಚನೆಯ ತಾಕಲಾಟದಿಂದ ಸಮ್ಮೋಹನ ನಿದ್ರೆಗೆ ತೊಂದರೆಯಾಗಿ ಪರಿಣಮಿಸುವುದು. ಆದ್ದರಿಂದ ಸಮ್ಮೋಹಕನು ತನ್ನ ಮನಸ್ಸು ಯಾವುದೇ ಅನುಮಾನದ ಯೋಚನೆಗಳಿಗೆ ಎಡೆಮಾಡದಿರುವುದು ಅವಶ್ಯಕ. ಅವನಿಗೆ ತನ್ನಲ್ಲಿಯೇ ಸಂಪೂರ್ಣವಾದ ಮತ್ತು ಅವಿರ್ಭಾಗದ ನಂಬಿಕೆ ಇರಬೇಕು. ಅವನು ತನ್ನ ಕೆಲಸದಲ್ಲಿ ಒಂದೇ ಮನಸ್ಸಿನ ನಿಶ್ಚಯ ಮಾಡಿಕೊಂಡು ಹೋದರೆ, ಅವನು ಯಶಸ್ವಿಯಾಗಲೇಬೇಕು.

ಈಗ ಈ ಹಂತದ ನಂತರ'ಮಾಧ್ಯಮ'ನು ಸುತ್ತುವರೆದು ಸಮ್ಮೋಹನಗೊಂಡಾಗ ಅಥವಾ ಸಮ್ಮೋಹನ ನಿದ್ರೆಗೆ ಹೋದಾಗ, ನೀವು ಅವನಿಗೆ ಯಾವ ಪ್ರಶ್ನೆಗಳನ್ನಾದರೂ ಕೇಳಬಹುದು ಅಥವಾ ಯಾವುದೇ ಆಜ್ಞೆಯನ್ನು ಕೊಡಬಹುದು.'ಮಾಧ್ಯಮ'ನು ನೀವು ಕೊಟ್ಟಂತಹ ಆಜ್ಞೆಗಳನ್ನು ಅಥವಾ ನೀವು ಕೇಳಿದಂತಹ ಪ್ರಶ್ನೆಗಳನ್ನು ತಾನು ಎಚ್ಚರವಾಗುವವರೆಗೂ ನೆನಪಿನಲ್ಲಿಟ್ಟುಕೊಳ್ಳುವುದಿಲ್ಲ. ವಾಸ್ತವದಲ್ಲಿ ಅವನು ಸಮ್ಮೋಹನ ನಿದ್ರೆಯಲ್ಲಿ ಏನೇನೆಲ್ಲಾ ಹೇಳಿದುದು ಅಥವಾ ಮಾಡಿದುದನ್ನೆಲ್ಲಾ ನೆನಪಿನಲ್ಲಿಟ್ಟುಕೊಳ್ಳುವುದಿಲ್ಲ. ಹೇಗಾದರೂ, ಈ ಅವಸ್ಥೆಯಲ್ಲಿ ಅವನಿಗೆ ನೀವು ಹೇಳುದುದನ್ನೆಲ್ಲಾ ನೆನಪಿನಲ್ಲಿಟ್ಟುಕೊಳ್ಳಲು ಹೇಳಿದರೆ, ಅವನು ಅರಿವಿಗೆ ತಿರುಗಿದಾಗ ಖಚಿತವಾಗಿ ಎಲ್ಲಾ ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವನು.

ಈಗ ನಾವು ಸಮ್ಮೋಹನಗೊಳಿಸುವ ಕೆಲವು ಪದ್ಧತಿಗಳನ್ನು ಚರ್ಚಿಸೋಣ.

**ಪದ್ಧತಿ ೧**

'ಮಾಧ್ಯಮ'ನನ್ನು ಒಂದು ಕುರ್ಚಿಯ ಮೇಲೆ ಅನುಕೂಲಕರವಾಗಿ ಕುಳ್ಳಿರಿಸಿ. ಗಾಜಿನಿಂದ ಮಾಡಿದಂತಹ ಒಂದು ಗೋಲನ್ನು ತೆಗೆದುಕೊಳ್ಳಿ. ಅದನ್ನು ನಿಮ್ಮ ಕೈಯಲ್ಲಿ ಹಿಡಿದುಕೊಂಡು 'ಮಾಧ್ಯಮ'ನಿಂದ ಕನಿಷ್ಠ ಎರಡು ಅಡಿ ದೂರದಲ್ಲಿ ಅವನ ಕಣ್ಣುಗಳಿಗೆ ನೇರವಾಗಿ ಹಿಡಿಯಿರಿ. ಮಾಧ್ಯಮನಿಗೆ ಆ ಗೋಲನ್ನೇ ಕಣ್ಣುಪಿಳುಕಿಸದೆಯೇ ನೋಡಲು ಹೇಳಿ.

ಈಗ, ಅವನಿಗೆ ಆ ಗೋಲಿನಲ್ಲಿ ಅಮೋಘವಾದ ಪವಾಡಶಕ್ತಿಗಳಿವೆ ಎಂದು ಹೇಳಿ. ಅಲ್ಲದೆ ಅವನು ಆ ಗೋಲನ್ನು ಕಣ್ಣು ಪಿಳುಕಿಸದೆಯೇ ನೋಡಿದರೆ ತಾನು ನಿದ್ರೆ ಹೋಗುವನು, ಅವನು ನಿದ್ರೆ ಹೋಗುವನು. ಅವನಿಗೆ ನಿದ್ರೆಮೊಬ್ಬು ಬಂದಿದೆ ಎಂದು ಹೇಳಿ. ಅವನ ಕಣ್ಣುಗಳಲ್ಲಿ ನಿದ್ರೆ ತುಂಬಿಕೊಂಡಿದೆ. ಅವನು ತನ್ನ ದೇಹದ ಮೇಲಿನ ಎಲ್ಲಾ ಹತೋಟಿಯನ್ನು ಕಳೆದುಕೊಳ್ಳುತ್ತಿದ್ದಾನೆ. ಅವನು ನಿಮ್ಮ ಧ್ವನಿಯನ್ನು ಎಚ್ಚರಿಕೆಯಿಂದ ಕೇಳಿದ್ದಾನಾ ಎಂದು ಕೇಳಿ. ಅವನಿಗೆ ಈಗ ತನ್ನ ಕೈಕಾಲುಗಳು ಭಾರವಾಗುತ್ತಿದ್ದಾವೆಂದು ಅವನಿಗೆ ಹೇಳಿ. ಅವನಿಗೆ ತನ್ನ ಕಣ್ಣುಗಳನ್ನು ತೆರೆದಿಡಲು ಕಷ್ಟಕರವಾಗುತ್ತದೆ. ಅವನಿಗೆ ಹೇಳಿ: ಸರಿ, ಕಣ್ಣುಗಳನ್ನು ಮುಚ್ಚು. ನಿದ್ರೆಗೆ ಹೋಗು. ನಿದ್ರಿಸು! ನಿದ್ರಿಸು!! ನಿದ್ರಿಸು!!!

**ಪದ್ಧತಿ ೨**

'ಮಾಧ್ಯಮ'ನನ್ನು ಒಂದು ಕುರ್ಚಿಯ ಮೇಲೆ ಅನುಕೂಲಕರವಾಗಿ ಕುಳ್ಳಿರಿಸಿ. ಅವನಿಗೆ ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳಲು ಹೇಳಿ. ನಂತರ ಅವನ ಎರಡೂ ಹುಬ್ಬುಗಳ ನಡುವೆ ನಿಮ್ಮ ಬಲಹೆಬ್ಬೆರಳಿನಿಂದ ಒತ್ತಿರಿ. ಅವನ ತಲೆಯ ಕೂದಲನ್ನು ನಿಮ್ಮ ಎಡಗೈಯಿಂದ ಸಾವಕಾಶವಾಗಿ ತೀಡಿರಿ. ಅವನಿಗೆ ಹೇಳಿ: ನಿನ್ನ ತಲೆಯಲ್ಲಿ ಭಾರವೆನಿಸುತ್ತಿದೆ. ನಿನಗೆ ನಿದ್ದೆ ಬಂದಹಾಗಾಗುತ್ತಿದೆ. ಈಗ ನೀನು ನಿದ್ದೆ ಹೋಗಿದ್ದೀಯ. ನಿನಗೆ ನಿದ್ರೆ ಬಂದುಬಿಟ್ಟಿದೆ. ನಿನಗೆ ಕೇಳಿಸುತ್ತಿದೆಯೋ? ನೀನು ನನ್ನ ಮಾತನ್ನು ಕೇಳಬೇಕು. ನೀನು ನಾನು ಹೇಳಿದುದನ್ನೆಲ್ಲಾ ಅನುಸರಿಸಬೇಕು.

# ಅಧ್ಯಾಯ 10

# ಸಮ್ಮೋಹನ

ನಾವು ಈಗಾಗಲೇ ಓದುಗರಿಗೆ ಸಮ್ಮೋಹನದ ಪರಿಚಯ ಜ್ಞಾನವನ್ನು ಕೊಟ್ಟಿದ್ದೇವೆ. ಆದರೆ ಓದುಗರು ಈಗ ಜೀವನದಲ್ಲಿ ಸಮ್ಮೋಹನದ ಪ್ರಾಮುಖ್ಯತೆಯನ್ನು ಅರಿತಿರಬೇಕು.

ಸಮ್ಮೋಹನವು ಮನೋಬಲವನ್ನು ಶಕ್ತಿಯುತಮಾಡುತ್ತದೆ. ಮನಸ್ಸಿನ ಮೇಲೆ ಸಂಪೂರ್ಣ ಹತೋಟಿಯನ್ನು ಖಚಿತಪಡಿಸುವುದಲ್ಲದೆ, ಸಮ್ಮೋಹಕನು ತನ್ನ ಸ್ವಂತ ಮನಸ್ಸನ್ನು ಸಹ ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳುತ್ತಾನೆ. ಸಮ್ಮೋಹನವು ನಮ್ಮನ್ನು ಕೆಟ್ಟ ಹವ್ಯಾಸಗಳಿಂದ ಮತ್ತು ಮಾದಕವಸ್ತುಗಳಿಂದ ಮುಕ್ತಿಗೊಳಿಸುತ್ತದೆ.

ಕೆಲ ದರ್ಜೆಯ ಜನಗಳಲ್ಲಿ ಸಮ್ಮೋಹನದ ಬಗ್ಗೆ ಬಹಳಷ್ಟು ತಪ್ಪು ತಿಳುವಳಿಕೆ ಇದೆ. ಕೆಲವು ಜನರು ಅದನ್ನು ಮಾಟವಲ್ಲದೆ ಬೇರೇನೂ ಅಲ್ಲವೆಂದು ತಿಳಿದುಕೊಳ್ಳುತ್ತಾರೆ. ಅದನ್ನು ಸಮಾಜವಿರೋಧಿ ಜ್ಞಾನವೆಂದು ಇನ್ನೂ ಕೆಲವರ ದೃಷ್ಟಿಯಲ್ಲಿದೆ. ಸಮ್ಮೋಹನಕ್ಕೆ ಎಡೆಮಾಡಿಕೊಳ್ಳುವುದು ನಮ್ಮ ತುಚ್ಛವಾದ ವೈಯಕ್ತಿಕ ಉದ್ದೇಶಗಳನ್ನು ಸಾಧಿಸಿಕೊಳ್ಳುವುದಕ್ಕೆ ಎಂದು ಅವರು ವಾದಿಸುತ್ತಾರೆ. ಅದು ಒಂದು ಮೋಡಿ ವಿದ್ಯೆಯೆಂದು ಅವರು ನಿರ್ಧರಿಸುತ್ತಾರೆ.

ಅದರ ಆಳವಾದ ಪ್ರತಿಬಿಂಬವು ಇಂತಹ ವಾದಗಳು ಭ್ರಾಂತಿಕಾರಕವೆಂದು ತೋರಿಸುತ್ತದೆ. ನಿಜವಾಗಿಯೂ ಸಮ್ಮೋಹನವು ತನ್ನಲ್ಲಿಯೇ ಒಂದು ಸಂಪೂರ್ಣವಾದ ವಿಜ್ಞಾನವಾಗಿದೆ. ಬೇರೆ ವಿಜ್ಞಾನಗಳಂತೆ ಇದೂ ಸಹ ಜನಗಳಿಗೆ ಒಳ್ಳೆಯದನ್ನೇ ಮಾಡಲು ಓರೆಯಾಗಿದೆ.

ಯಾವುದೇ ವಿಜ್ಞಾನವನ್ನು ಹೇಗೆಯೇಯಾದರೂ ಒಳ್ಳೆಯದಕ್ಕೆ ಅಥವಾ ಕೆಟ್ಟದಕ್ಕೂ ಉಪಯೋಗಿಸಬಹುದು. ಉದಾಹರಣೆಗೆ ಒಂದು ಚಾಕುವನ್ನು ತೆಗೆದುಕೊಳ್ಳಿ. ಅದರಿಂದ ತರಕಾರಿಗಳನ್ನು ಹೆಚ್ಚಬಹುದು. ಅದನ್ನೇ ಉಪಯೋಗಿಸಿ ಒಬ್ಬ ಮನುಷ್ಯನನ್ನೂ ಈಚೆಗೆ ಹರಿದು ಹಾಕಬಹುದು. ಆದರೆ ಆ ಶಕ್ತಿ ಮಾತ್ರ ಮುಗ್ಧವಾಗಿರುವುದು . ಎಲ್ಲವೂ ಅದನ್ನು ಉಪಯೋಗಿಸುವಂತಹ ಹಾಗೂ ಅದನ್ನು ಬೈಯ್ಯುವಂತಹ ಮನುಷ್ಯನ ಮೇಲೆ ಅವಲಂಭಿಸಿದೆ.

ಸಮ್ಮೋಹನದ ಕಲೆಗೆ ಮನಸ್ಸೇ ಕೇಂದ್ರವಾಗಿದೆ ಅದರಲ್ಲೂ ವಿರಕ್ತದ ಮನಸ್ಸು. ಈ ಜ್ಞಾನದಲ್ಲಿ ಬಹಳ ಸಾಧಿಸಲು ಮತ್ತು ಅದರ ಕಲಿಕೆಯಲ್ಲಿ ಪೂರ್ಣತೆಯನ್ನು ಪಡೆಯಲು ನಮಗೆ ಮನಸ್ಸಿನ ಮೇಲೆ ಹತೋಟಿಯನ್ನು ಪಡೆಯುವ ಅದರಲ್ಲೂ ವಿರಕ್ತದ ಮನಸ್ಸಿನ ಅವಶ್ಯಕತೆ ಇದೆ. ನಮ್ಮ ಸ್ವಂತ ಮನಸ್ಸನ್ನು ನಾವು ಹತೋಟಿಗೆ ತಂದರೆ ನಮಗೆ ಬೇರೆಯವರ ಮನಸ್ಸನ್ನೂ ಹತೋಟಿಗೆ ತರಲಾಗುತ್ತದೆ.

ಹಾಗೆಯೇ ಒಂದು ಬಲವಾದ ಮನೋಬಲವೂ ಸಹ ಬಹಳ ಅವಶ್ಯಕತೆ ಇರುತ್ತದೆ. ಒಂದು ಬಲವಾದ ಮನೋಬಲದ ಸದ್ಗುಣದಿಂದ ನಮ್ಮ ಕಣ್ಣನಲ್ಲಿ ಒಂದು ಉಜ್ವಲವಾದ ಬೆಳಕನ್ನು ನಾವು ಪಡೆಯಬಹುದು. ಒಂದು ದಿವ್ಯವಾದ ಮಿಂಚು ನಮ್ಮ ಕಣ್ಣುಗಳಿಗೆ ಹೊಳಪನ್ನು ತರುವುದು. ತ್ರಾಟಕದ ಸಲಕರಣೆಯಿಂದ ನಾವು ಅಸಾಧ್ಯವಾದ ಕೆಲಸಗಳನ್ನು ಸಾಧಿಸಬಹುದು.

ಅನುಮಾನಯುತವಾದ ಮನಸ್ಸು ದಾರಿಯಲ್ಲಿ ಬಹಳ ಅಡಚಣೆಗಳನ್ನು ತರುತ್ತದೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಿ. ಆದ್ದರಿಂದ ನಿಮಗೆ ನಿಶ್ಚಯವಾದ ಮನಸ್ಸಿರುವ ಅವಶ್ಯಕತೆ ಇದೆ. ಒಂದು ದೊಡ್ಡ ಶ್ರೇಣಿಯ ಅತ್ಯಂತ ಅನುಕೂಲದ ಸ್ಥಿತಿಯು ನಿಮ್ಮನ್ನು ಪ್ರಚೋದಿಸಬೇಕು. ನೀವು ಮಾಡುವುದರಲ್ಲೆಲ್ಲಾ ನೀವು ಯಶಸ್ವಿಯಾಗುವಿರೆಂದು ನಿಮಗೆ ನಂಬಿಕೆ ಇರಬೇಕು.

ಪ್ರತಿಯೊಬ್ಬ ಅಭ್ಯಾಸಿಸುವವನೂ ತನ್ನ ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ ಕೆಲವೊಂದು ಸೂತ್ರಗಳಿವೆ.

೧. ಯಾವುದೇ ಅಳುಕು ಅಥವಾ ಅನುಮಾನಗಳನ್ನು ನಿಮ್ಮ ಮನಸ್ಸನ್ನು ಆಕ್ರಮಿಸಲು ಬಿಡಬೇಡಿರಿ. ನೀವು ಮಾಡುತ್ತಿರುವುದೆಲ್ಲಾ ಸರಿ ಎನ್ನುವ ನಂಬಿಕೆ ನಿಮಗಿರಬೇಕು. ನೀವು ಆಯ್ದುಕೊಂಡಿರುವಂತಹ 'ಮಾಧ್ಯಮ'ನನ್ನು ನೀವು ಸಮ್ಮೋಹನಗೊಳಿಸಬಹುದು ಮತ್ತು ಕೆಲವೇ ಕ್ಷಣಗಳಲ್ಲಿ ಅವನನ್ನು ಸಮ್ಮೋಹನ ಪ್ರಭಾವಕ್ಕೆ ತರಬಹುದು.

೨. ಒಂದುವೇಳೆ ನೀವು ಸಮ್ಮೋಹನದ ಎಲ್ಲಾ ಕ್ಲಿಷ್ಟತೆಗಳಿಗೂ ಸಂಪೂರ್ಣವಾಗಿ ಪರಿಚಯವಾಗದಿದ್ದಲ್ಲಿ. ಹಾಗಿದ್ದರೂ ನೀವು ನಿಮ್ಮ ಮಾಧ್ಯಮನಿಗೆ ಸಂಪೂರ್ಣ ಪ್ರವೀಣರಲ್ಲವೆಂದು ತಿಳಿಸಬಾರದು. ಅವನು ಯಾವಾಗಲೂ ನಾನು ಒಳ್ಳೆ ಸಮರ್ಥ ಸಮ್ಮೋಹಕನ ಕೈಯಲ್ಲಿದ್ದೇನೆ ಎಂದು ಭಾವಿಸಬೇಕು.

೩. ನಿಮ್ಮ ಧ್ವನಿಯನ್ನು ವಿನಮ್ರ ಹಾಗೂ ಮಧುರಮಾಡಿ. ನಿಮ್ಮ ಉಡುಪು ಇಷ್ಟಪಡುವಂತಹುದಾಗಿರಬೇಕು. ನಿಮ್ಮ ವ್ಯಕ್ತಿತ್ವವು ಬೇರೆಯವರನ್ನು ಪ್ರಭಾವಿತಗೊಳಿಸಬೇಕು.

೪. 'ಮಾಧ್ಯಮ'ನಲ್ಲಿ ವಿಶ್ವಾಸತುಂಬಿ ಅವನನ್ನು ನಿಮ್ಮ ನಂಬಿಕೆಯಲ್ಲಿ ತಂದುಕೊಳ್ಳಿ. ನೀವು ನಿಮ್ಮ ಮಾಧ್ಯಮನೊಡನೆ ಬಹಳ ಆದರಪೂರ್ವಕವಾಗಿ ಬೆರೆಯಬಾರದು. ನಿಮ್ಮ ಮತ್ತು ಮಾಧ್ಯಮನ ನಡುವೆ ಒಂದು ಗೌರವಯುತವಾದ ಅಂತರವಿರಬೇಕು.

೫. ನಿಮ್ಮ ಪ್ರಾರಂಭದ ಪ್ರಯೋಗದಲ್ಲಿ ನೀವು ವಿಫಲರಾದರೆ, ನೀವು ಎದೆಗುಂದಬಾರದು. ನಿಮ್ಮ ವಿಫಲಕ್ಕೆ ಒಂದು ನಿರ್ದಿಷ್ಟವಾದ ಕಾರಣವಿರಬಹುದು. ಆದರೆ, ಯಾವುದೇ ಕಾರಣಕ್ಕೂ ಒಂದು ನಿಯಮಿತವಾದ ಅಭ್ಯಾಸವನ್ನಿಟ್ಟುಕೊಳ್ಳಿ. ನಿಮ್ಮಲ್ಲಿಯೇ ನೀವು ನಂಬಿಕೆಯನ್ನು ಕಳೆದುಕೊಂಡರೆ ಬೇರೆಯವರೂ ನಿಮ್ಮಲ್ಲಿ ನಂಬಿಕೆಯನ್ನು ಕಳೆದುಕೊಳ್ಳುತ್ತಾರೆ ಎನ್ನುವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ.

೬. ಪ್ರಯೋಗ ನಡೆಸುವಾಗ ನೀವು ಬಹಳ ಎಚ್ಚರವಾಗಿಯೂ ಮತ್ತು ಜಾಗರೂಕರಾಗಿಯೂ ಇರಬೇಕು. ನಿಮ್ಮ ಪ್ರತಿಯೊಂದು ಅಂಗವೂ ಕಣ್ಣುಗಳು ಮತ್ತು ಬಾಯಿ ಬಹಳ ಚೇತನಯುಕ್ತವಾಗಿರಬೇಕು. ಅದು ಬೇರೆಯವರ ಮೇಲೆ ಪರಿಣಾಮಕಾರಿಯಾದ ಪ್ರಭಾವವನ್ನು ಬೀರುವುದು.

೭. ಪ್ರಯೋಗ ನಡೆಸುವಾಗ ನೀವು ನಿಮ್ಮ ಪ್ರವೀಣತೆ ಹಾಗೂ ಸಾಮರ್ಥ್ಯಗಳ ಮೇಲೆ ಅವಲಂಬಿತರಾಗಿರಬೇಕು. ನೀವು ಎಳ್ಳಷ್ಟು ನಿರಾಶೆಗೆ ಎಡೆಮಾಡಿಕೊಡಬಾರದು. ನೀವು ನಿಮ್ಮ ಕೆಲಸದಲ್ಲಿ ಯಶಸ್ವಿಯಾಗುವಿರೆಂದು ನಿಮಗೆ ಆಳವಾಗಿ ಬೇರೂರಿದ ನಂಬಿಕೆ ಇರಬೇಕು.

೮. ನೀವು ಯಾವುದೇ ದೊಡ್ಡ ಸಮ್ಮೋಹಕರಿಗಿಂತ ಕಡಿಮೆ ಇಲ್ಲ. ಅವರಲ್ಲಿ ಇದ್ದಷ್ಟೇ ಸಾಮರ್ಥ್ಯವು ನಿಮ್ಮಲ್ಲಿಯೂ ಇದೆ. ಹೀಗೆ ಈ ನಂಬಿಕೆಯೊಡನೆ ಮುನ್ನುಗ್ಗಿರಿ.

೯. ಅರ್ಥವಿಲ್ಲದೆ ಮಾತನಾಡಬೇಡಿರಿ. ಕೆಳಮಟ್ಟಕ್ಕೆ ಇಳಿಯಬೇಡಿರಿ.

೧೦. ನೀವು ಎಲ್ಲಿಯೇ ಅಭ್ಯಸಿಸಲಿ ಅಲ್ಲಿಯ ವಾತಾವರಣವು ಶಾಂತಿಯುತವಾಗಿರಬೇಕು. ಗಲಾಟೆ ಮತ್ತು

ಕೂಗು ಮತ್ತು ಗೊಂದಲಗಳು ಪ್ರಯೋಗವನ್ನು ಕಲುಷಿತಗೊಳಿಸಬಾರದು. ಸಂಪೂರ್ಣ ಶಾಂತಿಯು ಹಿಂದಿರುಗುವವರೆಗೂ ಪ್ರಯೋಗವನ್ನು ಪ್ರಾರಂಭಿಸಬೇಡಿರಿ.

೧೧. ಮಾಧ್ಯಮ ನನ್ನು ಸಮ್ಮೋಹನ ಪ್ರಭಾವಕ್ಕೆ ತಂದಾಗ ಅವನಿಗೆ ಸ್ಪಷ್ಟವಾದ ಮತ್ತು ಅನುಮಾನಕ್ಕೆ ಎಡೆಮಾಡದಂತಹ ಧ್ವನಿಯಲ್ಲಿ ಆಜ್ಞಾಪಿಸಿ. ನಿಮ್ಮ ಧ್ವನಿಯಲ್ಲಿ ಯಾವುದೇ ಅವಿಶ್ವಾಸದ ಬದಲಾವಣೆ, ಕೃಷತೆ, ಶಂಕೆ ಅಥವಾ ಉದಾಸೀನತೆ ಅಥವಾ ನಂಬಿಕೆಯಲ್ಲಿ ಹಾನಿ ಇರಬಾರದು.

೧೨. ಸಮ್ಮೋಹನದ ಗತಿಯಾದನಂತರವೂ ಸಹ ಮಾಧ್ಯಮನು ಎಚ್ಚೆತ್ತುಕೊಳ್ಳದಿದ್ದರೆ, ನೀವು ಹೆದರಬೇಕಾಗಿಲ್ಲ. ಅದು ಹಾನಿಕರವೇ ಅಲ್ಲ. ಅವನು ಸಹಜವಾದ ನಿದ್ರೆಗೆ ಹೋಗಿರಬಹುದು. ಆದ್ದರಿಂದ ತನ್ನ ನಿದ್ರೆಯ ಸಂಪೂರ್ಣ ಗತಿಯನ್ನು ಮುಗಿಸಿದನಂತರ ಸಹಜವಾಗಿಯೇ ಎಚ್ಚೆತ್ತುಕೊಳ್ಳುವನು.

ಈ ಸೂತ್ರಗಳನ್ನು ನೀವು ಅನುಸರಿಸಿದರೆ, ನೀವು ಅದ್ವಿತೀಯರಾದ ಸಮ್ಮೋಹಕರಾಗುವ ಸಾಧ್ಯತ ಇರುತ್ತದೆ. ನೀವು ಯಶಸ್ವಿಯಾಗುವಿರಿ.

## ಮನೋ ಬಲ:

ಈ ಮೊದಲೇ ನಾವು ಮನೋಬಲದ ಬಗ್ಗೆ ಬಹಳ ಅಂಶಗಳನ್ನು ಚರ್ಚಿಸಿದ್ದೇವೆ. ಹೇಗಾದರೂ, ನಾವು, ನಮ್ಮ ಜೀವನವು ಬಹಳವಾಗಿ ಮನೋಬಲದ ಮೇಲೆ ಅವಲಂಬಿತವಾಗಿದೆಯೆಂದು ಒತ್ತಿಹೇಳುತ್ತೇವೆ. ಅದೇ ಸಮಯದಲ್ಲಿ, ನಾವು ಮನೋಬಲದ ಸಹಾಯದಿಂದ, ಬಹಳವಾಗಿ ಬೇರೆಯವರನ್ನೂ ಪ್ರಭಾವಕ್ಕೊಳಗಾಗಿಸಬಹುದು. ಮನೋಬಲದಲ್ಲಿನ ವೇಗವಾದ ಹೆಚ್ಚುವಿಕೆಯು ನಮ್ಮ ಕಣ್ಣುಗಳಲ್ಲಿ ಉಜ್ವಲವಾದ ಹೊಳಪನ್ನು ತರುತ್ತದೆ. ವಾಸ್ತವದಲ್ಲಿ ಮನೋಬಲವು ಸಮ್ಮೋಹನ ವಿಜ್ಞಾನಕ್ಕೆ ಶಿಲೆಯಂತಹ ಪ್ರಭಾವಿಕಗೊಳಿಸುವಲ್ಲಿ ಯಶಸ್ವಿಯಾದಾಗ, ಅದೇ ಸಮಯದಲ್ಲಿ ನಾವು ಹೆಚ್ಚಿನ ಮಟ್ಟದ ಆತ್ಮ ವಿಶ್ವಾಸವನ್ನು ವೃದ್ಧಿಸಿಕೊಳ್ಳುತ್ತೇವೆ.

ಓದುಗರು, ಈಗಾಗಲೇ, ಸಮ್ಮೋಹನದ ಕೆಲವು ಸತ್ಯಸಂಗತಿಗಳನ್ನು ತಿಳಿದುಕೊಂಡಿದ್ದಾರೆಂದು, ನಾವು ಭಾವಿಸುತ್ತೇವೆ. ಅಭ್ಯಸಿಸುವವನು ಈಗಾಗಲೇ ವಿವರಿಸಿರುವಂತಹ ಮೊದಲ ಹೆಜ್ಜೆಗಳ ಅಭ್ಯಾಸಗಳನ್ನು ಮಾಡುತ್ತಾ ತಾನು ಎಷ್ಟು ಯಶಸ್ವಿಯಾಗಿರುವನೆಂದು ನಿರ್ಧರಿಸುವನೆಂದು ನಾವು ಭಾವಿಸುತ್ತೇವೆ.

ಒಂದು ನಿದರ್ಶನವನ್ನು ತೋರಿಸಲು. ಓರ್ವವ್ಯಕ್ತಿಯು ನಿಮ್ಮ ಮುಂದೆ ಹೋಗುತ್ತಿದ್ದಾನೆ. ಈಗ ನೀವು ಅವನ ಕತ್ತಿನ ಮೇಲೆ ನಿಮ್ಮ ಕಣ್ಣನ್ನು ಸ್ಥಿರವಾಗಿಸಿ. ಅವನು ನಿಮಗೆ ಪರಿಚಯವೇ ಇಲ್ಲದವನು ಎನ್ನುವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ. ನಿಮ್ಮ ಸ್ವಂತ ಮನೋಬಲವನ್ನು ಬಲಪಡಿಸಿಕೊಂಡು ಅವನು ನಿಮ್ಮ ಕಡೆ ಹಿಂದೆ ತಿರುಗಿನೋಡಬೇಕೆಂದು ಆಜ್ಞಾಪಿಸಿ. ಕೆಲವೇ ಕ್ಷಣಗಳಲ್ಲಿ ಅವನು ತಿರುಗಿ ನೋಡಿದರೆ, ನೀವು ಯಶಸ್ವಿಯಾಗಿದ್ದೀರೆಂದು ಅದು ಅರ್ಥೈಸುತ್ತದೆ.

ನೀವು ಆತ್ಮಬಲವನ್ನು ನಿಮ್ಮಲ್ಲಿ ಶೇಖರಿಸಿದಾಗ ಅಥವಾ ಅದನ್ನು ನೀವು ಯಾರಿಗಾದರೂ ಆಜ್ಞಾಪಿಸಿದರೆ ನಿಮ್ಮಲ್ಲಿ ಆತ್ಮಸಂಶಯವಿರಬಾರದೆಂದು ನಾವು ಈಗಾಗಲೇ ವಿಮರ್ಶಿಸಿದ್ದೇವೆ. ಏಕೆಂದರೆ ಆತ್ಮಬಲದ ಅಡಿಪಾಯವೇ ಮನಸ್ಸು. ಮನೋಬಲವು ಅನುಮಾನಗಳಿಂದ ಆಕ್ರಮಿತವಾದರೆ, ಮನಸ್ಸಿಗೆ ತನಗೆ ಇರಬೇಕಾದ ಒತ್ತಡವು ಇರುವುದಿಲ್ಲ. ಅಪನಂಬಿಕೆಯು ಮನಸ್ಸನ್ನು ವಿಚಲಿತಗೊಳಿಸುತ್ತದೆ. ನೀವು ಯಾವುದಾದರೂ ಪರಿಣಾಮವನ್ನು ಬೀರಬೇಕೆಂದಿದ್ದರೆ ಅದು ಖಚಿತವಾಗಿ ಆಗುವುದಿಲ್ಲ.

ನೀವು ಮೇಲೆ ಹೇಳಿರುವಂತಹ ಪ್ರಯೋಗವನ್ನು ಮಾಡಿ ಅದರಲ್ಲಿ ಯಶಸ್ವಿಯಾದರೆ, ಅದು ಸರಿ ಹೋಯಿತು.

ಒಂದು ವೇಳೆ ನೀವು ಯಶಸ್ವಿಯಾಗದಿದ್ದರೆ, ನೀವು ಕಳವಳಪಡುವ ಅವಶ್ಯಕತೆ ಇಲ್ಲ. ನಿಮ್ಮಿಂದ ನಿಮ್ಮ ಮನೋಬಲವನ್ನು ಬಲಪಡಿಸಲಾಗಲಿಲ್ಲವೆಂದು ಅದು ಸರಳವಾಗಿ ಗೊತ್ತಾಗುತ್ತದೆ.

ಪ್ರಾರಂಭದಲ್ಲಿ ನಾನೂ ಸಹ ಅಸಫಲತೆಗಳನ್ನು ಕಂಡೆ. ಆದರೆ ನಾನು ಬಿಟ್ಟುಬಿಡಲಿಲ್ಲ. ನಾನು ವಿಫಲವಾದಾಗಲೆಲ್ಲಾ ದ್ವಿಗುಣಗೊಂಡ ಪ್ರಯತ್ನಗಳನ್ನಾಕಿದೆ. ಹೀಗೆ ನನ್ನ ಮನೋಬಲವನ್ನು ಶಕ್ತಿಯುತಮಾಡಿದೆ. ನಾನು ಮತ್ತೊಮ್ಮೆ ಒಂದೇ ಮನಸ್ಸಿನ ನಿಶ್ಚಯದಿಂದ ಕದನದೊಳಗೆ ಧುಮುಕುತ್ತಿದ್ದೆ.

ಮುಂದಿನ ಅಭ್ಯಾಸವನ್ನು ತೆಗೆದುಕೊಳ್ಳಿ. ನಿಮ್ಮ ಎದುರುಮನೆ ಕಿಟಕಿಯ ಎದುರಿನಲ್ಲಿರುವ ನಿಮ್ಮ ಮನೆಯ ಕಿಟಕಿಯೊಂದನ್ನು ಆಯ್ದುಕೊಳ್ಳಿ. ನಿಮ್ಮ ಸ್ವಂತ ಕಿಟಕಿಯನ್ನು ಮುಚ್ಚರಿ, ಆದರೆ ಎದುರು ಮನೆಯಲ್ಲಿ ಏನು ನಡೆಯುತ್ತಿದೆ ಎಂದು ಹಣಿಕಿ ಹಾಕಿ ನೋಡಲು ನಿಮ್ಮ ಕಿಟಕಿಯಲ್ಲಿ ಒಂದು ತೂತನ್ನು ಮಾಡಿರಿ.

ಈಗ, ಯಾರಾದರೂ ಆ ಎದುರಿನ ಕಿಟಕಿಯಲ್ಲಿ ಕಂಡರೆ ನೀವು ಅವನ ಮೇಲೆ ನಿಮ್ಮ ಕಣ್ಣನ್ನು ಸ್ಥಿರವಾಗಿಸಿ ನಿಮ್ಮ ಎಲ್ಲಾ ಮನೋಬಲವನ್ನು ಕೂಡಿಸಿ ನಿಮಗೆ ಬೇಕಾಗಿರುವುದೇನನ್ನಾದರೂ ಮಾಡಲು ಅವನಿಗೆ ಆಜ್ಞಾಪಿಸಿ, ಉದಾಹರಣೆಗೆ ನೀವು ಅವನಿಗೆ, ಕಿಟಕಿಯಿಂದ ನೋಡಲು ಹೇಳಬಹುದು, ಅಥವಾ ಬಾಚಣಿಕೆಯಿಂದ ಕೂದಲನ್ನು ಬಾಚಿಕೊಳ್ಳಲು ಅಥವಾ ಅವನ ಅಂಗಿಯನ್ನು ಬದಲಿಸಿಕೊಳ್ಳಲು ಹೇಳಬಹುದು.

ನೀವು ಕಣ್ಣು ಅವನಮೇಲೆ ಭದ್ರವಾಗಿರುವುದನ್ನು ನಿಶ್ಚಯಪಡಿಸಿಕೊಳ್ಳಿ. ಅವನು ನೀವು ಹೇಳಿದ ಹಾಗೆ ಮಾಡಿದರೆ, ಅದನ್ನು ನಿಮ್ಮ ಯಶಸ್ವಿಯ ಚಿಹ್ನೆ ಎಂದು ಪರಿಗಣಿಸಬೇಕು.

ನೀವು ಮುಂದಿನ ಹೆಜ್ಜೆಗೆ ನಡೆಯಬಹುದು. ನೀವು ಒಂದು ರೈಲಿನಲ್ಲಿ ಕೂತುಕೊಂಡಿರುವಿರಿ ಎಂದು ತಿಳಿಯೋಣ. ಅದೇ ಬೋಗಿಯ ಇನ್ನೊಂದು ಕೊನೆಯ ಮೂಲೆಯಲ್ಲಿ ಯಾರೋ ಕೂತುಕೊಂಡಿದ್ದಾರೆ. ಈಗ ನಿಮ್ಮ ಎಲ್ಲಾ ಮನೋಬಲವನ್ನು ಒಟ್ಟುಗೂಡಿಸಿ ಅವನು ನಿಮ್ಮಲ್ಲಿಗೆ ಬಂದು ನಿಮಗೆ ಅಂದಿನ ದಿನಪತ್ರಿಕೆಯನ್ನು ಕೇಳುವವರೆಗೂ ಅವನು ಅವಿಶ್ರಾಂತನಾಗುವನೆಂದು ಆಜ್ಞಾಪಿಸಿ.

ನೀವು ಆ ಮನುಷ್ಯನು ನಿಜವಾಗಿಯೂ ಅವಿಶ್ರಾಂತನಾಗುವುದನ್ನು ನೋಡುವಿರಿ, ಹಾಗೂ ಅವನು ನಿಮ್ಮಲ್ಲಿಗೆ ದಿನಪತ್ರಿಕೆಗಾಗಿ ಮುನ್ನುಗ್ಗುವನು.

ಅದರ ಅರ್ಥ ಸ್ಪಷ್ಟವಾಗಿದೆ. ಓರ್ವನು ಅಂತಹ ಅಭ್ಯಾಸಗಳನ್ನು ಮುಂದುವರಿಸಬೇಕು. ಏಕೆಂದರೆ ಅದು ಅವನ ಪರಿಣಾಮಕಾರತೆಯಲ್ಲಿ ಅವನಿಗೆ ವಿಶ್ವಾಸವನ್ನು ತರುವುದು.

ಇನ್ನೊಂದು ನೇರವಾದ ಕಾರಣವೆಂದರೆ ನಿಮ್ಮ ಮನೋಬಲವು ಮನಸ್ಸಿನಿಂದಲೇ ಹೊರಬರುವುದು. ಅಭ್ಯಾಸದಿಂದ ನಿಮ್ಮ ಮನಸ್ಸು ವಿರಕ್ತವಾಗಿರುವುದರಿಂದ, ಮನೋಬಲವು ಮತ್ತೂ ಶಕ್ತಿಯುತವಾಗುವುದು. ಪರಿಣಾಮವಾಗಿ ನೀವು ಇನ್ನೊಬ್ಬ ವ್ಯಕ್ತಿಯ ಮೇಲೆ ಪ್ರಯೋಗವನ್ನು ನಡೆಸಿದಾಗ, ಅವನ ಮನಸ್ಸು ಸ್ವಲ್ಪವೂ ವಿರಕ್ತವಾಗಿಲ್ಲದ ಕಾರಣ ಅಷ್ಟೊಂದು ಶಕ್ತಿಯುತವಾಗಿರುವುದಿಲ್ಲ. ಆದ್ದರಿಂದ, ನಿಮ್ಮ ಅಂತರ್ಮನಸ್ಸು ಅವನ ಅಂತರ್ಮನಸ್ಸಿನ ಮೇಲೆ ಪ್ರಭಾವತೋರಿ ನೀವು ಕೊಟ್ಟಂತಹ ಆಜ್ಞೆಯ ಅನುಗುಣವಾಗಿ ಒತ್ತಾಯವಾಗಿ ಅವನು ಮಾಡಲೇ ಬೇಕೆನಿಸುವುದು. ಅವನ ಅಂತರ್ಮನಸ್ಸು ನಿಮ್ಮ ಆಜ್ಞೆಯ ಪ್ರಭಾವಕ್ಕೊಳಗಾಗಿರುವುದರಿಂದ, ಅವನ ಬಹಿರ್ಮನಸ್ಸೂ ಸಹ, ನೀವು ಕೊಟ್ಟಂತಹ ಆಜ್ಞೆಯ ಪ್ರಭಾವಕ್ಕೊಳಗಾಗುವುದು, ಇದೇ ಸಮ್ಮೋಹನ ಪರಿಣಾಮದ ಕ್ಲಿಷ್ಟಾಂಶವಾಗಿರುತ್ತದೆ.

### ಪದ್ಧತಿ ೩

ಮಾಧ್ಯಮನನ್ನು ಒಂದು ಕುರ್ಚಿಯ ಮೇಲೆ ಕುಳ್ಳಿರಿಸಿ ಕಣ್ಣು ಮುಚ್ಚಿಕೊಳ್ಳಲು ಹೇಳಿ. ಈಗ, ಅವನಿಗೆ ನೀವು ಗಂಭೀರವಾದ ಆದರೂ ಮಧುರವಾದ ಧ್ವನಿಯಲ್ಲಿ 100 ರಿಂದ 1 ರವರೆಗೆ ವಿರುದ್ಧವಾಗಿ ಎಣಿಸಲು ಹೇಳಿ. ಮತ್ತು ಅವನಿಗೆ ತಾನು 40 ರಸಂಖ್ಯೆಗೆ ಬಂದ ತಕ್ಷಣ ಅವನಿಗೆ ನಿದ್ದೆ ಬಂದ ಹಾಗಾಗುವುದು ನಂತರ ಅವನು 30 ರಸಂಖ್ಯೆಗೆ ಬರುವ ಹೊತ್ತಿಗೆ ನಿದ್ದೆಯಲ್ಲಿರುವನು.

ನೀವು ಆಜ್ಞಾಪಿಸಿದ ಹಾಗೆಯೇ ಅವನು ಸಮ್ಮೋಹನ ನಿದ್ರೆಗೆ ಹೋಗುವುದನ್ನು ನೀವು ಗುರುತಿಸುವಿರಿ. ಮಾಧ್ಯಮನು 30 ನ್ನು ಮುಟ್ಟುವುದರೊಳಗೇ ನಿದ್ರೆ ಹೋಗುವನು.

### ಪದ್ಧತಿ ೪

'ಮಾಧ್ಯಮ'ನಿಗೆ ನೇರವಾಗಿ ನಿಮ್ಮ ಕಣ್ಣುಗಳಲ್ಲಿ ನೋಡಲು ಹೇಳಿ. ಅವನು ನಿಮ್ಮ ಕಣ್ಣುಗಳನ್ನು ನೋಡಲಾರಂಭಿಸಿದಾಗ, ಅವನ ಕಣ್ಣುಗಳನ್ನು ಮುಚ್ಚಿಕೊಳ್ಳಲು ಹೇಳಿ. ಅವನಿಗೆ 12 ನ್ನು 6 ರಿಂದ ಗುಣಿಸಲು ಹೇಳಿ. ಅವನು ಆ ಸರಿಯಾದ ಸಂಖ್ಯೆಗೆ ಬರುವಷ್ಟರಲ್ಲಿಯೇ ನಿದ್ರೆ ಬಂದಂತಾಗುವುದೆಂದು ಸಹ ಹೇಳಿ ನಂತರ ನಿಧಾನವಾಗಿ ಅವನು ಆಳವಾದ ನಿದ್ರೆಗೆ ಹೋಗುವನು.

ವಾಸ್ತವದಲ್ಲಿ ಮಾಧ್ಯಮನು ಸರಿಯಾದ ಸಂಖ್ಯೆಯ ಮೇಲೆ ಏಕಾಗ್ರತೆವಹಿಸಲು ಹೋಗುತ್ತಿರುವ ಹಾಗೆ, ಅವನು ನಿದ್ರೆ ಹೋಗುವನು.

ನೀವು ಕೊಡುವಂತಹ ಗಣಿತದ ಸಂಖ್ಯೆಯು ಸುಲಭವಾಗಿದ್ದು ಅದು ಮಾಧ್ಯಮನ ವಿದ್ಯಾಭ್ಯಾಸ ಹಾಗೂ ಬುದ್ಧಿವಂತಿಕೆಗೆ ಸರಿಹೊಂದುವಂತಹುದಿರಬೇಕೆಂಬುದನ್ನು ಗಣನೆಗೆ ತೆಗೆದುಕೊಳ್ಳುವುದು ಉತ್ತಮವು.

### ಪದ್ಧತಿ ೫

ಕೋಣೆಯ ಮಧ್ಯದಲ್ಲಿ ಒಂದು ಕಟ್ಟಿಗೆಯ ಹಲಗೆಯನ್ನು ಇಡಿರಿ. ನೀವು ಒಂದು ಚೌಕಾಕಾರದ ಗಾಜಿನ ತುಂಡನ್ನು ಸಹ ಉಪಯೋಗಿಸಬಹುದು. ಆದರೆ ಅದು ಯಾವುದೇ ಸಂದರ್ಭದಲ್ಲಿ ಕನಿಷ್ಠ ಒಂದು ಅಡಿ ಅಗಲವಿರಬೇಕು. ಹಲಗೆಯ ಅಥವಾ ಗಾಜಿನದು ನೀವು ಉಪಯೋಗಿಸುವಂತಹುದರ ಮಧ್ಯದಲ್ಲಿ ಒಂದು ಮೇಣದ ಬತ್ತಿಯನ್ನು ಇಡಿರಿ. 5 ಅಥವಾ 6 ಮಾಧ್ಯಮಗಳನ್ನು ಆ ಮೋಂಬತ್ತಿಯ ಸುತ್ತಲೂ ಕುಳ್ಳಿರಿಸಿ. ಅವರಿಗೆ ಆ ಮೋಂಬತ್ತಿಯ ಕಡೆ ದಿಟ್ಟಿಸಿ ನೋಡಲು ಹೇಳಿ. ಅವರು ಜ್ವಾಲೆಯ ಕಡೆ ನೋಡುವುದನ್ನು ನೀವು ಕಂಡಾಗ, ಅವರೆಲ್ಲರಿಗೂ ಕಣ್ಣುಗಳನ್ನು ಮುಚ್ಚಿಕೊಳ್ಳಲು ಆಜ್ಞಾಪಿಸಿ. ಅವರಿಗೆ ತಾವು ಆಳವಾದ ನಿದ್ರೆಗೆ ಹೋಗುವುದರಲ್ಲಿದ್ದಾರೆ ಎಂದು ಹೇಳಿ. ಅವರಿಗೆ ನಿದ್ರೆ ಮಾಡಲು ಹೇಳಿ.

ಅವರು ನಿಜವಾಗಿಯೇ ನಿದ್ರೆಗೆ ಹೋಗಿರುವುದನ್ನು ನೀವು ನೋಡುವಿರಿ. ಸಮ್ಮೋಹಕನು ಈ ತರಹದ ಗುಂಪು ಸಮ್ಮೋಹನದ ಅಭ್ಯಾಸವನ್ನು ಮುಂದುವರಿಸಬೇಕು.

### ಪದ್ಧತಿ ೬

ನಿಮ್ಮ ಘನವಾದ ಅಭ್ಯಾಸದ ನಂತರ 'ಮಾಧ್ಯಮ'ನನ್ನು ಒಂದು ಕುರ್ಚಿಯ ಮೇಲೆ ಅಥವಾ ನೆಲದ ಮೇಲೆ ಕುಳ್ಳಿರಿಸಿ, ಯಾವುದೇ ವಿಷಯದಲ್ಲಿ ಅವನು ನಿಮ್ಮ ಮುಂದೆ ಕೂತುಕೊಳ್ಳಬೇಕು. ಎರಡು ಬೆರಳುಗಳ ಸಹಾಯದಿಂದ ಅವನ ಕಣ್ಣುಗಳನ್ನು ಮುಚ್ಚಿ. ಈಗ ಅವನಿಗೆ ನಿದ್ದೆ ಹೋಗಲು ಆಜ್ಞಾಪಿಸಿ. ಅವನು ಪ್ರಾರಂಭದ ಆಜ್ಞೆಯಲ್ಲೇ ನಿದ್ರೆ ಮಾಡುವುದನ್ನು ನೀವು ನೋಡುವಿರಿ.

## ಸಮ್ಮೋಹನದ ಪ್ರಯೋಗಗಳು

ನೀವು ಎಷ್ಟರ ಮಟ್ಟಿಗೆ ಸಮ್ಮೋಹನ ಪ್ರಭಾವಕ್ಕೆ ಒಳಪಡಿಸುವಲ್ಲಿ ಯಶಸ್ವಿಯಾಗಿದ್ದೀರೆಂದು ನೋಡಿಕೊಳ್ಳುವ ದೃಷ್ಟಿಯಿಂದ, ನೀವು ನಿಮ್ಮ ಜ್ಞಾನವನ್ನು ಈ ಕೆಳಗಿನ ಪ್ರಯೋಗಗಳಿಂದ ಪರೀಕ್ಷಿಸಿಕೊಳ್ಳಬಹುದು.

೧. 'ಮಾಧ್ಯಮ'ನನ್ನು ಸಮ್ಮೋಹನ ಪ್ರಭಾವಕ್ಕೆ ತಂದಾದಾಗ, ನೀವು ಅವನಿಗೆ ತನಗೆ ಈಗಾಗಲೇ ನಿದ್ರೆ ಹತ್ತುತ್ತಿದೆ ಎಂದು ಹೇಳಿ. ತನ್ನ ಕಣ್ಣುಗಳು ಈಗಾಗಲೇ ಭಾರವಾಗುತ್ತಿದ್ದಾವೆ. ಎಷ್ಟೆತ್ತ ಪ್ರಯತ್ನಗಳ ನಂತರವೂ ಅವನಿಗೆ ಕಣ್ಣುಗಳನ್ನು ತೆರೆದಿಡಲು ಆಗುತ್ತಿಲ್ಲ. ಅವನಿಗೆ ಹೇಳಿ: ನೀನು ಪುನಃ ನಾನು ಹೇಳುವವರೆಗೂ ಕಣ್ಣುಗಳನ್ನು ತೆರೆಯಲಾಗುವುದಿಲ್ಲ.

ಅವನು ನಿಷ್ಫಲವಾಗಿ ಕಣ್ಣುಗಳನ್ನು ತೆರೆಯಲು ಪ್ರಯತ್ನಿಸುವನು. ಹೇಗಾದರೂ, ಅವನು ಯಶಸ್ವಿಯಾಗುವುದಿಲ್ಲ.

೨. 'ಮಾಧ್ಯಮ'ನನ್ನು ಸಮ್ಮೋಹನ ನಿದ್ರೆಗೆ ತಂದಾದ ನಂತರ ಅವನಿಗೆ ಎರಡೂ ಕೈಗಳ ಬೆರಳುಗಳನ್ನು ಒಂದರೊಳಗೊಂದು ಸೇರಿಸಲು ಆಜ್ಞಾಪಿಸಿ. ಈಗ ಅವನು ಎಷ್ಟೇ ಪ್ರಯತ್ನಿಸಿದರೂ ಆ ಬೆರಳುಗಳನ್ನು ಬೇರ್ಪಡಿಸಲು ಆಗುವುದಿಲ್ಲವೆಂದು ತಿಳಿಸಿ. ಆದರೂ, ನೀವು ಅವನಿಗೆ ಬೇರ್ಪಡಿಸಲು ಹೇಳಿ. ಅವನು ಎಷ್ಟೇ ಪ್ರಯತ್ನಿಸಿದರೂ ಬೆರಳುಗಳನ್ನು ತೆರೆಯಲು ಆಗದಿರುವುದನ್ನು ನೀವು ನೋಡುವಿರಿ.

ಈಗ, ಈ ಪರಿಸ್ಥಿತಿಯಲ್ಲಿ, ಅವನ ಕೈಗಳು ಆರೋಗ್ಯಕರವಾಗುತ್ತಿದ್ದಾವೆ ಎಂಬುದಾಗಿ ಆಜ್ಞಾಪಿಸಿ. ಅವನಿಂದ ಕೈಗಳನ್ನು ಬೇರ್ಪಡಿಸಲಾಗುತ್ತದೆ. 'ಮಾಧ್ಯಮ'ನಿಗೆ ಈ ಆಜ್ಞೆಯನ್ನು ಕೊಟ್ಟ ತಕ್ಷಣವೇ ಅವನ ಎರಡೂ ಕೈಗಳೂ ಬೇರೆ ಬೇರೆ ಯಾಗುತ್ತವೆ. ಅವನು ಹಾಗೆ ಮಾಡಿದಲ್ಲಿ, ನಿಮ್ಮ ಪ್ರಯತ್ನಗಳಲ್ಲಿ ನೀವು ಯಶಸ್ಸಿಯನ್ನು ಪಡೆಯುತ್ತಿದ್ದೀರೆಂದು ನೀವು ತಿಳಿದುಕೊಳ್ಳಬೇಕು.

೩. 'ಮಾಧ್ಯಮ'ನನ್ನು ಸಮ್ಮೋಹನ ನಿದ್ರೆಗೆ ತಂದಾದ ನಂತರ ಅವನ ಕೈಗಳನ್ನು ಛಾವಣಿಯ ಕಡೆಗೆ ಎಷ್ಟಾಗುತ್ತದೆ ಅಷ್ಟು ಚಾಚಲು ಹೇಳಿರಿ. ಅವನಿಗೆ ನಿದ್ರೆ ಮಾಡಲು ಹೇಳಿ. ಅವನಿಗೆ ಯಾವ ಕಷ್ಟ ಅಥವಾ ನೋವಾಗುವುದಿಲ್ಲವೆಂದು ಆಜ್ಞಾಪಿಸಿ. 'ಮಾಧ್ಯಮ'ನು ಕೈಗಳನ್ನು ಮೇಲಕ್ಕೆ ಚಾಚಿಕೊಂಡು ಹಾಗೆಯೇ



*ಸಮ್ಮೋಹನಾ ವೃತ್ತ*

ಅರ್ಧಗಂಟೆ ಯಾದರೂ ಅದೇ ರೀತಿಯಲ್ಲಿ ಎತ್ತರಕ್ಕೆ ಹಿಡಿದುಕೊಂಡಿರುವುದನ್ನು ನೀವು ನೋಡುವಿರಿ. ಈಗ ಅವನ ಸ್ವಂತ ಕೈಗಳನ್ನು ಕೆಳಕ್ಕೆ ಇಳಿಸಲು ಆಜ್ಞಾಪಿಸಿ. ಒಂದು ವಿಷಯ ಬಹಳ ಸ್ಪಷ್ಟವಾಗಿದೆ. ಮಾಧ್ಯಮನು ಸಮ್ಮೋಹಕನು ತಳಿಸುವವರೆಗೂ ಕೈಗಳನ್ನು ಕೆಳಕ್ಕೆ ತರುವುದಿಲ್ಲ.

೪. 'ಮಾಧ್ಯಮ'ನನ್ನು ಆಗಲೇ ಸಮ್ಮೋಹನ ನಿದ್ರೆಗೆ ಕಳುಹಿಸಿದಾಗ, ಅವನ ತೋಳಲ್ಲಿ ಒಂದು ಮೊನಚಾದ ಸೂಜಿಯನ್ನು ನೂಕುತ್ತಿರುವುದಾಗಿ ತಿಳಿಸಿ, ಅವನಿಗೆ, ಹೇಗಿದ್ದರೂ, ಆ ಹೇಳುವಿಕೆಯಿಂದ ನೋವಾಗುವುದಿಲ್ಲ.

ನೀವು ನಿಜವಾಗಲೂ ಒಂದು ಸೂಜಿಯನ್ನು ತೋಳಲ್ಲಿ ಚುಚ್ಚಿದಾಗ ಅವನ ಮುಖದಲ್ಲಿ ಯಾವುದೇ ನೋವನ್ನು ಅನುಭವಿಸಲಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಇಂತಹ ಪ್ರಯೋಗಗಳು ಶಸ್ತ್ರಚಿಕಿತ್ಸೆಯಲ್ಲಿ ತುಂಬಾ ಉಪಯೋಗಕರವಾಗಿವೆ.

೫. 'ಮಾಧ್ಯಮ'ನು ಸಮ್ಮೋಹನ ನಿದ್ರೆಯಲ್ಲಿದ್ದಾಗ, ಅವನಿಗೆ ತಾನು ಆಳವಾಗಿ ನಿದ್ದೆಮಾಡುತ್ತಿರುವುದಾಗಿ ತಿಳಿಸಿ. ಅವನಿಗೆ ತಾನು ಗುಲಾಬಿ ಸುಗಂಧದ ವಾಸನೆಯನ್ನು ನೋಡಿದ ತಕ್ಷಣವೇ ಎಚ್ಚರವಾಗುತ್ತದೆಂದು ಹೇಳಿ. ಈಗ ಅವನಿಗೆ ಗುಲಾಬಿ ಸುಗಂಧದ ವಾಸನೆಯನ್ನು ನೋಡಿಸಿ.

ಅವನು ನಿಧಾನವಾಗಿ ಕಣ್ಣುಗಳನ್ನು ತೆರೆಯುವನು, ನಿಮ್ಮ ಪ್ರಯೋಗವು ಯಶಸ್ವಿಯಾಗಿರುವ ಹಾಗೆ ಪರಿಗಣಿಸಿ.

೬. 'ಮಾಧ್ಯಮ'ನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಅವನು ಆಳವಾದ ನಿದ್ರೆಯಲ್ಲಿದ್ದಾನೆಂದು ಅವನಿಗೆ ತಿಳಿಸಿ ನೀವು 1 ರಿಂದ 10 ರವರೆಗೆ ಎಣಿಸುವುದಾಗಿ ತಿಳಿಸಿ.

ನೀವು 10 ನ್ನು ಹೇಳಿದ ತಕ್ಷಣ ಅವನು ಕಣ್ಣುಗಳನ್ನು ತೆರೆಯುವುದಾಗಿ ಸಹ ತಿಳಿಸಿ. ಈಗ ಸಂಖ್ಯೆಗಳನ್ನು ಎಣಿಸಿ. ಯಾವುದೇ ವಿಷಯದಲ್ಲಿ ನೀವು ಬಹಳ ನಿಧಾನವಾಗಿರಬೇಕು.

ನೀವು 10 ಎಂದಾಕ್ಷಣ ಅವನು ಕಣ್ಣುಗಳನ್ನು ತೆರೆದರೆ, ಅದು ನಿಮ್ಮ ಯಶಸ್ಸಿಯ ಚಿಹ್ನೆಯೆಂದು ಪರಿಗಣಿಸಬೇಕು.

## ಸಮ್ಮೋಹನ ನಂತರದ ಕೃತ್ಯಗಳನ್ನು ಪರೀಕ್ಷಿಸುವುದು.

ಈ ಕೆಳಗೆ ನಾವು ಮಾಧ್ಯಮನ ಸಮ್ಮೋಹನ ನಂತರದ ಕೃತ್ಯಗಳು ನೀವು ಆಜ್ಞಾಪಿಸಿರುವುದಕ್ಕೆ ಸರಿಹೊಂದುವುದೋ ಇಲ್ಲವೋ ಎಂದು ಪರೀಕ್ಷಿಸಿಕೊಳ್ಳಲು ಪ್ರಯೋಗಗಳ ಗುಂಪನ್ನು ಕೊಟ್ಟಿದ್ದೇವೆ. ಈ ಪ್ರಯೋಗಗಳಲ್ಲಿ ನೀವು ಒಂದನೇ ಮತ್ತು ಎರಡನೇ ಹಂತಗಳ ಸಮ್ಮೋಹನ ನಿದ್ರೆಯನ್ನು ದಾಟಿರುವಂತಹ 'ಮಾಧ್ಯಮ'ರಲ್ಲಿ ಮಾತಾಡುವಿರಿ.

೧. 'ಮಾಧ್ಯಮ'ನಿಗೆ ಹೇಳಿ:ನೋಡು. ನಾನು ನಿನ್ನನ್ನು ಎಬ್ಬಿಸುತ್ತಿದ್ದೇನೆ. ನೀನು ಎದ್ದತಕ್ಷಣ ಕಪಾಟಿನಲ್ಲಿರುವ ಕೆಲ ಬಿಸ್ಕತ್ತುಗಳನ್ನು ತಿನ್ನಬೇಕು.'ಮಾಧ್ಯಮ'ನು ಕಪಾಟಿನಲ್ಲಿರುವ ಬಿಸ್ಕತ್ತುಗಳನ್ನು ತಿನ್ನುವವರೆಗೂ ಅಂದಾಜು ಒಂದು ನಿಮಿಷ ಘೋರವಾಗಿ ತಳಮಳಗೊಳ್ಳುವನೆಂಬುದನ್ನು ನೀವು ನೋಡುವಿರಿ.

೨. 'ಮಾಧ್ಯಮ' ನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಅವನಿಗೆ ಹೇಳಿ:ನೋಡು, ನಾನು ನಿನಗೆ ಎಚ್ಚಿಸುತ್ತಿದ್ದೇನೆ. ಆದರೆ ನೀನು ಕುರ್ಚಿಗೆ ಅಂಟಿಕೊಂಡಿದ್ದೀಯ. ನಿನಗೆ ಕುರ್ಚಿಯಿಂದ ಬೇರೆಯಾಗಲು ಮತ್ತು ಮೇಲೇಳಲೂ ಆಗುವುದಿಲ್ಲ. ನೀನು ಯಥಾರೀತಿಯಾಗಿ ಏಳಲು ಪ್ರಯತ್ನಿಸು. ನಿನ್ನ ಕೈಲಾಗುವುದಿಲ್ಲ. ನೀನು ಸಂಪೂರ್ಣವಾಗಿ ಕುರ್ಚಿಗೆ ಅಂಟಿಕೊಂಡಿದ್ದೀಯ. ಈಗ ನೀವು ಅವನ ಕಣ್ಣುಗಳನ್ನು ತರೆಯಿಸಿರಿ.

ಅವನಿಗೆ ಕುರ್ಚಿಯಿಂದ ಮೇಲೇಳಲು ಆಗುತ್ತಿಲ್ಲವೆಂದು ನೀವು ನೋಡುವಿರಿ. ಅವನು ಮೇಲೇಳಲು ಕಷ್ಟಪಟ್ಟು ಪ್ರಯತ್ನಿಸುತ್ತಿರುವುದರಲ್ಲಿ ಅನುಮಾನವಿಲ್ಲ. ಆದರೆ ಅವನು ಯಶಸ್ವಿಯಾಗುವುದಿಲ್ಲ.

'ಮಾಧ್ಯಮ'ನು ಸಮ್ಮೋಹನ ನಿದ್ರೆಯಲ್ಲಿದ್ದಾಗ ನೀವು ಕೊಟ್ಟಂತಹ ಆಜ್ಞೆಗಳನ್ನು ಅನುಸರಿಸುತ್ತಿದ್ದಾನೆಂದು ಇದರ ಅರ್ಥ.

೩. 'ಮಾಧ್ಯಮ'ನು ಸಮ್ಮೋಹನಗೊಂಡು ನಿದ್ರೆಯಲ್ಲಿದ್ದಾಗ, ಅವನಿಗೆ ತನ್ನ ಹೆಸರು ಜಗಮೋಹನ ನೆಂದು ತಿಳಿಸಿ, ಹಾಗೂ ಈ ಹೆಸರನ್ನು ಅವನು ಎದ್ದ ನಂತರವೂ ಜ್ಞಾಪಕದಲ್ಲಿಟ್ಟುಕೊಳ್ಳುವನೆಂದು ಹೇಳಿ. ಅವನು ತನ್ನ ನಿಜವಾದ ಹೆಸರನ್ನು ಮರೆತಿರುವುದಾಗಿ ತಿಳಿಸಿ.

ಈಗ, ಈ ಹಂತದಲ್ಲಿ, ಅವನನ್ನು ಎಚ್ಚರಿಸಿ. ಅವನ ಹೆಸರೇನೆಂದು ಕೇಳಿ. ಅವನು ತನ್ನ ಹೆಸರು ಜಗಮೋಹನನೆಂದು ತಿಳಿಸುವನು.

೪. 'ಮಾಧ್ಯಮ'ನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಅವನನ್ನು ನೀವು ಎಬ್ಬಿಸುತ್ತಿರುವುದಾಗಿ ಹೇಳಿ. ಅವನು ಎದ್ದನಂತರ, ಅವನು ಪುಸ್ತಕ ಕಪಾಟಿನ ಕಡೆಗೆ ಮುನ್ನುಗ್ಗಿ, ಇಂತಿಂತಹ ಪುಸ್ತಕವನ್ನೇ ತೆಗೆದುಕೊಂಡು 60 ನೇ ಪುಟವನ್ನು ತೆಗೆದು ನಿಮ್ಮ ಮುಂದೆ ಇಡಬೇಕೆಂದು ಸಹ ಹೇಳಿ.

'ಮಾಧ್ಯಮ'ನು, ನಿಮ್ಮ ಯಶಸ್ಸಿಯ ಸಂಕೇತವಾಗಿರುವಂತಹ, ನಿಮ್ಮ ಆಜ್ಞೆಗಳನ್ನು ನಡೆಸುವವರೆಗೂ ಅವಿಶ್ರಾಂತನಾಗುವನು.

೫. 'ಮಾಧ್ಯಮ'ನಿಗೆ ಒಂದು ಖಾಲಿ ಕಾಗದವನ್ನು ತೋರಿಸಿ. ಅವನು ಸಮ್ಮೋಹನ ನಿದ್ರೆಯಲ್ಲಿದ್ದಾಗ ಮಾತ್ರ ನೀವು ತೋರಿಸಿರುವುದನ್ನು ಖಚಿತ ಪಡಿಸಿಕೊಳ್ಳಿ. ಆ ಖಾಲಿ ಕಾಗದದಲ್ಲಿ ದೊಡ್ಡ ರಾಜನಾದ ಶಿವಾಜಿಯ ಚಿತ್ರವಿದೆ ಎಂದು ತಿಳಿಸಿ. ತಾನು ಎದ್ದನಂತರ ಅದನ್ನು ತೆಗೆದುಕೊಂಡು ನಿಮಗೆ ತೋರಿಸಬೇಕೆಂದು ಸಹ ಹೇಳಿ. ನೀವು ನಾಲ್ಕು ಹಲವಾರು ಚಿತ್ರಗಳನ್ನು ತೆಗೆದುಕೊಂಡು ಅದರಲ್ಲಿ ಆ ಖಾಲಿ ಕಾಗದವನ್ನೂ ಸೇರಿಸಿ. ಅವನು ಎಲ್ಲಾ ಕಾಗದಗಳನ್ನು ಪರೀಕ್ಷಿಸಿ ಒಂದು ಖಾಲಿ ಮತ್ತು ಚಿತ್ರವಿರುವ ಉಳಿದ ನಾಲ್ಕು ಕಾಗದಗಳು.ನಿಮಗೆ ಅವನು ಖಾಲಿ ಕಾಗದವನ್ನು ಕೊಡುವನು. ಏಕೆಂದರೆ ಅವನು ಈ ಕಾಗದದಲ್ಲೇ ನೀವು ತೋರಿಸಿರುವಂತಹ ಶಿವಾಜಿಯ ಚಿತ್ರವನ್ನು ನೋಡಿರುತ್ತಾನೆ. ನೀವು ಅವನಿಗೆ ಅದು ಯಾರ ಚಿತ್ರವೆಂದು ಕೇಳಿ. ಅದು ಶಿವಾಜಿಯದೆಂದು ಅವನು ಹೇಳುವನು.

೬. 'ಮಾಧ್ಯಮ'ನು ಸಮ್ಮೋಹನ ನಿದ್ರೆಯಲ್ಲಿದ್ದಾಗ, ನಾಲ್ಕು ಲೋಟಗಳನ್ನು ನೀರಿನಿಂದ ತುಂಬಿರಿ ಮತ್ತು ಆ ಲೋಟಗಳಲ್ಲಿ ತಂಪಾದ ಪಾನೀಯಗಳು ತುಂಬಿದೆ ಎಂದು ಹೇಳಿರಿ. ಅವನು ಎಚ್ಚೆತ್ತುಕೊಂಡ ನಂತರ ನಿಮ್ಮ ನಾಲ್ಕು ಸ್ನೇಹಿತರಿಗೆ ನೀಡಿ ಒಂದನ್ನು ತಾನೇ ಸೇವಿಸಬೇಕೆಂದು ಸಹ ಹೇಳಿ.

ಈಗ, ಈ ಹಂತದಲ್ಲಿ ಅವನನ್ನು ಎಬ್ಬಿಸಿ. ಸಮ್ಮೋಹನ ಆಜ್ಞೆಯನ್ನು ಅನುಸರಿಸಿ ಅವನು ನಾಲ್ಕು ಲೋಟಗಳನ್ನು ನಿಮ್ಮ ಸ್ನೇಹಿತರಿಗೆ ನೀಡಿ. ತನಗೇ ಒಂದನ್ನು ತೆಗೆದುಕೊಂಡು ಅದರಿಂದ ಓರ್ವನು ಪಾನೀಯವನ್ನು ಹೀರುವ ಹಾಗೆ ಹೀರುವನು. ಅವನಿಗೆ ಶುದ್ಧ ನೀರು ಪಾನೀಯದ ಹಾಗೆ ರುಚಿಸುವುದು.

ಈ ಕೆಳಗಿನ ಪ್ರಯೋಗಗಳನ್ನು ಮಾಧ್ಯಮನು ಸಮ್ಮೋಹನದ ಮೂರನೇ ಹಂತವನ್ನು ತಲುಪಿದ ನಂತರ ಮಾತ್ರ ತೆಗೆದುಕೊಳ್ಳಬೇಕು. ಈ ಹಂತದಲ್ಲಿ ಮಾಧ್ಯಮನ ಅಂತರ್ಮನಸ್ಸು ಸಂಪೂರ್ಣವಾಗಿ ಸ್ವತಂತ್ರವಾಗಿರುತ್ತದೆ. ಅದರ ಸೂಕ್ಷ್ಮದೇಹದೊಂದಿಗೆ ಅದು ಎಲ್ಲಿಗಾದರೂ ಹೋಗಬಹುದು. ಅದು ಭೂಮಿಯ ಮೇಲಿನ ಯಾವುದಾದರೂ ಘಟನೆಯನ್ನು ನೋಡಿ ವರದಿಯನ್ನು ಸಹ ಒಪ್ಪಿಸಬಹುದು.

ಸಮ್ಮೋಹನಗೊಂಡ ವ್ಯಕ್ತಿಗೆ ಅವನು ಮೂರನೇ ಹಂತವನ್ನು ತಲುಪಿದಾಗ ಸಮಯ ಮತ್ತು ಸ್ಥಳದ ಯಾವುದೇ ಶಕ್ತಿಗಳಿಂದ ಸಂಪನ್ನನಾಗಿರುತ್ತಾನೆ.

ಒಮ್ಮೆ ನಾನು ಈ ತರಹದ ಪ್ರಯೋಗವನ್ನು ಮಾಡಬೇಕಾಯಿತು. ಲಕ್‌ನೌದಿಂದ ನನ್ನ ಓರ್ವ ಸ್ನೇಹಿತನು ನನ್ನಲ್ಲಿಗೆ ಬಂದನು. ಅವನ ಮಗ ಗೋವಿಂದನು ಪರಾರಿಯಾಗಿದ್ದನು. ಅವನ ಸುಳಿವೇ ಸಿಗುತ್ತಿರಲಿಲ್ಲ.

ಅವನು ನಿಜವಾಗಲೂ ಹೆಚ್ಚು ಕಡಿಮೆಯಾಗಿದ್ದನು. ಆ ಹುಡುಗನು ಅವನ ಒಬ್ಬನೇ ಮಗನಾಗಿದ್ದನು.

ನಾನು ಹೆಚ್ಚೆಂದರೆ ಹತ್ತು ವರ್ಷದ ಹುಡುಗನನ್ನು 'ಮಾಧ್ಯಮ'ನನ್ನಾಗಿ ಆಯ್ದುಕೊಂಡೆ.

ಅವನನ್ನು ನಾನು ಸಮ್ಮೋಹನಗೊಳಿಸಿ ಅವನನ್ನು ಮೂರನೇ ಹಂತದವರೆಗೆ ತೆಗೆದುಕೊಂಡು ಹೋದೆ. ಅವನಿಗೆ ಗೋವಿಂದನೆನ್ನುವ ಹುಡುಗನು ಆ ಸಮಯದಲ್ಲಿ ಎಲ್ಲಿದ್ದಾನೆಂದು ಹುಡುಕಲು ಹೇಳಿದೆ.

ಕೆಲವೇ ನಿಮಿಷಗಳಲ್ಲಿ ಮಾಧ್ಯಮನು ಆ ಹುಡುಗನು ಹರಿದ್ವಾರದಲ್ಲಿ ಇಂತಿಂತಹ ಸಾಧುವಿನೊಡನೆ ಇರುವುದಾಗಿ ತಿಳಿಸಿದನು. ವಾಸ್ತವದಲ್ಲಿ ಅದೇ ಸಾಧು ಅವನನ್ನು ಅಪಹರಿಸಿದ್ದನು. ಆ 'ಮಾಧ್ಯಮ'ನು ಆ ಸಾಧುವಿನ ಹೆಸರು ಮತ್ತು ವಿಳಾಸಗಳನ್ನು ಮತ್ತು ಅವನ ಉಡುಗೆಯ ವಿವರಗಳನ್ನು ತಿಳಿಸಿದನು. ಅವನು ಗೋವಿಂದನು ಆ ಸಮಯದಲ್ಲಿ ಬಹಳ ಯಾತನೆಯಲ್ಲಿ ಇರುವುದಾಗಿ ತಿಳಿಸಿದನು. ಅವನಿಗೆ ಕಿರುಕುಳಕೊಡಲಾಗುತ್ತಿತ್ತು.

ನಾನು 'ಮಾಧ್ಯಮ'ನನ್ನು ಎಲ್ಲರ ಎದುರಿನಲ್ಲೇ ಸಮ್ಮೋಹನಗೊಳಿಸಿದೆ. ಆದ್ದರಿಂದ ಅವರೆಲ್ಲರೂ ಸಂಪೂರ್ಣ ವರದಿಯನ್ನು ಕೇಳಿ ಮರುದಿನ ಬೆಳಗ್ಗೆ ಹರಿದ್ವಾರಕ್ಕೆ ಹೊರಟರು. ಅವರು ಆ ಹುಡುಗ ಗೋವಿಂದನನ್ನು ಖಚಿತವಾಗಿ ಅವರಿಗೆ ತಿಳಿದಂತಹ ಸ್ಥಳದಲ್ಲೇ ಕಂಡರು. ಸಾಧುವು ಅದೇ ರೀತಿಯ ಉಡುಗೆಯಲ್ಲಿದ್ದನು.

ನಾನು ಇದೇ ರೀತಿ ಪ್ರಯೋಗಗಳನ್ನು ಬಹಳ ಪ್ರಸಂಗಗಳಲ್ಲಿ ನಡೆಸಿದ್ದೇನೆ. ಪ್ರತಿಸಲ ನಾನು ಯಶಸ್ವಿಯಾಗಿದ್ದೇನೆ. ನೀವು ಹೇಗಿದ್ದರೂ, ಮಾಧ್ಯಮನನ್ನು ಸಮ್ಮೋಹನದ ಮೂರನೇ ಹಂತಕ್ಕೆ ತೆಗೆದುಕೊಂಡು ಹೋದಿರಾದರೆ, ಸಂಪೂರ್ಣ ಲಾಭವನ್ನು ಪಡೆಯುವಿರಿ.

ಇನ್ನೊಂದು ನಿದರ್ಶನವನ್ನು ಪ್ರಸ್ತುತಪಡಿಸಲು. 'ಮಾಧ್ಯಮ'ನಿಗೆ ಅವನು ನಿಮ್ಮನ್ನು ಶನಿವಾರ ಮುಂಜಾನೆ 9 ಗಂಟೆಗೆ ಕಾಣಬೇಕೆಂದು ಹೇಳಿ. ನೀವು ಬೇಕೂಂತಲೇ ಶನಿವಾರವೆಂದು ಹೇಳಿದಿರಿ ಅದು ಸರಿಯಾಗಿ ಈ ಪ್ರಯೋಗದ ದಿನದಿಂದ ಆರುದಿನಗಳ ನಂತರ ಬರುವುದು.

ಈಗ ನೀವು 'ಮಾಧ್ಯಮ'ನನ್ನು ಎಚ್ಚರಿಸಿ. ನೀವು ಕೊಟ್ಟ ಈ ನಿರ್ದಿಷ್ಟವಾದ ಆಜ್ಞೆಯನ್ನು ಅವನಿಗೆ ತಿಳಿಸದಿರುವ ಹಾಗೆ ನೋಡಿಕೊಳ್ಳಿ. ಅವನು ಶನಿವಾರ ಸರಿಯಾಗಿ 9 ಗಂಟೆಗೆ ನಿಮ್ಮನ್ನು ಕಾಣಲು ಬಂದಿದುದನ್ನು ನೋಡಿ ನೀವು ಸುಮ್ಮನೇ ಆಶ್ಚರ್ಯಚಕಿತರಾಗುವಿರಿ. ಅವನನ್ನು ಸಮ್ಮೋಹನ ನಿದ್ರೆಯಲ್ಲಿ ಮೂರನೇ ಹಂತಕ್ಕೆ ತೆಗೆದುಕೊಂಡು ಹೋದಾಗ ಅವನಿಗೆ ಎರಡು ತಿಂಗಳ ನಂತರ ಒಂದು ನಿರ್ದಿಷ್ಟವಾದ ಕೆಲಸವನ್ನು ಮಾಡಲು ಹೇಳಿ. ಅವನು ಆ ದಿನದಂದು ತಪ್ಪದೇ ಬರುವನು. ಇಲ್ಲವಾದರೆ ಅವನು ಪ್ರಧಾನವಾಗಿ ಅವಿಶ್ರಾಂತನಾಗುವನು. ಮೂರನೇ ಹಂತದಲ್ಲಿ ಅವನಿಗೆ ಕೊಟ್ಟಂತಹ ಆಜ್ಞೆಯನ್ನು ಅವನು ಎಂದಿಗೂ ಮರೆಯಲಾರನು.

**1.** 'ಮಾಧ್ಯಮ'ನನ್ನು ಸಮ್ಮೋಹನದ ಮೂರನೇ ಹಂತಕ್ಕೆ ಕಳುಹಿಸಿ, ನೀವೇ ಅವನ ಹಿಂದೆ ನಿಂತುಕೊಳ್ಳಿ. ಒಂದು ಪುಸ್ತಕವನ್ನು ನಿಮ್ಮ ಕೈಯಲ್ಲಿ ತೆಗೆದುಕೊಳ್ಳಿ. ಒಂದು ನಿರ್ದಿಷ್ಟವಾದ ಅಧ್ಯಾಯವು ತೆರೆದಿರಬೇಕು.

ಈಗ ನೀವು ಮನಸ್ಸಿನಲ್ಲಿ ಓದುತ್ತಿರುವ ಅಧ್ಯಾಯದ ಸಾಲುಗಳನ್ನು ಅವನಿಗೆ ಜೋರಾಗಿ ಓದಲು ಹೇಳಿ.

'ಮಾಧ್ಯಮ'ನು ನೀವು ನಿಮ್ಮ ಕಣ್ಣುಗಳನ್ನು ನೆಟ್ಟಂತಹ ಸಾಲುಗಳನ್ನೇ ಜೋರಾಗಿ ಓದಲು ಪ್ರಾರಂಭಿಸಿರುವುದನ್ನು ನೋಡಿ ನೀವು ವಿಸ್ಮಯಗೊಳ್ಳುವಿರಿ.

ಅದರ ಅರ್ಥ ಸರಳವಾಗಿದೆ. ಆ ಸಮಯದಲ್ಲಿ 'ಮಾಧ್ಯಮ'ನ ಅಂತರ್ಮನಸ್ಸು ಸಂಪೂರ್ಣವಾಗಿ ಸ್ವತಂತ್ರವಾಗಿತ್ತು. ಅದು ತಾನು ಇಚ್ಛೆಪಟ್ಟಂತಹ ಸ್ಥಳಕ್ಕೆ ಹೋಗುವ ಸ್ಥಿತಿಯಲ್ಲಿತ್ತು. ಆದ್ದರಿಂದ ಅದಕ್ಕೆ ಆ ಪುಸ್ತಕದ ಸಾಲುಗಳನ್ನು ಹುಡುಕುವುದು ದೊಡ್ಡ ಕ್ರಿಯೆಯೇನೂ ಆಗಲಿಲ್ಲ.[1]

**2.** 'ಮಾಧ್ಯಮ'ನನ್ನು ಮೂರನೇ ಹಂತಕ್ಕೆ ಸಾಗಿಸಿ ಅವನು ಅರಿವಿನಲ್ಲಿದ್ದಾಗ ಯಾರಿಗೂ ತನ್ನ ಬಾಲ್ಯದ ಒಂದು ಹೇಳದಂತಹ ಘಟನೆಯನ್ನು ವರ್ಣಿಸಲು ಹೇಳಿ. ನೀವು ಉದಾಹರಣೆಗೆ ಒಂದು ಪ್ರೇಮ ಸಂಬಂಧ ಅಥವಾ ಕಳ್ಳತನದ ಒಂದು ಘಟನೆ ಅಥವಾ ಯಾರೇಯಾದರೂ ತಮ್ಮಲ್ಲಿಯೇ ಇಟ್ಟುಕೊಳ್ಳಬಹುದಾದಂತಹ ಯಾವ ವಿಷಯವನ್ನಾದರೂ ಕೇಳಬಹುದು.

ಅವನು ತನ್ನಲ್ಲಿಯೇ ಏನನ್ನೂ ಇಟ್ಟುಕೊಳ್ಳದಿರುವುದನ್ನು ನೋಡಿ ನಿಮಗೆ ಆಶ್ಚರ್ಯವಾಗುವುದು. ಅವನು ಎಲ್ಲವನ್ನೂ ನಿಮಗೆ ಸತ್ಯವಾಗಿಯೇ ಹೇಳುವನು.

**3.** 'ಮಾಧ್ಯಮ'ನನ್ನು ಮೂರನೇ ಹಂತಕ್ಕೆ ಕಳುಹಿಸಿ ಅವನು ಅತಿಯಾದ ಕುಡುಕನಾಗಿದ್ದಾನೆಂದು ತಿಳಿಸಿ. ಅದು ಆರೋಗ್ಯಕ್ಕೆ ಹಾನಿಕರ. ಅದರ ಅಭ್ಯಾಸಕ್ಕೆ ವಶವಾಗಿರುವವರನ್ನು ಅದು ಏನು ಮಾಡುತ್ತದೆಂದು ಹೇಳಿ.

ಈಗ ಅವನು ಈಗಾಗಲೇ ಅತೀ ಕುಡಿತಕ್ಕೆ ಬಲಿಯಾಗಿದ್ದಾನೆಂದು ಆಜ್ಞಾಪಿಸಿ. ಇನ್ನು ಮುಂದೆ ಇಂತಹ ಕೆಟ್ಟ ಅಭ್ಯಾಸದಿಂದ ದೂರವಾಗಬೇಕು.

ಈ ಹಂತದಲ್ಲಿ ಸಮ್ಮೋಹನ ಮಟ್ಟವನ್ನು ಕೊನೆಗಾಣಿಸಿ ಅವನನ್ನು ಕಳುಹಿಸಿಬಿಡಿ. ಅವನು ಅತೀ ಕುಡಿತದ ಹಿಡಿತವನ್ನು ಬಿಟ್ಟಿರುವ ಬಗ್ಗೆ ಗುಪ್ತವಾಗಿ ವಿಚಾರಿಸಿ.

ಅವನು ಪರಿಪೂರ್ಣವಾಗಿ ಅತೀ ಕುಡಿತವನ್ನು ತ್ಯಜಿಸಿರುವುದನ್ನು ಕೇಳಿ ನೀವು ಚಕಿತರಾಗುವಿರಿ. ಅವನು ಕುಡಿತಗಳ ಕಡೆ ನೋಡಿದಾಗಲೆಲ್ಲಾ ಅದು ಒಂದು ಕೆಟ್ಟ ವಾಸನೆಯಾಗಿ ಕಾಣಿಸುವುದು. ಅವನಿಗೆ ಒಂದೋ ಎರಡು ಗುಟುಕು ತೆಗೆದುಕೊಳ್ಳಬೇಕೆನಿಸಬಹುದು ಆದರೆ ವಾಸನೆಯದೇ ಮೇಲುಗೈಯಾಗಿ ಅವನು ಆ ಅಭ್ಯಾಸದಿಂದ ದೂರವಿರುವನು.

**4.** ನಿಮ್ಮಲ್ಲಿ ಪ್ರಯೋಗ ನಡೆಸಲು ಒಬ್ಬ ವ್ಯಕ್ತಿಯಿದ್ದರೆ, ನೀವು ಅವನನ್ನು ಸಮ್ಮೋಹನ ಗೋಳಿಸಿ ಮೂರನೇ ಹಂತಕ್ಕೆ ಒಯ್ಯಿರಿ. ಅವನ ಕಾಲಿನಲ್ಲಿ ಕೆಲಸ ನಡೆಸಬೇಕೆಂದು ಅವನಿಗೆ ತಿಳಿಸಿ. ಅದು ಶಸ್ತ್ರಚಿಕಿತ್ಸೆಗೆ ಒಳಗಾಗುತ್ತದೆ. ಆದರೆ ಅವನಿಗೆ ಏನೇಯಾದರೂ ನೋವಾಗುವುದಿಲ್ಲ. ಅಲ್ಲದೆ ಅವನಿಗೆ ನೀವು 1 ರಿಂದ 20 ರವರೆಗೆ ಎಣಿಸುವವರೆಗೂ ಎಚ್ಚರವಾಗುವುದಿಲ್ಲವೆಂದು ಸಹ ಹೇಳಿ.

ಈ ಪದ್ಧತಿಯನ್ನು ಅನುಸರಿಸಿ ಶಸ್ತ್ರಚಿಕಿತ್ಸೆಗೆ ನಿಮಗೆ ಬೇಕಾದಷ್ಟು ಸಮಯವನ್ನು ತೆಗೆದುಕೊಳ್ಳಬಹುದು ಹಾಗೂ 'ಮಾಧ್ಯಮ'ನು ನೀವು 20 ಎಣಿಸುವವರೆಗೂ ಎಚ್ಚರವಾಗುವುದಿಲ್ಲ.

ಮಾಧ್ಯಮನು ನೀವು ಹೇಳುವುದನ್ನೆಲ್ಲಾ ಕೇಳುವನೆಂದು ಗಮನದಲ್ಲಿಟ್ಟುಕೊಳ್ಳಬೇಕು. ಒಂದು ವೇಳೆ ಬೇರೆ

1. ಈ ಹಂತದಲ್ಲಿ 'ಮಾಧ್ಯಮ'ನ ಅಂತರ್ಮನಸ್ಸು ಸಂಪೂರ್ಣ ಸ್ವತಂತ್ರವಾಗಿರುತ್ತದೆ. ಅದಕ್ಕೆ ಬೇಕಾದ ಸ್ಥಳಕ್ಕೆ ಅದು ಹೋಗಬಹುದು. ಅದು ಸಮ್ಮೋಹನ ಬಿಡುವಂತಹ ಪುಸ್ತಕದ ಒಂದು ಭಾಗದಲ್ಲಿ ಒಳನುಗ್ಗಿ ಅದೇ ಸಾಲುಗಳನ್ನು ಅವನಿಗೋಸ್ಕರ ಓದಬಹುದು.

ಜನರೂ ಇರಬಹುದು ಅವರು ಮಾತಾಡಿದಾಗ ಅವರ ಆಜ್ಞೆಗಳನ್ನು ಒಂದು ಕಡೆ ಬಿಡಿ ಮಾಧ್ಯಮನು ಅದನ್ನು ಕೇಳಿಸಿಕೊಳ್ಳುವುದೂ ಇಲ್ಲ.

ನೀವು 20 ರವರೆಗೆ ಎಣಿಸಿದ ನಂತರ ಅವನು ಎಚ್ಚೆತ್ತು ಕೊಳ್ಳುವನು. ಅದೇ ಕೆಲಸವನ್ನು ಬೇರೆಯವರು ಮಾಡಿದರೆ ಅವನು ಎಚ್ಚೆತ್ತುಕೊಳ್ಳುವುದಿಲ್ಲ.

ಹೀಗೆ ಓರ್ವನು, ಸಮ್ಮೋಹನವು, ನಿರ್ದಿಷ್ಟವಾಗಿ ಮೂರನೇ ಹಂತವು, ಮಾನವತ್ವಕ್ಕೆ ಅಪಾರವಾದ ಒಳ್ಳೆಯದನ್ನು ಮಾಡುವ ಸಾಮರ್ಥ್ಯವುಳ್ಳದ್ದಾಗಿದೆ ಎಂದು ನೋಡಬಹುದು. ಅದು ನಮ್ಮನ್ನು ಎಲ್ಲಾ ತೊಂದರೆಗಳಿಂದಲೂ ದೂರ ಮಾಡುವುದು. ಸಮ್ಮೋಹಕನು ಸ್ವಸಹಾಯ ಮಾಡಿಕೊಂಡು ಬೇರೆಯವರಿಗೂ ಸಹಾಯಮಾಡಬಹುದು.

ಒಮ್ಮೆ 'ಮಾಧ್ಯಮ'ನು ಮೂರನೇ ಹಂತವನ್ನು ತಲುಪಿದರೆ ಅವನಲ್ಲಿ ಆಸಕ್ತಿ ಇರುವಂತಹ ಏನನ್ನಾದರೂ ಅವನಿಂದ ಮಾಡಿಸಬಹುದು.

ಕೆಲವರನ್ನು ನಾವು ಸಮ್ಮೋಹನಗೊಳಿಸಲಾಗುವುದಿಲ್ಲ ಎಂದು ನಾವು ಈಗಾಗಲೇ ಸ್ಪಷ್ಟಪಡಿಸಿದ್ದೇವೆ. ಅಂತಹ ವ್ಯಕ್ತಿಗಳು ಯಾವಾಗಲೂ ತಮ್ಮ ತಲೆ ಹಿಡುಕತನಕ್ಕೆ, ವಾದಗಳಲ್ಲಿ, ಅತೀ ಬುದ್ಧಿವಂತಿಕೆಗೆ ಮತ್ತು ಕ್ರೂರತ್ವಕ್ಕೆ ಕುಪ್ರಸಿದ್ಧರಾಗಿರುತ್ತಾರೆ. ಆದರೂ ಅಂತಹ ವ್ಯಕ್ತಿಗಳನ್ನು ಸಮ್ಮೋಹನಗೊಳಿಸ ಬೇಕಾದರೆ ಕೆಲವೊಂದು ಪದ್ಧತಿಗಳಿವೆ ಅವುಗಳನ್ನು ಉಪಯೋಗಿಸಿ ಅವರನ್ನೂ ಸಮ್ಮೋಹನ ಪ್ರಭಾವಕ್ಕೆ ಒಳಗಾಗಿಸಬಹುದು. ನಿಜ, ಅಂತಹವರನ್ನು ನಿಭಾಯಿಸುವಲ್ಲಿ ಪ್ರಾರಂಭದವರು ಯಶಸ್ವಿಯಾಗುವುದಿಲ್ಲ. ಹೇಗಿದ್ದರೂ, ಅನುಭವಸ್ಥ ಸಮ್ಮೋಹಕರು ಅಂತಹವರನ್ನು ಅಂತಹ ವ್ಯಕ್ತಿಗಳನ್ನೂ ಸಮ್ಮೋಹನಗೊಳಿಸುವರು.

ಕೆಲವೊಮ್ಮೆ ಅನುಭವವುಳ್ಳ ಸಮ್ಮೋಹಕರೂ ಅಂತಹ ವ್ಯಕ್ತಿಗಳನ್ನು ಸಮ್ಮೋಹನಗೊಳಿಸುವಲ್ಲಿ ವಿಫಲರಾಗಿರುವುದನ್ನು ಕಾಣಲಾಗಿದೆ. ಆದ್ದರಿಂದ ನಾವು ಅಂತಹ ವ್ಯಕ್ತಿಗಳನ್ನು ಸಮ್ಮೋಹನಗೊಳಿಸಲು ಕೆಲವು ಪದ್ಧತಿಗಳನ್ನು ಚರ್ಚಿಸಲು ಇಚ್ಛಿಸುತ್ತೇವೆ.

ಅಂತಹ ವ್ಯಕ್ತಿಗಳನ್ನು ಸಮ್ಮೋಹನಗೊಳಿಸುವ ಕಾರ್ಯಕ್ಕೆ ಎರಡು ಪದ್ಧತಿಗಳಿವೆ (i) ಸಮ್ಮೋಹನ ಸಂಗೀತದ ರೆಕಾರ್ಡ್‌ಗಳನ್ನು ಹಾಡಿಸುವುದು. (ii) ಮ್ಯಾಟ್ರೋನೋಮ್ ಎಂಬ ಒಂದು ವಾದ್ಯವನ್ನು ಉಪಯೋಗಿಸುವುದು.

ಸಮ್ಮೋಹನ ಸಂಗೀತದ ರೆಕಾರ್ಡ್‌ಗಳು ವಿದೇಶಗಳಲ್ಲಿ ದೊರೆಯುತ್ತವೆ. ಒಬ್ಬ ನಿರ್ದಿಷ್ಟ ವ್ಯಕ್ತಿಯು ಹಾಸಿಗೆ ಮೇಲೆ ಮಲಗಿಕೊಂಡಿದ್ದಾಗ, ಅವನು ಸಂಗೀತವನ್ನು ಕೇಳುತ್ತದ್ದಹಾಗೆ ನಿದ್ದೆಹೋಗುವನು. ಅವನು ಸಮ್ಮೋಹನಗೊಳ್ಳುವನು. ಈಗ ಅವನಿಂದ ನಿಮಗೆ ಬೇಕಾದುದನ್ನು ಮಾಡಿಸಿಕೊಳ್ಳಬಹುದು.

ಮ್ಯಾಟ್ರೋನೋಮ್ ಇದು ಭಾರತದಲ್ಲಿ ದೊರೆಯುವಂತಹುದು, ಟಿಕ್ ಶಬ್ದವನ್ನು ಉತ್ಪಾದಿಸುತ್ತದೆ. ಟಿಕ್ , ಟಿಕ್ ಅದು ಈ ತರಹದ ಶಬ್ದವನ್ನು ಉತ್ಪಾದಿಸುತ್ತದೆ. ಅದು ಒಂದು ನಿಮಿಷಕ್ಕೆ ಒಂದು ನೂರು ಸಾರಿ ಟಿಕ್ ಎನ್ನುತ್ತದೆ. ಮಾಧ್ಯಮನನ್ನು ಒಂದು ಮೆತ್ತನೆಯ ಅನುಕೂಲವಾದ ಹಾಸಿಗೆಯ ಮೇಲೆ ಮಲಗಿಸಿ. ಮ್ಯಾಟ್ರೋನೋಮನ್ನು ಅವನ ಹತ್ತಿರದಲ್ಲಿ ಇಡಿರಿ. ಅವನಿಗೆ ಆ ಟಿಕ್ ಎನ್ನುವ ಶಬ್ದ ಅವನಿಗಾಗಿ ಇದೆ ಎಂದು ಹೇಳಿ. ಪ್ರತಿ ಟಿಕ್ ನೀನು ನಿದ್ರೆ ಹೋಗು ಎಂದರ್ಥ. ಅವನು ತನ್ನ ಏಕಾಗ್ರತೆಯನ್ನು ಆ ಟಿಕ್ ಮೇಲೆ ಗಮನವಿಡಬೇಕು. ಉತ್ಪಾದವಾದ ಟಿಕ್ ಟಕ್ ಗಳಿಂದ ಅವನು ನಿದ್ದೆಹೋಗು ನಿದ್ದೆಹೋಗು ಎಂದು ಕೇಳಿಸಿಕೊಳ್ಳುತ್ತಾನೆ.

ಸ್ವಲ್ಪ ಹೊತ್ತಿನ ನಂತರ ಅವನು ನಿದ್ದೆ ಹೋಗುತ್ತಾನೆ. ಅದು ಸಮ್ಮೋಹನ ನಿದ್ರೆ. ಈಗ ನಿಮಗೆ ಬೇಕಾದಂತಹ ಪ್ರಯೋಗಗಳನ್ನು ಅವನ ಮೇಲೆ ನಡೆಸಬಹುದು.

ಈ ವಾದ್ಯಕ್ಕೆ ಒಂದು ಕತ್ತಲು ಕೋಣೆಯನ್ನು ಆಯ್ದುಕೊಳ್ಳಿ. ಏಕೆಂದರೆ ಕೆಂಪು ದೀಪವು ಸರಿಯಾಗಿ ಗೋಚರವಾಗಿ ಅದು ಮಾಧ್ಯಮನಿಗೆ ಗಣನೀಯವಾಗಿ ಪರಿಣಮಿಸುತ್ತದೆ. ಈ ಪ್ರಯೋಗಕ್ಕೆ ಯುಕ್ತ ಸಮಯವೆಂದರೆ ಸಂಜೆ ಅಥವಾ ಮುಂಜಾನೆ. ನಿಮಗೆ ದಿನದಲ್ಲಿ ಈ ಪ್ರಯೋಗವನ್ನು ನಡೆಸಬೇಕೆಂದಿದ್ದರೆ ಕೋಣೆಯ ಬಾಗಿಲುಗಳನ್ನು ಮುಚ್ಚಿ ಎಲ್ಲಾ ಪರದೆಗಳನ್ನು ಹಾಕುವುದು ಉಚಿತವು.

ಮಾಧ್ಯಮನು ಹಾಸಿಗೆಯ ಮೇಲೆ ಮಲಗಿಕೊಳ್ಳುತ್ತಿದ್ದ ಹಾಗೆ, ನೀವು ಅವನನ್ನು ಸಾಧಾರಣವಾಗಿ ಮೋಹಗೊಳಿಸುವಂತಹ ವಿಷಯಗಳನ್ನು ನಿರ್ಬಂಧ ರೀತಿಯಲ್ಲಿ ಮಾತನಾಡಿ ಅವನ ವಿಶ್ವಾಸವನ್ನು ಗೆಲ್ಲುವುದು ಒಳ್ಳೆಯದು.

ಅವನ ಕಡೆ ಮುಖವಾಗಿರುವಂತಹ ಮ್ಯಾಟ್ರೋನೋಮ್ ನಲ್ಲಿ ಅಳವಡಿಸಿರುವಂತಹ ಗಾಜಿನ ಕಡೆಗೆ ಅವನಿಗೆ ತದೇಕಚಿತ್ತದಿಂದ ನೋಡಲು ಹೇಳುವಿರಿ. ಅದು ಕೆಂಪು ದೀಪವನ್ನು ಕೊಡುವುದು, ಅದು ಟಿಕ್ ನ ಶಬ್ದದೊಂದಿಗೆ ಮಿನುಗುವುದು.

ನಿಮ್ಮ 'ಮಾಧ್ಯಮ'ನಿಗೆ ಆ ಕೆಂಪು ದೀಪವು ದಣಿವನ್ನುಂಟು ಮಾಡುತ್ತದೆ ಮತ್ತು ಕಣ್ಣಿನ ನರಗಳಿಗೆ ನಿದ್ದೆಬಂದಂತಾಗುತ್ತದೆ ಎಂದು ಹೇಳಿ. ತಾನೂ ಸಹ ಕೆಂಪು ದೀಪದ ಪ್ರಭಾವಕ್ಕೊಳಗಾಗುತ್ತಿದ್ದಾನೆ. ತನ್ನ ಕಣ್ಣುಗಳಲ್ಲಿ ಸಹ ನಿದ್ರೆ ಬರುತ್ತಿದೆ. ಅವನು ನಿದ್ದೆಹೋಗುತ್ತಿದ್ದಾನೆ. ಈಗ ನೀನು ನಿದ್ದೆ ಮಾಡು— ನಿದ್ದೆಮಾಡು—ನಿದ್ದೆ ಮಾಡು.

ಮಾಧ್ಯಮನಿಗೆ ನಿದ್ದೆ ಬಂದಂತಾಗುವುದನ್ನು ನೀವು ಗಮನಿಸುವಿರಿ. ಅವನು ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಿದ್ದಾನೆ. ಅವನು ನಿದ್ದೆ ಹೋಗುವನು.

**ಸಮ್ಮೋಹನ: ಕೆಲವು ಮುಖ್ಯ ಅಂಶಗಳು.**

೧. ಸಮ್ಮೋಹನ ವಶಕ್ಕೆ ಯಾವುದೇ ಸಮಯವು ಉತ್ತಮವು, ಆದರೆ ಮುಂಜಾನೆಗಳು ಉತ್ತಮವು. ಸಂಜೆಗಳು ಮುಂಜಾನೆಗಿಂತಲೂ ಇನ್ನೂ ಉತ್ತಮವು.

೨. ನೀವು ಪ್ರಯೋಗಕ್ಕೆ ಆಯ್ದುಕೊಳ್ಳುವಂತಹ ಕೋಣೆಯು ಶಾಂತ ಹಾಗೂ ನಿಶ್ಯಬ್ದವಾಗಿರಬೇಕು, ನೊಣ ಮತ್ತು ಸೊಳ್ಳೆಗಳಿಂದ ಮುಕ್ತವಾಗಿರಬೇಕು. ಗೋಡೆಗಳು ಕಣ್ಣುಗಳಿಗೆ ಶಾಂತಿ ತರುವಂತಹ ಬಣ್ಣಗಳಿಂದ ಇರಬೇಕು. ಕೋಣೆಯಲ್ಲಿ ಸಿಂಪಡಿಸಿರುವಂತಹ ದ್ರವ್ಯವು ಮಧುರವಾದ ಸುವಾಸನೆಯನ್ನು ಬೀರುತ್ತಿರಬೇಕು. ಅದು ಸಮ್ಮೋಹಕನ ಸ್ವಂತ ಮನೆಯ ಒಂದು ಭಾಗವಾಗಿದ್ದರೆ ಅರ್ಹವೆನಿಸುವುದು.

೩. ಕೋಣೆಯಲ್ಲಿ ಕಡಿಮೆ ಜನರು ಇದ್ದಷ್ಟೂ ಒಳ್ಳೆಯದು.

೪. ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಪ್ರಯೋಗಗಳನ್ನು ನಡೆಸಬಾರದು. (ಉದಾ:ಮದುವೆಗಳು, ಧಾರ್ಮಿಕ ಹಬ್ಬಗಳು, ಸಭೆ ಗೋಷ್ಠಿ ಮುಂತಾದವುಗಳು)

೫. ಸಮ್ಮೋಹಕನು ಸಮ್ಮೋಹನ ಪರಿಣಾಮಗಳಿಗೆ ಪರಿಣಾಮಕಾರಕವಾಗದ ವ್ಯಕ್ತಿಯನ್ನು ಟೀಕಿಸಬಾರದು. ವಾಸ್ತವದಲ್ಲಿ ಅವನು ಅವನ ವಿಶ್ವಾಸವನ್ನು ಪಡೆದು ನಿಧಾನವಾಗಿ ಸಮ್ಮೋಹನ ಪ್ರಭಾವಕ್ಕೆ ಒಳಗಾಗಿಸಬೇಕು.

೬. ಮಕ್ಕಳು, ಕ್ಷೀಣ ಮನೋಬಲದ ಹೆಂಗಸರು, ಭಾವುಕ ವ್ಯಕ್ತಿಗಳು ಮತ್ತು ಸಮ್ಮೋಹಕನಲ್ಲಿ ಆಳವಾದ ನಂಬಿಕೆವುಳ್ಳ ವ್ಯಕ್ತಿಗಳನ್ನು ಸಹ ಸಮ್ಮೋಹಕನು ಸುಲಭವಾಗಿ ಸಮ್ಮೋಹನಗೊಳಿಸಬಹುದು.

೭. 'ಮಾಧ್ಯಮ'ನಿಗೆ ಅರ್ಥವಾಗದ ಭಾಷೆಯನ್ನು ಸಮ್ಮೋಹಕನು ಉಪಯೋಗಿಸಬಾರದು.

೮. ಸಮ್ಮೋಹಕನು ತನ್ನ ಸ್ವಂತ ಸಾಮರ್ಥ್ಯಗಳಲ್ಲಿ ಸಂಪೂರ್ಣ ನಂಬಿಕೆ ಕೊಡುವಂತಹ ದೃಢತೆಯಲ್ಲಿ ಮನಃಪೂರ್ವಕವಾಗಿ ಹಾಗೂ ಗಂಭೀರವಾಗಿ ಮಾತನಾಡಬೇಕು. ಅವನು ಯಾವುದೇ ಸಂದರ್ಭದಲ್ಲಿ ಒರಟಾಗಿ ಮಾತನಾಡಬಾರದು. ಅವನಿಗೆ ತನ್ನ ಸಮ್ಮೋಹನದ ಆಜ್ಞೆಗಳ ಔಚಿತ್ಯದಲ್ಲಿ ಸಂಪೂರ್ಣವಾದ ನಂಬಿಕೆಯಿರಬೇಕು.

೯. 'ಮಾಧ್ಯಮ'ನಿಗೆ ಕೊಟ್ಟಂತಹ ಸಮ್ಮೋಹನಾಜ್ಞೆಗಳು 'ಮಾಧ್ಯಮ'ನ ಪದ್ಧತಿ ಮತ್ತು ಅಭ್ಯಾಸಗಳಿಗೆ ಒಪ್ಪದಂತಿರಬಾರದು.

೧೦. ಒಬ್ಬ ಹೆಂಗಸನ್ನು ಯಾರೂ ಇಲ್ಲದ ಸ್ಥಳದಲ್ಲಿ ಸಮ್ಮೋಹನಗೊಳಿಸಬಾರದು, ಯಾರುಬಲ್ಲರು, ಸಮ್ಮೋಹಕನೇ ಇಂದ್ರಿಯ ಸುಖದ ಭಾವನೆಗಳ ಅಡಿಆಳು ಆಗಿಬಿಡಬಹುದು.

೧೧. ಹುಚ್ಚುಹಿಡಿದ ವ್ಯಕ್ತಿಗಳು ಸಮ್ಮೋಹನದ 'ಮಾಧ್ಯಮ' ರಾಗುವುದಿಲ್ಲ.

೧೨. ಉನ್ಮಾದ ಮತ್ತು ಅಪಸ್ಮಾರ ರೋಗಿಗಳಿಗೆ ಸಮ್ಮೋಹನ ಪ್ರಭಾವಕ್ಕೆ ತೆರೆದಿಟ್ಟಾಗ, ಹೆಚ್ಚು ಲಾಭದಾಯಕವಾಗುವುದು. ಇನ್ನೊಂದು ಕಡೆ ಕ್ಯಾನ್ಸರ್ ನಂತಹ ದೀರ್ಘಕಾಲದ ರೋಗಗಳನ್ನು ಸಮ್ಮೋಹನದಿಂದ ವಾಸಿಮಾಡಲಾಗುವುದಿಲ್ಲ.

೧೩. ಸಮ್ಮೋಹಕನು ಒಮ್ಮೆಗೆ ಕೇವಲ ಒಂದೇ ಪ್ರಯೋಗವನ್ನು ನಡೆಸಬೇಕು.

೧೪. ಸಮ್ಮೋಹಕನು ತನ್ನ ತಪ್ಪುಗಳನ್ನು, ಏನಾದರಿದ್ದರೆ, ಯಾವಾಗಲೂ ತಿದ್ದಿಕೊಳ್ಳಬಹುದು. ಉದಾಹರಣೆಗೆ, ಒಂದು ನಿರ್ದಿಷ್ಟ ಮಾಧ್ಯಮನನ್ನು ಅಸಮ್ಮೋಹನಗೊಳಿಸಿದ ನಂತರ ಅವನ ಮನಸ್ಸಿನಲ್ಲಿ ಒಂದು ತಪ್ಪು ಆಜ್ಞೆಯನ್ನು ನೆಟ್ಟಿರುವುದು ಸಮ್ಮೋಹಕನಿಗೆ ಗೊತ್ತಾಗುತ್ತದೆ. ಅಂತಹ ವಿಷಯದಲ್ಲಿ ಸಮ್ಮೋಹಕನು, ಅದೇ 'ಮಾಧ್ಯಮ'ನಿಗೆ ಎರಡನೆಯ ಸಾರಿ ಸಮ್ಮೋಹನಗೊಳಿಸಿ ಸರಿಯಾದ ಆಜ್ಞೆಯನ್ನು ನೆಡಬೇಕು.

೧೫. ಮತ್ತೆ ಮತ್ತೆಯ ಪ್ರಯೋಗಗಳು ಪ್ರತಿಕೂಲವಾದ ಪ್ರಭಾವ ಬೀರುವುದಿಲ್ಲ.

೧೬. ಸಮ್ಮೋಹಕನು ಮಾಧ್ಯಮನಿಗೆ ತದನಂತರದಲ್ಲಿ ಮತ್ತು ಸಮಾಜದಲ್ಲಿ ನಗೆಪಾಟಲಾಗುವ ಕೃತ್ಯಗಳನ್ನು ಮಾಡಿಸಬಾರದು.

೧೭. ನೀಲಿ ಬಣ್ಣವು ಸಮ್ಮೋಹನದ ಯಶಸ್ಸಿಯಲ್ಲಿ ಒಳ್ಳೆ ಗುಣಧರ್ಮದ್ದಾಗಿದೆ.

೧೮. ಸಮ್ಮೋಹಕನು ತನ್ನ ಪ್ರಯೋಗಗಳನ್ನು ತಾಳ್ಮೆಯಿಂದ ಮತ್ತು ದೃಢವಾದ ಮನಸ್ಸಿನಿಂದ ನಡೆಸಬೇಕು.

೧೯. 'ಮಾಧ್ಯಮ'ನಿಗೆ ತನಗೆ ಆಜ್ಞಾಪಿಸಿದುದೆಲ್ಲಾ ತನ್ನ ಸರ್ವತೋಮುಖ ಏಳ್ಗೆಯಲ್ಲಿ ಎಂಬುದಾಗಿ ಸಂಪೂರ್ಣ ವಿಶ್ವಾಸವಿರಬೇಕು. ಆಗಲೇ ಅವನು ಸಮ್ಮೋಹಕನ ಆಜ್ಞೆಗಳನ್ನು ಅನುಸರಿಸುವನು.

೨೦. ಸಮ್ಮೋಹಕನಿಗೆ 'ಮಾಧ್ಯಮ'ನ ವಿವೇಕಗಳ ಬಗ್ಗೆ ಸಂಪೂರ್ಣ ಗೌರವವಿರಬೇಕು. ಹೆಂಗಸರನ್ನು ಸಮ್ಮೋಹನಗೊಳಿಸುವಲ್ಲಿ ಆಕೆಗೆ ಬಟ್ಟೆಬಿಚ್ಚಲು ಹೇಳಬಾರದು. ಅದು ಅವಳ ಸಭ್ಯತೆಯ ವಿವೇಕತೆಯನ್ನು ಉಲ್ಲಂಘಿಸುವುದು ಹಾಗೂ ಅವಳ ಸಮ್ಮೋಹನ ನಿದ್ರೆಯು ಅಸಂಪೂರ್ಣವಾಗುವುದು.

# ಅಧ್ಯಾಯ 11

# ನಿತ್ಯ ಜೀವನದಲ್ಲಿ ಸಮ್ಮೋಹನ

ಎಂದಿಗಿಂತಲೂ ಈದಿನ ಮನುಷ್ಯನು ಹೆಚ್ಚು ಕ್ಲಿಷ್ಟತೆಗಳು ಹಾಗೂ ಕಷ್ಟಗಳಲ್ಲಿ ಸಿಕ್ಕಿಕೊಂಡಿದ್ದಾನೆ. ನಾವು ಅವಶ್ಯಕತೆಗಿಂತ ಹೆಚ್ಚಿನ ಸಮಸ್ಯೆಗಳಲ್ಲಿ ಬಿದ್ದಿದ್ದೇವೆ ಮತ್ತು ನಾವು ಪ್ರತಿಹೆಜ್ಜೆಯಲ್ಲೂ ಸಮಸ್ಯೆಗಳನ್ನು ಮತ್ತು ಅಪಾಯಗಳನ್ನು ಎದುರಿಸುತ್ತಿದ್ದೇವೆ.

ಮನುಷ್ಯನು ಕಾರ್ಯನಿರತ ಹಾಗೂ ಪೂರ್ವಾಕ್ರಮಣದಲ್ಲಿದ್ದಾನೆ ಅವನು, ದೈಹಿಕ ನೋವುಗಳಿಗಿಂತ ಹೆಚ್ಚಾಗಿ ಮಾನಸಿಕ ವ್ಯಾಧಿಗಳಿಂದಲೇ ಹೆಚ್ಚಾಗಿ ಬಾಧಿತನಾಗಿರುವುದನ್ನು ತಾನೇ ಕಂಡುಕೊಂಡಿದ್ದಾನೆ. ಅವನು ಮಾನಸಿಕ ಶಾಂತಿಗಾಗಿ ಹಾತೊರೆಯುತ್ತಾನೆ. ಅವನು ಸ್ವಲ್ಪ ಹೊತ್ತು ತನ್ನ ದುಃಖಗಳನ್ನು ಹಾಗೂ ಬಯಕೆಗಳನ್ನು ಮರೆಯಲು ಇಚ್ಛಿಸುತ್ತಾನೆ. ಅವನು ತನ್ನ ಜೀವನವನ್ನು ಸಮತೋಲನ ಹಾಗೂ ಸಂತೋಷಕರ ಮಾಡಲು ಬಯಸುತ್ತಾನೆ.

ಈ ಸಮಸ್ಯೆಗಳನ್ನೆಲ್ಲಾ ಬಿಡಿಸುವ ಸಹಜವಾದ ಸಾಮರ್ಥ್ಯವುಳ್ಳದ್ದೆಂದರೆ ಸಮ್ಮೋಹನವು. ಈ ವಿಜ್ಞಾನದ ಸಹಾಯದಿಂದ ನಾವು ಮಾನಸಿಕ ಒತ್ತಡವನ್ನು ದಾಟಿಬರುವ ಮಟ್ಟದಲ್ಲಿದ್ದೇವೆ. ಒಂದು ವೇಳೆ ಒಂದು ವಿಕಾರತೆಯು ನಮ್ಮ ವ್ಯವಸ್ಥೆಯಲ್ಲಿ ಬಂದು ನಮ್ಮ ಜೀವನದ ಮಹತ್ವಗಳನ್ನು ತಿನ್ನುತ್ತಿದ್ದರೆ. ಸಮ್ಮೋಹಕನು, ಆ ವಿಷಯದಲ್ಲಿ ನಿಮ್ಮಲ್ಲಿ ಸಮ್ಮೋಹನವನ್ನು ತರುವನು. ಅದು ನಿಮ್ಮನ್ನು ಆ ವಿಕಾರತೆಯ ಇರುವಿಕೆಯನ್ನು ಕಡೆಗಣಿಸುವ ಹಾಗೆ ಮಾಡುವುದು. ನಮ್ಮ ಜೀವನವನ್ನು ಪೊಳ್ಳಾಗಿ ಮಾಡುವ ಸಾಕಷ್ಟು ದುಃಖಗಳಿವೆ, ಸಂಸಾರದಲ್ಲಿ ವಿಯೋಗದಿಂದ ನಷ್ಟ, ತೀರಿಸಲಾಗದ ಸಾಲಗಳು ಹಾಗೂ ಮುಖ ಮರೆಸಿಕೊಳ್ಳುವುದು. ಅದು, ಪುನಃ ಸಮ್ಮೋಹನವೇ ಇಂತಹ ಶಾಶ್ವತವಾದ ದುಃಖಗಳಿಂದ ಬಿಡುಗಡೆಯನ್ನು ಸಂಪಾದಿಸುವುದು.

ಕೆಲವು ವ್ಯಾಧಿಗಳು ನಿರ್ದಿಷ್ಟವಾಗಿ ಮಾನಸಿಕ ವ್ಯಾಧಿಗಳು ಸಮ್ಮೋಹನದಿಂದಲೇ ನೋಡಿಕೊಳ್ಳಲಾಗುವುದು. ಅದು ನಿರ್ದಿಷ್ಟವಾಗಿ ಶಸ್ತ್ರಚಿಕಿತ್ಸೆಗಳಲ್ಲಿ ಉಪಯೋಗಿಸಲ್ಪಡುವುದು ಹಾಗೆಯೇ ಹೆಂಗಸರ ವ್ಯಾಧಿಗಳ ಚಿಕಿತ್ಸೆಯಲ್ಲೂ ಸಹ.

ಜೀವನದ ಪ್ರತಿಯೊಂದು ಕ್ಷಣದಲ್ಲಿಯೂ, ಮನುಷ್ಯನು ಹೆಚ್ಚಿನ ಬಿಗುವಿನಲ್ಲಿ ನರಳುವನು. ಹೆಚ್ಚಾಗುವ ಬಿಗುವಿನ ಕಾರಣದಿಂದ ಮನುಷ್ಯನು ಹೊಳಪು ಅಥವಾ ಬೆಳಕಿಲ್ಲದೆ ಬಿಳಿಚಿಕೊಳ್ಳುವುದು. ಆದ್ದರಿಂದ ಮನುಷ್ಯನನ್ನು ಈ ಆಳಕ್ಕೆ ಇಳಿಯುತ್ತಿರುವ ಬಿಗುವಿನಿಂದ ಮುಕ್ತಮಾಡುವುದು ಅತ್ಯಾವಶ್ಯಕವಾಗಿದೆ. ಪುನಃ ಇಲ್ಲೂ ಸಹ ಸಮ್ಮೋಹನವು ಸುಮಾರಾಗಿ ಅನುಕೂಲಕರವಾಗಿರುವುದು.

ಮನುಷ್ಯನು ತನ್ನ ವೈಯಕ್ತಿಕ ಜೀವನದಲ್ಲಿ ಮಹತ್ತಾದ ಲಾಭವನ್ನು ಪಡೆಯಬಹುದು. ನಾವು ಈ ಮೊದಲೇ ಚರ್ಚಿಸಿದಂತೆ, ನಾವು ಈ ಕ್ಷಣದಲ್ಲಿ ಏನೇನೆಲ್ಲಾ ಯೋಚಿಸುತ್ತೇವೋ ಅದು ಬೇರೆಯವರ ಮೇಲೆ ತನ್ನದೇಯಾದ ಪರಿಣಾಮವನ್ನು ಬೀರುವುದು. ಒಂದು ವೇಳೆ ನೀವು ನಿಮ್ಮ ಸ್ನೇಹಿತನನ್ನು ನೋಡಲು ಹೋಗುತ್ತಿದ್ದೀರಿ. ನಿಮ್ಮ ಮನಸ್ಸು ಅವನ ಮೇಲಿನ ದ್ವೇಷದಿಂದ ಕುದಿಯುತ್ತದೆ. ಹೊರನೋಟಕ್ಕೆ ನೀವು ಪ್ರೀತಿ ಮತ್ತು ವಿಶ್ವಾಸದ ನೋಟವಾಗಿದ್ದೀರಿ. ಆದರೂ ನಿಮ್ಮ ಅಂತರ್ಮನಸ್ಸು ದ್ವೇಷದಿಂದ ಉರಿಯುತ್ತಿದೆ, ಅದಕ್ಕೆ ನಿಮ್ಮ ಸ್ನೇಹಿತನ ಅಂತರ್ಮನಸ್ಸಿನ ಮೇಲೆ ಶಕ್ತಿಯುತವಾದ ಪರಿಣಾಮವನ್ನು ಬೀರಲು ಪರಿಮಿತಗೊಂಡಿದೆ. ಪರಿಣಾಮವಾಗಿ ಅವನ ಮನಸ್ಸು ಬಹಳ ದ್ವೇಷಯುಕ್ತವಾಗುತ್ತದೆ. ಅದೂ ಸಹ ಬಹಿರ್ಮನಸ್ಸಿನಿಂದ ಅದೇ ತರಹದ ಪ್ರತಿಕ್ರಿಯೆಯನ್ನು ಹೊರತರುತ್ತದೆ. ಅನಿವಾರ್ಯವಾದ

ಪರಿಣಾಮವೆಂದರೆ ಅಂತಹ ಸಂದರ್ಭಗಳಲ್ಲಿ ಅವನಿಗೆ ಸಾಧಾರಣವಾಗಿ ಸಿಗಬೇಕಾದಷ್ಟು ಸಂತೋಷವು ಸಿಗುವುದಿಲ್ಲ.

ಒಂದು ವೇಳೆ, ಇನ್ನೊಂದು ನಿದರ್ಶನವನ್ನು ತೆಗೆದುಕೊಳ್ಳಲು, ನೀವು ಯಾವುದೋ ಕೆಲಸಕ್ಕಾಗಿ ನಿಮ್ಮ ಸ್ನೇಹಿತನಲ್ಲಿಗೆ ಅಥವಾ ಮೇಲ್ಮಟ್ಟದ ಅಧಿಕಾರಿಯಲ್ಲಿ ಹೋಗುವಿರಿ. ನಿಮ್ಮಲ್ಲಿ ಸ್ವಲ್ಪ ಮಟ್ಟಿನ ಸಂಕೋಚವಿದೆ. ಅವನು ನಿಮ್ಮಲ್ಲಿ ಅನುರೋಧಪಡಿಸುವನೋ ಎಂದು ಕೌತುಕರಾಗಿರುತ್ತೀರಿ. ನಿಮ್ಮ ಅಂತರ್ಮನಸ್ಸಿನಲ್ಲಿ ಆಕ್ರಮಗೊಂಡಿರುವ ಅನುಮಾಸವು ಆ ಅಧಿಕಾರಿಯ ಅಂತರ್ಮನಸ್ಸನ್ನು ಮುಟ್ಟುತ್ತದೆ. ಅವನು ನಿಮ್ಮನ್ನು ಅನುಮಾನದ ರೀತಿಯಲ್ಲಿ ನೋಡಲಾರಂಭಿಸುವನು. ಪರಿಣಾಮವಾಗಿ, ಕೆಲಸವು ಆಗಲಿಲ್ಲ.

ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳಲು. ನೀವು ಅಧೀಕೃತವಾದ ಕಾಗದಗಳ ಆಧಾರವೊಂದಿಗೆ ನಿಮ್ಮ ಬಹಳ ದಿನದ ಬಿಡುವಿನ ಅರ್ಜಿಯನ್ನು ತೆಗೆದುಕೊಂಡು ನಿಮ್ಮ ಯಜಮಾನರ ಹತ್ತಿರ ಹೋಗುವಿರಿ. ಅದೇ ಸಮಯದಲ್ಲಿ ನಿಮಗೆ ಸಂಶಯವೂ ಇರುತ್ತದೆ. ನಿಮ್ಮ ಅನುಮಾನ ಯಜಮಾನರ ಅಂತರ್ಮನಸ್ಸನ್ನು ಸೋಂಕುವುದು. ಅದು ಕಚಗುಳಿಯಿಟ್ಟ ಹಾಗೆ ಅವನಲ್ಲಿ ವಿರುದ್ಧಾತ್ಮಕ ಪ್ರತಿಕ್ರಿಯೆಯನ್ನು ತೋರುವುದರಲ್ಲಿ ಆಶ್ಚರ್ಯವಿಲ್ಲ. ನಿಮ್ಮ ನಕಾರಾತ್ಮಕ ಭಾವನೆಗಳು ಅವನ ಅಂತರ್ಮನಸ್ಸಿನ ಮೇಲೆ ನಕಾರಾತ್ಮಕ ಪ್ರಭಾವವನ್ನು ಬೀರುತ್ತವೆ. ನಿಮ್ಮ ಅರ್ಜಿಯನ್ನು ಅವನು ನೇರವಾಗಿ ತಿರಸ್ಕರಿಸುತ್ತಾನೆ.

ನಿಮ್ಮ ನಿತ್ಯಜೀವನದ ಚಟುವಟಿಕೆಗಳಲ್ಲಿ ನೀವು ಸಂಶಯ ಹಾಗೂ ತರ್ಕಗಳಿಂದ ಆಕ್ರಮಿತರಾಗಿರಬಾರದು. ನಿಮ್ಮ ವಿಚಾರಗಳನ್ನು ದೃಢವಾಗಿ ಹಾಗೂ ಭಯವಿಲ್ಲದೆ ಹೇಳಿ. 'ಅದು ಅವಶ್ಯವಾಗಿ ವ್ಯಕ್ತಿಯ ಮೇಲೆ ಸ್ಪಷ್ಟವಾದ ಪ್ರಭಾವವನ್ನು ಬೀರಲೇಬೇಕು. ಅದು ಕೆಲಸವನ್ನು ಕೈಗೂಡಿಸುವಲ್ಲಿ ಸಹ ಸಹಾಯಕವಾಗಿರುತ್ತದೆ.

ನೀವು ಯೋಚಿಸುವುದೆಲ್ಲಾ ನಿಮ್ಮ ಪ್ರಾಣಶಕ್ತಿಯ ಮೇಲೆ ಪ್ರಭಾವ ಬೀರುತ್ತದೆ. ನಿಮ್ಮ ನಕಾರಾತ್ಮಕ ಯೋಚನೆಯು ಈ ಶಕ್ತಿಯನ್ನು ಕ್ಷೀಣಗೊಳಿಸುತ್ತದೆ. ನಿಮ್ಮ ವ್ಯಕ್ತಿತ್ವದ ತಳ ಹಾಗೂ ಅಡಿಪಾಯ ಪ್ರಾಣಶಕ್ತಿಯಲ್ಲದೆ ಬೇರೇನೂ ಅಲ್ಲ. ಅದು ನಿಮ್ಮ ಧ್ವನಿಯಲ್ಲಿ ಒಂದು ನಿರ್ದಿಷ್ಟರೀತಿಯ ಗಂಭೀರತೆಯನ್ನು ಕೊಡುತ್ತದೆ. ಅದು ನಿಮ್ಮ ಸುತ್ತಮುತ್ತಲೂ ಪ್ರಭಾವ ಬೀರುವಂತಹ ನಿಮ್ಮ ಕಣ್ಣುಗಳಲ್ಲಿ ಉಜ್ವಲವಾದ ಹೊಳಪನ್ನು ಕೊಡುತ್ತದೆ. ನೀವು ನಿಮ್ಮ ಪ್ರಾಣಶಕ್ತಿಯನ್ನು ಹೆಚ್ಚಿಸಿಕೊಂಡಿದ್ದರೆ, ಬೇರೆ ಎಲ್ಲರೂ ನಿಮ್ಮ ಇರುವಿಕೆಯಲ್ಲಿ ಮತ್ತಗಾಗಿರುತ್ತಾರೆ.

ನೀವು ಒಬ್ಬ ಸ್ನೇಹಿತನನ್ನು ಅಥವಾ ಯಾವುದಾದರೂ ಮೇಲಾಧಿಕಾರಿಯನ್ನು ಕಾಣಲು ಹೋದರೆ ನೀವು ಅವನ ಕಣ್ಣುಗಳಲ್ಲಿ ನೇರವಾಗಿ ನೋಡುವುದು ಬಹಳ ಉತ್ತಮದ ಕೆಲಸವಾಗುವುದು. ನಿಮ್ಮ ವಿಚಾರಗಳನ್ನು ಒಂದು ಮಟ್ಟದ ಧೈರ್ಯ ಹಾಗೂ ಪ್ರಾಮಾಣಿಕತೆಯಿಂದ ಮುಂದೆ ಇಡಿರಿ. ಮಾತನಾಡುವಾಗ ಬೇರೆಡೆ ಅತ್ತಿತ್ತ ನೋಡಲು ಪ್ರಯತ್ನಿಸಬೇಡಿ. ನೀವು ಯಾವುದೇ ತರಹದ ಮೈಚಳಿಯಿಂದ ಮಾತಾಡಬಾರದು. 'ನನ್ನ ವಿಚಾರದಲ್ಲಿ' ಎಂದು ಹೇಳುತ್ತಾ ಹೋಗಬೇಡಿರಿ. ನಿಮ್ಮ ತಪ್ಪುಗಳನ್ನು ದೃಢೀಕರಿಸಲು ಅತಿಯಾಗಿ ವಾಲಬೇಡಿರಿ. ಕ್ಷಮೆಯಾಚನೆಯ ಧ್ವನಿಯನ್ನು ಇಟ್ಟುಕೊಳ್ಳಬೇಡಿರಿ. ಈ ತರಹದ ಕ್ಷೀಣಗೊಂಡ ಶಕ್ತಿಯ ರೂಪದಲ್ಲಿ ನೀವು ಆದೇಶಗಳಿಗೆ ಹಾಗೂ ದುರಾಡಳಿತಗಳಿಗೆ ಇಳಿಮುಖವಾಗಿರುವಿರಿ. ನೀವು ಸಂಪೂರ್ಣ ಮೆತ್ತಗಾಗುವಿರಿ. ಮಾತುಕತೆಗಳು ಸಂಪೂರ್ಣ ವಿಫಲತೆಯಲ್ಲಿ ಕೊನೆಗೊಳ್ಳುವವು.

ನಿಮ್ಮ ಪ್ರಾಣಶಕ್ತಿಯನ್ನು ಶಕ್ತಿಯುತ ಮಾಡಿಕೊಳ್ಳುವ ದೃಷ್ಟಿಯಿಂದ, ನೀವು ದೃಢತೆ ಹಾಗೂ ನಿಶ್ಚಯತೆಯಲ್ಲಿ ಉಳಿಯಬೇಕು. ನೀವು ಸರಿ ಎನ್ನುವ ಸ್ವಯಂಸಿದ್ಧತೆಯಲ್ಲಿ ಮುನ್ನುಗ್ಗಬೇಕು. ನೀವು ಹೇಳಿದುದೆಲ್ಲಾ ಸರಿ. ನೀವು ನಿಮ್ಮ ಮೇಲಾಧಿಕಾರಿಯಲ್ಲಿ ತೆಗೆದುಕೊಂಡು ಹೋದ ಕೆಲಸವು ಖಚಿತವಾಗಿ ಆಗುತ್ತದೆ. ನಿಮ್ಮ ನಿರ್ಧಾರ ಗೆಲ್ಲುವುದು.



[illegible] ಸಮ್ಮೋ[illegible]ನ

ಅದೇ ಸಮಯದಲ್ಲಿ ನೀವು ನಿಮ್ಮ ಸ್ನೇಹಿತ ಅಥವಾ ಯಜಮಾನರ ಹತ್ತಿರ ಮಾತಾಡುವಾಗ ಬಹಳ ಜಾಗರೂಕರಾಗಿರಬೇಕು. ಅವರು ಮಾತಾಡುವಾಗ ನೀವು ಅವರ ಕಣ್ಣುಗಳಲ್ಲಿ ನೋಡಬೇಡಿರಿ. ಇಲ್ಲವಾದರೆ ನೀವು ಅವರ ಪ್ರಭಾವಕ್ಕೆ ಒಳಗಾಗಿ ನಿಮ್ಮ ವ್ಯಕ್ತಿತ್ವವು ಕ್ಷೀಣವಾದ ಹಾಗೆ ಕಾಣುವುದು. ನೀವು ಯಾರೊಡನೆಯಾದರೂ ಮಾತಾಡುವಾಗ ಪಕ್ಕದಲ್ಲಿ ನೋಡಬೇಡಿರಿ. ನೀವು ನಿಮ್ಮ ಹೇಳಿಕೆಯನ್ನು ದೃಢತೆಯಲ್ಲಿ ಕೊಡಬೇಕು ಮತ್ತು ನೀವು ಮಾತಾಡುತ್ತಿರುವಂತಹ ವ್ಯಕ್ತಿಯ ಕಣ್ಣುಗಳಲ್ಲಿ ನೇರವಾಗಿ ನೋಡಿ.

ಕೆಲಸದಲ್ಲಿರುವ ವ್ಯಕ್ತಿಗಳು ತಮ್ಮ ಯಜಮಾನರನ್ನು ಅನೇಕ ಸಾರಿ ನೋಡಬೇಕಾಗುತ್ತದೆ. ಅವರಿಗೆ ಅನ್ನಿಸಿದ್ದನ್ನು ಅವರು ಮಾತಾಡಬೇಕಾಗುತ್ತದೆ. ಅವರು ಹೇಳಬೇಕಾದುದರ ಪ್ರಕಾರ ಅವರು ನಡೆದುಕೊಳ್ಳಲೂ ಬೇಕಾಗುತ್ತದೆ. ಕೆಲವೊಮ್ಮೆ ಗಂಭೀರವಾದ ಭಿನ್ನಾಭಿಪ್ರಾಯಗಳು ಹುಟ್ಟಿಕೊಳ್ಳುತ್ತವೆ. ಇಂತಹ ಪರಿಸ್ಥಿತಿಗಳಲ್ಲಿ, ಅವರು ದೃಢವಾಗಿದ್ದು, ಒತ್ತದದಿಂದ ಹೇಳಿಕೆಯನ್ನು ಕೊಡಬೇಕು. ಅವರು ತಮ್ಮ ಅಧಿಕಾರಿಗಳ ಕಣ್ಣಲ್ಲಿ ಆಳವಾಗಿ ನೋಡುತ್ತಾ ಮಾತನಾಡಬಯಸಿದರೆ, ಅವರ ಅರ್ಧಕೆಲಸ ಆದ ಹಾಗೆ ಅವರು ಪರಿಗಣಿಸಬಹುದು. ಏಕೆಂದರೆ ಅವರ ಕಣ್ಣುಗಳಲ್ಲಿ ಆಕರ್ಷಣ ಶಕ್ತಿ ಇರುತ್ತದೆ. ಎದುರಿನಲ್ಲಿ ಕೂತುಕೊಂಡ ವ್ಯಕ್ತಿಯ ಮೇಲೆ ಅದು ಪ್ರಭಾವ ಬೀರುತ್ತದೆ. ಯಾವುದೇ ಸಂದರ್ಭದಲ್ಲಿ ಅವರು ಅವರ ಯಜಮಾನರನ್ನು ನೋಡಲು ಹೋದಾಗ ಯಾವುದೇ ರೀತಿಯ ಹಿಂಜರಿಕೆ ಅಥವಾ ಶಂಕೆ ಪಡಬಾರದು. ಈ ಕಡೆ ಅವರಿಗೆ ಯಾವುದೇ ಕೀಳರಿಮೆ ಇರಬಾರದು.

ಈ ತರಹದ ವಿಷಯಗಳನ್ನು ಎದುರಿಸುವಲ್ಲಿ ಯಶಸ್ವಿಯಾಗಲು ಅವರು ಕನ್ನಡಿ ತ್ರಾಟಕವೆಂದು ಕರೆಯಲಾದುದನ್ನು ಮೊದಲು ಮಾಡುವುದು ಉತ್ತಮವು. ಅದನ್ನು ಅವರು ನಿಯಮಿತವಾಗಿ ಅಭ್ಯಸಿಸಬೇಕು. ಅವರು ಕನ್ನಡಿಯಲ್ಲಿಯ ಪ್ರತಿಬಿಂಬದ ಕಣ್ಣುಗಳಲ್ಲಿ ಆಳವಾಗಿ ನೋಡಬೇಕಾಗುತ್ತದೆ. ಹೀಗೆ ಅದು ಕನ್ನಡಿ ತ್ರಾಟಕದ ಉತ್ತಮ ಅಭ್ಯಾಸವನ್ನು ಕೊಡುತ್ತದೆ.

ಜೀವನದಲ್ಲಿ ಯಶಸ್ವಿಯನ್ನು ಸಂಪಾದಿಸಿಕೊಳ್ಳಲು ನಮ್ಮಲ್ಲಿ ಸಮ್ಮೋಹನಾಶಕ್ತಿ ಇರುವುದು ಅವಶ್ಯಕತೆ ಇದೆ. ನಿರ್ದಿಷ್ಟವಾಗಿ ನಿಮ್ಮ ಕಣ್ಣುಗಳು ಸಹಾಯಕವಾಗಿರುವವು. ಅದೇ ವೇಳೆಯಲ್ಲಿ ನೀವು ಸಂಭಾಷಣೆ ಮಾಡುವ ಶೈಲಿಯು ನಿಮ್ಮ ವ್ಯಕ್ತಿತ್ವವನ್ನು ರೂಪಿಸುವಲ್ಲಿ ನೆರವಾಗುತ್ತದೆ. ನೀವು ಎಂದಾದರೂ ನಿಮ್ಮ ಸ್ನೇಹಿತನನ್ನು ಕಂಡಾಗ, ನಿಮ್ಮ ಸ್ವಂತ ಕಥೆಯನ್ನೇ ಪ್ರಾರಂಭಿಸಬಿಡಬೇಡಿರಿ. ಪ್ರತಿಕೂಲವಾಗಿ ಅವನಿಗೆ ತನಗೆ ಬೇಕಾದಷ್ಟು ಮಾತಾಡಲು ಅವಕಾಶ ಕೊಡಿ. ನೀವು ಕಡಿಮೆ ಮಾತಾಡಿದಷ್ಟು, ನೀವು ಹೆಚ್ಚು ಯಶಸ್ವಿಯಾಗುವಿರಿ.

ಕೆಲವ್ಯಕ್ತಿಗಳಲ್ಲಿ ನಾವು ಮನಸ್ಸಿಗೆ ಒಪ್ಪದಂತಹ ಅಭ್ಯಾಸವನ್ನು ಕಾಣುತ್ತೇವೆ. ಅವರನ್ನು ಕಂಡಾಕ್ಷಣ ಅವರು ತಮ್ಮ ಕ್ಷುಲ್ಲಕ ಸಮಸ್ಯೆಗಳ ಬಗ್ಗೆ ಹೇಳಲಾರಂಭಿಸುವರು. ಆ ಪರಿಸ್ಥಿತಿಯಲ್ಲಿಯ ಒಂದು ಮಾದರಿಯ ಹೇಳಿಕೆ ಎಂದರೆ ನಾನು ಅಸ್ತವ್ಯಸ್ತ್ಯವಾಗಿದ್ದೇನೆ. ನಾನು ಒಂದು ನೋವಿನಿಂದ ನರಳುತ್ತಿದ್ದೇನೆ. ನನಗೆ ಕ್ಯಾನ್ಸರ್ ಬರಬಹುದು.

ನಾವು ನಿಮಗೆ ಒಂದು ಸದೃಶವನ್ನು ಕೊಡುತ್ತೇವೆ. ರೋಗಿಯು ಮೊದಲಬಾರಿಗೆ ವೈದ್ಯನಲ್ಲಿ ಹೋದಾಗ, ವೈದ್ಯನು ರೋಗವನ್ನು ಗುರುತಿಸಿದನು. ನಂತರ ಅವನು ರೋಗಿಯನ್ನು ಪರೀಕ್ಷಿಸಿದ ಮೇಲೆ , ಈ ವಿಷಯದಲ್ಲಿ ನೋವಿನ ಕಾರಣ ಕಾಮಾಲೆ ಎಂದು ಬಹಿರಂಗ ಪಡಿಸಿದನು. ಎರಡೂ ವಿಷಯಗಳಲ್ಲಿ ಫಲಿತಾಂಶಗಳು ಒಂದೇ ಆಗಿದ್ದವು. ಆದರೂ ರೋಗಿಗೆ ಒಂದು ವಿಶಿಷ್ಟ ರೀತಿಯ ಸಮಾಧಾನವಾಯಿತು. ಅವನು ವೈದ್ಯನನ್ನು ಹೊಗಳುವನು. ಅವನು ಅವರಿಂದ ಕೇಳಿ ಅದು ಕಾಮಾಲೆಯೆಂದು ದೃಢಪಡಿಸಿಕೊಂಡನು.

ನಾನು ಹೇಳ ಬಯಸುವುದೇನೆಂದರೆ, ಅವರು ಅರ್ಥವಿರುವುದೇ ಅಥವಾ ಅರ್ಥರಹಿತವಾದದನ್ನೇ ಮಾತಾಡಲಿ, ಮುಂಬರುವ ಸಮ್ಮೋಹಕರು ಎಲ್ಲರ ಹತ್ತಿರವೂ ತಾಳ್ಮೆಯ ಹೇಳಿಕೆಯನ್ನು ಕೊಡಬೇಕು. ಅವರಿಗೆ ಸಿಕ್ಕಿರುವಂತಹ ವರದಿಯಿಂದ ಅವರು ಸಂತಸವಾಗಿರುವ ಹಾಗೆ ಕಾಣಬೇಕು.

ಒಂದು ವೇಳೆ ನೀವು ಒಂದು ಮಗುವನ್ನು ಕಾಣುವಿರಿ. ಅದಕ್ಕೆ ಪ್ರೀತಿ ತೋರಬಾರದೇಕೆ? ಒಂದು ವೇಳೆ ನೀವು ವಿಶಿಷ್ಟವಾಗಿ ಅಲಂಕರಿಸಿಕೊಂಡ ಮದುಮಗಳನ್ನು ಕಾಣುವಿರಿ. ಅವಳನ್ನು ಹೊಗಳಬಾರದೇಕೆ? ಹೀಗೆ ನೀವು ಮನಸ್ಸನ್ನು ಗೆಲ್ಲುವ ಸಾಧ್ಯತೆಗಳಿವೆ.

ಹೆಂಗಸು ತನ್ನ ಸುಂದರತೆಗೆ ಬಂದಾಗ ಬಹಳ ಬೇದ್ಯವುಳ್ಳವಳಾಗಿರುತ್ತಾಳೆ. ನಿಮ್ಮ ಸ್ವಂತ ಹೆಂಡತಿಯನ್ನು ಚುರುಕುಗೊಳಿಸಲು ಕೆಲವೊಮ್ಮೆ ಅವಳನ್ನು ಹೊಗಳುವುದು ಅವಶ್ಯಕವಾಗುತ್ತದೆ. ಆಕೆಗೆ ಹೇಳಿ, ಉದಾಹರಣೆಗೆ, ಆಕೆಯು ಆ ನಿರ್ದಿಷ್ಟ ಸೀರೆಯಲ್ಲಿ ಮೂರ್ಛೆಬೀಳುವ ಹಾಗೆ ಸುಂದರಳಾಗಿ ಕಾಣುತ್ತಾಳೆಂದು. ಏಕೆ, ಆಕೆಯು ಕನಿಷ್ಠ 10 ವರ್ಷ ಚಿಕ್ಕವಳಾಗಿ ಕಾಣುತ್ತಾಳೆ. ಅವಳು ಖಚಿತವಾಗಿ ಸಂತೋಷಪಡುವಳು.

ಓರ್ವನು ಪ್ರತಿನಿತ್ಯ ಹಲವಾರು ಪರಿಸ್ಥಿತಿಗಳನ್ನು ಎದುರಿಸ ಬೇಕಾಗುತ್ತದೆ. ನೀವು ಸಂಸಾರದ ಸದಸ್ಯರನ್ನು, ಸ್ನೇಹಿತರನ್ನು ಮತ್ತು ಬಂಧುಗಳನ್ನು ಜೀವನದ ವಿವಿಧ ಪರಿಸ್ಥಿತಿಗಳಲ್ಲಿ ಹೆಚ್ಚುಕಡಿಮೆ ಪ್ರತಿನಿತ್ಯ ಕಾಣುವಿರಿ. ಅವರಲ್ಲಿ ನಿಮ್ಮ ಆಕರ್ಷಣೆಯನ್ನು ಉಳಿಸಿಕೊಳ್ಳಲು ನೀವು ಅವರಿಗಾಗಿ ನಿಮ್ಮ ಒಂದು ಹೊಗಳಿಕೆಯ ಪದವನ್ನು ಉಚ್ಚರಿಸಬೇಕು. ಈ ಕೆಲಸವನ್ನು ನೀವು ಅತಿಯಾಗಿ ಮಾಡಬಾರದು ಇಲ್ಲವಾದರೆ ಅದು ಮೂರ್ಖರನ್ನು ಮಾಡುವ ವ್ಯವಹಾರವೆಂದು ಪರಿಗಣಿಸಲಾಗುವುದು. ನೀವು ತಪ್ಪಾಗಿ ಹೊಗಳುತ್ತಿದ್ದೀರೆನ್ನುವ ಭಾವನೆಯನ್ನು ತಂದಿದ್ದಾದರೆ, ನಿಮ್ಮ ಪ್ರಯತ್ನ ಪ್ರತಿಕೂಲದ ಉತ್ಪಾದನೆಯಾಗುವುದು.

ಒಂದು ವೇಳೆ ನೀವು ಒಂದು ಆಸ್ಪತ್ರೆಯಲ್ಲಿಯ ರೋಗಿಯಾಗಿರುವಂತಹ ನಿಮ್ಮ ಸ್ನೇಹಿತನೋರ್ವನನ್ನು ಕಾಣಲು ಹೋಗುವಿರಿ. ನೀವು ನಿಮ್ಮೊಡನೆ ಒಂದು ಉತ್ತಮವಾದ ಸುಂದರವಾದ ಉಡುಗೊರೆಯನ್ನು ತೆಗೆದುಕೊಂಡು ಹೋದರೆ ಅದು ನಿಮಗೆ ಒಂದು ಉತ್ತಮಸ್ಥಿತಿಯಾಗಲೇ ಬೇಕು. ಅದು

ಗುಲಾಬಿಹೂವಿನಂತಹ ಒಂದು ಚಿಕ್ಕವಸ್ತುವೇ ಆಗಿರಬಹುದು. ಅವನನ್ನು ಕಂಡಾಗ ನೀವು ಅವನ ನೋವಿನ ಬಗ್ಗೆ ಹೆಚ್ಚಾಗಿ ಮಾತನಾಡದಿರುವುದು ಉತ್ತಮವು. ಅವನು ನರಳುತ್ತಿರುವಂತಹ ನೋವಿನ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಕೊಡುವುದರಿಂದ ಉಪಯೋಗವೇನೂ ಇಲ್ಲ. ನೀನು ಹೆಚ್ಚು ಉತ್ತಮವಾಗಿ ಕಾಣುತ್ತಿದ್ದೀಯ ಎನ್ನುವ ಸರಳ ಹೇಳಿಕೆಯು ಸರಿಯಾದ ವಾತಾವರಣವನ್ನು ತರುವುದು. ಆಸ್ಪತ್ರೆಗೆ ಬರುವ ದಾರಿಯಲ್ಲಿ ನೀವು ಒಬ್ಬ ವೈದ್ಯನನ್ನು ಕಂಡಿದುದಾಗಿ ತಿಳಿಸಿರಿ. ಆ ವೈದ್ಯರು ರೋಗಿಯು ಸುಮಾರಾಗಿ ಚೇತರಿಸಿಕೊಂಡಿದ್ದಾನೆ ಹಾಗೂ ಬೇಗನೇ ಬಿಡುಗಡೆ ಮಾಡಲಾಗುವುದೆಂದು ಆ ವೈದ್ಯರು ತಿಳಿಸಿರುವವುದಾಗಿ ತಿಳಿಸಿರಿ.

ನಿಮ್ಮ ಪದಗಳು ರೋಗಿಯ ಮೇಲೆ ಸಂತೈಸುವಂತಹ ಪರಿಣಾಮವನ್ನು ಬೀರುವುದು. ಅವನು ಬಿಡುಗಡೆ ಯಾದ ನಂತರವೂ ನಿಮಗೆ ಆ ಪದಗಳಿಗಾಗಿ ದನ್ಯವಾದಗಳನ್ನು ಅರ್ಪಿಸಲು ಮರೆಯುವುದಿಲ್ಲ. ಅವನು ಇನ್ನೆಂದೂ ನಿಮಗೆ ವಿಧೇಯನಾದ ಸ್ನೇಹಿತನಾಗುವನು.

ನಿಮ್ಮ ಜೀವನದಲ್ಲಿ ಏಳ್ಗೆಯನ್ನು ಪಡೆಯಲು ನೀವು ಒಂದು ಬಲವಾದ ಜ್ಞಾಪಕಶಕ್ತಿಯನ್ನು ಕೃಷಿಮಾಡಿಕೊಂಡಿರಬೇಕು. ಒಂದುವೇಳೆ ನೀವು ಒಬ್ಬ ವ್ಯಕ್ತಿಯನ್ನು 5 ವರ್ಷಗಳ ನಂತರ ಕಾಣುವಿರಿ. ನೀವು ಅವನನ್ನು ಮೊದಲು ಹೆಸರು ಹಿಡಿದು ಕೂಗಿದರೆ, ನೀವು ಸುಮಾರಾಗಿ ಅವನನ್ನು ಗೆದ್ದಂತೆ. ಪ್ರತಿಕೂಲವಾಗಿ ನೀವು ಅವನ ಹೆಸರನ್ನು ಜ್ಞಾಪಿಸಿಕೊಳ್ಳುವುದರಲ್ಲಿ ವಿಫಲರಾದರೆ, ಅವನಿಗೆ ನಿಮ್ಮ ಮೇಲಿದ್ದ ಆಕರ್ಷಣೆಯನ್ನೆಲ್ಲಾ ಕಳೆದುಕೊಳ್ಳುವಿರಿ.

ನೆಪೋಲಿಯನ್ ಬೋನೋಪಾರ್ಟೆ ಒಬ್ಬ ಪ್ರಖ್ಯಾತನಾದ ಸೇನಾಧಿಕಾರಿ ಯಾಗಿದ್ದನು. ಅವನ ಪ್ರಖ್ಯಾತಿತನಕ್ಕೆ ಪ್ರಮುಖವಾದ ಕಾರಣಗಳಲ್ಲಿ ಒಂದೆಂದರೆ ಅವನು ತನ್ನ ಸೈನಿಕರನ್ನು ಬಲ್ಲವನಾಗಿದ್ದನು ಪ್ರತಿಯೊಬ್ಬರನ್ನೂ ಅವರ ಹೆಸರಿನಿಂದ. ಪರಮ ಸತ್ಯವಾದದ್ದೆಂದರೆ ಅಂತಹ ಅದ್ವಿತೀಯವಾದ ಸೇನಾಧಿಕಾರಿಯು ಪ್ರತಿಯೊಬ್ಬ ಸೈನಿಕನನ್ನೂ ಅವನ ಹೆಸರಿನಿಂದ ಬಲ್ಲವನಾಗಿದ್ದುದು ಅವನ ಸೈನಿಕರಿಗೆ ಸಾಕಾಗಿತ್ತು. ಪರಿಣಾಮವಾಗಿ ಆ ಸೈನಿಕರು ತಮ್ಮ ಸೇನಾಧಿಕಾರಿಯ ಆಜ್ಞೆಗಳನ್ನು ಪಾಲಿಸುವಲ್ಲಿ ತಮ್ಮ ಜೀವನವನ್ನು ತ್ಯಾಗಮಾಡಲು ತಯಾರಾಗಿದ್ದರು.

## ಯಶಸ್ವಿಯ ಅಂಶಗಳು

ವಾಚಕನಿಗೆ ನಾವು ಜೀವನದ ಪ್ರತಿಕ್ಷಣದಲ್ಲಿ ಹೊಸ ಅನುಭವವನ್ನು ಶೇಖರಿಸುತ್ತೇವೆ ಎನ್ನುವುದು ಅರಿವಾಗಿರಬೇಕು. ನಮ್ಮ ಜೀವನದ ಪ್ರತಿ ನಿಮಿಷದಲ್ಲೂ ನಾವು ಹಲವಾರು ಜನರನ್ನು ಕಾಣುತ್ತೇವೆ. ನಾವು ಈ ಕೆಳಗೆ ಖಾಸಗಿ ಹಾಗೂ ಸಾರ್ವಜನಿಕ ಸಂಬಂಧಗಳಲ್ಲಿ ಯಶಸ್ವಿಯನ್ನು ಖಚಿತಪಡಿಸುವ ಕೆಲವು ಅಂಶಗಳನ್ನು ಕೊಡುತ್ತೇವೆ.

೧. ಯಾವಾಗಲೂ ಹಸನ್ಮುಖರಾಗಿರಿ. ಒಂದು ಸಂತಸದ ಹಾಗೂ ಹಸನ್ಮುಖದ ಮನಸ್ಸು ಬಹಳ ಜನರನ್ನು ಆಕರ್ಷಿಸುತ್ತದೆ. ಯಾರೊಬ್ಬರೂ ದುಃಖಿತ ಮತ್ತು ಉತ್ಸಾಹ ರಹಿತರ ಜೊತೆಯಲ್ಲಿ ಇರಲು ಬಯಸುವುದಿಲ್ಲ.

೨. ಯಾವಾಗಲೂ ನಿಮ್ಮ ವೈಯಕ್ತಿಕ ಸಮಸ್ಯೆಗಳನ್ನು ಪುನಃ ಉಚ್ಚರಿಸಲು ಪ್ರಾರಂಭಿಸಬೇಡಿರಿ. ಈ ಕಾರಣದಿಂದ ಜನರು ನಿಮ್ಮನ್ನು ದೂರವಿಡುತ್ತಾರೆ.

೩. ನಿಮ್ಮನ್ನು ನೋಡಲು ಬಂದ ವ್ಯಕ್ತಿಗಳನ್ನು ಹೊಗಳಿ. ನೀವು, ಹೇಗಾದರೂ, ನಿಮ್ಮ ಹೊಗಳಿಕೆಯಲ್ಲಿ ಸಮತೋಲನವನ್ನಿಡಬೇಕು. ಅವರು ತಾವು ಮೂರ್ಖರಾಗುತ್ತಿದ್ದೇವೆ ಎನ್ನುವ ಭಾವನೆಯಿಂದ ಹೋಗಿಬಿಡಬಾರದು.

**೪.** ಬೇರೆಯವರಿಗೆ ಹೆಚ್ಚು ಮಾತಾಡುವ ಸಮಯವನ್ನು ಕೊಡಿ. ನೀವು ಮಾತ್ರ ಆದಷ್ಟು ಕಡಿಮೆ ಮಾತನಾಡಿ.

**೫.** ನೀವು ಒಪ್ಪುವ ಹಾಗೆ ಉಡುಗೆ ತೊಟ್ಟಿರಬೇಕು. ಆಳವಲ್ಲದ ಮಾತುಗಳನ್ನಾಡಬೇಡಿರಿ. ನಿಮ್ಮ ಆಲೋಚನೆಗಳನ್ನು ಮಿತಸ್ತ ಭಾಷೆಯಲ್ಲಿ ಮುಂದಿಡಲು ಪ್ರಯತ್ನಿಸಿ.

**೬.** ನೀವು ಮೇಲಿನ ಅಧಿಕಾರಿ ಅಥವಾ ದೊಡ್ಡ ವ್ಯಕ್ತಿಯನ್ನು ಕಂಡಾಗ ಅವರೊಡನೆ ಮಾತಾಡುವಾಗ ಸಂಕೋಚ ಪಟ್ಟುಕೊಳ್ಳಬೇಡಿ. ಎಲ್ಲಾ ರೀತಿಯ ಗಾಂಭೀರ್ಯತೆಯಲ್ಲಿ ಹಾಗೂ ಇನ್ನೂ ಹೆಚ್ಚಿನ ಮಟ್ಟದ ದೃಢತೆಯಲ್ಲಿ ನೀವು ಹೇಳಬೇಕಾದುದನ್ನು ಅವರಲ್ಲಿ ಹೇಳಿ.



*ಸಮ್ಮೋಹನ ಜ್ಞಾನ*

೭. ನೀವು ತಪ್ಪನ್ನು ದೃಢೀಕರಿಸುವುದರಲ್ಲಿ ಸಾಧಾರಣ ನಮ್ರತೆಗಿಂತ ಅತಿಯಾಗಿ ತೋರಿಸಬಾರದು. ಪರಿಸ್ಥಿತಿ ಆದೇಶಿಸುತ್ತದೋ ಇಲ್ಲೋ ನೀವು ಅತಿಯಾಗಿ ಪಶ್ಚಾತ್ತಾಪ ಪಡಬೇಡಿರಿ.

೮. ಕೋಪವು ನಿಮ್ಮನ್ನು ಆಳುವ ಅವಕಾಶವನ್ನು ಕೊಡಬೇಡಿರಿ. ನಿಮ್ಮ ಎದುರಿನಲ್ಲಿರುವ ವ್ಯಕ್ತಿಯು ಸಿಟ್ಟಿನಲ್ಲಿದ್ದರೆ, ನೀವು ಶಾಂತವಾಗಿರಲು ಆಯ್ದುಕೊಳ್ಳಿ. ನಂತರ ಅವನು ಕೋಪಕ್ಕೆ ಅವಕಾಶಕೊಟ್ಟದಕ್ಕೆ ಪಶ್ಚಾತ್ತಾಪ ಪಡುವನು. ಅವನ ಸಿಟ್ಟನ್ನು ನೀವು ಶಾಂತ ರೀತಿಯಲ್ಲಿ ಸಾಗಿಸಿದ ನಂತರ ನಿಮ್ಮ ಗೌರವ ಮತ್ತು ಮರ್ಯಾದೆ ಹೆಚ್ಚುವುದು.

೯. ನೀವು ಯಾರನ್ನಾದರೂ ಮೊದಲು ಕಂಡಾಗ, ಅದರಲ್ಲೂ ನಿಮ್ಮ ಸ್ನೇಹಿತನನ್ನು, ನೀವು ಮೊದಲು ಅವನನ್ನು ಹೆಸರಿನಿಂದ ಕರೆಯಿರಿ. ನೀವು ಅವನೊಡನೆ ಮಾತಾಡುವಂತಹ ವಿಷಯಗಳು ಅವನಿಗೆ ಆಸಕ್ತಿಯದೂ ಮತ್ತು ಇಷ್ಟಪಡುವಂತಹುದೂ ಆಗಿರಬೇಕು.

೧೦. ಒಳ್ಳೆಯ ಸಮಾಜದಲ್ಲಿ ಬೆರೆಯಿರಿ. ಉತ್ತಮರ ಸಮಾಜದಲ್ಲಿ ನೀವು ಬೆರೆತರೆ ನೀವು ಬಹಳ ಲಾಭವನ್ನು ಪಡೆಯುವಿರಿ. ನಿಮ್ಮ ಮಟ್ಟದ ಜನರಲ್ಲೇ ನೀವು ಸೀಮಿತಗೊಂಡರೆ ನೀವು ಬಹಳ ಕಡಿಮೆ ಪಡೆಯುವಿರಿ.

೧೧. ದೊಡ್ಡವರ್ಗದ ಜನರೊಡನೆ ನೀವು ಹತ್ತಿರವಾಗಿರಿ. ನೀವು ವೈದ್ಯರಾಗಿದ್ದರೆ, ನೀವು ನಿಮ್ಮ ಸ್ನೇಹ ಕೇವಲ ವೈದ್ಯರಲ್ಲಿಯೇ ಸೀಮಿತವಾಗಿರುವಲ್ಲಿ ಉಪಯೋಗವಿಲ್ಲ. ನಿಮ್ಮ ಸಹವಾಸವು ವಿಶಾಲವಾದ ವರ್ಣಪಂಕ್ತಿಯಾಗಿರಬೇಕು. ನೀವು ಕಾನೂನು ಜ್ಞಾನನಿಧಿಗಳಲ್ಲಿ . ದೊಡ್ಡ ಅಧಿಕಾರಿಗಳಲ್ಲಿ, ಯಶಸ್ವೀ ವ್ಯಾಪಾರಸ್ಥರು, ಹಾಗೂ ಸಭಾ ಸದಸ್ಯರಲ್ಲಿ ಬೆರೆಯಬೇಕು. ಅಂತಹ ವಿವಿಧ ಗೌರವಸ್ಥರ ಸ್ನೇಹವು ನಿಮ್ಮ ಆಸಕ್ತಿಯಲ್ಲೇ ಇರುವುದು.

೧೨. ಎಷ್ಟಾಗುತ್ತದೋ ಅಷ್ಟು ಸುಳ್ಳನ್ನು ಹೇಳಬೇಡಿರಿ ಅಥವಾ ಸಾಧ್ಯವಾಗದಿದ್ದರೆ ನೀವು ಅದಷ್ಟು ಕನಿಷ್ಠದಲ್ಲಿರಿ. ಒಂದು ಸುಳ್ಳು ಬಹಳದಿನ ಬಾಳುವುದಿಲ್ಲ.

೧೩. ಯಾವಾಗಲೂ ನೀವು ಉಲ್ಲಾಸದಿಂದಿರಿ. ಯಾರಿಗೂ ನಿಸ್ತೇಜ, ವೈಗಳ್ಳ, ಹಾಗೂ ಆಯಾಸವಾಗಿರುವಂತಹವರಲ್ಲಿ ಬೆರೆಯಲು ಬೇಕಿರುವುದಿಲ್ಲ. ನೀವು ಬೇರೆಯವರಲ್ಲಿ ನಿಷ್ಪಲತೆ ಮತ್ತು ನಿರುತ್ಸಾಹದ ಭಾವನೆಯನ್ನು ಕೊಟ್ಟರೆ, ನೀವು ನಿಮ್ಮ ಜೀವನದಲ್ಲಿ ಮೇಲೆ ಬರುವುದಿಲ್ಲ. ಅಲ್ಲದೆ ನಿಮಗೆ ಸಮಾಜದಲ್ಲಿ ಗೌರವಸ್ಥಾನವೂ ಇರುವುದಿಲ್ಲ.

೧೪. ಪದೇಪದೇ ಕಡಿಮೆ ವರ್ಗಗಳ ಉಪಹಾರ ಗೃಹಗಳಿಗೆ ಹೋಗಬೇಡಿರಿ. ನೀವು ಎಷ್ಟೇ ಸಾರಿ ಭೇಟಿ ಕೊಟ್ಟರೂ ಉತ್ತಮ ಗುಣಮಟ್ಟದ ಮತ್ತು ಉತ್ಕೃಷ್ಟವಾದ ಉಪಹಾರ ಗೃಹಗಳಿಗೇ ಭೇಟಿಕೊಡಿ. ಏಕೆಂದರೆ ನಿಮಗೆ ಅಂತಹ ಸ್ಥಳಗಳಲ್ಲಿ ದೊರೆಯುವಂತಹ ಜೊತೆಯು ಬಹಳ ದೊಡ್ಡ ಜನರ ಜೊತೆಯಾಗಿರುತ್ತದೆ. ಈ ಸಂಗಾತಿಗಳು ನಿಮಗೆ ಒಳ್ಳೆಯದನ್ನು ಮಾಡಿ ಸಮಾಜದಲ್ಲಿ ನಿಮಗೆ ಉತ್ತಮಸ್ಥಾನವನ್ನು ಕೊಡುವುದು. ಇನ್ನೊಂದು ಕಡೆ ನಿಮ್ಮನ್ನು ಕನಿಷ್ಠ ಹಾಗೂ ಕಡಿಮೆಮಟ್ಟದ ತಿನ್ನುವ ಗೃಹಗಳಲ್ಲಿ ನೋಡಿದರೆ, ನೀವು ಸಮಾಜದಲ್ಲಿ ಗೌರವ ಕಳೆದುಕೊಳ್ಳುವಿರಿ.

೧೫. ನೀವು ಬೀದಿಗಳಲ್ಲಿ ದಾರಿಗಳಲ್ಲಿ ತಿನ್ನಬಾರದು. ದಾರಿ, ಬೀದಿಗಳಲ್ಲಿ ತಿನ್ನುತ್ತಾ ಅಸಹ್ಯ ಭಾಷೆಯನ್ನು ಉಪಯೋಗಿಸುವಂತಹ ವ್ಯಕ್ತಿಗಳ ಜೊತೆಯನ್ನು ಬಿಡುವುದು ಒಳ್ಳೆಯದು.

೧೬. ನಿಮ್ಮ ಉಡುಗೆ ಸ್ವಚ್ಛವಾಗಿ ಮತ್ತು ಅಂದವಾಗಿ ಮತ್ತು ಒಪ್ಪುವ ಹಾಗೆ ಇರಬೇಕು. ಅದು ನಿಮ್ಮ ಸ್ವಭಾವವನ್ನು ಪ್ರತಿಬಿಂಬಿಸಬೇಕು. ಉಡುಗೆಯ ಆಯ್ಕೆಯು ನಿಮ್ಮ ಗುಂಪಿನ ಅಭಿಪ್ರಾಯಗಳಿಂದ ಆದೇಶಿಸಿರಬಾರದು.

೧೭. ಕನಿಷ್ಠ ಒಂದೆರಡು ಸಾರಿ ನೀವು ನಿಮ್ಮ ಸ್ನೇಹಿತರಿಗೆ ಹಾಗೂ ದೊಡ್ಡ ಅಧಿಕಾರಿಗಳಿಗೆ ಉಡುಗೊರೆಗಳನ್ನು ಕೊಡಬೇಕು. ಉಡುಗೊರೆ ಯಾವತ್ತೂ ಚಿಕ್ಕದಲ್ಲ. ಆದರೆ ಉಡುಗೊರೆ ಹೇಗಿರಬೇಕೆಂದರೆ ಅದನ್ನು ಸಂರಕ್ಷಿಸುಕೊಳ್ಳುವಂತಹುದು ಅಥವಾ ಹಜಾರದಲ್ಲಿ ಅಲಂಕರಿಸುವಂತಹುದಾಗಿರಬೇಕು.

೧೮. ಒಬ್ಬ ಸ್ನೇಹಿತನ ಹತ್ತಿರ ಮಾತಾಡುವಾಗ ಬೇರೆ ಇನ್ನೊಬ್ಬ ಸ್ನೇಹಿತನ ಬಗ್ಗೆ ಟೀಕೆ ಮಾಡಬೇಡಿ. ಹಾಗೆಯೇ ಒಬ್ಬ ಅಧಿಕಾರಿಯೊಡನೆ ಮಾತಾಡುವಾಗ ಇನ್ನೊಬ್ಬ ಅಧಿಕಾರಿಯನ್ನು ಟೀಕೆಮಾಡಬೇಡಿರಿ.

೧೯. ನಿಮ್ಮ ಜ್ಞಾಪಕಶಕ್ತಿಯನ್ನು ಚುರುಕಾಗಿಟ್ಟುಕೊಂಡು, ಎಷ್ಟು ಸಾಧ್ಯವಾಗುತ್ತದೋ ಅಷ್ಟು ನಿಮ್ಮ ಸ್ನೇಹಿತರ ಮತ್ತು ಬಂಧುಗಳ ಹೆಸರುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ.

೨೦. ನಿಮ್ಮ ಮಾತುಗಳು ನೀವು ಮಾತಾಡುವಂತಹ ವ್ಯಕ್ತಿಯ ಅಹಂಕಾರವನ್ನು ಸಂಸ್ಕರಿಸುವಹಾಗಿರಬೇಕೆಂದು ಗಮನದಲ್ಲಿಟ್ಟುಕೊಳ್ಳಿ.

೨೧. ಜನರಲ್ಲಿ ನೀವು ಸಾಲ ಕೇಳಬೇಡಿರಿ. ನಿಮ್ಮಲ್ಲಿ ಯಾರಾದರೂ ಸಾಲ ತೆಗೆದುಕೊಂಡಿದ್ದರೆ, ಹಿಂದಿರುಗಿ ಕೇಳಬೇಡಿರಿ. ಮೊಟ್ಟಮೊದಲನೆಯದಾಗಿ ಕೊಡಬೇಡಿರಿ, ಹಾಗೂ ಯಾವುದಾದರೂ ಒತ್ತಡಕ್ಕೆ ಕಟ್ಟುಬಿದ್ದು ಹಣ ಕೊಟ್ಟಿದ್ದರೆ, ಹಿಂದಿರುಗಿಸಲು ಸೂಚನೆಗಳನ್ನು ಕೊಡಬೇಡಿರಿ. ಇನ್ನೊಂದು ಕಡೆ ನೀವು ಯಾರಿಗಾದರೂ ಒಂದು ನಿರ್ದಿಷ್ಟ ದಿನಾಂಕದಂದು ಹಣಕೊಡುವುದಾಗಿ ಮಾತುಕೊಟ್ಟಿದ್ದರೆ, ಹೇಳಿದ ದಿನಾಂಕಕ್ಕಿಂತ ಕೆಲವು ದಿನಗಳ ಮೊದಲೇ ಕೊಡಿರಿ. ಅದು ಸಮಾಜದಲ್ಲಿ ನಿಮ್ಮ ಸ್ಥಾನವನ್ನು ಹೆಚ್ಚಿಸಿಕೊಳ್ಳಲು ಸಹಾಯಕವಾಗುವುದು.

ಸಮ್ಮೋಹಕನ ಜೀವನದ ಇವು ಸತ್ಯಸಂಗತಿಗಳು. ಈ ಗುಪ್ತವಿಚಾರಗಳನ್ನು ಅನುಸರಿಸಿ ನೀವು ಪ್ರಖ್ಯಾತ ಹಾಗೂ ಸಮಾಜದಲ್ಲಿ ಒಪ್ಪುವಂತಹವರಾಗಬಹುದು.

# ಅಧ್ಯಾಯ 12

## ಸ್ವ-ಸಮ್ಮೋಹನ

ಕಳೆದ ಪುಟಗಳಲ್ಲಿ ನಾವು ಈಗಾಗಲೇ ಸಮ್ಮೋಹನಕ್ಕೆ ಸಂಬಂಧಿಸಿದ ಹಲವಾರು ನೋಟಗಳನ್ನು ಚರ್ಚಿಸಿದ್ದೇವೆ. ಸಮ್ಮೋಹನದ ತಳವೆಂದರೆ ಮನಸ್ಸು ಎನ್ನುವುದನ್ನು ನಾವು ನೋಡಿದ್ದೇವೆ. ಈ ಮನಸ್ಸಿನ ಮೂಲಕವೇ ನಾವು ಬೇರೆಯವರನ್ನು ಪ್ರಭಾವಗೊಳಿಸಬಹುದು. ಆದ್ದರಿಂದ, ನಮ್ಮ ಮನಸ್ಸು ವಿಚಾರ ಮುಕ್ತವಾಗಿರುವುದು ಹೆಚ್ಚು ಅವಶ್ಯಕತೆ ಇದೆ. ಏಕೆಂದರೆ ಬೇರೆಯವರನ್ನು ಪ್ರಭಾವಗೊಳಿಸುವಲ್ಲಿ ಪರಿಣಾಮಕಾರಿಯಾದ ಸಾಮರ್ಥ್ಯವನ್ನು ಊಹಿಸಿಕೊಳ್ಳುತ್ತದೆ.

ವಿಚಾರಮುಕ್ತ ಮನಸ್ಸು ಪ್ರಾಣಶಕ್ತಿಯನ್ನು ಉತ್ಪಾದಿಸುವಂತಹ ನಿಯಮ ಸಹ ಆಗಿದೆ. ನಿಜವಾಗಿಯೂ ನಮ್ಮ ಜೀವನದಲ್ಲಿ ಈ ಶಕ್ತಿಯ ಅವಶ್ಯಕತೆ ಬಹಳ ಇವೆ, ಏಕೆಂದರೆ ಅದು ಕೇವಲ ನಮ್ಮ ಮನಸ್ಸನ್ನು ವಿಚಾರಗಳಿಂದ ಬೇರ್ಪಡಿಸುವುದೇ ಅಲ್ಲ, ನಮ್ಮ ಮುಖದಲ್ಲಿ ದೈವೀಕ ಹೊಳಪನ್ನು ಸಹ ಕೊಡುತ್ತದೆ —ಬೇರೆಯವರ ಮೇಲೆ ಘನವಾಗಿ ಮತ್ತು ಚಿರವಾದ ಪರಿಣಾಮವನ್ನು ಬೀರುವಂತಹ ಒಂದು ಎದ್ದು ಕಾಣುವಂತಹ ನೋಟ. ಅದು ನಮ್ಮಲ್ಲಿ ಒಂದು ವಿಶಿಷ್ಟ ತರಹದ ಆಕರ್ಷಣ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಸಹ ಸಹಾಯಕವಾಗಿರುತ್ತದೆ. ಅದು, ಪುನಃ ಬಹಳ ಪ್ರಮುಖವಾದದ್ದು, ಏಕೆಂದರೆ ಈ ಶಕ್ತಿಯು ನಮ್ಮ ಕಣ್ಣುಗಳಿಗೆ ಬೇರೆಯವರನ್ನು ಪ್ರಭಾವಕ್ಕೊಳಗಾಗಿಸುವಂತಹ ಅಸಾಧಾರಣವಾದ ಕಾಂತತೆಯನ್ನು ಕೊಡುವುದು.

ಆದ್ದರಿಂದ ನಾವು ನಮ್ಮ ರಚನೆಯಲ್ಲಿ ಈ ಶಕ್ತಿಯನ್ನು ಕಾಪಾಡಿಕೊಳ್ಳುವುದು ಬಹಳ ಮುಖ್ಯವಾಗಿರುತ್ತದೆ.

ಕಳೆದ ಪುಟಗಳಲ್ಲಿ ನಾವು ಬೇರೆಯವರ ಮನಸ್ಸನ್ನೂ ಹತೋಟಿಗೆ ಹೇಗೆ ತರಬಹುದೆಂದು ಅಥವಾ ಅವನಲ್ಲಿ ನಾವು ಹೇಗೆ ಸಮ್ಮೋಹನ ನಿದ್ರೆಯನ್ನು ತರಬಹುದು ಮತ್ತು ಅವನನ್ನು ಈ ಸಮ್ಮೋಹನ ನಿದ್ರೆಯಿಂದ ನಮ್ಮ ಉದ್ದೇಶಗಳನ್ನು ಹೇಗೆ ಪೂರೈಸಿಕೊಳ್ಳಬಹುದು ಎಂದು ಸಹ ಚರ್ಚಿಸಿದ್ದೇವೆ. ಓರ್ವನು ಯಾವಾಗಲೂ ಮೊದಲ ಹಂತದಲ್ಲಿ ಯಶಸ್ವಿಯಾಗುತ್ತಾನೆ. ಹೇಗಾದರೂ, ಓರ್ವನು, ಮೂರನೇ ಹಂತದಲ್ಲಿ ಖಚಿತವಾದ ಯಶಸ್ಸಿಯನ್ನು ಪಡೆಯಬಹುದು. ಉದಾಹರಣೆಗೆ ಒಬ್ಬ ಶಸ್ತ್ರಚಿಕಿತ್ಸಕನು ಸಮ್ಮೋಹನಗೊಂಡವನ ಮೇಲೆ ಶಸ್ತ್ರಚಿಕಿತ್ಸೆಯನ್ನು ನಡೆಸಿದರೆ, ಏನೇಯಾದರೂ ಸಮ್ಮೋಹನಗೊಂಡವನಿಗೆ ನೋವೇ ಆಗುವುದಿಲ್ಲ.

ಇಲ್ಲಿಯವರೆಗೆ ನಾವು ಬೇರೆಯವರನ್ನು ಸಮ್ಮೋಹನಗೊಳಿಸುವ ಪದ್ಧತಿಗಳನ್ನು ಚರ್ಚಿಸಿದ್ದೇವೆ. ಆದರೆ ಅದಕ್ಕೆ ಸ್ವ-ಸಮ್ಮೋಹನದಲ್ಲಿಯೂ ಸಹ ಕಾರ್ಯನಿರ್ವಹಿಸಲು ಅಮೋಘವಾದ ಸಾಮರ್ಥ್ಯವಿದೆ. ಏಕೆಂದರೆ ಓರ್ವನು ಎದುರಿಸಿ ಮತ್ತು ಕ್ಷೀಣಿಸಿ ಬಹಳಷ್ಟು ದೈಹಿಕ ನೋವುಗಳನ್ನು ಹಾಗೂ ಮಾನಸಿಕ ತೊಂದರೆಗಳನ್ನು ಸಮ್ಮೋಹನದ ಮೂಲಕ ತೆಗೆದುಹಾಕಬಹುದು. ನಾವು ಸ್ವ-ಸಮ್ಮೋಹನದ ಕಲೆಯನ್ನು ಸಾಧಿಸಿದರೆ, ನಾವು ನಮ್ಮಷ್ಟಕ್ಕೇ ಅದೇ ತರಹದ ನೋವುಗಳನ್ನು ಮತ್ತು ತೊಂದರೆಗಳನ್ನು ವಾಸಿಮಾಡಿಕೊಂಡು ತುಂಬಾ ಲಾಭವನ್ನು ಪಡೆಯಬಹುದು.

ಸಮ್ಮೋಹಕನು ಬೇರೆಯವರನ್ನು ಸಮ್ಮೋಹನಗೊಳಿಸಬಹುದು, ಅದೇ ನಿಯಮವನ್ನು ಅನುಸರಿಸಿ ತನಗೆ ತಾನೇ ಸಮ್ಮೋಹನಗೊಳಿಸಿಕೊಳ್ಳಬಹುದು.

# ಸ್ವ-ಸಮ್ಮೋಹನದ ಪ್ರಯೋಗಗಳು.

ನಾವು ಈ ಕೆಳಗೆ ಸ್ವ-ಸಮ್ಮೋಹನವನ್ನು ತರಬಹುದಾದಂತಹ ಕೆಲವು ಪ್ರಯೋಗಗಳನ್ನು ವಿಮರ್ಶಿಸಿದ್ದೇವೆ.

೧. ಎಷ್ಟು ಸಾಧ್ಯವಾಗುತ್ತದೋ ಅಷ್ಟು ನಿಮ್ಮ ಮನಸ್ಸನ್ನು ವಿಚಾರಮುಕ್ತ ಮಾಡಿ. ನಿಮ್ಮ ಮೆದುಳನ್ನೂ ಸಹ ಆಲೋಚನೆರಹಿತ ಮಾಡಲು ಪ್ರಯತ್ನಿಸಿ. ನೀವು ಈ ತರಹದ ಒಂದು ಸ್ಥಿತಿಯನ್ನು ಪಡೆದುಕೊಂಡಾಗ ಸ್ವ-ಸಮ್ಮೋಹನದ ವಿಧಾನಕ್ಕೆ ಅಣಿಯಾಗುವಿರಿ.

ಬೆಳಿಗ್ಗೆ ಅಥವಾ ಸಾಯಂಕಾಲದಲ್ಲಿ ಕೆಲವು ನಿಮಿಷಗಳವರೆಗೆ ಶೀರ್ಷಾಸನವನ್ನು ಅಭ್ಯಾಸಮಾಡಿ. ಅದು ವಿಚಾರಮುಕ್ತ ಮನಸ್ಸನ್ನು ಪಡೆಯಲು ಬಹಳ ಸಹಾಯಕವಾಗುವುದು. ಈ ಹಂತದ ನಂತರ ಒಂದು ಆಸನದಲ್ಲಿ ಸ್ವಲ್ಪ ಹೊತ್ತು ಶಾಂತವಾಗಿ ಮತ್ತು ಒಗ್ಗೂಡಿಸಿಕೊಂಡು ಕೂತುಕೊಳ್ಳಿ ಮತ್ತು ನಿಮ್ಮ ಕಣ್ಣುಗಳನ್ನು ಒಂದು ನಿರ್ದಿಷ್ಟವಾದ ದಿಕ್ಕಿನಲ್ಲಿ ಪಿಳುಕಿಸದೆಯೇ ಸ್ಥಿರವಾಗಿಸಿ. ಈ ವ್ಯಾಯಾಮದ ಭಾಗವು ನಿಮ್ಮಲ್ಲಿ, ಏನಾದರೂ ಇಂದ್ರಿಯ ಬಯಕೆಗಳಿದ್ದರೆ ಶಾಂತ ಮಾಡುವುದು.

ಈ ಹಂತದ ನಂತರ ನಿಮ್ಮ ಅಂತರ್ಮನಸ್ಸನ್ನು ಎಚ್ಚರಿಸಲು ಪ್ರಯತ್ನಿಸಿ ನಿಮ್ಮ ಅಂತರ್ಮನಸ್ಸಿಗೆ ನಿಮಗೆ ನಿದ್ರೆ ಹತ್ತುತ್ತಿದೆ, ನಿಮ್ಮ ಕಣ್ಣುಗಳು ಭಾರವಾಗಿ ಹೋಗಿದ್ದಾವೆ ಮತ್ತು ಇನ್ನೇನು ಆಳವಾದ ನಿದ್ರೆಗೆ ಹೋಗುವುದರಲ್ಲಿದ್ದಾವೆ ಎಂದು ಆಜ್ಞಾಪಿಸಿ. ಈ ಹಂತದಲ್ಲಿ ನಿಮ್ಮ ಮನಸ್ಸಿನಲ್ಲಿ ಉದ್ಭವಿಸಬಹುದಾದಂತಹ ಎಲ್ಲಾ ಆಲೋಚನೆಗಳನ್ನು ಮುಂದಾಗಿ ತೆಗೆದುಹಾಕಿ. ನಿಮ್ಮ ಒಂದೇ ಅಂಶದ ಏಕಾಗ್ರತೆಯನ್ನು ಕೇವಲ ನಿದ್ರೆಯಮೇಲೆ ಇರಿಸಿ.



*ಸಮ್ಮೋಹನಾವಸ್ಥೆ*

ನಿಧಾನವಾಗಿ ನಿಮ್ಮ ಅಂತರ್ಮನಸ್ಸು ಆಜ್ಞೆಗಳನ್ನು ಪಡೆಯಲಾರಂಭಿಸುವುದು. ಅದು ನಿಮ್ಮನ್ನು ನಿದ್ರೆಗೆ ವಶವಾಗುವ ಹಾಗೆ ಮಾಡುತ್ತದೆ. ಈ ವಿಧಾನಕ್ಕೆ ಸಹಾಯಕವಾಗುವ ಹಾಗೆ ನೀವು ವಾಸ್ತವದಲ್ಲಿ ಕೆಳಗೆ ಒರಗಿಕೊಳ್ಳಿ. ನೀವು ಕೂತುಕೊಂಡಾಗ ನಿದ್ದೆ ಹೋಗಬಹುದು. ಅದು, ಹೇಗಾದರೂ, ಸಹಜನಿದ್ರೆ ಯಾಗಲಾರದು. ಅದು ಕೇವಲ ಸಮ್ಮೋಹನಾನಿದ್ರೆಯಾಗುವುದು. ನಿದ್ರೆಯಲ್ಲಿ ನಿಮ್ಮನ್ನು ನೀವೇ ಮರೆಯುವಿರಿ. ಏಕೆಂದರೆ ಈ ಹಂತದಲ್ಲಿ ನಿಮಗೆ ನಿಮ್ಮ ಅಂತರ್ಮನಸ್ಸಿನ ಮೇಲೆ ಹತೋಟಿ ಇರುವುದಿಲ್ಲ. ನೀವು ನಿದ್ದೆ ಹೋಗುವುದರಲ್ಲಿದ್ದಾಗ, ನೀವು ನಿಮ್ಮ ಅಂತರ್ಮನಸ್ಸಿಗೆ ನೀವು ನೀವಾಗಿಯೇ ಒಂದು ಗಂಟೆ ಬಿಟ್ಟು ಏಳಬೇಕು ಎಂದು ಆಜ್ಞಾಪಿಸಿಕೊಳ್ಳುವುದನ್ನು ಮರೆಯಬೇಡಿರಿ.

ನೀವು ನೀವಾಗಿಯೇ ಒಂದು ಗಂಟೆಯಲ್ಲಿ ಏಳುವಿರೆನ್ನುವ ಸತ್ಯದಲ್ಲಿ ಯಾವುದೇ ಅಪನಂಬಿಕೆ ಇರುವುದು ಬೇಡ.

ಸಮ್ಮೋಹನಾ ನಿದ್ರೆಯು ಬಹಳ ಮಧುರವಾಗಿ ಹಾಗೂ ಸಮಾಧಾನದ್ದಾಗಿರುವುದಾಗಿ ಸಾಬೀತು ಪಡಿಸುವುದು. ನೀವು ಎತ್ತರದ ಅಲೆಗಳಲ್ಲಿ ತೇಲುತ್ತಿರುವ ಹಾಗೆ ಮತ್ತು ನೀವು ಮನರಂಜಕ ಲೋಕದಲ್ಲಿ ಚಲಿಸುತ್ತಿರುವ ಹಾಗೆ ನಿಮಗೆ ಭಾಸವಾಗುವುದು. ನೀವು ಎಲ್ಲಾ ತರಹದ ಮಾನಸಿಕ ಬಿಗುವುಗಳಿಂದ ಮುಕ್ತರಾಗಿ ನೀವು ಒಂದು ವಿಶಿಷ್ಟ ರೀತಿಯ ಅಹ್ಲಾದತೆಯನ್ನು ಅನುಭವಿಸುವಿರಿ.

೨. ಸಾಯಂಕಾಲ ಅಥವಾ ರಾತ್ರಿಯಲ್ಲಿ ನೀವು ದಿನದ ಎಲ್ಲಾ ಚಟುವಟಿಕೆಗಳನ್ನು ಮುಗಿಸಿದನಂತರ ನೀವು ದೇಹದ ಎಲ್ಲಾ ಭಾಗಗಳನ್ನು ಸಡಿಲಿಸಿ. ನಿರ್ಜೀವ ದೇಹದ ಹಾಗೆ ಮಲಗಿಕೊಳ್ಳಿ.

ಈ ಹಂತದಲ್ಲಿ ನೀವು ನಿಮ್ಮ ಅಂತರ್ಮನಸ್ಸಿಗೆ ನೇರವಾಗಿ ನಿಮ್ಮ ಮುಂದೆ ಒಬ್ಬ ಸಮ್ಮೋಹಕನು ನಿಂತಿದ್ದಾನೆಂದು ಆಜ್ಞಾಪಿಸಿ ಹಾಗೂ ಅವನು ನಿಮಗೆ ಸಮ್ಮೋಹನಗೊಳಿಸಲು ಪ್ರಯತ್ನಿಸುತ್ತಿದ್ದಾನೆ. ಅದೇ ರೀತಿಯಲ್ಲಿ ನೀವು ನಿಮ್ಮ ಅಂತರ್ಮನಸ್ಸಿಗೆ ಸಮ್ಮೋಹಕನು ನಿಮಗೆ ನಿದ್ರೆಹೋಗಲು ಹೇಳುತ್ತಿದ್ದಾನೆಂದು ಆಜ್ಞಾಪಿಸಿಕೊಳ್ಳಿ ಮತ್ತು ನಿಮಗೆ ನಿದ್ದೆ ಮಾಡಿಬಿಡಬೇಕೆನ್ನಿಸುತ್ತಿದೆ. ಅವನು ನಿಮಗೆ ಆಳವಾದ ನಿದ್ರೆಯನ್ನು ಮಾಡಲು ತಿಳಿಸುತ್ತಿದ್ದಾನೆ ಮತ್ತು ಅವನು ಹೇಳುವ ಹಾಗೆ ನಿಮ್ಮ ಕಣ್ಣುಗಳಲ್ಲಿ ಬರುತ್ತಿದೆ ಮತ್ತು ನಿದ್ರೆ ಮಾಡಿಬಿಡಬೇಕೆನ್ನಿಸುತ್ತಿದೆ. ಅವನು ನಿಮಗೆ ಆಳವಾದ ನಿದ್ರೆಯನ್ನು ಮಾಡಲು ತಿಳಿಸುತ್ತಿದ್ದಾನೆ ಮತ್ತು ನೀವು ಸ್ವಯಂಚಾಲನೆಯಲ್ಲಿ ಒಂದು ಗಂಟೆಯ ನಂತರ ಎಚ್ಚರಗೊಳ್ಳುವಿರಿ.

ಆ ಆಜ್ಞೆಯೇ ನಿಮ್ಮಲ್ಲಿ ನಿದ್ರೆಯನ್ನು ತಂದು ನೀವು ಒಂದು ಗಂಟೆಯಲ್ಲಿ ಎಚ್ಚರಗೊಳ್ಳುವುದನ್ನು ನೀವು ಕಾಣುವಿರಿ.

೩. ಹಗಲಿನಲ್ಲಿ ಅಥವಾ ರಾತ್ರಿಯಲ್ಲಿ ನಿಮ್ಮ ಯಾವುದಾದರೂ ಒಂದು ಕೋಣೆಯಲ್ಲಿ ಆಸನವನ್ನು ಹಾಸಿ ಅದರ ಮೇಲೆ ಸ್ಥಿರವಾಗಿ ಕೂತುಕೊಳ್ಳಿ. ನಿಮ್ಮ ಮನಸ್ಸಿನಲ್ಲಿ ಏಕಾಗ್ರತೆಯನ್ನು ತರಲು ಪ್ರಯತ್ನಿಸಿ. ಈ ಹಂತದ ನಂತರ ನಿಮ್ಮಷ್ಟಕ್ಕೆ ನೀವೇ ನಿಮಗೆ ನಿದ್ರೆ ಬರುತ್ತಿದೆ ಎಂದು ಆಜ್ಞಾಪಿಸಿಕೊಳ್ಳಿ. ಸಮ್ಮೋಹನ ನಿದ್ರೆಯು ನಿಮಗೆ ಉತ್ತಮವಾಗಿ ಬರುತ್ತದೆ. ನಿಮ್ಮ ಕಣ್ಣುಗಳು ಈಗಾಗಲೇ ಭಾರವಾಗಿವೆ. ನಿಮಗೆ ಆಳವಾದ ನಿದ್ರೆ ಬರುತ್ತಿದೆ.

ನೀವು ಈ ಅಭ್ಯಾಸವನ್ನು ಒಂದು ಗೊತ್ತುಪಡಿಸಿದ ಸಮಯದಲ್ಲಿ ನಿಯಮಿತವಾಗಿ ಅಭ್ಯಸಿಸಿದರೆ ಅದೇ ಸಮಯದಲ್ಲಿ ನಿಮಗೆ ನಿಯಮಿತವಾದ ನಿದ್ರೆ ಹತ್ತಲು ಪ್ರಾರಂಭವಾಗುವುದು. ನೀವು ಯಾಂತ್ರಿಕವಾಗಿ ನಿದ್ದೆ ಹೋಗುವಿರಿ. ಈ ತರಹದ ನಿದ್ರೆಯು ಮಧುರ ಹಾಗೂ ಸಂತೈಸುವಂತದ್ದಾಗಿರುತ್ತದೆ.

೪. ಮಧ್ಯಾಹ್ನದಲ್ಲಿ ನಿಮ್ಮ ಆಸನವನ್ನು ಹಾಸಿಕೊಂಡು ಅನುಕೂಲಕರವಾಗಿ ಕೂತುಕೊಳ್ಳಿ. ನಿಮ್ಮ ಮುಂದೆ

ಒಂದು ಕನ್ನಡಿಯನ್ನು ಇಟ್ಟುಕೊಳ್ಳಿ. ನಿಮ್ಮ ಮುಖವನ್ನು ಎದ್ದು ಕಾಣುವ ರೂಪರೇಖೆಯಲ್ಲಿ ಕಾಣುವಿರಿ. ನಿಮ್ಮ ಮುಖದ ಪ್ರತಿಬಿಂಬವನ್ನು ನೀವು ಕನ್ನಡಿಯಲ್ಲಿ ನೋಡಿಕೊಂಡಾಗ, ನೀವು ನಿಮ್ಮ ಕಣ್ಣುಗಳನ್ನು ಮುಚ್ಚಿ. ಮುಖವನ್ನು ಮುಂದೆತರಲು ಪ್ರಯತ್ನಿಸಿ. ಹೇಗಾದರೂ ನಿಮ್ಮ ಕಣ್ಣುಗಳು ಸಂಪೂರ್ಣವಾಗಿ ಮುಚ್ಚಿಕೊಂಡಿವೆ ಎಂದು ಖಚಿತಪಡಿಸಿಕೊಳ್ಳಬೇಕು. ನಿಮ್ಮ ಮುಖವನ್ನು ನೀವು ಮಾನಸಿಕವಾಗಿ ನೋಡುತ್ತಿರುವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ.

ನಿಮ್ಮ ಮಾನಸಿಕ ದೃಷ್ಟಿಯಿಂದ ನಿಮ್ಮ ಮುಖಹೋಗಲು ಪ್ರಾರಂಭಿಸಿದ ಕ್ಷಣದಿಂದ ನೀವು ಸಮ್ಮೋಹನಾನಿದ್ರೆಯ ಲೋಕದಲ್ಲಿ ಪ್ರವೇಶಿಸಲು ಪ್ರಾರಂಭಿಸುವಿರಿ. ಬೇಗನೇ ನೀವು ಸಮ್ಮೋಹನಾ ನಿದ್ರೆಯಲ್ಲಿ ಹೋಗುವಿರಿ.

೫. ಶಾಂತಿ ಮತ್ತು ಸಮಚಿತ್ತದಿಂದ ಹಾಸಿಗೆಯ ಮೇಲೆ ಒರಗಿಕೊಳ್ಳಿ. ಒಂದು ಮಂತ್ರವನ್ನು ಪಠಿಸಲು ಪ್ರಾರಂಭಿಸಿ. ಮಂತ್ರವು ಉದ್ದವಾಗಿಲ್ಲವೆಂದು ನೋಡಿಕೊಳ್ಳಿ. ನೀವು, ಉದಾಹರಣೆಗೆ, *ರಾಮರಾಮ* ವೆಂದು ಪಠಿಸಬಹುದು ಅಥವಾ ಇಷ್ಟೇ ಚಿಕ್ಕದಾಗಿರುವಂತಹ ಬೇರೆಯಾವುದನ್ನಾದರೂ ಈ ಪ್ರಾರಂಭದ ಹಂತದಲ್ಲಿ ರಾಮ ಎಂದು ಒಂದು ನಿಮಿಷದಲ್ಲಿ ನೂರು ಸಾರಿ ಪಠಿಸಿ. ಈಗ ನೀವು ನಿಮ್ಮ ವೇಗವನ್ನು ಕಡಿಮೆಮಾಡಿ ನಿಧಾನವಾಗಿ ರಾಮ್ ಎಂದು ಒಂದು ನಿಮಿಷಕ್ಕೆ 20 ಸಾರಿ ಪಠಿಸಿ. ಇದು ಒಂದು ರಾಮನಿಂದ ಇನ್ನೊಂದು ರಾಮಕ್ಕೆ ಅಂತರವನ್ನು ಹೆಚ್ಚಿಸುತ್ತದೆ. ಈ ಸಮಯದಲ್ಲಿ ಬೇರೆಯಾವುದೇ ವಿಚಾರವು ನಿಮ್ಮ ಮನಸ್ಸಿನಲ್ಲಿ ಬಾರದ ಹಾಗೆ ನೋಡಿಕೊಳ್ಳಿ.

ನೀವು ನಿಮ್ಮ ವೇಗವನ್ನು ಕಡಿಮೆಮಾಡುವುದನ್ನು ಮುಂದುವರಿಸಿದಹಾಗೆಲ್ಲಾ ಎರಡು ಪದಗಳ ನಡುವಿನ ಸಮಯವು ಹೆಚ್ಚುತ್ತದೆ, ಅದು ನಿಮಗೆ ವಿಚಾರಮುಕ್ತ ಮನಸ್ಸು ಮಾಡುವಲ್ಲಿ ಖಚಿತವಾಗಿ ಸಹಾಯಕವಾಗುತ್ತದೆ. ಸಮಯದ ಅಂತರವನ್ನು ಹೆಚ್ಚುಗೊಳಿಸುವುದು ನಿಮ್ಮ ಮನಸ್ಸನ್ನು ವಿಚಾರಗಳಿಂದ ದೂರವಿರಲು ಬಹಳವೇ ಅನುಕೂಲಕರವಾಗಿರುತ್ತದೆ.

೬. ರಾತ್ರಿಯಲ್ಲಿ ಹಾಸಿಗೆಯ ಮೇಲೆ ಒರಗಿಕೊಳ್ಳಿ. ವಿಧವಿಧದ ಆಲೋಚನೆಗಳು ನಿಮ್ಮ ಮನಸ್ಸಿನಲ್ಲಿ ನೆಲೆಯಾಗಲಿ. ಯಾವ ಯೋಚನೆಗಳಾದರೂ ನಿಮ್ಮಿಂದ ಜಾರಿಕೊಳ್ಳುತ್ತಿವೆ ಎಂದು ನಿಮಗೆ ಅನ್ನಿಸಿದರೆ, ನೀವು ಇನ್ನೂ ಹೆಚ್ಚಿನ ವಿಚಾರಗಳನ್ನು ತರಲು ಪ್ರಯತ್ನಿಸಿ, ಅದನ್ನು ವಿವಿಧ ರೀತಿಯ ವಿಚಾರಗಳ ಗುಂಪಾಗಿ ಮಾಡಿ.

ಸ್ವಲ್ಪ ಸಮಯದ ನಂತರ ನಿಮ್ಮ ಮನಸ್ಸು ಮತ್ತು ಮೆದುಳು ಹೊಚ್ಚಹೊಸ ವಿಚಾರಗಳ ಆಕ್ರಮಣದ ಒತ್ತಡದಿಂದ ಸಂಪೂರ್ಣವಾಗಿ ಆಯಾಸಗೊಳ್ಳುತ್ತದೆ. ಅವು ಆಯಾಸಗೊಂಡಿದ್ದರಿಂದ ನಿದ್ದೆ ಮಾಡಲು ಪ್ರಯತ್ನಿಸುತ್ತವೆ. ಪರಿಣಾಮವಾಗಿ, ನಿಮ್ಮ ಕಣ್ಣುಗಳು ಸುಮಾರಾಗಿ ಭಾರವಾಗುತ್ತವೆ. ಆ ಸಮಯದಲ್ಲಿ ನಿಮಗೆ ಬಂದಂತಹ ನಿದ್ರೆ ಸಮ್ಮೋಹನಾನಿದ್ರೆ ಅಲ್ಲದೆ ಬೇರೇನೂ ಅಲ್ಲ.

ಈ ಪ್ರಯೋಗವು ಬಹಳ ಯಶಸ್ವಿಯಾಗಿದೆ. ಅದು ಯಾವುದೇ ಹೆಚ್ಚಿನ ಪ್ರಯತ್ನವನ್ನು ಒಳಗೊಂಡಿಲ್ಲ. ನೀವು ಹೇಳಿದ ಹಾಗೆ ಪ್ರಯತ್ನಿಸಿದರೆ ಕೆಲವು ಕ್ಷಣಗಳಲ್ಲೇ ನಿದ್ರೆ ಹೋಗುವಿರಿ. ಮನಸ್ಸು ಯೋಚನೆಗಳ ವಿವಿಧತೆಯಲ್ಲಿ ಸಿಕ್ಕಿಹಾಕಿಕೊಂಡಾಗ ಅದಕ್ಕೆ ದಣಿವಾಗುತ್ತದೆ. ಆ ತರಹ ದಣಿವಾದುದರಿಂದ ಎಲ್ಲಾ ವಿಚಾರಗಳೂ ಮನಸ್ಸಿನಿಂದ ಹೊರ ಹೋಗುವವು. ಮೆದುಳು ಹಾಗೆಯೇ ಮನಸ್ಸೂ ಸಹ ಎಲ್ಲಾ ವಿಚಾರ ಹಾಗೂ ಯೋಜನೆಗಳಿಂದ ಸಂಪೂರ್ಣವಾಗಿ ಶೂನ್ಯವಾಗುತ್ತದೆ. ಪರಿಣಾಮವಾಗಿ ನೀವು ನಿದ್ದೆ ಹೋಗುವಿರಿ.

ಸ್ವ-ಸಮ್ಮೋಹನದಿಂದ ಉಪಯೋಗಗಳು

ಓರ್ವನು ಕೇಳಲಾರದಷ್ಟಿವೆ. ಸಹಜವಾಗಿಯೇ ನಾವು ಬೇರೆಯವರನ್ನು ಸಮ್ಮೋಹನಗೊಳಿಸಿದಾಗ ಅವರಿಂದ ಕೆಲವು ಲಾಭಗಳಿವೆ. ಉದಾ:ನಾವು ಅವನಿಗೆ ಅನೇಕ ಪ್ರಶ್ನೆಗಳನ್ನು ಕೇಳಬಹುದು. ಅವನ ಮನಸ್ಸಿನಲ್ಲಿ ಸುಪ್ತವಾಗಿರುವಂತಹ ವಿಚಾರಗಳನ್ನು ನಾವು ತಿಳಿದುಕೊಳ್ಳಬಹುದು. ನಾವು ಸ್ವ-ಸಮ್ಮೋಹನದಿಂದ ಏನನ್ನಾದರೂ ಸಾಧಿಸಲಾದೀತೇ? ನಾವು ನಮಗೆ ನಾವೇ ಸಮ್ಮೋಹನಗೊಳಿಸಿಕೊಂಡಾಗ, ನಮ್ಮನ್ನು ಪ್ರಶ್ನೆ ಕೇಳುವವರ್‍ಯಾರು ಮತ್ತು ಉತ್ತರಗಳನ್ನು ಬಯಲಿಗೆ ತರುವವರ್‍ಯಾರು?

ಇದಕ್ಕೆ ಒಂದು ಸುಲಭವಾದ ದಾರಿಯಿದೆ. ನೀವು ನಿಮ್ಮನ್ನೇ ಸಮ್ಮೋಹನಗೊಳಿಸಿಕೊಂಡಾಗ ನಿಮಗೆ ಏನನ್ನೆಲ್ಲಾ ತಿಳಿದುಕೊಳ್ಳಬೇಕೆಂದಿದಿಯೋ ಅದನ್ನೆಲ್ಲಾ ಅಂತರ್ಮನಸ್ಸಿಗೆ ಹೇಳುವುದು ಉತ್ತಮವು. ಈ ಆಜ್ಞೆಯನ್ನು ನೀವು ಸಮ್ಮೋಹನಗೊಳಿಸಿಕೊಳ್ಳುವ ಸ್ವಲ್ಪಹೊತ್ತಿನ ಮುಂಚೆಯೇ ಕೊಡಬೇಕು. ಅದೇ ಸಮಯದಲ್ಲಿ ನೀವು ನಿಮ್ಮ ಅಂತರ್ಮನಸ್ಸಿಗೆ ನೀವು ಪಡೆದುಕೊಂಡಿರುವಂತಹ ಜ್ಞಾನವನ್ನು ಅರಿವಿಗೆ ಹಿಂದಿರುಗಿದಾಗಲೂ ಜ್ಞಾಪಕದಲ್ಲಿಟ್ಟು ಕೊಳ್ಳಬೇಕೆಂದು ಸಹ ಆಜ್ಞಾಪಿಸಿಕೊಳ್ಳಬೇಕು. ಈ ಹಂತದ ನಂತರ, ನೀವು ಸಮ್ಮೋಹನ ನಿದ್ರೆಯಲ್ಲಿ ಹೋಗುವಿರಿ, ನಿಮ್ಮ ಅಂತರ್ಮನಸ್ಸು ನಿಮ್ಮ ಪ್ರಶ್ನೆಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಎಚ್ಚರವಹಿಸುವುದು. ನೀವು ಎಚ್ಚರಗೊಂಡಾಗ ನಿಮ್ಮ ಪ್ರಶ್ನೆಗಳಿಗೆ ಉತ್ತರಗಳು ನಿಮ್ಮ ಜ್ಞಾಪಕದಲ್ಲಿರುವವು.

**ಹೆಚ್ಚಿನ ಉಪಯೋಗಗಳು:**

ಸ್ವ-ಸಮ್ಮೋಹನವು ಅನೇಕ ಹೆಚ್ಚಿನ ಉಪಯೋಗಗಳನ್ನು ನಿಶ್ಚಿತಗೊಳಿಸುತ್ತದೆ.

೧. ಅದು ನಮ್ಮ ಮನಸ್ಸನ್ನು ತಲೆನೋವು, ಕೀಳರಿಮೆ, ಕಾಲ್ಪನಿಕ ಭಯಗಳು, ಮುಂತಾದವುಗಳಿಂದ ವಾಸಿಮಾಡುತ್ತದೆ.

೨. ನೀವು ಸ್ವ-ಸಮ್ಮೋಹನಗೊಂಡಾಗ ನಿಮ್ಮ ಯೋಚನೆಗಳಲ್ಲಿ ನಿಮಗೆ ಶಕ್ತಿ ಬರುತ್ತದೆ. ಮನಸ್ಸು ವಿಚಾರಮುಕ್ತವಾದಾಗ, ಅದು ನಿಮ್ಮ ಜ್ಞಾಪಕಶಕ್ತಿಯನ್ನು ಶಕ್ತಿಯುತಮಾಡುತ್ತದೆ. ಅದು ನಿಮ್ಮನ್ನು ಧೂಮಪಾನದಂತಹ ಅಭ್ಯಾಸಗಳಿಂದ ದೂರಮಾಡಿ ಮತ್ತು ಎಲ್ಲಾ ತರಹದ ಕೆಟ್ಟಹವ್ಯಾಸಗಳಿಂದಲೂ ದೂರ ಮಾಡುವಲ್ಲಿ ನೆರವಾಗುತ್ತದೆ.

೩. ಅದು ನಿಮ್ಮನ್ನು ನಿದ್ರಾನಾಶದಿಂದ ಗುಣಪಡಿಸುತ್ತದೆ.

೪. ನೀವು ಸ್ವನಿರ್ಧಾರತೆಯಲ್ಲಿ ಉತ್ತಮಗೊಂಡು ಅದು ನಿಮ್ಮ ಮನೋಬಲವನ್ನು ಸುಧಾರಿಸುತ್ತದೆ.

೫. ಅದು ನಿಮ್ಮ ಮನಸ್ಸಿಗೆ ಏಕಾಗ್ರತೆಯನ್ನು ತರುತ್ತದೆ.

೬. ನಿಮ್ಮ ವಿಚಾರಗಳು ಕಾಲ್ಪನಿಕತೆಯನ್ನು ಪಡೆದುಕೊಳ್ಳುತ್ತವೆ. ಅದು ನಿಮಗೆ ಒಂದು ವಿಶಿಷ್ಟವಾದ ಶಕ್ತಿ ಹಾಗೂ ಜೀವನದಲ್ಲಿ ಯಶಸ್ಸನ್ನು ಪಡೆಯುವಲ್ಲಿ ನೆರವಾಗುವುದು.

೭. ಅದು ನಿಮ್ಮನ್ನು ಎಲ್ಲಾ ತರಹದ ಚಿಂತೆಗಳಿಂದ ದೂರಮಾಡಿ, ನಿಮ್ಮ ಜೀವನವನ್ನು ಹೆಚ್ಚಿನ ವೃತ್ತಿಗೆ ಉತ್ತರದಾಯಿಯಾಗುವ ಹಾಗೆ ಮಾಡುವುದು.

೮. ಸ್ವ-ಸಮ್ಮೋಹನದಿಂದ ನಿಮ್ಮನ್ನು ನೀವೇ ನೋಡಿಕೊಳ್ಳುತ್ತೀರಿ. ನಿಮ್ಮನ್ನು ನೀವೇ ಗುರುತಿಸಿಕೊಳ್ಳುತ್ತೀರಿ, ಮತ್ತು ನಿಮ್ಮ ಸ್ವಂತ ಕ್ಷೀಣತೆಗಳನ್ನು ಹಾಗೂ ನಿಮ್ಮ ಮೂಲಸ್ವಭಾವದಲ್ಲಿ ಏನಾಗಿದ್ದೀರೆಂದು ಗುರುತಿಸಿಕೊಳ್ಳುತ್ತೀರಿ.

ಸಂಕ್ಷಿಪ್ತವಾಗಿ, ಸ್ವ-ಸಮ್ಮೋಹನವು ಮನುಷ್ಯನಿಗೆ ತನ್ನ ಜೀವನದಲ್ಲಿ ಅಪಾರವಾಗಿ ಯಶಸ್ಸಿಯನ್ನು ತರುವಂತಹ ಹೊಸ ಆತ್ಮವಿಶ್ವಾಸವನ್ನು ಕೊಡುತ್ತದೆ.

ಅಧ್ಯಾಯ 13

# ಸಮ್ಮೋಹನಾಂತ್ಯ

ಈ ಅಧ್ಯಾಯದಲ್ಲಿ ನಾವು ಸಮ್ಮೋಹನಾಂತ್ಯವನ್ನು ಪರೀಕ್ಷಿಸೋಣ. ಸಮ್ಮೋಹನಾಂತ್ಯವೆಂದರೆ ಒಬ್ಬ ವ್ಯಕ್ತಿಯನ್ನು ಸಮ್ಮೋಹನದಿಂದ ಹೊರಗೆ ತಂದಾಗ ಅವನ ನಡುವಳಿಕೆಯ ಅಧ್ಯಯನವು. ಒಬ್ಬ ವ್ಯಕ್ತಿಗೆ ಸಮ್ಮೋಹನಾವಸ್ಥೆಯಲ್ಲಿ ಕೊಟ್ಟಿರುವಂತಹ ಆಜ್ಞೆಗಳೆಲ್ಲಾ ಬಹಳಮಟ್ಟಿಗೆ ಅಚಲವಾಗಿರುತ್ತಾವೆಂದು ನಾವು ಈಗಾಗಲೇ ತೋರಿಸಿದ್ದೇವೆ. ರೋಗಿಯನ್ನು ಸಾಮಾನ್ಯ ಅರಿವಿಗೆ ತಂದನಂತರ ಸಮ್ಮೋಹನಾಂತ್ಯವು ಅಂತಹ ಆಜ್ಞೆಗಳ ಸೂಕ್ಷ್ಮಗ್ರಾಹಕ ಅಧ್ಯಯನವನ್ನು ಮಾಡಿದೆ. ಆ ಆಜ್ಞೆಗಳು ಅಸಮ್ಮೋಹನ ಗೊಳಿಸಿದ ನಂತರವೂ ಅಚಲವಾಗಿರುವುದನ್ನು ಕಾಣಲಾಗಿದೆ. ಈ ಮಟ್ಟಕ್ಕೆ ಈ ಕ್ಷೇತ್ರವು ಒಂದು ಹೊಸ ವಿಚಾರಣೆ ಮತ್ತು ಪ್ರತ್ಯೇಕವಾದ ವಿಷಯವನ್ನು ಮಾಡುತ್ತದೆ.

ಓರ್ವ ನಿರ್ದಿಷ್ಟ ಸಮ್ಮೋಹಕನು ಒಬ್ಬ ಸರಪಳಿಯಾಗಿ ಧೂಮಪಾನಮಾಡುವವನನ್ನು ಸಮ್ಮೋಹನ ಪ್ರಭಾವಕ್ಕೆ ತಂದು ಅವನಿಗೆ ಮೊದಲ ಎರಡು ಊದುವಿಕೆ ಮಾತ್ರ ಚೆನ್ನಾಗಿರುತ್ತದೆ ಎಂದು ಆಜ್ಞಾಪಿಸಿದನು. ಆದರೆ ಅವನು ಮೂರನೆಯ ಊದುವಿಕೆಯನ್ನು ತೆಗೆದುಕೊಳ್ಳುತ್ತಿದ್ದ ಹಾಗೆ ಒಂದು ರೀತಿಯ ತಿರಸ್ಕಾರತೆಯಾಗಿ ಆ ಸಿಗರೇಟನ್ನು ಒತ್ತಾಯಪೂರ್ವಕವಾಗಿ ಬಿಸಾಡುವನು.

ಈ ವಿಚಾರಗಳನ್ನು ಆಜ್ಞಾಪಿಸಿದ ನಂತರ ಅವನು ಅವನನ್ನು ಅರಿವಿಗೆ ತಂದು ಅವನೊಡನೆ ರಾಜಕೀಯದ ಬಗ್ಗೆ ಮಾತಾಡಲು ಪ್ರಾರಂಭಿಸಿದನು. ಕೆಲವು ನಿಮಿಷಗಳವರೆಗೂ ಮಾಧ್ಯಮನು ಹತೋಟಿಯಲ್ಲಿದ್ದನು. ಹೇಗಾದರೂ ಅವನಿಗೆ ಸೇದಲು ಒತ್ತಾಯದ ಪ್ರೇರೇಪಣೆಯಾಯಿತು. ಅವನು ಸಿಗರೇಟನ್ನು ತೆಗೆದು ಸೇದಲು ಆರಂಭಿಸಿದನು. ಮೊದಲನೆಯ ಎರಡು ಊದುವಿಕೆಯಲ್ಲಿ ಅವನಿಗೆ ಏನೂ ಅನ್ನಿಸಲಿಲ್ಲ. ಆದರೆ ಅವನು ಮೂರನೆಯ ಊದುವಿಕೆಯನ್ನು ತೆಗೆದುಕೊಳ್ಳುತ್ತಿದ್ದ ಹಾಗೆ, ಅವನಿಗೆ ಸಂಪೂರ್ಣ ವಿಷಯವು ಒಳ್ಳೆ ಜಿಗುಪ್ಸೆ ಉಂಟುಮಾಡಿದ ಹಾಗಾಯಿತು. ಅವನ ಬಾಯಿಯಲ್ಲಿ ಉಳಿದಂತಹ ರುಚಿಯು ಎಷ್ಟು ಕಹಿಯಾಗಿತ್ತೆಂದರೆ ಅವನಿಗೆ ಆ ಸಿಗರೇಟನ್ನು ಕೂಡಲೇ ಬಿಸಾಡಬೇಕೆನಿಸಿತು. ಕೊನೆಗೆ ಅವನು ಅದನ್ನು ಬಿಸಾಡಿಬಿಟ್ಟನು. ಅವನು, ಹೇಗಿದ್ದರೂ, ಈ ನಡುವೆ ತುಂಬಿಕೆಯನ್ನು ಅಷ್ಟು ಜಾಗರೂಕತೆಯಿಂದ ಮಾಡುತ್ತಿಲ್ಲವೆಂದು ದೂರಿದನು. ಸಿಗರೇಟ್‌ಗಳನ್ನು ತುಂಬುವ ಮಟ್ಟವು ತುಂಬಾ ಕೆಳಗಿಳಿದಿದೆ.

ಅವನು ಇನ್ನೊಂದನ್ನು ತೆಗೆದನು. ಮೊದಲ ಎರಡು ಊದುವಿಕೆಗಳಲ್ಲಿ ಅವನಿಗೆ ಹೆಚ್ಚೇನೂ ವ್ಯತ್ಯಾಸ ಕಾಣಲಿಲ್ಲ. ಆದರೆ ಮೂರನೆಯದು ಎಷ್ಟು ಕಹಿಯಾಗಿತ್ತೆಂದರೆ ಅವನು ಅದನ್ನು ಬಿಸಾಡಲೇಬೇಕಾಯಿತು. ಅವನಿಗೆ ತಾನು ಯಾವುದೋ ಹೊಲಸನ್ನು ಸೇವಿಸಿದ ಹಾಗನ್ನಿಸಿತು.

ಈ ಹಂತದಲ್ಲಿ ಸಮ್ಮೋಹಕನು ಅವನಿಗೆ ಬೇಕಾಗಿದ್ದರೆ ಬೇರೆ ಗುರುತಿನದನ್ನು ಸೇದಲು ಕೊಟ್ಟನು 'ಮಾಧ್ಯಮ'ನು ಈ ಗುರುತಿನದನ್ನು ಸೇದಲು ಆರಂಭಿಸಿದನು. ಅವನಿಗೆ ಮೂರನೆಯ ಊದುವಿಕೆಯು ಅದೇ ಕಹಿ ರುಚಿಯನ್ನು ಕೊಟ್ಟಿತು. ಅವನು ಅದನ್ನು ಬಿಸಾಡಿದನು. ಅವನು ಈಗ ಹವಾಮಾನ ಬದಲಾಗಿದೆ ಎಂದನು. ಬಹುಶಃ ಈ ಕಾರಣದಿಂದ ಸಿಗರೇಟ್ ಕಹಿಯಾಗಿರುವುದು.

ಸಮ್ಮೋಹಕನು ತಾನೂ ಅದೇ ಗುರುತಿನದನ್ನು ಸೇದುತ್ತಿರುವುದಾಗಿ ತಿಳಿಸಿದನು. ಅವನಿಗೆ ಅದು ವಿಷವೆನಿಸಲಿಲ್ಲ, 'ಮಾಧ್ಯಮ'ನು ತನಗೆ ಅದೇಕೆ ಅಷ್ಟೊಂದು ವಿಷವಾಗಿದೆಯೆಂದು ಕೇಳಿದನು. ಈಗ ಅವನು ತನ್ನ ಸೇವಕನಿಗೆ ಹೊಸಾ ಪ್ಯಾಕನ್ನು ತರಲು ಹೇಳಿದನು. ಈ ಹೊಸ ಪ್ಯಾಕಿನಿಂದ ಅವನು ಸೇದಿ ಅದೇ ತರಹದ ಕಹಿಯನ್ನು ಕಂಡನು. ಅವನು ದಿಗಿಲುಗೊಂಡನು. ಸಮ್ಮೋಹಕನು ಅವನಿಗೆ (ಮಾಧ್ಯಮನಿಗೆ)

ಸಮ್ಮೋಹನಾಂತ್ಯ ವನ್ನು ಮಾಡಲಾಗಿದೆ ಮತ್ತು ಆ ಕಾರಣದಿಂದ ಅವನು ಎಲ್ಲಾ ಸಿಗರೇಟ್‌ಗಳನ್ನು ಕಹಿಯಾಗಿ ಕಾಣುತ್ತಿರುವುದಾಗಿ ವಿಮರ್ಶಿಸಿದನು.

ಸಮ್ಮೋಹಕನು ಅವನಿಗೆ ಮತ್ತೊಮ್ಮೆ ಸಮ್ಮೋಹನಾಂತ್ಯವನ್ನು ಮಾಡಿ ಇನ್ನು ಮುಂದೆ ಅವನಿಗೆ ಸಿಗರೇಟ್ ಕಹಿಯಾಗಿರುವುದಿಲ್ಲ ಹಾಗೂ ಮೊದಲಿನಂತೆ ಅವನು ಧೂಮಪಾನದಲ್ಲಿ ಸ್ವಾದ ಕಾಣುವನೆಂದು ಆಜ್ಞಾಪಿಸಿದನು. ಇಷ್ಟಕ್ಕೆ ಅವನು ಸಮ್ಮೋಹನಾಂತ್ಯದ ಅವಸ್ಥೆಯನ್ನು ಕೊನೆಗೊಳಿಸಿದನು.

'ಮಾಧ್ಯಮ'ನು ಸೇದಿ, ಸೇದುವುದರಲ್ಲಿ ಸ್ವಾದವನ್ನು ಕಂಡನು. ಸಿಗರೇಟಿನಲ್ಲಿ ಯಾವುದೇ ತರಹದ ಕಹಿ ಇರಲಿಲ್ಲ.

ಅದು ಏನು ಸೂಚಿಸುತ್ತದೆಂದರೆ ಸಮ್ಮೋಹನಾಂತ್ಯ ತನ್ನಲ್ಲಿಯೇ ಒಂದು ಪರಿಣಾಮಕಾರಿಯಾದ ಮಾಧ್ಯಮವು. ನಾವು ಸಮ್ಮೋಹನಾಂತ್ಯವೆಂಬ ಉಪಕರಣದಿಂದ ಒಬ್ಬ ವ್ಯಕ್ತಿಯನ್ನು ಕೆಟ್ಟ ಅಭ್ಯಾಸಗಳನ್ನು ಬಿಡುವ ಹಾಗೆ ಮಾಡಬಹುದು. ಹೀಗೆ ನಾವು ಅವನಿಗೆ ಆರೋಗ್ಯಕರವಾದ ಮತ್ತು ಸಮತೋಲನದ ಜೀವನವನ್ನು ಸಾಗಿಸುವಲ್ಲಿ ಸಹಾಯಮಾಡಬಹುದು.

ಪಶ್ಚಿಮದಲ್ಲಿ ಸಮ್ಮೋಹನಾಂತ್ಯದ ಪದ್ಧತಿಯು ಹೆಚ್ಚು ವ್ಯಾಪಕವಾಗಿ ಸ್ವೀಕೃತಗೊಂಡಿದೆ. ಅದರ ಉಪಯೋಗವು ನಿರ್ದಿಷ್ಟವಾಗಿ ರೋಗಿಗಳ ಮೇಲೆ, ಬಹಳ ಪರಿಣಾಮಕಾರಿ ಎನ್ನಲಾಗಿದೆ. ಸಾಮಾನ್ಯವಾಗಿ ಸಮ್ಮೋಹನಾಂತ್ಯಕ್ಕೆ ತಂದಂತಹ ರೋಗಿಗಳಿಗೆ ವೈದ್ಯರು ಇಲ್ಲದಾಗ ತಮ್ಮನ್ನು ತಾವೇ ಹೇಗೆ ನಿರ್ವಹಿಸಿಕೊಳ್ಳಬೇಕು ಮತ್ತು ಇಂತಿಂತಹ ಸಮಯದಲ್ಲಿ ಯಾವ ಯಾವ ಔಷಧಿಯನ್ನು ತೆಗೆದುಕೊಳ್ಳಬೇಕು ಮತ್ತು ಯಾವ ಔಷಧಿಗಳನ್ನು ನಿರ್ವಹಿಸಿಕೊಳ್ಳಬೇಕೆಂದು ಹೇಳಲಾಗುತ್ತದೆ.

ವೈದ್ಯನು ಇಲ್ಲದಾಗ ರೋಗಿಯು ವೈದ್ಯನು ಸಮ್ಮೋಹನಾಂತ್ಯದ ಮೂಲಕ ಕೊಟ್ಟಂತಹ ಆದೇಶವನ್ನು ಅನುಸರಿಸುತ್ತಾನೆ. ರೋಗಿಗಳನ್ನು ತಮ್ಮ ತೊಂದರೆಯಿಂದ ಗುಣಪಡಿಸಲು ವೈದ್ಯನಿಗೆ ಇದು ವಿಶೇಷವಾದ ಸಹಾಯಕವಾಗಿ ಕಂಡುಬರುತ್ತದೆ.

ಒಮ್ಮೆ ಓರ್ವ ಸಜ್ಜನನು ಅಲಿಗಢ್ ನಿಂದ ನನ್ನಲ್ಲಿಗೆ ಬಂದನು. ಅವರು ತಮ್ಮ ಮಗಳು ಒಬ್ಬ ಯುವಕನನ್ನು ಪ್ರೀತಿಸುತ್ತಿರುವುದಾಗಿ ದೂರಿದರು. ಯುವಕನು ಕಡಿಮೆ ಮಟ್ಟದ ಜಾತಿಯವನಾಗಿದ್ದಾನೆ. ಅವರು ಮದುವೆ ಆದದ್ದೇಯಾದರೆ ಮನೆತನಕ್ಕೆ ಕೆಟ್ಟಹೆಸರು ಬರುವುದು. ಅವರು ಅವಳಿಗೆ ತನ್ನ ಹೆಜ್ಜೆಯನ್ನು ಹಿಂತೆಗೆದುಕೊಳ್ಳಲು ಪ್ರೇರೇಪಿಸಿದ್ದರು, ಆದರೆ ಅವಳು ಒಪ್ಪುವ ಹಾಗೆ ಕಾಣುತ್ತಿರಲಿಲ್ಲ. ಆ ಹುಡುಗೀ ಸಹ ಅವರ ಜೊತೆಯಲ್ಲಿ ಬಂದಿದ್ದಳು.

ನಾನು ಆ ಹುಡುಗಿಯೊಡನೆ ಮಾತಾಡಿದೆ. ಅವಳು ತನ್ನ ಭಾಷೆ ಮತ್ತು ವಿಚಾರಗಳಲ್ಲಿ ನಿಶ್ಚಯದಿಂದಿರುವಹಾಗೆ ಕಂಡಳು. ಅವಳು ಆ ಯುವಕನನ್ನು ಗಂಡನಾಗಿ ಸ್ವೀಕರಿಸಿರುವುದಾಗಿ ತಿಳಿಸಿದಳು. ಅವನು ಯಾವ ಜಾತಿಗೆ ಸಂಬಂಧವಾಗಿರುವುದೆನ್ನುವುದು ತನಗೆ ಒಂದು ಕ್ಷುಲ್ಲಕ ವಿಷಯವಾಗಿದೆ ಎಂದು ಹೇಳಿದಳು. ಅವಳಿಗೆ ಅದರಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಅವಳು ಯಾವುದೇ ಸಂದರ್ಭದಲ್ಲಿ ಅವನನ್ನು ಬಿಟ್ಟುಕೊಡುವುದರಲ್ಲಿರಲಿಲ್ಲ.

ನೇರವಾಗಿ ಅವಳ ತಂದೆಯ ಎದುರಿನಲ್ಲಿ ನಾನು ಆ ಹುಡುಗಿಗೆ ಸಮ್ಮೋಹನಾಂತ್ಯದ ಮೂಲಕ ತಾನು ಪ್ರೀತಿಸಿದಂತ ಹುಡುಗನು ಸಡಿಲವಾದ ನಡತೆಯವನು ಎಂದು ಆಜ್ಞಾಪಿಸಿದೆ. ವಾಸ್ತವದಲ್ಲಿ ಅವನು ಪ್ರೀತಿಯ ನಾಟಕ ಮಾಡುತ್ತಿದ್ದಾನೆ. ಅವನ ವೈಯಕ್ತಿಕ ಇಚ್ಛೆಯನ್ನು ಸಾಧಿಸಿಕೊಂಡ ತಕ್ಷಣ ಅವನು ಅವಳನ್ನು ಬಿಟ್ಟುಬಿಡುತ್ತಾನೆ. ಅವನು ಅವಳನ್ನು ದುಃಖಕ್ಕೀಡು ಮಾಡುವನು. ಅದು ಅವಳ ಒಳ್ಳೆಯದಕ್ಕೇ ಅವನನ್ನು

ಬಿಡುವುದೊಳ್ಳೆಯದು. ಅವಳನ್ನು ಅರಿವಿಗೆ ತಂದಾಗ ಅವಳಿಗೆ ಆ ಯುವಕನಲ್ಲಿ ಕಿಚ್ಚು ಹತ್ತಿದ ದ್ವೇಷವುಂಟಾಗುವುದು. ಪ್ರೀತಿಯು ಅಳಿಸಿ ಹೋಗುವುದು.



ಸಮ್ಮೋಹನ

ಕೂಡಲೇ ನಾನು ಅವಳ ಸಮ್ಮೋಹನವನ್ನು ಕೊನೆಗೊಳಿಸಿದೆ. ಹೇಗಾದರೂ ನಾನು ಅವಳಿಗೆ ಏನನ್ನೂ ಹೇಳಲಿಲ್ಲ. ತಂದೆ ಮತ್ತು ಮಗಳು ಇಬ್ಬರೂ ಮಧ್ಯಾಹ್ನದ ರೈಲಿನಲ್ಲಿ ಅಲಿಗಢ್‌ಗೆ ಹೊರಟರು. ಹದಿನೈದು ದಿನದೊಳಗೆ ನನಗೆ ಆ ಅಲಿಗಢ್‌ನ ಸಜ್ಜನನಿಂದ ಒಂದು ಕಾಗದ ಬಂದಿತು. ಆ ಹುಡುಗಿಯು ಆ ಹುಡುಗನೊಂದಿಗೆ ದೊಡ್ಡ ಜಗಳವೇ ಆಡಿದ್ದಳು. ಈಗ ಅವಳು ಅವನನ್ನು ತೀವ್ರವಾಗಿ ದ್ವೇಷಿಸುತ್ತಿದ್ದಳು. ಅವನ ಹೆಸರನ್ನು ಎತ್ತಿದರೇನೇ ಅವಳಿಗೆ ಕೋಪ ಬರುತ್ತಿತ್ತು. ಪ್ರೀತಿಯು ಮುಗಿದಿತ್ತು.

ಕೆಲವೇ ದಿನಗಳಲ್ಲಿ ಆ ಸಜ್ಜನನು ಅವಳ ಮದುವೆಯನ್ನು ಒಬ್ಬ ಅರ್ಹ ಯುವಕನೊಡನೆ ಮಾಡಿದನು. ಇಬ್ಬರೂ ಸಂತೋಷದಿಂದಿದ್ದರು.

ನಾನು ಹೇಳಬಯಸುತ್ತಿರುವುದೇನೆಂದರೆ, ಈ ಕಲೆಯ ಸಹಾಯದಿಂದ ನಾವು ಯಾವಾಗಲೂ ಸಾಮಾಜಿಕವಾಗಿ ತಲೆಕೆಳಗಾಗುವ ಪ್ರವೃತ್ತಿಗಳ ವಿರುದ್ಧ ಹೋರಾಡಿ ಸಮಾಜವು ದೃಢವಾಗಿದೆ ಎಂದು ಖಚಿತ ಪಡಿಸಿಕೊಳ್ಳಬಹುದು.

ಇಂತಹುದೇ ಒಂದು ಪ್ರಯೋಗವನ್ನು ಅಹಮದಾಬಾದಿನ ಸಮ್ಮೋಹನಾ ಸಮ್ಮೇಳನದಲ್ಲಿ ಒಬ್ಬ ವ್ಯಕ್ತಿಯಿಂದ ನಡೆಸಲ್ಪಟ್ಟಿತು. ಅವರು ಸಭೆಯಲ್ಲಿಯ ಒಬ್ಬ ಸದಸ್ಯರನ್ನು ಆಯ್ದುಕೊಂಡು ಅವರನ್ನು ಸಮ್ಮೋಹನಾಂತ್ಮಕ್ಕೆ ತಂದರು. ಅವರು ಅವರನ್ನು ಎಚ್ಚರಿಸಿ ತಾವು ಒಂದು ಗಂಟೆಯವರೆಗೂ ಸಮ್ಮೇಳನದ ಸಭೆಯನ್ನು ಉದ್ದೇಶಿಸಿ ಮಾತನಾಡುವುದಾಗಿ ಆಜ್ಞಾಪಿಸಿದರು. ಸಭೆಯನ್ನು ಉದ್ದೇಶಿಸಿ ಮಾತನಾಡುವಾಗ ತಾವು ತಮ್ಮ ಬೆರಳನ್ನು ಮೇಜಿನ ಮೇಲೆ ಇಡುವುದಾಗಿ ಹೇಳಿದರು ಹಾಗೂ ಅವರು ಹಾಗೆ ಮಾಡುತ್ತಿದ್ದ ಹಾಗೆ, ಮಾಧ್ಯಮನು ತನ್ನ ಎರಡೂ ಕೈಗಳಿಂದಲೂ ತನ್ನ ತಲೆಯನ್ನು ಕೆರೆದುಕೊಳ್ಳಲಾರಂಭಿಸುವನು. ಅವರು ಎಂದರು, ಈ ಹಂತದಲ್ಲಿ, ತಾವು ನಿದ್ರೆಯನ್ನು ಕೊನೆಗೊಳಿಸುವರು.

ತಾವು ಆಜ್ಞಾಪಿಸಿದ ಹಾಗೆ ಸಮ್ಮೋಹಕರು ಸಭೆಯನ್ನುದ್ದೇಶಿಸಿ ಮಾತಾಡುವಾಗ ತಮ್ಮ ಬೆರಳನ್ನು ಮೇಜಿನ ಮೇಲೆ ಇಟ್ಟರು. ಅದೇ ಕ್ಷಣದಲ್ಲಿ ಮಾಧ್ಯಮನು ತನ್ನ ತಲೆಯನ್ನು ಕೆರೆಯಲು ಪ್ರಾರಂಭಿಸಿದನು, ಆದರೆ ಸಭೆಯ ಇತರೆ ಸದಸ್ಯರಿಗೆ ತಲೆಯಲ್ಲಿ ಯಾವುದೇ ನವೆ ಕಾಣಲಿಲ್ಲ. ಸಮ್ಮೋಹಕನು ಮಾತನಾಡುವಾಗ ಸುಮಾರು ಇಪ್ಪತ್ತು ಸಾರಿ ತನ್ನ ಬೆರಳನ್ನು ಮೇಜಿನಮೇಲೆ ಇಟ್ಟಿರಬಹುದು ಹಾಗೂ ಪ್ರತಿಸಾರಿ ಮಾಧ್ಯಮನು ತನ್ನ ತಲೆಯನ್ನು ಕೆರೆದುಕೊಂಡನು, ಹಾಗೆಯೇ, ಸಭೆಯ ಇತರೆ ಸದಸ್ಯರೂ ಪ್ರಭಾವಗೊಳ್ಳದೇ ಉಳಿದರು.

ಈಗ ಈ ಪ್ರಯೋಗದಿಂದ *ಆಜ್ಞಾಪಿಸಿದ* ವ್ಯಕ್ತಿಯು ಮಾತ್ರ ಸಮ್ಮೋಹನ ಪ್ರಭಾವಕ್ಕೊಳಗಾಗುವನು ಮತ್ತೆ ಇನ್ನಾರೂ ಅಲ್ಲ ಎನ್ನುವುದು ಬಹಳ ಸ್ಪಷ್ಟವಾಗಿದೆ. ಇನ್ನೊಂದು ಮುಖ್ಯವಾದ ಅಂಶವೆಂದರೆ *ಸಮ್ಮೋಹನಾಂತ್ಮದಲ್ಲಿ* ನೆಟ್ಟಿರುವ ಆಜ್ಞೆಯು ಅದನ್ನು ಸರಿಯಾಗಿ ಹಿಂತೆಗೆದುಕೊಳ್ಳುವವರೆಗೂ ಒಳ್ಳೆ ದೃಢವಾಗಿರುತ್ತದೆ.

ಮೂರನೆಯ ಅಂಶವೇನೆಂದರೆ ಅದೇ ಸಮ್ಮೋಹಕನು ಆಜ್ಞೆಯನ್ನು ಹಿಂತೆಗೆದುಕೊಳ್ಳಬಹುದು ಬೇರೆ ಯಾರೂ ಅಲ್ಲ.

ಭಾಷಣವು ಮುಗಿದನಂತರ, ಅಹಮದಾಬಾದ್ ಸಭೆಯ ಸಮ್ಮೋಹಕನು ಅದೇ ಮಾಧ್ಯಮನನ್ನು ಸಮ್ಮೋಹನಾಂತ್ಮದ ವಶಕ್ಕೆತಂದು ಇನ್ನು ಮುಂದೆ ಯಾರೇ ಮೇಜಿನ ಮೇಲೆ ಬೆರಳಿಟ್ಟರೂ ತಾನು ತಲೆ ಕೆರೆದುಕೊಳ್ಳುವುದಿಲ್ಲ ಎಂದು ಆಜ್ಞಾಪಿಸಿದನು. ಈಗ ಹೀಗೆ ಅವನು ಯಾವ ತರಹದ ವಿಚಾರಕ್ಕಾದರೂ ಎಡೆಕೊಡಬಹುದು.

ನಂತರ ಅದೇ ಸಮ್ಮೋಹಕನು ಕೆಲವೊಂದು ಸಂದರ್ಭಗಳಲ್ಲಿ ಅದೇ ಸಭೆಗೆ ಮಾತನಾಡಿದನು, ಹಾಗೂ ಆ ಹೇಳಿದ ವ್ಯಕ್ತಿಗೆ ತಲೆಯಲ್ಲಿ ಕೆರೆದುಕೊಳ್ಳುವ ಒತ್ತಡವಾಗಲಿಲ್ಲ.

ಒಬ್ಬ ಸಮ್ಮೋಹಕನು, ಇನ್ನೊಂದು ಅಭ್ಯಾಸವನ್ನು ತೆಗೆದುಕೊಳ್ಳಲು, ಸಮ್ಮೋಹನಾಂತ್ಮದ ವಶಕ್ಕೆ ಬಂದಂತಹ ಒಬ್ಬ ವ್ಯಕ್ತಿಗೆ ತಾನು 'ಸಮ್ಮೋಹಕನು' ಮೂರುಸಾರಿ ಚಪ್ಪಾಳೆ ತಟ್ಟಿದ ತಕ್ಷಣ ಅವನು ನಿದ್ರೆ ಹೋಗುವನು ಎಂದು ಆಜ್ಞಾಪಿಸುವನು. ಅದೇ ರೀತಿ ಅವನು ಬೇರೆ ವ್ಯಕ್ತಿಯಲ್ಲೂ ಆಜ್ಞೆಯನ್ನು ನೆಡುವನು. ಅದೇ ರೀತಿ, ಬೇರೆ ವೇಳೆಗಳಲ್ಲಿ ಬೇರೆಯಾಗಿಯೇ ನೆಡುವನು. ಒಂದು ವೇಳೆ ಅವಕಾಶವು ಆ ಎಲ್ಲಾ

ಬೇರೆಬೇರೆ ಹದಿನೈದು ವ್ಯಕ್ತಿಗಳನ್ನೂ ಒಂದೇ ಸಮಯದಲ್ಲಿ ಒಂದೇ ಸ್ಥಳಕ್ಕೆ ತರುತ್ತದೆ. ಸಮ್ಮೋಹಕನು ಮೂರುಸಾರಿ ಚಪ್ಪಾಳೆ ತಟ್ಟಿದೊಡನೆಯೇ ಆ ಹದಿನೈದು ಜನರೂ ಒಮ್ಮೆಲೇ ನಿದ್ದೆಗೆ ಹೋಗುವರು. ಪ್ರತಿಯೊಬ್ಬರಿಗೂ ಬೆರಳುಗಳನ್ನು ಬೇರೆಬೇರೆಯಾಗಿ ತಟ್ಟುವ ಅವಶ್ಯಕತೆಯೇ ಇಲ್ಲ.

ಈ ಕಳೆದ ಸಾಲುಗಳಲ್ಲಿ ಎದುರಿನಲ್ಲಿ ಕೂತುಕೊಂಡ ಮಾಧ್ಯಮನು ಕೊಟ್ಟಂತಹ ಆಜ್ಞೆಯನ್ನು ನಡೆಸುವನು ಎಂದು ನಾನು ಒತ್ತಿಹೇಳಿದ್ದೇನೆ. ಹಾಗೆಯೇ ಓರ್ವರು ಸಾವಿರಾರು ಮೈಲಿ ದೂರದಲ್ಲಿರುವ ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳಲ್ಲಿ ಆಜ್ಞೆಗಳನ್ನು ನಡಬಹುದು. ಈ ಅಂಶವನ್ನು ವಿವರಿಸಲು, ಒಂದುವೇಳೆ ಸಾವಿರಾರು ಮೈಲಿ ದೂರದಲ್ಲಿರುವ ಒಬ್ಬ ವ್ಯಕ್ತಿಗೆ ಅವನು ನಿಮ್ಮ ಪತ್ರವನ್ನು ಪಡೆದುಕೊಂಡಾಗ, ಅವನು ನಿಮ್ಮನ್ನೇ 24 ಗಂಟೆಗಳೂ ಜ್ಞಾಪಿಸಿಕೊಳ್ಳುತ್ತಿರುತ್ತಾನೆ ಎಂದು ಆಜ್ಞಾಪಿಸಿ. ಈ 24 ಗಂಟೆಗಳ ಸಮಯದಲ್ಲಿ ಅವನು ತಿನ್ನುವುದನ್ನು ಕುಡಿಯುವುದನ್ನು ಬಿಡುವನು. ಇದಾದ ನಂತರ, ನಿಮ್ಮ ಪತ್ರ ಮುಟ್ಟಿದಾಗಲೆಲ್ಲಾ, ಅವನು ಮುಂದಿನ 24 ಗಂಟೆಗಳು ಹುಚ್ಚನಾಗುವನು.



*ಸ್ವ-ಸಮ್ಮೋಹನ*

ನಾನು ಹೇಳಬೇಕೆಂದಿರುವ ಅಂಶವೆಂದರೆ ಓರ್ವನು ಆಜ್ಞೆಯ ಮೂಲಕ ಮತ್ತು ಸಮ್ಮೋಹನಾಂತ್ಮದ ಪರವಶತೆಯನ್ನು ಅಂಚೆಯ ಮೂಲಕ ಏನನ್ನಾದರೂ ಮಾಡಿಕೊಳ್ಳಬಹುದು.

ವಿದೇಶಗಳಲ್ಲಿ, ಆದರೆ ಭಾರತದಲ್ಲಲ್ಲ. ಸಮ್ಮೋಹನದ ಯಶಸ್ವೀ ಸಾರ್ವಜನಿಕ ಪ್ರದರ್ಶನಗಳ ಪದ್ಧತಿಯು ಈಗಾಗಲೇ ಹೆಚ್ಚಾಗಿದೆ. ಓರ್ವರು ಆಯೋಜಕರು ಈ ಪ್ರದರ್ಶನಗಳಿಂದ ಒಳ್ಳೆ ಗಳಿಕೆ ಮಾಡುತ್ತಿದ್ದಾರೆಂದು ಕಂಡುಕೊಳ್ಳುತ್ತಾರೆ. ಸಮ್ಮೋಹನವು, ಆಧಾರಭೂತವಾಗಿ, ಒಂದು ವಿಜ್ಞಾನವು, ಆದ್ದರಿಂದ ಯಾರೊಬ್ಬರಾದರೂ ಈ ವಿಜ್ಞಾನದಿಂದ ದುಡ್ಡುಮಾಡಲು ಬಯಸಿದರೆ ಅದರ ಬಗ್ಗೆ ಆಕ್ಷೇಪಣೆ ಮಾಡುವುದೇನೂ ಇಲ್ಲ. ಆದರೆ, ಯಾವುದೇ ಸಂದರ್ಭದಲ್ಲಿ ಯಾರಿಗೂ ಮೋಸವಾಗಿರಬಾರದು ಮತ್ತು ಯಾರಿಗೂ ತಮ್ಮ ವೈಯಕ್ತಿಕ ಲಾಭಗಳಿಗೆ ಅವಕಾಶ ಕೊಡಬಾರದೆಂದು ಖಚಿತಪಡಿಸಿಕೊಳ್ಳಬೇಕು.

ಈ ಕೆಳಗೆ ನಾವು ಸಮ್ಮೋಹನ ಪ್ರದರ್ಶನಗಳ ಬಗ್ಗೆ ಕೆಲವು ಅಂಶಗಳನ್ನು ಕೊಡುತ್ತೇವೆ. ವಾಚಕರು ತಮ್ಮ ದಿನನಿತ್ಯದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಈ ಅಂಶಗಳನ್ನು ಉಪಯೋಗಿಸಿಕೊಳ್ಳಬೇಕೆಂದು ನಾವು ಇಚ್ಛಿಸುತ್ತೇವೆ.

೧. ಮೊಟ್ಟಮೊದಲನೆಯದಾಗಿ ನಿಮ್ಮ ವ್ಯಕ್ತಿತ್ವವು ಬಹಳ ಪ್ರಭಾವೋತ್ಪಾದಕವಾಗಿರಬೇಕು. ನೀವು ನಿಮ್ಮ ಉಡುಗೆಯನ್ನು ಒಪ್ಪುವ ಹಾಗೆ ಮಾಡಿಕೊಳ್ಳಬೇಕು ಮತ್ತು ಅದು ಬದಲಾಗುತ್ತಿರುವ ವಾತಾವರಣಕ್ಕೆ ಸರಿಹೊಂದಬೇಕು. ಕೇವಲ ಪ್ರಭಾವೋತ್ಪಾದಕದ ವ್ಯಕ್ತಿತ್ವವು ಶ್ರೋತೃಗಳ ಸಭೆಯ ಮೇಲೆ ಘನವಾದ ಮತ್ತು ಚಿರವಾದ ಪರಿಣಾಮವನ್ನು ಬೀರಬಲ್ಲದೆಂಬುದನ್ನು ನೀವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಸಾರ್ವಜನಿಕ ಪ್ರದರ್ಶನಗಳನ್ನು ಕೊಡಲು ನೀವು ವೇದಿಕೆಯ ಮೇಲೆ ಬಂದಾಗ, ನೀವು ಶ್ರೋತೃಗಳಿಗೆ ಸಮ್ಮೋಹನದ ಬಗ್ಗೆ ಮತ್ತು ಅದರಲ್ಲೂ ಅದು ಯಾವ ರೀತಿ ಪರಿಣಾಮವನ್ನು ಬೀರುತ್ತದೆಂದು ತಿಳಿಸಲು 5 ರಿಂದ 7 ನಿಮಿಷಗಳಿಗಿಂತ ಹೆಚ್ಚು ತೆಗೆದುಕೊಳ್ಳಬಾರದು. ಪ್ರತಿಯೊಬ್ಬ ವ್ಯಕ್ತಿಯನ್ನೂ ಸಮ್ಮೋಹನದ ವಶಕ್ಕೆ ತೆಗೆದುಕೊಳ್ಳವ ಘನತೆಯನ್ನು ಪ್ರಕೃತಿಯೇ ಒದಗಿದೆ ಎಂದು ಸಹ ನೀವು ಹೇಳಬೇಕು. ಆದ್ದರಿಂದ ನಿಮ್ಮ ಮುಂದೆ ಕೂತುಕೊಂಡಂತಹ ಸಂಪೂರ್ಣ ಸಭೆಯನ್ನು ಸಮ್ಮೋಹನ ಪ್ರಭಾವಕ್ಕೆ ಒಳಗಾಗಿಸಬಹುದು.

ಈ ಸಣ್ಣ ಪರಿಚಯವು ಸರಿಯಾದ ಭಾವನೆಯನ್ನು ಒದಗಿಸುವಲ್ಲಿ ಒಳ್ಳೆಯ ಕೊಡುಗೆಯಾಗುವುದು. ಸಭೆಯ ಶ್ರೋತೃಗಳು ತಾವೂ ಸಹ ಪ್ರಭಾವಕ್ಕೊಳಗಾಗಬಹುದೆಂದು ತಿಳಿಯಲಾರಂಭಿಸುವರು. ಏಕೆಂದರೆ ದೇವರು ನಮ್ಮನ್ನು ಈ ಘನತೆಯೊಂದಿಗೆ ಸೃಷ್ಟಿಸಿದ್ದಾನೆ.

ಈಗ, ಈ ಹಂತದಲ್ಲಿ, ಗಂಭೀರವಾದ ಮತ್ತು ಶಾಂತಚಿತ್ತವಾದ ಸ್ವರದಲ್ಲಿ ಪ್ರಕ್ಷಕರಿಗೆ ನೀವು ಅವರನ್ನೆಲ್ಲಾ ನೋಡುತ್ತಿರುವುದಾಗಿ ಹೇಳಿ. ಅವರು ನಿಮ್ಮ ಕಡೆ ನೋಡುವುದು ಉತ್ತಮವು. ಅವರು ನಿಮ್ಮ ಕಣ್ಣುಗಳಲ್ಲಿ ನೋಡುತ್ತಾರೆ,. ನೀವು ಅವರ ಪ್ರತಿಯೊಬ್ಬರ ಕಣ್ಣುಗಳಲ್ಲಿಯೂ ನೋಡುತ್ತಿದ್ದೀರಿ ಮತ್ತು ಬಹಳ ಪರಿಣಾಮಕಾರಿಯಾಗಿ ನೀವು ಪ್ರತಿಯೊಬ್ಬರನ್ನೂ ನಿಷ್ಕರ್ಷಿಸುತ್ತಿದ್ದೀರಿ.

ಕೂಡಲೇ ನೀವು ನಿಮ್ಮ ಎರಡೂ ಕೈಗಳನ್ನು ಮೇಜಿನ ಮೇಲೆ ಭದ್ರವಾಗಿ ಇಡಿ. ಈಗ ನಿಮ್ಮ ಕಣ್ಣನ್ನು ಸಂಪೂರ್ಣ ಸಭೆಯ ಮೇಲೆ ಸ್ಥಿರವಾಗಿಸಿ ಮತ್ತು ಪ್ರತಿ ಸದಸ್ಯನ ಕಣ್ಣುಗಳಲ್ಲಿ ನೋಡಲು ಪ್ರಯತ್ನಿಸಿ. ಅದು ಅವರ ಗಮನವನ್ನು ನಿಮಗೆ ಕೊಡುವುದು. ಅವರಿಗೆ ನಿಮ್ಮ ಕಣ್ಣುಗಳಲ್ಲಿ ನೋಡುವುದು ಅನಿವಾರ್ಯವಾಗುವುದು. ನೋಟಗಳು ಒಂದಕ್ಕೊಂದು ತಗಲುತ್ತವೆ. ಅವರು ತಮಗೆ ತಾವೇ ಸಮ್ಮೋಹನ ಪರವಶತೆಗೆ ಬರುವರು.

ಈಗ, ದೃಢವಾದ ಮತ್ತು ನೇರವಾದ ಧ್ವನಿಯಲ್ಲಿ ಪ್ರೇಕ್ಷಕರಿಗೆ ತಮ್ಮ ತಮ್ಮ ಬೆರಳುಗಳನ್ನು(ಕೈಯ)



*ಸ್ವ-ಸಮ್ಮೋಹನ*

ಒಂದರೊಳಗೊಂದು ಸೇರಿಸಲು ಹೇಳಿ. ಶ್ರೋತೃಗಳು ಹಾಗೆ ಮಾಡಿದ ಮೇಲೆ, ಅವರ ಬೆರಳುಗಳು (ಒಂದರೊಳಗೊಂದು ಸಂಬಂಧದಲ್ಲಿ) ಸಿಕ್ಕಿಹಾಕಿಕೊಂಡಿದ್ದಾವೆ ಎಂದು ಹೇಳಿ, ಮತ್ತು ಅವರು ಅವುಗಳನ್ನು ಬಿಡಿಸಲು ಪ್ರಯತ್ನಿಸಿದರೂ, ಹಾಗೆ ಮಾಡಲಾಗುವುದಿಲ್ಲ.

ಕಂಪಿಸುವ ಧ್ವನಿಯಲ್ಲಿ ಅವರಿಗೆ ಒಂದು ಪ್ರಯತ್ನ ಮಾಡಲು ಹೇಳಿ ಮತ್ತು ಆದರೂ ಎಷ್ಟೇ ಪ್ರಯತ್ನಿಸಿದರೂ ಅವರು ಒಂದರೊಳಗೊಂದು ಸೇರಿಸಿದ ಬೆರಳುಗಳನ್ನು ಬೇರೆ ಮಾಡಲಾಗುವುದಿಲ್ಲವೆಂದು ಹೇಳಿ.

ಈ ವ್ಯಾಯಾಮದ ಸಮಯದಲ್ಲಿ ಅವರಲ್ಲಿ ನಿಮಗೆ ವಿಧೇಯನಾಗಿ ಸಾಬೀತಾದ ಮಾಧ್ಯಮ ನು ಯಾರು ಎಂದು ಗುರುತಿಸಲು ಸಾಧ್ಯವಾಗುವುದು. ಏಕೆಂದರೆ ಪದೇ ಪದೇ ಪ್ರಯತ್ನಿಸಿದ ನಂತರವೂ ಅವರ ಕೈಗಳನ್ನು ಬಿಡಿಸಲಾಗದ ವ್ಯಕ್ತಿಗಳೇ ನಿಮ್ಮ ಅದ್ವಿತೀಯ ಮಾಧ್ಯಮಗಳೆಂದು ಸಾಬೀತಾಗುವುದು.

ಈಗ ನೀವು ಅಂತಹ 15 ರಿಂದ 20 ಮಾಧ್ಯಮಗಳನ್ನು ವೇದಿಕೆಯ ಮೇಲೆ ಹಾಜರುಪಡಿಸಿ. ವೇದಿಕೆಯ

ಮೇಲೆ ಒದಗಿರುವಂತಹ ಕುರ್ಚಿಗಳ ಮೇಲೆ ಅವರನ್ನು ಕೂತುಕೊಳ್ಳಲು ಹೇಳಿ. ಅವರು ಕೂತುಕೊಂಡ ನಂತರ, ಅವರಿಗೆ ನೀವು ಅವರ ಕೈಗಳನ್ನು ಬಿಡಿಸಿರುವುದಾಗಿ ತಿಳಿಸಿ. ಈಗ ಅವರಿಗೆ ತಮ್ಮ ಕೈಗಳನ್ನು ಬೇರ್ಪಡಿಸುವಲ್ಲಿ ಯಾವುದೇ ಕಷ್ಟವೆನಿಸುವುದಿಲ್ಲ. ಅವರು ಕೈಗಳನ್ನು ಬೇರ್ಪಡಿಸಬಲ್ಲರು.

ನೀವು ಹಾಗೆ ಹೇಳಿದ ತಕ್ಷಣ, ಆ ವ್ಯಕ್ತಿಗಳ ಬೆರಳುಗಳು ಒಂದರೊಳಗೊಂದಿರುವ ಗಂಟಿನಿಂದ ಈಚೆ ಬರುವವು. ಅವರು ಆರಾಮದ ನಿಟ್ಟುಸಿರನ್ನು ಬಿಡುವರು. ಈಗ ಅವರಿಗೆ ನೇಮಕವಾಗಿರುವಂತಹ ಕುರ್ಚಿಗಳಿಗೆ ಹಿಂದಿರುಗಲು ಹೇಳಿ.

ವೇದಿಕೆಯ ಮೇಲಿರುವಂತಹ ವ್ಯಕ್ತಿಗಳು ನಿಮ್ಮ ಪ್ರಯೋಗಗಳಲ್ಲಿ ನಿಮಗೆ ಉತ್ತಮ ಸಹಾಯಕರಾಗಿ ಸಾಬೀತಾಗುವರು. ಏಕೆಂದರೆ ಅವರು ಹೆಚ್ಚು ವಿಧೇಯರಾದ ಮಾಧ್ಯಮಗಳು. ಸಭಾಗೃಹದಲ್ಲಿ ಕೂತುಕೊಂಡಂತಹ ವ್ಯಕ್ತಿಗಳು ಕೇವಲ ನಿಮ್ಮ ಪ್ರಯೋಗಗಳನ್ನು ನೋಡುವಂತಹ ಸಾಮಾನ್ಯ ಶ್ರೋತೃಗಳು.

ನಿಮ್ಮ ಪ್ರತಿ ಮಾಧ್ಯಮನನ್ನು ಬೇರೆಬೇರೆಯಾಗಿ ಕೂತುಕೊಳ್ಳಲು ಹೇಳಿ. ಅವರೆಲ್ಲರಿಗೂ ತಾವು ನಿಮ್ಮ ಸಮ್ಮೋಹನ ವಶದಲ್ಲಿರುವುದಾಗಿ ಮತ್ತು ನೀವು ಹೇಳಿದುದನ್ನೆಲ್ಲಾ ಅವರು ನಿರ್ಣೀತವಾಗಿ ನಡಸಲೇಬೇಕೆಂದು ಹೇಳಿ.

ಈ ಹಂತದಲ್ಲಿ ನಿಮ್ಮ ಗಮನವನ್ನು ಮಾಧ್ಯಮಗಳ ಮೇಲೆ ಸ್ಥಿರವಾಗಿಸಿ. ಅವರಿಗೆ ಬಹಳಹೊತ್ತು ಕೂತುಕೊಂಡಿದ್ದಕ್ಕೋಸ್ಕರ ಈಗಾಗಲೇ ಸಾಕಾಗಿದೆ ಎಂದು ಹೇಳಿ. ಅವರಿಗೆ ಕುರ್ಚಿಗಳಲ್ಲಿ ನಿದ್ದೆಹೋಗಬೇಕಾಗಿದೆ. ಅವರ ಕಣ್ಣುಗಳು ಬಹಳ ಭಾರವಾಗುತ್ತಿವೆ.

ಅವರಿಗೆ ಮಲಗಿಕೊಳ್ಳಲು ಹೇಳಿ. ಅವರು ಅವರ ಕಣ್ಣುಗಳನ್ನು ಮುಚ್ಚಿಕೊಳ್ಳಲಿ. ಅವರಿಗೆ ನಿದ್ದೆಹತ್ತುತ್ತಾ ಇದೆ. ಅವರು ಮಲಗಿಕೊಂಡಿದ್ದಾರೆ. ಅವರು ತಮ್ಮ ತಲೆಗಳನ್ನು ಕುರ್ಚಿಗೆ ಒರಗಿಸಿಕೊಳ್ಳಲಿ.

ಈಗ, ನೀವು ಆಜ್ಞಾಪಿಸಿದ ಕೂಡಲೇ ಮಾಧ್ಯಮರು ನಿದ್ದೆ ಹೋದುದಕ್ಕೆ ಪ್ರೇಕ್ಷಕರು ಚಕಿತಗೊಳ್ಳುವರು. ಅವರು ಆಳವಾದ ನಿದ್ರೆಯಲ್ಲಿದ್ದಾರೆ. ಅದರಲ್ಲಿ ಕೆಲವರು ಚೆನ್ನಾಗಿ ಗೊರಕೆ ಹೊಡೆಯುತ್ತಿದ್ದಾರೆ.

ಈಗ ಒಬ್ಬ ಮಾಧ್ಯಮನನ್ನು ಆಯ್ದುಕೊಂಡು ಅವನಿಗೆ ಕಾಗದ ಮತ್ತು ಪೆನ್ನನ್ನು ಕೊಡಿರಿ. ನೀವು ಬರೆಯಲು ಹೇಳಿದುದನ್ನು ಅವನಿಗೆ ಬರೆಯಲು ಹೇಳಿ. ಅವನಿಗೆ ಪೆನ್ನನ್ನು ಹಿಡಿದುಕೊಳ್ಳಲು ಹೇಳಿ. ಎಡಗಡೆಯಿಂದ ಅವನಿಗೆ ಕಾಗದವನ್ನು ತೆಗೆದುಕೊಳ್ಳಲು ಹೇಳಿ. ನೀವು ಹೇಳಿದುದನ್ನು ಬರೆಯಲು ಅವನಿಗೆ ಹೇಳಿ.

"ನಾನು ಉಪಯೋಗವಿಲ್ಲದವನು, ನಾನು ಕಸ ಇದ್ದಹಾಗೆ, ಆದ್ದರಿಂದ ನನ್ನನ್ನು ಎತ್ತಿ ಕಸದಬುಟ್ಟಿಯಲ್ಲಿ ಹಾಕಬೇಕು".

ಅವನಿಗೆ ತನ್ನ ಹೇಳಿಕೆಯೊಂದಿಗೆ ತನ್ನ ಸಹಿಯನ್ನೂ ಕೂಡಿಸಲು ಹೇಳಿ. ಅವನು ದಿನಾಂಕವನ್ನು ಬರೆದು ತನ್ನ ವಿಳಾಸವನ್ನೂ ಬರೆಯಲು ಹೇಳಿರಿ.

ನೀವು ಆಜ್ಞಾಪಿಸಿದ ಹಾಗೆಯೇ ಸರಿಯಾಗಿ ಆತನು ಬರೆದಿದುದನ್ನು ನೀವು ನೋಡುವಿರಿ.

ಈಗ ಅವನ ಸಮ್ಮೋಹನ ನಿದ್ರೆಯನ್ನು ಕೊನೆಗೊಳಿಸಿ. ಕೆಲವರು ಇನ್ನೂ ಸಮ್ಮೋಹನ ನಿದ್ರೆಯಲ್ಲೇ ಇರುವವರು ಇದ್ದಾರೆ. ನೀವು ಮೂರುಸಾರಿ ಚಪ್ಪಾಳೆ ತಟ್ಟಿದ ತಕ್ಷಣ, ಅವರು ಎದ್ದೇಳಬೇಕು ಎಂದು ಆಜ್ಞಾಪಿಸಿ. ಅಲ್ಲದೆ ನೀವು ಅವರಿಗೆ ಸಮ್ಮೋಹನ ನಿದ್ರೆಯಲ್ಲಿ ಹೇಳಿದುದನ್ನು ಅವರು ಜ್ಞಾಪಕದಲ್ಲಿಟ್ಟು ಕೊಳ್ಳುವುದಿಲ್ಲವೆಂದು ಸಹ ಹೇಳಿ.

ಈಗ ಮೂರುಸಾರಿ ಚಪ್ಪಾಳೆ ತಟ್ಟಿರಿ. ನಿಮ್ಮ ಚಪ್ಪಾಳೆಯ ಸಪ್ಪಳವನ್ನು ಕೇಳಿದ ತಕ್ಷಣ ಅವರು ಸಮ್ಮೋಹನನಿದ್ರೆಯಿಂದ ಏಳುವರು.

ನೀವು ಹೇಳಿದುದನ್ನು ಬರೆದುಕೊಂಡಂತಹ ಮಾಧ್ಯಮ ನಿಗೆ ನಿಮಗೆ ಅವನ ಹೆಸರನ್ನು ಹೇಳಲು ಹೇಳಿ.

ಅವನು ತನ್ನ ಹೆಸರನ್ನು ಹೇಳುವನು. ಅವನು ಯಾವ ಕೆಲಸದಲ್ಲಿದ್ದಾನೆಂದು ಕೇಳಿ. ಅದು ಸುಮಾರಾಗಿ ಬಹಳ ಮುಖ್ಯವೆನ್ನುವಂತೆ ಅವನು ತನ್ನ ಕೆಲಸದ ಬಗ್ಗೆ ವಿವರಿಸುವನು.

ಅವನ ಇಲಾಖೆಗೆ ತನ್ನ ಸೇವೆಯ ಅವಶ್ಯಕತೆ ಇದೆಯೇ ಅಥವಾ ತನ್ನ ಇಲಾಖೆಯಲ್ಲಿ ಅವನು ಉಪಯೋಗವಿಲ್ಲದವನೇ ಎಂದು ಕೇಳಿ.

ತಾನು ಬಹಳ ಪ್ರಮುಖವಾದ ಅಧಿಕಾರಿಯು ಎಂದು ಮತ್ತು ತನ್ನ ಇಲಾಖೆಯಲ್ಲಿ ತಾನು ಬಹಳ ಸಾಮರ್ಥ್ಯವುಳ್ಳವನು ಎಂದು ಅವನು ಪ್ರತಿಪಾದಿಸುವುದು ಸ್ವಾಭಾವಿಕ. ಈವತ್ತಿನವರೆಗೂ ರಾಜ್ಯ ಅಥವಾ ಕೇಂದ್ರಸರಕಾರಗಳು ತನ್ನ ವಿರುದ್ಧಯಾವುದೇ ದೂರನ್ನು ಪಡೆದಿಲ್ಲ ಎಂದು ಸಹ ಅವನು ಹೇಳುವನು.



*ಸಮ್ಮೋಹನವಶದಲ್ಲಿ ಕೈ ಸುಡುವುದಿಲ್ಲ*

ಈ ಹಂತದಲ್ಲಿ ನಿಮ್ಮ ಗಮನವನ್ನು ಪ್ರೇಕ್ಷಕರ ಕಡೆಗೆ ವಾಲಿಸಿ. ಪ್ರೇಕ್ಷಕರಿಗೆ ಈ ಸಜ್ಜನನು ತಾನು ಬಹಳ ಪ್ರಮುಖ ವ್ಯಕ್ತಿ ಹಾಗೂ ಸಮರ್ಥ ಅಧಿಕಾರಿ ಎಂದು ಹೇಳುತ್ತಾನೆಂದು ಹೇಳಿ.

ಈ ಹಂತದಲ್ಲಿ ನಿಮ್ಮ ಗಮನವನ್ನು ಮಾಧ್ಯಮನ ಕಡೆಗೆ ತಿರುಗಿಸಿ ನೀವು ಈಗಾಗಲೇ ಸರಕಾರಕ್ಕೆ ಅವರು ಉಪಯೋಗವಿಲ್ಲದ ವ್ಯಕ್ತಿಯೆಂತಲೂ ಮತ್ತು ತಾವು ಕಸಕ್ಕಿಂತಲೂ ಕಡೆ ಎಂದು ಬರೆದಿರುವುದಾಗಿ ಹೇಳಿ.

ಅವರು ತಾವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು ಆ ತರಹ ಏನನ್ನೇಯಾಗಲಿ ಬರೆಯುವುದಿಲ್ಲವೆಂದು ಖಂಡಿತವಾಗಿ ಪ್ರತಿಭಟಿಸುವರು.

ನೀವು ಆ ಚೀಟಿಯನ್ನು ಅವರ ಕೈಗೆ ಕೊಡಿ. ಅವರು ತಮ್ಮದೇ ಹಸ್ತಾಕ್ಷರದಲ್ಲಿ ತಮ್ಮದೇ ಉಲ್ಲೇಖಕ್ಕೆ ತಮ್ಮ ಸಹಿ ಇರುವುದನ್ನು ನೋಡಿ ದಿಘ್ಭ್ರಮೆಗೊಳ್ಳುವರು.

ಅವರಿಗೆ ತಮ್ಮನ್ನು ಕಸದ ಬುಟ್ಟಿಯಲ್ಲಿ ಹಾಕಬೇಕೇ ಎಂದು ಕೇಳಿ. ಅವರಿಗೆ ಖಚಿತವಾಗಿ ತಮ್ಮ ಎದೆ ಬಡಿತ ನಿಂತಹಾಗನ್ನಿಸುವುದು. ಅವರ ಮುಖದಲ್ಲಿ ಬಿಳಿಗುಂದುತ್ತಿರುವ ಹಾಗೆ ಪ್ರೇಕ್ಷಕರು ಚಕಿತಗೊಳ್ಳುವರು.

ಅವರ ಎದುರಿನಲ್ಲಿಯೇ ಕಾಗದವನ್ನು ತುಂಡುತುಂಡಾಗಿ ಹರಿದುಹಾಕಿ ಹಾಗೂ ಅದನ್ನು ಸಮ್ಮೋಹನದ ಮೂಲಕ ಪಡೆಯಲಾಗಿತ್ತು ಎಂದು ತಿಳಿಸಿ. ಅವರು ಒಳ್ಳೆಯ ಸಾಮರ್ಥ್ಯವುಳ್ಳ ಹಾಗೂ ಜವಾಬ್ದಾರಿಯುತ ಅಧಿಕಾರಿ ಎಂದು ಆಶ್ವಾಸನೆ ಕೊಡಿ. ಈ ವಿನಂತಿಯೊಡನೆ ಅವರಿಗೆ ಅವರ ಸ್ಥಳದಲ್ಲಿ ಕೂತುಕೊಳ್ಳಲು ಹೇಳಿ.

ಶ್ರೋತೃಗಳ ಸಭೆಯು ಈ ಸಂಪೂರ್ಣ ವ್ಯಾಯಾಮವು ನಂಬಲಾರದಂತಹುದು ಹಾಗೂ ಮನೋಹರವಾಗಿದೆ ಎಂದು ಆಶ್ಚರ್ಯಗೊಳ್ಳುವುದು.

೨. ಒಬ್ಬ ಮಾಧ್ಯಮನನ್ನು ಆಯ್ದುಕೊಂಡು, ಅವರಿಗೆ ವೇದಿಕೆಯ ಮೇಲೆ ಬರಲು ಹೇಳಿ, ನೀವು ಪ್ರೇಕ್ಷಕರ ಕಡೆ ಮುಖಮಾಡಿ ನಿಂತುಕೊಳ್ಳಿ. ಈ ಅಭ್ಯಾಸಕ್ಕೆ ಒಬ್ಬ ಹೆಂಗಸು ಮಾಧ್ಯಮಳಾಗಿ ತನ್ನ ಇಚ್ಛೆಯಿಂದ ಬಂದರೆ ಉತ್ತಮವು. ಒಬ್ಬ ಗಂಡಸೂ, ಸಹ, ಈ ಪರಿಸ್ಥಿತಿಯಲ್ಲಿ ನಡೆಯುವುದು.

ಅವಳಿಗೆ ವೇದಿಕೆಯ ಮೇಲೆ ನಿಂತುಕೊಂಡಿರಲು ಹೇಳಿ. ನೀವು ಸರಿಯಾಗಿ ಅವಳ ಹಿಂದೆಯೇ ನಿಂತುಕೊಳ್ಳಿ ಹಾಗೂ ನಿಮ್ಮ ಎರಡೂ ಕೈಗಳನ್ನು ಸಮಾಂತರದಲ್ಲಿ ಅವಳ ಕಿವಿಗಳಿಗೆ ಸುಮಾರು ಹತ್ತಿರದಲ್ಲಿ ಹಿಡಿಯಿರಿ.

ಈ ಹಂತದಲ್ಲಿ ಅವಳಿಗೆ, ನೀವು ನಿಮ್ಮ ಕೈಗಳನ್ನು ಹಿಂದಕ್ಕೆ ಎಳೆಯುವುವಾಗಿಯೂ, ಅವಳಿಗೂ ಸಹ ಹಿಂದಕ್ಕೆ ಎಳೆದ ಹಾಗೆ ಭಾಸವಾಗುತ್ತದೆಂದು ಆಜ್ಞಾಪಿಸಿ. ಇಲ್ಲವಾದರೆ, ಅವಳಿಗೆ ಯಾವುದೋ ಒಂದು ಶಕ್ತಿಯು ಆಕೆಯನ್ನು ಹಿಂದಕ್ಕೆ ಎಳೆದು ಬೀಳಿಸುತ್ತಿವೆ ಎಂದು ಅನ್ನಿಸಬಹುದು. ನೀವು ಹಿಂದಕ್ಕೆ ನಿಂತಿರುವುದಾಗಿಯೂ ಹಾಗೂ ಹಾಗೇನಾದರೂ ಆದಲ್ಲಿ ನೀವು ಹಿಡಿದುಕೊಳ್ಳುವಿರಿ ಹಾಗೂ ತಾನು ಹೆದರಬೇಕಾಗಿಲ್ಲವೆಂದು ಆಕೆಗೆ ನೀವು ಭರವಸೆ ಕೊಡಿ.

ನೀವು ಹಾಗೆ ಹೇಳಿದ ನಂತರ, ನಿಮ್ಮ ಕೈಗಳನ್ನು ಹಿಂದಕ್ಕೆ ಎಳೆಯಲು ಪ್ರಾರಂಭಿಸಿ. ಮಾಧ್ಯಮಳೂ. ಸಹ, ಅವಳ ಹಿಂದಕ್ಕೆ ಎಳೆದುಕೊಳ್ಳುತ್ತಿರುವುದನ್ನು ನೀವು ನೋಡುವಿರಿ.

ಈಗ ನೀವು ಆಕೆಗೆ ತಾನು ಹಿಂದಕ್ಕೆ ಬೀಳುತ್ತಿದ್ದಾಳೆಂದು ಆಜ್ಞಾಪಿಸಿ. ಆಕೆಯು ಅವಸರವಾಗಿ ಬೀಳುತ್ತಿದ್ದಾಳೆ. ನೀವು ಹಿಂದಕ್ಕೆ ನಿಂತುಕೊಂಡಿರುವುದಾಗಿ ಆಕೆಗೆ ಹೇಳಿ ಹಾಗೂ ನೀವು ನಿಮ್ಮ ಕೈಗಳನ್ನು ಹೊರಗೆ ಚಾಚಿಕೊಂಡಿದ್ದೀರಿ. ನೀವು ಆಕೆಯನ್ನು ಹಿಡಿದುಕೊಂಡಿದ್ದೀರಿ ಹಾಗೂ ಆಕೆಯು ನಿಮ್ಮ ತೋಳುಗಳಲ್ಲಿ ಒರಗಿ ಕೊಂಡಿದ್ದಾಳೆ.

ನೀವು ಆಕೆಗೆ ಆಜ್ಞಾಪಿಸಿಕೊಂಡು ಹೋದ ಹಾಗೆಲ್ಲಾ, ಮಾಧ್ಯಮಳು ಹಿಂದಕ್ಕೆ ಸರಿಯುತ್ತಿರುತ್ತಾಳೆ, ಹೆಚ್ಚುಕಡಿಮೆ ತನ್ನ ಮೊಣಕಾಲಿನವರೆಗೂ ಬೀಳುವಳು ಮತ್ತು ಹಾಗೆ ಆಕೆಯು ನಿಮ್ಮ ತೋಳುಗಳಲ್ಲಿ ವಿಶ್ರಮಿಸುವಳು.

ಈ ಪ್ರಯೋಗವು ಸಭೆಯಲ್ಲಿ ವಿದ್ಯುತ್ ಹರಿದ ಹಾಗಾಗಿ ನಿಮ್ಮ ಹೆಸರು ಮತ್ತು ಕೀರ್ತಿಯು ಸಮ್ಮೋಹನ ಜಗತ್ತಿನಲ್ಲಿ ವಿಶಾಲವಾಗಿ ಹರಡುವುದು.

೩. ಮಾಧ್ಯಮನಿಗೆ ಮೇಜಿನ ಇನ್ನೊಂದು ಕಡೆ ಕುಳ್ಳಿರಿಸಿ. ಅವನ ಕೈಯನ್ನು ಮೇಜಿನಮೇಲೆ ಇಡಲು ಹೇಳಿ. ಕೈಯ ಭಾಗವಾಗಿರುವ ಮೊಣಕೈಯಿಂದ ಬೆರಳವರೆಗೂ ಅಂಗೈ ಸಹ ಮೇಜಿನ ಮೇಲೆ ವಿರಮಿಸಿಕೊಳ್ಳಬೇಕು.

ಈಗ ಅವನ ಕೈ ಮೇಜಿನಮೇಲೆ ವಿರಮಿಸಿಕೊಳ್ಳುತ್ತಿದೆ ಮತ್ತು ಅದು (ಕೈ) ಇರುವಷ್ಟಕ್ಕಿಂತ ಭಾರವಾಗಿದೆ ಎಂದು ಆಜ್ಞಾಪಿಸಿ. ಕೈ ಎಷ್ಟು ಭಾರವಾಗಿದೆ ಎಂದರೆ ಪದೇ ಪದೇ ಪ್ರಯತ್ನಗಳ ನಂತರವೂ ಅವನಿಂದ ಅದನ್ನು ಎತ್ತಲಾಗುತ್ತಿಲ್ಲವೆಂದು ಹೇಳಿ.



*ಸಮ್ಮೋಹನಾವಸ್ಥೆಯಲ್ಲಿ ಭ್ರಮೆ.*

ಅವನಿಗೆ ಕೈಯನ್ನು ಮೇಜಿನ ಮೇಲಿಂದ ಎತ್ತಲು ಹೇಳಿ, ಅವನು ಎಷ್ಟೇ ಪ್ರಯತ್ನಿಸಿದರೂ, ಅವನಿಂದ ಅದು ಆಗುತ್ತಿಲ್ಲವೆಂಬುದನ್ನು ನೀವು ನೋಡುವಿರಿ. ಅವನು ಸ್ಪಷ್ಟವಾಗಿ ಹೆಚ್ಚುಕಡಿಮೆಯಾಗಿದ್ದಾನೆ. ಆದರೆ ಅವನು ಪ್ರಯತ್ನಗಳ ನಂತರವೂ ಕೈಯನ್ನು ಎತ್ತುವಲ್ಲಿ ವಿಫಲಗೊಳ್ಳುತ್ತಾನೆ.

ನಿಮ್ಮ ಗಮನವನ್ನು ಪ್ರೇಕ್ಷಕರ ಕಡೆಗೆ ತಿರುಗಿಸಿ ನೀವು ಅವನ ಕೈಯನ್ನು ಮೇಜಿನ ಮೇಲೆ ಇಡಲು ಹೇಳಿದಿರಿ, ಅದು ಎಷ್ಟು ಭಾರವೆಂದರೆ ಅವನ ಪ್ರಯತ್ನಗಳ ನಂತರವೂ ಅವನಿಂದ ಅದನ್ನು ಎಬ್ಬಿಸಲಾಗುವುದಿಲ್ಲವೆಂದು ಅವರಿಗೆ ಹೇಳಿ.

ತನ್ನ ಎಲ್ಲಾ ಶಕ್ತಿಯನ್ನು ಒಗ್ಗೂಡಿಸಿ ತನ್ನ ಕೈಯನ್ನು ಮೇಜಿನ ಮೇಲಿಂದ ಎತ್ತಲು ಮಾಧ್ಯಮನಿಗೆ ಇನ್ನೊಂದು ಅವಕಾಶಕೊಡಿ. ಆದರೆ, ಅವನು, ತನ್ನ ಗಂಭೀರವಾದ ಪ್ರಯತ್ನಗಳ ನಂತರವೂ ವಿಫಲಗೊಳ್ಳುವನು. ಅವನು ಘೋರವಾದ ನಿಟ್ಟುಸಿರುಬಿಡುವನು.

ಈ ಹಂತದಲ್ಲಿ ನೀವು ಅವನ ಕೈಯನ್ನು ಹಗುರು ಮಾಡುತ್ತಿದ್ದೀರಿ, ಅದರಿಂದ ಅವನು ಅದನ್ನು ಮೇಜಿನಿಂದ ಮೇಲಕ್ಕೆತ್ತಿ ಸಹಜವಾದ ಸ್ಥಿತಿಗೆ ಬರಬಹುದೆಂದು ಆಜ್ಞಾಪಿಸಿ. ನೀವು ಈಗಾಗಲೇ ಅವನ ಕೈಯನ್ನು ಹಗುರು ಮಾಡಿದ್ದೀರೆಂದು ತಿಳಿಸಿ. ಈಗ ಅವನಿಗೆ ಅದನ್ನು ಮೇಜಿನ ಮೇಲಕ್ಕೆ ಎತ್ತಲಾಗುತ್ತದೆ. ಅವನ ಕೈ ಈಗ ಸಾಮಾನ್ಯಸ್ಥಿತಿಗೆ ಹಿಂದಿರುಗಿದೆ.

ಕೊನೆಯದಾಗಿ ಅವನಿಗೆ ತನ್ನ ಕೈಯನ್ನು ಮೇಜಿನಿಂದ ಮೇಲಕ್ಕೆತ್ತಲು ಆಜ್ಞಾಪಿಸಿ. ಈಗ ಅವನು ಯಾವುದೇ ಶ್ರಮವಿಲ್ಲದೆ ಕೈಯನ್ನು ಮೇಲಕ್ಕೆತ್ತುವನು, ಹಾಗೂ ಸಂಪೂರ್ಣವಾಗಿ ತೃಪ್ತಿಗೊಂಡ ಹಾಗೆ ಕಾಣುವನು.

೪. ಒಬ್ಬ ಮಾಧ್ಯಮನನ್ನು ವೇದಿಕೆಯ ಮೇಲೆ ಕರೆದು ನಿಮ್ಮ ಮುಂದೆ ನಿಂತುಕೊಳ್ಳಲು ಹೇಳಿ. ಬಲ ಅಂಗೈಯಲ್ಲಿ ಒಂದು ನಾಣ್ಯ(ಯಾವುದೇ ಬೆಲೆಯದ್ದು)ವನ್ನು ಹಾಕಿರಿ. ನೀವು ಈಗಾಗಲೇ ಆ ನಾಣ್ಯವನ್ನು ಪ್ರೇಕ್ಷಕರಿಗೆ ತೋರಿಸಿ ಅದರಿಂದ ಅದು ಅವರಿಗೆ ಸಾಮಾನ್ಯ ನಾಣ್ಯವು ಹಾಗೂ ಅದರ ಬಗ್ಗೆ ಯಾವುದೇ ವಿಶೇಷತೆ ಇಲ್ಲವೆಂಬುದನ್ನು ತೋರಿಸಿರುವುದಾಗಿ ಜಾಗ್ರತೆ ವಹಿಸಿಕೊಳ್ಳಿ.

ನಾಣ್ಯವನ್ನು ಅಂಗೈಯಲ್ಲಿ ಹಾಕಿ ಅವನಿಗೆ ನಿಮ್ಮ ಕಣ್ಣುಗಳಲ್ಲಿ ನೋಡಲು ಹೇಳಿ. ಅವನು ಹಾಗೆ ಮಾಡಿದ ಮೇಲೆ, ಅವನು ಹಿಡಿದುಕೊಂಡಿರುವ ನಾಣ್ಯವು ಉತ್ಕೃಷ್ಟವಾಗಿರುವುದು ಹಾಗೂ ಅದರಲ್ಲಿ ವಿಶಿಷ್ಟ ಲಕ್ಷಣಗಳಿರುವವೆಂದು ಆಜ್ಞಾಪಿಸಿ.

ಅವನಿಗೆ ಆಜ್ಞಾಪಿಸಿ: ನಾಣ್ಯವು ಬಿಸಿಯಾಗುತ್ತಿದೆ. ನಿಧಾನವಾಗಿ ಅದು ಬಿಸಿ ಕೆಂಪಾಗಿದೆ. ಅದು ನಿಮ್ಮ ಅಂಗೈಯನ್ನು ಸುಡುತ್ತಿದೆ. ನಾಣ್ಯವು ಬಿಸಿಯಾಗಿದೆ. ನಿಮ್ಮ ಅಂಗೈಯ ಚರ್ಮವು ಸುಟ್ಟುಹೋಗಿದೆ. ನಿಮಗೆ ಘೋರವಾಗಿ ನೋವಾಗುತ್ತಿದೆ. ನಾಣ್ಯವು ಎಷ್ಟು ಬಿಸಿಯಾಗಿದೆ ಎಂದರೆ ಅದನ್ನು ನೀವು ಇನ್ನು ಕೈಯಲ್ಲಿಡಿದುಕೊಳ್ಳಲಾಗುವುದಿಲ್ಲ.

ನಿಮ್ಮ ಆಜ್ಞೆಯನ್ನು ಅನುಸರಿಸಿ ಮಾಧ್ಯಮನಿಗೆ ನಿಜವಾಗಿಯೂ ತನ್ನ ಕೈ ಹಾಗೂ ಚರ್ಮ ಸಹ ಸುಡುತ್ತಿದೆ ಎಂದು ಭಾಸವಾಗಲಾರಂಭಿಸುವುದು. ಅವನು ಘೋರವಾಗಿ ಗಲಿಬಿಲಿಗೊಂಡು, ಅವನು ಆ ನಾಣ್ಯವು ನಿಜವಾಗಿಯೂ ಉರಿಯುತ್ತಿದೆ ಎನ್ನುವಂತೆ ಎಸೆದುಬಿಡುವನು.

ಶ್ರೋತೃಗಳ ಸಭೆಯು ಭಯಂಕರವಾಗಿ ಮೋಹಗೊಳ್ಳುವುದು.

ಒಬ್ಬ ಮಾಧ್ಯಮನನ್ನು ವೇದಿಕೆಯ ಮೇಲೆ ತನ್ನಿರಿ. ಅವನನ್ನು ನಿಮ್ಮ ಎದುರಿನಲ್ಲಿ ನಿಂತುಕೊಳ್ಳುವ ಹಾಗೆ ಮಾಡಿ. ಅವನಿಗೆ ನಿಮ್ಮ ಕಣ್ಣುಗಳಲ್ಲಿ ನೋಡಲು ಪ್ರಯತ್ನಿಸಲು ಹೇಳಿ. ಹೇಗಾದರೂ ನೀವು ಅವನ

ಕಣ್ಣುಗಳಲ್ಲಿ ನೋಡದ ಹಾಗೆ ಗಮನವಿರಿಸಿ, ಏಕೆಂದರೆ ಹಲವೊಮ್ಮೆ ಅದು ಸಮ್ಮೋಹಕನಿಗೇ ಹಾನಿಯಾಗುವುದು. ಇದರ ಅರ್ಥವೆಂದರೆ ಒಂದುವೇಳೆ ಮಾಧ್ಯಮನೇ ಸಮ್ಮೋಹಕನಾಗಿದ್ದರೆ ಅಥವಾ ಅವನಿಗೆ ಹೆಚ್ಚಿನ ಆಕರ್ಷಣ ಶಕ್ತಿ ಇದ್ದರೆ, ನೀವೇ ಅವನ ಸಮ್ಮೋಹನಾ ಶಕ್ತಿಗೆ ಒಳಗಾಗುವಿರಿ ಆದರೆ ಮಾಧ್ಯಮನಲ್ಲ. ಆದ್ದರಿಂದ ನೀವು ಈ ವಿಷಯದಲ್ಲಿ ಅತೀ ಜಾಗೃತರಾಗಿರಬೇಕು.

ಅವನು ನಿಮ್ಮ ಕಣ್ಣುಗಳಲ್ಲಿ ನೋಡುತ್ತಿರುವುದನ್ನು ನೀವು ಕಂಡಾಗ, ಅವನು ತನ್ನಲ್ಲಿಯೇ ಬಹಳ ನಿತ್ರಾಣನಾಗುತ್ತಿದ್ದಾನೆ ಆದ್ದರಿಂದ ಅವನು ಕೂತುಕೊಳ್ಳಲು ಪ್ರಯತ್ನಿಸುತ್ತಿದ್ದಾನೆಂದು ಹೇಳಿ. ಅವನ ಕಾಲುಗಳು ಅವನಿಗೆ ಬಗ್ಗಿಸಲು ಅನುವು ಮಾಡಿಕೊಡುತ್ತಿಲ್ಲವೆಂದು ಸಹ ಹೇಳಿ. ಅವನಿಗೆ ನಿಂತುಕೊಂಡಿರಲೂ ಸಾಧ್ಯವಾಗುತ್ತಿಲ್ಲ. ಅವನು ಹಿಂದೆ ಬೀಳುತ್ತಿದ್ದಾನೆ. ಅವನು ಈಗಾಗಲೇ ಹಿಂದಕ್ಕೆ ಬಹಳ ಕೆಳಗೆ ಬಾಗಿದ್ದಾನೆ. ಈಗ ಅವನು ನಿಶ್ಚಯವಾಗಿ ಹಿಂದಕ್ಕೆ ಬೀಳುತ್ತಿದ್ದಾನೆ.



*ಸಮ್ಮೋಹನಾವಸ್ಥೆಯಲ್ಲಿ ಇರುವಿಕೆ*

ಅವನು ನಿಜವಾಗಿಯೂ ಹಿಂದಕ್ಕೆ ಬೀಳುತ್ತಿರುವುದು ನಿಮ್ಮ ಗಮನಕ್ಕೆ ಬರುವುದು. ನೀವು ಅವನಲ್ಲಿಗೆ ಮುನ್ನುಗ್ಗಿ ನಿಮ್ಮ ತೋಳುಗಳ ಆಸರೆಯನ್ನು ಅವನಿಗೆ ಕೊಡುವಿರಿ.

ಈ ಪ್ರಯೋಗವು ಶ್ರೋತೃಗಳ ಸಭೆಗೆ ಪ್ರಚಂಡವಾಗಿ ಅಚ್ಚೊತ್ತಿದ ಹಾಗಾಗುವುದು.

೬. ಸಭೆಯಿಂದ ಒಬ್ಬ ಮಾಧ್ಯಮ ನನ್ನು ಆಯ್ದುಕೊಂಡು ಅವನನ್ನು ವೇದಿಕೆಯ ಮೇಲೆ ಹಾಜರುಪಡಿಸಿ. ಅವನು ಒಳ್ಳೆಯ ಮಾಧ್ಯಮನೆಂದು ಖಚಿತಪಡಿಸಿಕೊಳ್ಳಿ. ದೀರ್ಘಕಾಲದ ಅಭ್ಯಾಸದ ನಂತರ ಓರ್ವನು ತನ್ನಷ್ಟಕ್ಕೆ ತಾನೇ ಒಳ್ಳೇ ಮಾಧ್ಯಮ ನು ಹೇಗೆ ಆಗಬಲ್ಲನೆಂದು ತಿಳಿದುಕೊಳ್ಳುತ್ತಾನೆ. ಯಾರು ಒಳ್ಳೆಯ ಮಾಧ್ಯಮರಾಗಬಲ್ಲರು ಎಂದು ಪರೀಕ್ಷಿಸಲು ಸಭೆಯವರಿಗೆ ಒಂದು ಅಥವಾ ಎರಡು ಸರಳವಾದ ಪರೀಕ್ಷೆಗೆ ಒಳಪಡಿಸಿರಿ. ನೀವು ಸಭೆಯಲ್ಲಿದ್ದವರಲ್ಲಿ ಯಾರು ಒಳ್ಳೆಯ ಮಾಧ್ಯಮರೆಂದು ತಿಳಿಯುವಿರಿ. ಅವರಲ್ಲಿ ಒಬ್ಬನನ್ನು ಆಯ್ದುಕೊಂಡು ವೇದಿಕೆಯ ಮೇಲೆ ಅವನನ್ನು ತನ್ನಿರಿ. ಯಾವುದೇ ಸಂದರ್ಭದಲ್ಲಿ ಅವನು ದೊಡ್ಡ ಅಧಿಕಾರಿ ಅಥವಾ ನಾಯಕನಲ್ಲವೆಂದು ಜಾಗ್ರತವಾಗಿ ನೋಡಿಕೊಳ್ಳಿ.

ಅವನಿಗೆ ವೇದಿಕೆಯ ಮೇಲಿನ ಕುರ್ಚಿಯ ಮೇಲೆ ಕೂತುಕೊಳ್ಳಲು ಹೇಳಿ. ಅವನಿಗೆ ಸಭೆಯಕಡೆ ಮುಖಮಾಡಿಸಿ. ಅವನ ಕಣ್ಣುಗಳಲ್ಲಿ ನೋಡಿ ಅವನಿಗೆ ಸಮ್ಮೋಹನಗೊಳಿಸಿ. ಅವನನ್ನು ಸಂಪೂರ್ಣವಾಗಿ ಸಮ್ಮೋಹನಗೊಳಿಸಿದ ನಂತರ ಅವನು ನಿಮ್ಮ ಸಂಪೂರ್ಣ ಹತೋಟಿಯಲ್ಲಿ ಬಂದಿದ್ದಾನೆ ಮತ್ತು ನೀವು ಆಜ್ಞಾಪಿಸುವುದಕ್ಕೆಲ್ಲಾ ಮರುಮಾತಿಲ್ಲದೆ ಅವನು ವರ್ತಿಸುವನು ಎಂದು ಆಜ್ಞಾಪಿಸಿ. ನೀವು ಚಪ್ಪಾಳೆ ತಟ್ಟಿದಾಗೆಲ್ಲಾ ಅವನು ನಾಯಿಯಂತೆ ಬೊಗಳುವನೆಂದು ಸಹ ಹೇಳಿ.

ಈಗ ಸಮ್ಮೋಹನಾವಸ್ಥೆಯನ್ನು ಕೊನೆಗೊಳಿಸಿ. ನಿಜವಾಗಿಯೂ ಅವನು ಬಹಳ ಸಾಧಾರಣವಾಗಿರುವ ಹಾಗೆ ಕಾಣುವನು, ಆದರೆ ಅವನು ಏನನ್ನೂ ನೆನಪಿನಲ್ಲಿಟ್ಟುಕೊಂಡಿರುವುದಿಲ್ಲ. ಅವನು ಅದೇ ರೀತಿಯಲ್ಲಿ ಕುರ್ಚಿಯಲ್ಲಿ ಕೂತುಕೊಳ್ಳಲಿ.

ಈಗ ನಿಮ್ಮ ಸ್ವಲ್ಪ ಸಮಯವನ್ನು ಪ್ರೇಕ್ಷಕರೊಡನೆ ಕಳೆಯಿರಿ. ಕೆಲವು ಆಸಕ್ತಿಯುತ ಮಾತುಗಳಲ್ಲಿ ಅವರನ್ನು ನಿರತರಾಗಿಸಿ. ನೀವು ಐದು ನಿಮಿಷಗಳನ್ನು ಕಳೆದಿರುವಿರೆಂದು ಖಚಿತಪಡಿಸಿಕೊಳ್ಳಿ.

ನಂತರ ನೀವು ಚಪ್ಪಾಳೆಯನ್ನು ತಟ್ಟಿ. ನೀವು ಹಾಗೆ ಮಾಡಿದ ತಕ್ಷಣ ಮಾಧ್ಯಮನು ನಾಯಿಯಹಾಗೆ ಬೊಗಳಲಾರಂಭಿಸುವನು.

ಸಭೆಗೆ ಎಲ್ಲವೂ ವಿಚಿತ್ರವಾಗಿ ಕಾಣುವುದು. ಅವರು ನಾಯಿಯ ಬೊಗಳುವಿಕೆಯನ್ನು ಕಂಡನಂತರ ಕೊನೆಯಿಲ್ಲದ ನಗೆಯಲ್ಲಿ ಮುಳುಗುವರು. ಕೊನೆಗೆ ಮಾಧ್ಯಮನು ಬೊಗಳುವುದನ್ನು ನಿಲ್ಲಿಸಿದಾಗ, ನೀವು ಮತ್ತೊಮ್ಮೆ ಚಪ್ಪಾಳೆ ತಟ್ಟಿ. ಅದು ಮತ್ತೊಮ್ಮೆ ಅವನನ್ನು ಬೊಗಳುವ ಹಾಗೆ ಮಾಡುವುದು.

ಈಗ ನೀವು, ಮತ್ತೊಮ್ಮೆ ಮಾಧ್ಯಮನನ್ನು ಸಮ್ಮೋಹನಗೊಳಿಸಿ ಅವನಲ್ಲಿ ಸಮ್ಮೋಹನಾ ನಿದ್ರೆಯನ್ನು ತನ್ನಿ. ಈ ಒಂದು ಅವಸ್ಥೆಯ ಇರುವಿಕೆಯಲ್ಲಿ, ಅವನಿಗೆ ಈ ಪರಿಣಾಮದಿಂದ ಮುಕ್ತಗೊಳಿಸಿದುದಾಗಿ ಆಜ್ಞಾಪಿಸಿ. ನೀವು ಚಪ್ಪಾಳೆಯನ್ನು ತಟ್ಟಿದಾಗ ಅವನು ನಾಯಿಯ ಹಾಗೆ ಬೊಗಳುವುದಿಲ್ಲವೆಂದು ಹೇಳಿ.

ಅವನ ಸಮ್ಮೋಹನವನ್ನು ಕೊನೆಗೊಳಿಸಿ. ಈಗ ಬೇಕೂಂತಲೇ ಅವನ ಮುಂದೆ ಚಪ್ಪಾಳೆತಟ್ಟಿ. ಒಬ್ಬನೇ ಏನನ್ನಾದರೂ ಮಾಡಲಿ, ಅವನು ಬೊಗಳುವುದಿಲ್ಲ ಅವನನ್ನು ಸಭೆಗೆ ಹಿಂದಕ್ಕೆ ಕಳುಹಿಸಿ.

ಈ ಪ್ರದರ್ಶನವು ನೀವು ಒಬ್ಬ ಅದ್ವಿತೀಯ ಸಮ್ಮೋಹಕರು ಎಂಬುದನ್ನು ತಿಳಿಯಪಡಿಸುತ್ತದೆ ಮತ್ತು ನಿಮ್ಮ ಖ್ಯಾತಿಯು ದೂರದೂರಕ್ಕೆ ಹಬ್ಬುತ್ತದೆ.

೨. ಸಭೆಯಿಂದ ಒಬ್ಬ ಮಾಧ್ಯಮನನ್ನು ಆಯ್ದುಕೊಂಡು ಅವನನ್ನು ವೇದಿಕೆಯ ಮೇಲೆ ತನ್ನಿ. ಮಾಧ್ಯಮನು ದೈಹಿಕವಾಗಿ ಅಚ್ಚುಕಟ್ಟಾಗಿರುವುದನ್ನು ಖಚಿತಪಡಿಸಿಕೊಳ್ಳಿ. ಅವನನ್ನು ನಿಮ್ಮ ಮುಂದೆ ನಿಲ್ಲಿಸಿ ಸಮ್ಮೋಹನಗೊಳಿಸಿ. ಅವನನ್ನು ಸಮ್ಮೋಹನನಿದ್ರೆಗೆ ಕಳುಹಿಸಿದ ನಂತರ ಅವನಿಗೆ ಅವನು ಬಹಳ ಬಲಶಾಲಿ ಮತ್ತು ಅವನ ದೇಹ ರಚನೆಯು ಬಹಳ ಆರೋಗ್ಯಕರವೂ ಹಾಗೂ ದಪ್ಪವಾಗಿರುವುದಾಗಿಯೂ ಆಜ್ಞಾಪಿಸಿ. ಅವನ ದೇಹವು ಬಹಳ ಬಿಗಿಯಾಗಿದೆ ಎಂದು ಸಹ ಅವನಿಗೆ ಹೇಳಿ. ಅದು ಸ್ಥಿಮಿತವಾಗಿ ತಣ್ಣಗಾಗಿದೆ ಎಂದು ಹೇಳಿ. ಅವನು ಇನ್ನೂ ನಿಂತುಕೊಳ್ಳುವ ಸ್ಥಿತಿಯಲ್ಲಿಲ್ಲ. ಆದ್ದರಿಂದ ನೀವು ಅವನಿಗೆ ಒರಗಿಕೊಳ್ಳಲು ಹೇಳುತ್ತಿದ್ದೀರಿ. ಅವನು ತಾನು ಕಾಲುಗಳನ್ನು ಒಂದು ಕುರ್ಚಿಯ ಮೇಲೆ ಇಟ್ಟು ತಲೆಯನ್ನು ಇನ್ನೊಂದರ ಮೇಲೆ ಇಟ್ಟಿದ್ದಾನೆ. ಎರಡೂ ಕುರ್ಚಿಗಳ ನಡುವಿನ ಅಂತರವನ್ನು ತುಂಬಲು ಅಲ್ಲಿ ಏನೂ ಇಲ್ಲ. ಅವನು ಬಹಳ ಬಿಗಿಯಾಗಿದ್ದಾನಾದ್ದರಿಂದ ಅವನು ಎರಡೂ ಕುರ್ಚಿಗಳ ಮೇಲೆ ಒಂದು ಬಗ್ಗದ ಮರದ ಕೊರಡಾಗಿದ್ದಾನೆ. ಅವನನ್ನು ಕೆಳಗೆ ಒರಗಿ ಕೊಳ್ಳುವಹಾಗೆ ಮಾಡಿ. ಎರಡೂ ಕುರ್ಚಿಗಳ ನಡುವೆ ಅಂತರವನ್ನು ತುಂಬಲು ನೀವು ಏನನ್ನೂ ಹಾಕಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಿ.



ಹಿಪ್ನಾಸಿಸ್

ಈ ದೇಹವು ಕಟ್ಟಿಗೆಯ ಕೊರಡಿನಂತೆ ಬಿಗಿಯಾಗಿದೆ ಎಂದು ಆಜ್ಞಾಪಿಸಿ. ನೀವು ಅಥವಾ ಯಾರಾದರೂ ಅವನ ಬಿಗಿ ದೇಹದ ಮೇಲೆ ನಿಂತುಕೊಂಡರೆ, ಒತ್ತಡವಿದ್ದರೂ, ಅವನ ದೇಹವು ಬಾಗುವುದಿಲ್ಲ. ಅವನು ಕಟ್ಟಿಗೆಯ ಕೊರಡಿನಂತೆ ಎರಡೂ ಕುರ್ಚಿಗಳ ಮೇಲೆ ಮಲಗಿಕೊಂಡೇ ಇರುವನು. ಈಕಡೆ, ಅವನಿಗೆ ಅದರಿಂದ ಯಾವ ನೋವೂ ಆಗುವುದಿಲ್ಲ.

ಅವನ ಎದೆಯ ಮೇಲೆ ಹೋಗಿ ನಿಂತುಕೊಂಡೇ ಇರಿ. ಅವನು ಗಟ್ಟಿಯಾದ ಮರದಕೊರಡಿನಂತೆ ಬದಲಾಗದೇ ಇರುವುದನ್ನು ನೀವು ಕಾಣುವಿರಿ. ಅವನನ್ನು ಕಟ್ಟಿಗೆಯ ಕೊರಡುಗಳ ಉಪಯೋಗಗಳಿಗೆ ಹಾಕಲಾಗಿದೆ ಎಂದು ಆಜ್ಞಾಪಿಸಿರುವುದಕ್ಕೆ ಅವನು ಏನನ್ನೂ ಮಾಡುವುದಿಲ್ಲ.

ಒಂದು ಅಥವಾ ಎರಡು ನಿಮಿಷಗಳವರೆಗೆ ಅವನ ಎದೆಯ ಮೇಲೆಯೇ ನಿಂತುಕೊಳ್ಳಿ. ನಿಧಾನವಾಗಿ ದೂರಸರಿಯಿರಿ. ಪ್ರೇಕ್ಷಕರು ಇಂತಹ ನಂಬಲಾಗದ ಅದ್ಭುತಕಾರ್ಯಗಳನ್ನು ನೋಡಲು ರೋಮಾಂಚನಗೊಳ್ಳುವರು.

ಈಗ ಅವನು ಬೇಗನೇ ತನ್ನ ಸಾಧಾರಣ ಸ್ಥಿತಿಗೆ ಹಿಂದಿರುಗುತ್ತಿದ್ದಾನೆ ಎಂದು ಆಜ್ಞಾಪಿಸಿ. ಈಗ ಅವನು ನಿಂತುಕೊಂಡಿರುವ ಪರಿಸ್ಥಿತಿಯಲ್ಲಿದ್ದಾನೆ. ನೀವು ಅವನನ್ನು ನಿಲ್ಲಿಸುತ್ತಿದ್ದೀರಿ. ನೀವು ಅವನಿಗೆ ನಿಂತುಕೊಳ್ಳಲು ನೇರವಾಗಿ ಅವನ ದೇಹವನ್ನು ಮೆದುತನದ ಸ್ವಾಭಾವಿಕತನಕ್ಕೆ ಹಿಂದಿರುಗಿಸಲಾಗಿದೆ ಎಂದು ಆಜ್ಞಾಪಿಸಿ. ದೇಹದಲ್ಲಿರಬೇಕಾದ ಎಲ್ಲಾ ಕೃತ್ಯಗಳೂ ಇರುತ್ತವೆ. ಅವನ ಕಣ್ಣುಗಳು ತೆರೆಯುತ್ತಿದ್ದಾವೆ. ಈಗ ಅವನು ಎಚ್ಚೆತ್ತುಕೊಂಡಿದ್ದಾನೆ. ವಾಸ್ತವದಲ್ಲಿ ಅವನ ಕಣ್ಣುಗಳು ತೆರೆದಿದ್ದಾವೆ.

ಮಾಧ್ಯಮನು ಎಚ್ಚೆತ್ತುಕೊಂಡಿದ್ದು ಅವನ ದೇಹವು ಮತ್ತೊಮ್ಮೆ ಮೆದುವಾಗಿ ಸ್ವಾಭಾವಿಕತನಕ್ಕೆ ಹಿಂದಿರುಗಿರುವುದಾಗಿ ನಿಮ್ಮ ಗಮನಕ್ಕೆ ಬರುವುದು.

ಈ ಅದ್ಭುತಕಾರ್ಯದಿಂದ ಶ್ರೋತೃಗಳ ಸಭೆಯು ಬಹಳವಾಗಿ ಪ್ರಭಾವಿತಗೊಳ್ಳುವುದು, ಯಾವುದೇ ಸಂದರ್ಭದಲ್ಲಿ ಮಾಧ್ಯಮನು ಬಡಕಲಾದವನಲ್ಲವೆಂದು ಖಚಿತಪಡಿಸಿಕೊಳ್ಳಿ.

ಆ. ನೀವು ಒಂದು ಸಾರ್ವಜನಿಕ ಪ್ರದರ್ಶನವನ್ನು ನಡೆಸುತ್ತಿದ್ದಾಗ, ಅದು ಪ್ರೇಕ್ಷಕರ ಮೇಲೆ ಪರಿಣಾಮಕಾರಿಯಾದ ಮತ್ತು ಇಷ್ಟಪಡುವಂತಹ ಪರಿಣಾಮವನ್ನು ಬೀರುವ ಅವಶ್ಯಕತೆ ಇದೆ. ನೀವು ಒಂದಾನೊಂದು ಪದ್ಧತಿಯನ್ನು ಉಪಯೋಗಿಸಬಹುದು.

ಗಂಭೀರವಾದ ಮತ್ತು ಮಧುರವಾದ ಧ್ವನಿಯಲ್ಲಿ ಪ್ರೇಕ್ಷಕರಿಗೆ ಸಮ್ಮೋಹನ ವಿಜ್ಞಾನವು ಅದ್ವಿತೀಯವಾಗಿ ಪರಿಣಾಮಕಾರಿಯಾದುದು ಹಾಗೂ ಸಭೆಯ ಪ್ರತಿಯೊಬ್ಬ ಸದಸ್ಯನನ್ನೂ ಸಮ್ಮೋಹನ ಪ್ರಭಾವಕ್ಕೆ ಒಳಪಡಿಸಬಹುದು ಎಂದು ಹೇಳಿ.

ನೀವು ಇನ್ನು ಅವರ ಕಣ್ಣುಗಳಲ್ಲಿ ನೋಡುವುದಿಲ್ಲವೆಂದು ಹೇಳಿ. ನೀವು ವಾಸ್ತವದಲ್ಲಿ ಪರದೆಯ ಹಿಂದಕ್ಕೆ ಹೋಗಿ ಪ್ರೇಕ್ಷಕರನ್ನು ಪರದೆಯ ಹಿಂದಿನಿಂದಲೇ ಸಮ್ಮೋಹನಗೊಳಿಸಲು ಇಚ್ಛಿಸುವುದಾಗಿ ಹೇಳಿ. ನಿಮ್ಮ ಪ್ರಯತ್ನಗಳ ಫಲದಿಂದ ಪ್ರೇಕ್ಷಕರಿಗೆ ನಿದ್ದೆಯ ಮೊಬ್ಬುಬಂದು ಮತ್ತು ಕೊನೆಗೆ ಅವರು ನಿದ್ರೆಹೋಗುವರು ಎಂದು ನಿಮಗೆ ಖಾತ್ರಿ ಇರುವುದಾಗಿ ಹೇಳಿ.

ಈಗ, ಕೊನೆಗೆ, ನೀವು ಆಳವಾದ ಮತ್ತು ತೀಕ್ಷ್ಣವಾದ ನೋಟವನ್ನು ಕೊಟ್ಟು ಪರದೆಯ ಹಿಂದಕ್ಕೆ ಹೋಗಿ.

ಪರದೆಯ ಹಿಂದಕ್ಕೆ ಹೋಗಿ ನೀವು ಘೋಷಿಸಿ: ಈಗ ನೀವೆಲ್ಲರೂ ನನ್ನ ಹತೋಟಿಯಲ್ಲಿ ಮತ್ತು ನನ್ನ ಸಮ್ಮೋಹನ ಪ್ರಭಾವದಲ್ಲಿದ್ದೀರಿ. ನೀವು ಸುಸ್ತಾದ ಹಾಗೆ ಕಾಣುವಿರಿ. ನಿಮಗೆ ನಿದ್ದೆ ಮಾಡಬೇಕಾಗಿದೆ.

ಈಗ ನಿಮ್ಮ ತಲೆಯನ್ನು ನಿಮ್ಮ ಕುರ್ಚಿಯ ಬೆನ್ನಿಗೆ ಒರಗಿಸಿಕೊಂಡು ನಿದ್ದೆಹೋಗಿ. ನಿಮಗೆ ಈಗಾಗಲೇ ನಿದ್ರೆ ಹತ್ತುತ್ತಿದೆ. ನಿಮ್ಮ ಕಣ್ಣುಗಳು ಬಹಳ ಭಾರವಾಗಿವೆ. ನಿಮ್ಮ ಕಣ್ಣುಗಳು ಈಗಾಗಲೇ ಮುಚ್ಚಿವೆ. ನೀವು ಆಗಲೇ ನಿದ್ದೆ ಹೋಗಿದ್ದೀರಿ. ನಾವು ಮೂರುಸಾರಿ ಚಪ್ಪಾಳೆತಟ್ಟಿದ ಮೇಲೆ ನಿಮಗೆ ಎಚ್ಚೆತ್ತುಕೊಳ್ಳಲಾಗುತ್ತದೆ.

ವೇದಿಕೆಗೆ ಹಿಂದಿರುಗಿ. ಪ್ರೇಕ್ಷಕರಲ್ಲಿ ಬಹಳಷ್ಟು ಜನರು ಈಗಾಗಲೇ ಅವರ ಕುರ್ಚಿಗಳಲ್ಲಿ ನಿದ್ದೆ ಹೋಗಿರುವುದನ್ನು ನೀವು ನೋಡುವಿರಿ. ಖಚಿತವಾಗಿ ಎಚ್ಚೆತ್ತುಕೊಂಡ ಕೆಲ ಜನರಿರುತ್ತಾರೆ. ಅದರ ಅರ್ಥವೆಂದರೆ ಅವರು ಯಾವತ್ತೂ ಒಳ್ಳೆಯ ಮಾಧ್ಯಮರಾಗುವುದಿಲ್ಲ. ಬಹಳ ಜನ ನಿದ್ದೆಹೋಗಿರುವುದನ್ನು ನೋಡಿ ಅವರೂ ಸಹ ದಿಘ್ಭ್ರಮೆಗೊಳ್ಳುವರು.

ಈಗ ಮೂರುಸಾರಿ ಚಪ್ಪಾಳೆತಟ್ಟಿ. ಎಲ್ಲಾ ಜನರನ್ನೂ ಎಚ್ಚರಿಸಿ. ಅವರು ತಮ್ಮ ನಿದ್ರೆಯಿಂದ ಎಚ್ಚೆತ್ತುಕೊಂಡಿದ್ದಾರೆಂದು ಆಜ್ಞಾಪಿಸಿ. ಅವರು ಸಾಧಾರಣವಾಗಿರುವುದಲ್ಲದೆ ಬಹಳ ಲವಲವಿಕೆಯಿಂದಿದ್ದಾರೆ.

೯. ವೇದಿಕೆಗೆ ಒಬ್ಬ ಯಶಸ್ವೀ ಮಾಧ್ಯಮನನ್ನು ಕರೆದು ಅವನನ್ನು ಸಮ್ಮೋಹನಗೊಳಿಸಿ. ಅವನು ಆಳವಾದ ನಿದ್ರೆಯಲ್ಲಿರುವಾಗಿಯೂ ಮತ್ತು ನೀವು ಅವನನ್ನು ಈ ದೊಡ್ಡಮೇಜಿನ ಮೇಲೆ ಮಲಗಿಕೊಳ್ಳುವ ಹಾಗೆ ಮಾಡುತ್ತಿರುವುದಾಗಿಯೂ ಆಜ್ಞಾಪಿಸಿ. ಅವನು ಎಷ್ಟು ಗಾಢವಾದ ನಿದ್ರೆಗೆ ಹೋಗಿದ್ದಾನೆಂದರೆ ಅವನಿಗೆ ತನ್ನ ಕಣ್ಣುಗಳನ್ನು ತೆರೆಯಲು ಆಗುತ್ತಿಲ್ಲ ಈಕಡೆ ಏಳಲೂ ಆಗುತ್ತಿಲ್ಲ, ಹೇಗಿದ್ದರೂ ಓರ್ವರು ಅವನ ಕಿವಿಯಲ್ಲಿ ಗಟ್ಟಿಯಾಗಿ ಕೂಗಬಹುದು ಎಂದು ಸಹ ಆಜ್ಞಾಪಿಸಿ.

ಪ್ರೇಕ್ಷಕರೆಲ್ಲರಿಗೂ ಕಾಣುವ ಹಾಗೆ ಮಾಧ್ಯಮ ನನ್ನು ಮೇಜಿನ ಮೇಲೆ ಮಲಗಿಸಿ. ಈಗ ಪ್ರೇಕ್ಷಕರಲ್ಲಿ ಇಬ್ಬರೋ ಅಥವಾ ಮೂವರನ್ನು ಕರೆದು ಅವರಿಗೆ ಅವನನ್ನು ಎಬ್ಬಿಸಲು ಕೇಕೆಹಾಕಲು ಅಥವಾ ಚಪ್ಪಾಳೆ ತಟ್ಟಲು ಅಥವಾ ಕಹಳೆ ತರಹ ಶಬ್ದಮಾಡಲು ಹೇಳಿ.

ಈ ಸಭೆಯ ಸದಸ್ಯರುಗಳು ಸಹಜವಾಗಿಯೇ ಅವರ ಕೈಲಾದಷ್ಟು ಜೋರಾಗಿ ಕೇಕೆಹಾಕುವರು ಅಥವಾ ತುತ್ತೂರಿಯನ್ನು ಊದುವರು,' ಆದರೆ ಮಾಧ್ಯಮನು ಕಣ್ಣುಗಳನ್ನು ತೆರೆಯುವುದಿಲ್ಲ, ಈಕಡೆ ಎಚ್ಚೆತ್ತುಕೊಳ್ಳುವುದೂ ಇಲ್ಲ.

ಸಭೆಯಲ್ಲಿರುವವರಿಗೆ ಸುಮ್ಮನೇ ಮಂಕುಬಡಿದಹಾಗಾಗುವುದು, ಏಕೆಂದರೆ ಅಂತಹ ಜೋರಾದ ಕೇಕೆಗಳನ್ನು ಹಾಕಿದರೆ ಒಬ್ಬ ಕಲ್ಲಿನಂತಹ ಕಿವುಡನನ್ನೂ ಎಚ್ಚರಿಸಬಹುದೆಂದು ಅವರಿಗೆ ಗೊತ್ತು.

ಈಗ ಮಾಧ್ಯಮ ನಿಗೆ ಅವನು ಎಚ್ಚೆತ್ತುಕೊಳ್ಳುವ ಪರಿಸ್ಥಿತಿಯಲ್ಲಿದ್ದಾನೆಂದು ಆಜ್ಞಾಪಿಸಿ ಹಾಗೂ ನೀವು ಚಪ್ಪಾಳೆತಟ್ಟಿದ ತಕ್ಷಣ ಅವನು ಎಚ್ಚೆತ್ತು ಕೊಳ್ಳುವನು.

ನೀವು ಒಮ್ಮೆ ಚಪ್ಪಾಳೆ ತಟ್ಟಿ, ಮಾಧ್ಯಮನು ಕೂಡಲೇ ಮೇಲೇಳುವನು. ಪ್ರೇಕ್ಷಕರು ನಗುತ್ತಿರುವುದನ್ನು ನೋಡಿ ಅವನು ಚಕಿತಗೊಳ್ಳುವನು.

ಮೇಲೆ ವಿಮರ್ಶಿಸಿರುವ ಪ್ರಯೋಗಗಳನ್ನು ಯಶಸ್ವಿಯಾಗಿ ಪ್ರದರ್ಶಿಸಬಹುದು. ನೀವು ಉಚ್ಚ ಮಟ್ಟದ ಆತ್ಮವಿಶ್ವಾಸವನ್ನು ವೃದ್ಧಿಸಿಕೊಳ್ಳುವಿರಿ. ನೀವು ಬೇರೆಯವರನ್ನು ಸಮ್ಮೋಹನಗೊಳಿಸುವಲ್ಲಿ ಎಷ್ಟು ಸಮರ್ಥರಾಗಿರುವಿರಿ ಎಂದು ಸಹ ತಿಳಿದುಕೊಳ್ಳುವಿರಿ.

ಅದು ನಿಮಗೆ ಮರ್ಯಾದೆ ಮತ್ತು ಗೌರವಗಳನ್ನು ತರುತ್ತದೆ. ಅದು ನೀವು ಅದ್ವಿತೀಯ ಸಮ್ಮೋಹಕರಾಗಲು ಸಹ ಸಹಾಯಕ ವಾಗುತ್ತದೆ.

ಈ ಮುಂದಿನ ಪುಟಗಳಲ್ಲಿ ನಾನು ಸಮ್ಮೋಹನವು ನಮ್ಮ ಸ್ವಾರಸ್ಯವಿಲ್ಲದ ದಿನನಿತ್ಯದ ಚಟುವಟಿಕೆಗಳಲ್ಲಿ ಹೇಗೆ ಲಾಭದಾಯಕವಾಗಿ ಸಾಬೀತಾಗುವುದು ಹಾಗೂ ಎಲ್ಲವನ್ನೂ ನಾವು ಹೇಗೆ ವಶಪಡಿಸಿಕೊಳ್ಳಬಹುದೆಂದು ಚರ್ಚಿಸಲಿದ್ದೇನೆ.

# ಅಧ್ಯಾಯ 14

## ಸಮ್ಮೋಹನದ ಪ್ರಯೋಜನಗಳು

ಇಂದು ಜಗತ್ತು ಯಾವತ್ತಿಗಿಂತಲೂ ಕಷ್ಟಕರ ಹಾಗೂ ಕ್ಲಿಷ್ಟವಾಗಿದೆ. ಜೀವನವು ಇಂದು ನಂಬದಿರುವಂತಹ ಸಮಸ್ಯೆಗಳಿಂದ ಕಲುಷಿತಗೊಂಡಿದೆ. ಈ ಸಂಪೂರ್ಣ ಮಾದರಿಯು ಬಹಳ ಕೆಟ್ಟುಹೋಗಿದೆ ಹಾಗೂ ಬಹಳ ದಿಗಿಲುಗೊಳಿಸುವಹಾಗೆ ಕ್ಲಿಷ್ಟವಾಗಿದೆ.

ಪರಿಹಾರವೇ ಇದ್ದಿಲ್ಲ. ಬಹಳ ವಿಷಯಗಳಲ್ಲಿ ಪರಿಹಾರವು ರೋಗಕ್ಕಿಂತ ಹೆಚ್ಚಾಗಿ ಮಾರಕವಾಗಿಯೇ ಸಾಬೀತಾಗಿದೆ. ಮನುಷ್ಯನ ಜೀವದ ಮತ್ತು ಮೌಲ್ಯಗಳ ಅಭೂತ ಪೂರ್ವವಾದ ಅಪಾಯಗಳಲ್ಲಿ ತೇಲಾಡುತ್ತಾ ನಾವು ಹೆಚ್ಚಾಗಿ ಅಸಹಾಯತನಕ್ಕೆ ಬಹಿರಂಗವಾದ ಹಾಗೆ, ನಾವು ಮನಸ್ಸಿನಿಂದ ಪ್ರಾರಂಭವನ್ನು ಮಾಡಬೇಕೆನ್ನುವ ಉತ್ತಮರೀತಿಯಲ್ಲಿ ನೋಡುತ್ತೇವೆ. ಏಕೆಂದರೆ ಈ ಕೊನೆಯಿಲ್ಲದ ಕ್ಲಿಷ್ಟತೆಗಳಿಗೆ ಮೂಲವು ಎಲ್ಲಾ ರೀತಿಯ ಸರ್ವನಾಶಕ್ಕೆ ಪರಿಣಮಿಸಿರುವ ಮಾನಸಿಕ ವ್ಯಾಧಿಯಾಗಿದೆ.

ಅದು, ಆದ್ದರಿಂದ ನಾವು ಗಮನವನ್ನು, ವ್ಯಕ್ತಿಯ ಮತ್ತು ಅವನ ಮನಸ್ಸಿನ ಕಡೆಗೆ, ಕೇಂದ್ರೀಕರಿಸುವುದು ಅತ್ಯಗತ್ಯವಾಗಿದೆ. ಮನುಷ್ಯನ ಮನಸ್ಸನ್ನು ಆಳಕ್ಕೆ ಇಳಿಯುತ್ತಿರುವ ಬಿಗುವಿನಿಂದ, ಏರುತ್ತಿರುವ ಭಯಗಳಿಂದ, ಹೆಚ್ಚುತ್ತಿರುವ ದುಃಖಗಳಿಂದ ಮತ್ತು ಇತರೆ ನಿಯಂತ್ರಿಸಲಾಗದ ಸಮಸ್ಯೆಗಳಿಂದ ಮುಕ್ತಗೊಳಿಸಬೇಕು. ಅದೊಂದೇ ಮನಸ್ಸಿಗೆ ಕ್ರಿಯಾತ್ಮಕ ಹಾಗೂ ರಚನಾತ್ಮಕತೆಯನ್ನು ಕೊಡುವ ಸಾಮರ್ಥ್ಯವಿರುವುದು.

ಈ ಆಧುನಿಕ ಯುಗದಲ್ಲಿ ಸಮ್ಮೋಹನಕ್ಕೆ ಒಂದು ವಿಚಿತ್ರವಾದ ಪಾತ್ರವಿದೆ. ಸಾಧಾರಣವಾಗಿ ಜನರು ಇದರ ಹೋಲಿಸಲಾರದಂತಹ ಉಪಯೋಗಗಳನ್ನು ಒಪ್ಪುವರು. ಆದ್ದರಿಂದ, ಅದನ್ನು, ಈಗಿನ ಆಧುನಿಕತೆಯಲ್ಲಿ, ವಿಶಿಷ್ಟವಾದ ಮತ್ತು ಪ್ರಭಾವಗೊಳಿಸುವಂತಹ ವಿಜ್ಞಾನವೆಂದು ಒಪ್ಪಿಕೊಳ್ಳಲಾಗಿದೆ. ಬೇರೆ ಯಾವುದೇ ವಿಜ್ಞಾನಕ್ಕಿಂತ ಹೆಚ್ಚಾಗಿ, ಸಮ್ಮೋಹನವು ಗಮನವನ್ನು ವ್ಯಕ್ತಿಯ ಮತ್ತು ಅವನ ಮನಸ್ಸಿನ ಕಡೆಗೆ ಕೇಂದ್ರೀಕರಿಸುತ್ತದೆ.

ಆಧುನಿಕ ಜೀವನದಲ್ಲಿ ಇತರ ಬಹಳ ಸಮಸ್ಯೆಗಳು ಇರುವವು. ನಾವು ಸಮ್ಮೋಹನದ ಸಹಾಯದಿಂದ ಈ ಕ್ಲಿಷ್ಟಸಮಸ್ಯೆಗಳನ್ನು ಬಹಳವಾಗಿ ಬಗೆಹರಿಸಿಕೊಳ್ಳಬಹುದು.

ಈ ಕಳೆದ ಪುಟಗಳಲ್ಲಿ ಅದು ನಮ್ಮ ನಿತ್ಯದ ಜೀವನದ ಪರಿಸ್ಥಿತಿಗಳಲ್ಲಿಯೂ ಸಹ ಹೇಗೆ ಸಹಾಯಕವಾಗುತ್ತದೆಂದು ಚರ್ಚಿಸಿದ್ದೇವೆ.

### ಚಿಕಿತ್ಸಕಾ ಗುಣಲಕ್ಷಣಗಳು.

ಸಮ್ಮೋಹನವು ಚಿಕಿತ್ಸಕಾ ಗುಣಲಕ್ಷಣಗಳ ಕ್ಷೇತ್ರದಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಈಗಿನ ಕಾಲದಲ್ಲಿ ಯಾವುದೇ ಔಷಧಿಗಳಿಗೆ ಪ್ರತಿಕ್ರಿಯಸದಂತಹ ಬಹಳ ನೋವುಗಳು ಇರುವವು. ಮಾನಸಿಕ ರೋಗಿಯ ವ್ಯಾಧಿಯನ್ನು, ಉದಾಹರಣೆಗೆ, ಮದ್ದುಗಳು ಮತ್ತು ಔಷಧಿಗಳು ಎನ್ನುವ ಸಲಕರಣೆಗಳಿಂದ ತಗ್ಗಿಸುವುದಾಗಲೀ, ವಾಸಿಮಾಡುವುದಾಗಲೀ ಮಾಡಲಾಗುವುದಿಲ್ಲ.

ಸಮ್ಮೋಹನ ಮಾತ್ರವೇ ಅಂತಹ ವಾಸಿಯಾಗದಂತಹ ರೋಗಗಳನ್ನು ನಿಭಾಯಿಸುವಲ್ಲಿ ಸಾಬೀತುಪಡಿಸುವ ಭರವಸೆಯನ್ನು ಹೊಂದಿದೆ. ಮನುಷ್ಯನು ಈದಿನ ಯಾವತ್ತಿಗಿಂತಲೂ ಹೆಚ್ಚಿನ ಅಪಾಯಗಳನ್ನು ಎದುರಿಸಬೇಕಾಗಿದೆ.

ಅವನು ಮಾನಸಿಕ ಚಿಂತೆಗಳಿಗೂ ಹಾಗೂ ಬಿಗುವುತನಕ್ಕೂ ಸಹ ಹೆಚ್ಚು ಭೇದ್ಯನಾಗಿರುವುದರಲ್ಲಿ ಆಶ್ಚರ್ಯವಿಲ್ಲ. ಓರ್ವನು ಕೇವಲ ಈ ಮಾನಸಿಕ ಚಿಂತೆಗಳ ಮತ್ತು ಬಿಗುವುತನಗಳನ್ನು ಉದ್ಭವಿಸುವಂತಹ ಮೂಲಕಾರಣಗಳಲ್ಲಿ ಹೋದಾಗ ಮಾತ್ರ ಈ ಮಾನಸಿಕ ಚಿಂತೆಗಳ ಮತ್ತು ಬಿಗುವುತನಗಳನ್ನು ಎದುರಿಸಿ ತೆಗೆದುಹಾಕಲು ಇಚ್ಛಿಸಬಹುದು. ಅವನ ಮನಸ್ಸಿನಿಂದ ಚಿಂತೆ ಮತ್ತು ವ್ಯಾಕುಲತೆಗಳನ್ನು ತೆಗೆಯುವವರೆಗೂ, ಅವನನ್ನು ಈ ವ್ಯಾಧಿಗಳಿಂದ ಮುಕ್ತಗೊಳಿಸಲಾಗುವುದಿಲ್ಲ. ವ್ಯಾಕುಲತೆಯು ಮನುಷ್ಯನ ಜೀವನದ ಶಕ್ತಿಗಳನ್ನೇ ತಿಂದುಬಿಟ್ಟಿದೆ ಎಂದು ಆಗಾಗ ಹೇಳಲಾಗಿದೆ.

ಸಮ್ಮೋಹನವು, ಮನಷ್ಯನನ್ನು ವ್ಯಾಕುಲತೆಯಿಂದ ಮುಕ್ತಗೊಳಿಸುವಂತಹ ಸಮ್ಮೋಹನಾ ನಿದ್ರೆಯನ್ನು ಕೊಡುತ್ತದೆ. ಅವನಿಗೆ ಈ ವ್ಯಾಕುಲತೆಗಳ ವ್ಯೂಹದಲ್ಲಿ ಕೆಳಗೆ ಸಿಕ್ಕಿಹಾಕಿಕೊಂಡು ಮುಂದುವರಿಯುವುದರಿಂದ ಏನೂ ಉಪಯೋಗವಿಲ್ಲವೆಂದು ಆಜ್ಞಾಪಿಸಬಹುದು. ಹಾನಿ ಅಥವಾ ಸಾವು ಓರ್ವನ ಭೂತಕಾಲದ ವಿಷಯವಾಗಿದೆ. ಅವನು ಈವತ್ತಿಗೆ ಸಂಬಂಧವಿಲ್ಲದವುಗಳ ಮೇಲೆ ಯೋಚಿಸುತ್ತಾ ಮುಂದುವರಿಯುವುದರಿಂದ ಉಪಯೋಗವಿಲ್ಲ.

ಅವನಿಗೆ ದುಃಖವನ್ನು ಕೊಟ್ಟಂತಹ ವಿಷಯಗಳನ್ನು ಅವನು ಇನ್ನು ಮುಂದೆ ಜ್ಞಾಪಕದಲ್ಲಿಟ್ಟುಕೊಳ್ಳುವುದಿಲ್ಲ ಎಂದು ಸಹ ಆಜ್ಞಾಪಿಸಬಹುದು.

ಅವನನ್ನು ಅರಿವಿಗೆ ತಂದನಂತರ ತನಗೆ ಹೇಳಲಾರದಂತಹ ದುಃಖ ಹಾಗೂ ವಿಪತ್ತನ್ನು ತಂದಂತಹ ದುರಂತದ ಘಟನೆಯನ್ನು ಸ್ವಚ್ಛವಾಗಿ ಮರೆಯುವನು. ಅವನು ಆರೋಗ್ಯಕರವಾದ ಮತ್ತು ಲವಲವಿಕೆಯ ಜೀವನವನ್ನು ಸಾಗಿಸುವನು.

ಅವನು ಯಾವುದಾದರೂ ಒಂದು ವಿಶಿಷ್ಟರೀತಿಯ ಮಾನಸಿಕ ವ್ಯಾಧಿ ಅಥವಾ ಮಾನಸಿಕ ದುಃಖದಿಂದ ನರಳುವುದನ್ನು ಮುಂದುವರಿಸಿದಲ್ಲಿ, ಅವನ ಮನಸ್ಸನ್ನು ವಿಚಾರಮುಕ್ತ ಹಾಗೂ ಯೋಚನೆಮುಕ್ತ ಮಾಡಬಹುದು. ಇದು ಅವನನ್ನು ಖಚಿತವಾಗಿ ವ್ಯಾಕುಲತೆ ಇಲ್ಲದ ಮತ್ತು ದುಃಖವಿಲ್ಲದ ಜೀವನಕ್ಕೆ ಹಿಂದಿರುಗಿಸುವುದು.

ತನ್ನ ಮಗನನ್ನು ಕಳೆದುಕೊಂಡ ಒಬ್ಬ ನಿರ್ದಿಷ್ಟ ವ್ಯಕ್ತಿಯು ನನ್ನನ್ನು ನೋಡಲು ಬಂದನು. ಅವನು ಮಗನನ್ನು ಆಳವಾಗಿ ಹಚ್ಚಿಕೊಂಡಿದ್ದನು. ಅವನು ವಾಸ್ತವದಲ್ಲಿ ಅರ್ಧಮನೋವಿಕಲ್ಪ ವ್ಯಕ್ತಿ ಯಾಗಿದ್ದನು. ಅವನು ಕೆಲಸದಲ್ಲಿ ಎಲ್ಲಾ ಆಸಕ್ತಿಯನ್ನು ಕಳೆದುಕೊಂಡನು. ಅವನು ತಿನ್ನುತ್ತಲೂ ಇರಲಿಲ್ಲ. ಆರು ತಿಂಗಳು ಕಳೆದಿತ್ತು. ಅವನ ಸಂಸಾರವು ಸಂಪೂರ್ಣವಾಗಿ ಹೆಚ್ಚುಕಡಿಮೆಯಾಗಿತ್ತು. ಏಕೆಂದರೆ ಆ ಸಂಸಾರದಲ್ಲಿ ಅವನೊಬ್ಬನೇ ದುಡಿಯುವ ಸದಸ್ಯನಾಗಿದ್ದನು. ಅವನು ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿದ್ದನು. ಈಗ ಈ ಸಂಸಾರದ ಬದುಕಿಗೆ ಬೇರೆ ಯಾವ ಆದಾಯವಿರಲಿಲ್ಲ. ಸಂಸಾರವು ಸ್ಪಷ್ಟವಾಗಿ ಕೆಟ್ಟದಿನಗಳಲ್ಲಿ ಬಿದ್ದಿತು.

ಸತ್ತ ಮಗನು ಅವನನ್ನು ಹಗಲೂ ರಾತ್ರಿ ಕಾಡಿಸುತ್ತಿದ್ದನು. ಅವನಿಗೆ ಯಾವತ್ತೂ ಅವನ ಮಗನ ಶಾಶ್ವತವಾದ ಜ್ಞಾಪಕದಿಂದ ಈಚೆ ಬರಲಾಗುತ್ತಿರಲಿಲ್ಲ. ಅವನು ಶಿಥಿಲವಾದ ರಚನೆಗೆ ಇಳಿದಿದ್ದನು. ಸಮಾಜದಿಂದ ದೂರನಾದ ಮತ್ತು ದೈಹಿಕವಾಗಿ ಕೃಷನಾಗಿರುವ ಅವನು ತನ್ನ ಹಳೇತನವನ್ನು ಸಂಪೂರ್ಣವಾಗಿ ನಾಶಮಾಡಿಕೊಂಡಿದ್ದನು.

ಅವನು ನನ್ನ ಹತ್ತಿರಬಂದಾಗ, ನಾನು, ಅವನು ತನ್ನಷ್ಟಕ್ಕೆ ತಾನೇ ಹುಚ್ಚನ ತರಹ ಆಗಿದ್ದಾನೆಂದು ಗಮನಿಸಿದೆ. ಪ್ರತಿ ಕ್ಷಣವೂ, ಅವನು, ನಾನು ಗಮನಿಸಿದೆ, ಅವನ ಮಗನ ಜ್ಞಾಪಕದಲ್ಲಿ ಪೀಡಿತನಾಗಿದ್ದನು.

ನಾನು ಅವನನ್ನು ಕುರ್ಚಿಯಲ್ಲಿ ಕುಳ್ಳಿರಿಸಿ ಅವನನ್ನು ಸಮ್ಮೋಹನ ಪ್ರಭಾವಕ್ಕೆ ತಂದೆ. ನಾನು ಯಾರೂ ತಂದೆಯಲ್ಲ ಮತ್ತು ಯಾರೂ ಮಕ್ಕಳಲ್ಲ ಎಂದು ಆಜ್ಞಾಪಿಸಿದೆ. ವಾಸ್ತವದಲ್ಲಿ ಎಲ್ಲವೂ ವೈಯಕ್ತಿಕ ಆಸಕ್ತಿಗಳಿಂದ ಹೆಣೆದುಕೊಂಡಿದೆ.

ಮುಂದೆ ನಾನು ..ವನಿಗೆ ತಾನು ತನ್ನ ಹಿಂದಿನ ಜನ್ಮವನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕೆಂದು ಹೇಳಿದೆ. ಖಚಿತವಾಗಿ ಅವನು ತನ್ನ ಸಂಸಾರದಲ್ಲಿ ತನ್ನ ಮಗನ ರೂಪದಲ್ಲಿ ಬಂದವನಿಗೆ ಋಣಿಯಾಗಿರಬೇಕು. ಒಮ್ಮೆ ಲೆಕ್ಕಾಚಾರಗಳು ಮುಗಿದ ನಂತರ ಅವನು ತನ್ನ ಬಂಧನಗಳಿಂದ ಹಿಂದಕ್ಕೆ ಹೋಗಲು ಇಚ್ಛಿಸಿದನು. ಆಧ್ಯಾತ್ಮಿಕ ಕೋನದಿಂದ ವೀಕ್ಷಿಸಿದಾಗ, ಸತ್ತವನು ಅವನಿಗೆ ಸಂಬಂಧವಾಗಿಯೇ ಇಲ್ಲ. ಅವನು ನೈಸರ್ಗಿಕವಾಗಿದ್ದನು. ಮುಂದೆ ನಾನು ಅವನಿಗೆ ಕಳೆದುದಕ್ಕೆ ದುಃಖಿಸುವ ಉದ್ಯೋಗವಿಲ್ಲವೆಂದು ಹೇಳಿದೆ. ಅದು ಬಹುಶಃ ಹೊರಟುಹೋಗಿರುವಂತಹ ಆತ್ಮಕ್ಕೆ ಹೆಚ್ಚು ನೋವುಂಟು ಮಾಡುತ್ತದೆ.

ನಂತರ ನಾನು ಅವನಿಗೆ ಸಮ್ಮೋಹನ ನಿದ್ರೆಯಿಂದ ಎಚ್ಚರಿಸುವೆ ಎಂದು ಆಜ್ಞಾಪಿಸಿದೆ. ಅವನು ಸತ್ತವನ ಬಗ್ಗೆ ಎಲ್ಲವನ್ನೂ ಮರೆಯುವನು. ಅವನು ತನ್ನ ಎಲ್ಲಾ ಗಮನವನ್ನು ಸಂಸಾರದ ಕಡೆಗೆ ಹರಿಸುವನು. ಅವನು ಕೆಲಸಕ್ಕೆ ಹೋಗಲು ಪ್ರಾರಂಭಿಸುವನು. ಅವನು ಯಶಸ್ವಿಯಾಗಿ ತನ್ನ ಜೀವನವನ್ನು ಸಾಗಿಸುವನು.

ನಾನು ಅವನಿಗೆ ತನ್ನ ಮಗನ ಬಗ್ಗೆ ಅವನು ಸಂಪೂರ್ಣವಾಗಿ ಮರೆತಿರುವನೆಂದು ಆಜ್ಞಾಪಿಸಿದೆ. ಯಾರಾದರೂ ಅವನಿಗೆ ಅವನ ಮಗನ ಬಗ್ಗೆ ಜ್ಞಾಪಿಸಲು ಪ್ರಯತ್ನಿಸಿದರೂ ಅವನು ಜ್ಞಾಪಕಮಾಡಿಕೊಳ್ಳುವುದಿಲ್ಲ.

ಆಗ, ನಾನು ಅವನ ಸಮ್ಮೋಹನ ವಶವನ್ನು ಕೊನೆಗೊಳಿಸಿದೆ. ಅವನು ಸಾಧಾರಣ ಮನುಷ್ಯನಾಗಿ ಕಂಡನು. ಅವನು ಒಳ್ಳೆಯ ಲವಲವಿಕೆಯಿಂದ ಅವನ ಸಂಸಾರದ ಬಗ್ಗೆ ಮಾತನಾಡಲಾರಂಭಿಸಿದನು. ಅರ್ಧಗಂಟೆಯವರೆಗೆ ನಾನು ಅವನೊಡನೆ ಎಲ್ಲಾ ತರಹದ ವಿಷಯಗಳನ್ನೂ ಮಾತಾಡಿದೆ: ಸಮಾಜ, ರಾಜಕೀಯ ಮತ್ತು ಮನೆಯ. ನಾನು ಅವನನ್ನು ಅನುಕೂಲ ಸ್ಥಿತಿಯಲ್ಲಿ ನೋಡಿದೆ.

ಬೇರೆಯಾಗಿ ನಾನು ಅವನ ಹೆಂಡತಿಗೆ ಅವನ ಸತ್ತ ಮಗನ ಎಲ್ಲಾ ಸ್ಮೃತ್ಯುಗಳಾದ ಫೋಟೋಗಳು, ಉಡುಗೆಗಳು, ಬಟ್ಟೆ ಮುಂತಾದವುಗಳನ್ನು ಮನೆಯಿಂದ ತೆಗೆಯಲು ಆದೇಶಿಸಿದ್ದೆ.

ಅಂದಿನಿಂದ ಆ ವ್ಯಕ್ತಿಯು ಸಾಧಾರಣವಾದ ಜೀವನದಿಂದ್ದನು, ಅವನು ಯಾವತ್ತೂ ಮಗನನ್ನು ಜ್ಞಾಪಿಸಿಕೊಳ್ಳುವುದಿಲ್ಲ. ಅವನು ತನ್ನ ಜೀವನವನ್ನು ಲವಲವಿಕೆಯಿಂದ ಸಾಗಿಸುತ್ತಿದ್ದನು. ಹೀಗೆ ಒಡೆದುಹೋದ ಒಂದು ಸಂಸಾರವು ಕೂಡಿಕೊಂಡಿತು ಮತ್ತು ಅಂದಿನಿಂದ ಯಾವುದೇ ಯೋಚನೆ ಅಥವಾ ಬಿಗುವಿಲ್ಲದೆ ಜೀವನವನ್ನು ಸಾಗಿಸುತ್ತಿತ್ತು.

ಈ ರೀತಿ ನಾವು ಯಾವತ್ತಿಗೂ ಒಬ್ಬ ವ್ಯಕ್ತಿಯನ್ನು ಅವನಿಗೆ ದುರಂತ ಘಟನೆಯ ಪರಿಣಾಮದಿಂದ ಕೊಟ್ಟಂತಹ ವ್ಯಾಕುಲತೆ ಮತ್ತು ಬಿಗುವುತನಗಳಿಂದ ಮುಕ್ತಗೊಳಿಸಬಹುದು.

ಸಮ್ಮೋಹನವು ನೋವಿಲ್ಲದ ಶಸ್ತ್ರಚಿಕಿತ್ಸೆಗಳನ್ನು ವಿಕಸಿತಗೊಳಿಸಿದೆ. ಯಾವುದೇ ಅಂಗವನ್ನು ಸಮ್ಮೋಹನದ ಸಹಾಯದಿಂದ ಶಸ್ತ್ರಕ್ರಿಯೆ ಮಾಡಬಹುದು. ರೋಗಿಯು ಸಮ್ಮೋಹನ ನಿದ್ರೆಯಲ್ಲಿದ್ದಾಗ ಯಾವುದೇ ನೋವಿಗೆ ಅಥವಾ ನರಳುವಿಕೆಗೆ ಬಹಿರಂಗವಾಗುವುದಿಲ್ಲ. ಅಂತಹ ರೋಗಿಗಳಿಗೆ ಇನ್ನೆಂದೂ ಈ ಕಾರ್ಯಕ್ಕಾಗಿ ನಿದ್ರೆಯ ಔಷಧಿ ಬೇಕಾಗುವುದಿಲ್ಲ.

# ಅಧ್ಯಾಯ 15

# ಸಮ್ಮೋಹನದ ಅನುಗ್ರಹಗಳು

## ಪ್ರಸವದಲ್ಲಿ ಸಮ್ಮೋಹನದ ಪಾತ್ರ:

ಪಶ್ಚಿಮದಲ್ಲಿ ಪ್ರಸವದಲ್ಲಿ ಸಮ್ಮೋಹನ ಪದ್ಧತಿಯು ಬಹಳ ಸಾಧಾರಣ ವಿಷಯವಾಗಿದೆ. ಅದು ಈದಿನ ಬಹಳವಾಗಿ ಸಮ್ಮೋಹನ ವಿಜ್ಞಾನದಿಂದಲೇ ಪ್ರಸವವು ನೋವಿಲ್ಲದ ಕಾರ್ಯವಾಗಿದೆ. ಅದಕ್ಕೆ ಈ ಕಡೆ ಯಾವುದೇ ರೀತಿಯ ಶಸ್ತ್ರ ಚಿಕಿತ್ಸೆಯ ಅವಶ್ಯಕತೆ ಇಲ್ಲ. ಪುನಃ ಸಮ್ಮೋಹನ ವಶದಲ್ಲಿಯ ಪ್ರಸವವು ಯಾವುದೇ ತರಹದ ಕ್ಲಿಷ್ಟತೆಗಳಿಗೆ ಅಥವಾ ದೂಷಿತ ಪರಿಣಾಮಗಳಿಗೆ ಎಡೆಮಾಡುವುದಿಲ್ಲ. ಈ ಕಡೆ ಸಂಬಂಧಪಟ್ಟ ವ್ಯಕ್ತಿಯ ಮೇಲೆ ಯಾವುದೇ ತರಹದ ದುಷ್ಪರಿಣಾಮಗಳನ್ನು ಬೀರುವುದಿಲ್ಲ.

## ದಂತಶಾಸ್ತ್ರ ಕಲೆಯಲ್ಲಿ ಸಮ್ಮೋಹನದ ಪಾತ್ರ:

ಯು.ಎಸ್.ಮತ್ತು ಇತರೆ ದೇಶಗಳಲ್ಲಿ ಸಮ್ಮೋಹನವನ್ನು ವಿವಿಧ ತರಹದ ನೋವುಗಳನ್ನು ವಾಸಿಮಾಡಲು ಹೆಚ್ಚಾಗಿ ಉಪಯೋಗಿಸುತ್ತಾರೆ. ಹಲ್ಲುಗಳನ್ನು ಸಮ್ಮೋಹನದ ಸಹಾಯದಿಂದ ಕೀಳುತ್ತಾರೆ. ಈಗ ಪ್ರದೇಶ ನಿದ್ರಾ ಔಷಧಿಗಳನ್ನು ಉಪಯೋಗಿಸುವ ಅವಶ್ಯಕತೆ ಇಲ್ಲ.

ಬಹಳ ಇತರೆ ದೈಹಿಕ ವ್ಯಾಧಿಗಳಾದ ನೋವು, ತಲೆನೋವು, ಹೊಟ್ಟೆಯ ಅಸ್ವಸ್ಥ್ಯ, ಇತರೆಗಳನ್ನು ಸಮ್ಮೋಹನದ ಸಹಾಯದಿಂದ ನೋಡಿಕೊಳ್ಳಲಾಗುತ್ತಿದೆ.

ಈ ವಿಜ್ಞಾನವು ಎಂತಹ ಚಮತ್ಕಾರಿಕ ಏಳ್ಗೆಯನ್ನು ದಾಖಲಿಸಿದೆಯೆಂದರೆ ಸಮ್ಮೋಹಕನಿಗೆ ಅವನ ರೋಗಿಯ ಮುಂದೆ ನಿಂತುಕೊಳ್ಳುವ ಅವಶ್ಯಕತೆಯೇ ಇಲ್ಲ. ರೋಗಿಗಳನ್ನು ತಮ್ಮ ದೀರ್ಘಕಾಲೀನ ರೋಗಗಳಿಂದ ಬಹಳ ದೂರದ ಕರೆಗಳಿಂದ ದೂರವಾಣಿಯ ಮೂಲಕವೇ ವಾಸಿಮಾಡಲಾಗುತ್ತದೆ.

ಕೆನಡ ಮತ್ತು ಇತರೆ ದೇಶಗಳಲ್ಲಿ ವೈದ್ಯನು ತಾಯಿಯಾಗುವಂತಹವಳಿಗೆ ದೂರವಾಣಿಯಲ್ಲಿ ಮಾತಾಡುತ್ತಾನೆ: ಇದು ಡಾ. ...ನಾನು ಒಂದು, ಎರಡು ಮತ್ತು ಮೂರೆಂದು ಎಣಿಸುವೆ. ನೀನು ನಿದ್ದೆ ಹೋಗುತ್ತೀಯ. ನೀನು ನಿನ್ನ ಪ್ರಸವವನ್ನು ಯಾವುದೇ ನೋವು ಅಥವಾ ತೊಂದರೆಗಳಿಲ್ಲದೆ ನಡೆಸುತ್ತೀಯ. ನಿನಗೆ ನಿದ್ರೆ ಹತ್ತುತ್ತಿರುವುದನ್ನು ನಾನು ನೋಡುತ್ತಿದ್ದೇನೆ. ಸರಿಯೇ , ನಿದ್ದೆಮಾಡು, ನಿದ್ದೆಮಾಡು, ನಿದ್ದೆಮಾಡು.

ಈ ಆಜ್ಞೆಯು ರೋಗಿಯ ಮೇಲೆ ತಕ್ಷಣ ಪರಿಣಾಮವನ್ನುಂಟು ಮಾಡುತ್ತದೆ. ಅವಳಿಗೆ ಸಮ್ಮೋಹನ ನಿದ್ರೆಯಲ್ಲಾದ ಪ್ರಸವವು ಅವಳನ್ನು ಸಾಮಾನ್ಯ ಹಾಗೂ ಅನುಕೂಲಕರವಾಗಿಯೇ ಇಡುತ್ತದೆ.

## ಮಾನಸಿಕ ರೋಗಿಗಳ ಮೇಲೆ ಪ್ರಯೋಗಗಳು :

ಸಮ್ಮೋಹನವು ಮಾನಸಿಕ ರೋಗಿಗಳ ಕ್ಷೇತ್ರದಲ್ಲಿ ಬಹಳ ಪರಿಣಾಮಕಾರಿಯಾಗಿದೆ. ಮಾನಸಿಕ ರೋಗಿಗಳಿಗೆ ಸಮ್ಮೋಹನದ ಬಗ್ಗೆ ಹೇಳುವ ಹಾಗೂ ಸಮ್ಮೋಹನವು ಮಾನಸಿಕ ರೋಗಗಳನ್ನು ವಾಸಿಮಾಡುವಲ್ಲಿ ಹೇಗೆ ನೆರವಾಗುತ್ತದೆಂದು ವಿಮರ್ಶಿಸುವ ಅವಶ್ಯಕತೆ ಇದೆ.

ಸಮ್ಮೋಹನದ ಸಂಪೂರ್ಣ ಏಕಾಗ್ರತೆಯು ಮನಸ್ಸು ಮತ್ತು ಮೆದುಳಿನ ಮೇಲೆ ಬೀಳುತ್ತದೆ. ಆದ್ದರಿಂದ

ಅದು ನೇರವಾಗಿ ಮೆದುಳಿನ ಮೇಲೆಯೇ ಪರಿಣಾಮ ಬೀರುವುದರಿಂದ ಬಹಳ ಸಹಜವಾಗಿಯೇ ಬಹಳಷ್ಟು ವ್ಯಾಧಿಗಳನ್ನು ನಿರ್ಮೂಲ ಮಾಡಬಹುದು.

ಪಶ್ಚಿಮದ ವೈದ್ಯರುಗಳು ಮಾನಸಿಕ ವ್ಯಾಧಿಗಳಿಂದ ನರಳಿರುವಂತಹ ಶೇಕಡ 95 ರಷ್ಟು ರೋಗಿಗಳನ್ನು ಸಮ್ಮೋಹನ ಸಹಾಯದಿಂದ ಚೇತರಿಸಿದ್ದಾರೆ ಹಾಗೂ ಅದಕ್ಕೆ ಯಾವುದೇ ಮದ್ದು ಅಥವಾ ಔಷಧಿಯ ಅವಶ್ಯಕತೆ ಇಲ್ಲ. ಈಕಡೆ ಯಾವುದೇ ವಿದ್ಯುತ್ ಶಾಕ್ ಗಳ ಅವಶ್ಯಕತೆ ಇಲ್ಲ.

## ಸ್ಮೃತಿನಾಶ:

ತಲೆಯಲ್ಲಿ ಗಾಯದ ಪರಿಣಾಮದಿಂದ ಮತ್ತು ಮೇಲಿನಿಂದ ಬೀಳುವುದರಿಂದ ಓರ್ವನು ತನ್ನ ಜ್ಞಾಪಕಶಕ್ತಿಯನ್ನು ಕಳೆದುಕೊಳ್ಳುವನು. ಅಂತಹ ಒಬ್ಬ ವ್ಯಕ್ತಿಯು ಕೆಲವೊಮ್ಮೆ ತನ್ನ ಹೆಸರು, ವಿಳಾಸ, ಮುಂತಾದವುಗಳನ್ನು ಮರೆಯುತ್ತಾನೆ. ಅದು ವೈದ್ಯರುಗಳಿಗೆ ಅಸಮಂಜಸವಾದ ಸಮಸ್ಯೆಗಳನ್ನು ಉಂಟುಮಾಡುತ್ತದೆ. ವೈದ್ಯಕೀಯ ವಿಜ್ಞಾನಕ್ಕೆ ಜಾರಿಹೋದ ಜ್ಞಾಪಕಶಕ್ತಿಯನ್ನು ತರಲು ಅಥವಾ ರೋಗಿಯನ್ನು ಸ್ಮೃತಿನಾಶ ಅಥವಾ ಜ್ಞಾಪಕಶಕ್ತಿಯ ಕುಂದುವಿಕೆಯನ್ನು ಹಿಂದಕ್ಕೆ ತರಲು ಯಾವುದೇ ಚಿಕಿತ್ಸೆ ಅಥವಾ ಔಷಧಿ ತಿಳಿದಿಲ್ಲ.

ಹೇಗಾದರೂ ಸಮ್ಮೋಹನವು ಒಂದು ದಾರಿಯನ್ನು ಕಂಡುಹಿಡಿದಿದೆ. ಸಮ್ಮೋಹನದ ಮಾಧ್ಯಮದ ಮೂಲಕ ವ್ಯಕ್ತಿಯ ಬಹಿರ್ಮನಸ್ಸನ್ನು ಎಚ್ಚರಿಸಲಾಗುವುದು. ಬಹಿರ್ಮನಸ್ಸೇ ಭೂತಕಾಲದ ಘಟನೆಗಳನ್ನು ಮರೆಯುವಂತಹುದು ಆದರೆ ಅಂತರ್ಮನಸ್ಸು ಯಾವಾಗಲೂ ಚುರುಕಾಗಿದ್ದು ಎಲ್ಲಾ ಕಳೆದ ಘಟನೆಗಳ ಒಂದು ಪಥದಲ್ಲಿ ದಾಖಲಿಸಿರುತ್ತದೆ.

ಈ ತರಹದ ಪರಿಸ್ಥಿತಿಯಲ್ಲಿ ಸಮ್ಮೋಹಕನು ರೋಗಿಯನ್ನು ತನ್ನ ಆತ್ಮವಿಶ್ವಾಸಕ್ಕೆ ತೆಗೆದುಕೊಂಡು ಅವನಲ್ಲಿ ಸಮ್ಮೋಹನ ನಿದ್ರೆಯನ್ನು ತರುವನು. ಅವನು ಅವನ ಅಂತರ್ಮನಸ್ಸನ್ನು ಎಚ್ಚರಿಸಿ ಅದಕ್ಕೆ ಕಳೆದ ಘಟನೆಗಳನ್ನು ಜ್ಞಾಪಿಸಿಕೊಳ್ಳುವ ಹಾಗೆ ಮಾಡುತ್ತಾನೆ. ಫಲಿತಾಂಶವಾಗಿ ಅದು ಕಳೆದ ಘಟನೆಗಳನ್ನು ಯಥಾರೀತಿ ಜ್ಞಾಪಿಸಿಕೊಳ್ಳುತ್ತದೆ. ನಂತರ ಸಂಬಂಧಪಟ್ಟ ವ್ಯಕ್ತಿಗೆ ಈ ಎಲ್ಲಾ ಕಳೆದ ಘಟನೆಗಳನ್ನು ಅವನಿಗೆ ಎಚ್ಚರಿಸಿದ ನಂತರವೂ ಜ್ಞಾಪಕದಲ್ಲಿಟ್ಟು ಕೊಳ್ಳುತ್ತಾನೆಂದು ಆಜ್ಞಾಪಿಸಲಾಗುತ್ತದೆ ಅವನು ಕಳೆದ ಘಟನೆಗಳನ್ನು ಮರೆಯಲು ಪ್ರಯತ್ನಿಸಿದರೂ ಮರೆಯಲಾಗುವುದಿಲ್ಲ.

ಈ ಹಂತದ ನಂತರ ಸಮ್ಮೋಹನವನ್ನು ಕೊನೆಗೊಳಿಸಲಾಗುತ್ತದೆ. ಅರಿವಿಗೆ ಹಿಂದಿರುಗಿದ ನಂತರ ಅವನು ಸರಿಯಾಗಿ, ತಲೆಯ ಪೆಟ್ಟಿನಿಂದ ಅಥವಾ ಬೀಳುವಿಕೆಯಿಂದ ಮರೆತುಹೋದ ಘಟನೆಗಳನ್ನೆಲ್ಲಾ ಜ್ಞಾಪಿಸಿಕೊಳ್ಳುವನು.

ಒಂದು ಘಟನೆಯು ಇನ್ನೊಂದಕ್ಕೆ ಎಡೆಮಾಡುತ್ತದೆ. ಘಟನೆಗಳು ಒಂದಕ್ಕೊಂದು ಸಂಬಂಧವಿರುತ್ತವೆ. ಹೀಗೆ ಅವನು ಕಳೆದುಹೋದ ಎಲ್ಲಾ ಘಟನೆಗಳನ್ನು ಜ್ಞಾಪಿಸಿಕೊಳ್ಳುವನು.

## ವಿದ್ಯಾಭ್ಯಾಸದಲ್ಲಿ ಸಮ್ಮೋಹನದ ಪಾತ್ರ

ವಿಜ್ಞಾನದಲ್ಲಿ ಲಾಭಾಂಶವನ್ನು ಹಾಕುವಂತಹ ಪಶ್ಚಿಮದವರು ಹೆಚ್ಚಾಗಿ ವಿದ್ಯಾಭ್ಯಾಸದಲ್ಲಿ ಸಮ್ಮೋಹನವನ್ನು ಉಪಯೋಗಿಸುತ್ತಿರುವರು ಎಂಬುದನ್ನು ತಿಳಿದುಕೊಳ್ಳಲು ಬಹಳಷ್ಟು ನಮ್ಮ ವಾಚಕರು ಸ್ವಲ್ಪಮಟ್ಟಿಗೆ ಆಶ್ಚರ್ಯಗೊಳ್ಳಬಹುದು. ಅವರು ಸಮ್ಮೋಹನದ ಸಹಾಯದಿಂದ ಕಲಿಸುತ್ತಾರೆ. ಸಮ್ಮೋಹನವು ವಿದ್ಯಾರ್ಥಿಗಳಿಗೆ ಬಹಳ ಕಷ್ಟದ ವಿಷಯಗಳನ್ನು ಎದುರಿಸುವಲ್ಲಿ ಸಹಾಯಕವಾಗುತ್ತದೆ.

ಒಬ್ಬ ನಿರ್ದಿಷ್ಟ ವಿದ್ಯಾರ್ಥಿಗೆ, ಉದಾಹರಣೆಗೆ, ಭೌತಶಾಸ್ತ್ರದಲ್ಲಿ ವಿಪರೀತವಾದ ತಿರಸ್ಕೃತವಿರುತ್ತದೆ. ಆದ್ದರಿಂದ ಅವನಿಗೆ ಆ ವಿಷಯವು ಅನಾವಶ್ಯಕವಾಗಿ ಕಷ್ಟವೆನಿಸುತ್ತದೆ. ಆ ವಿದ್ಯಾರ್ಥಿಯು ಭೌತಶಾಸ್ತ್ರವನ್ನು ಸರಿಯಾದ ರೀತಿಯಲ್ಲಿ ಕೃಷಿಮಾಡಬೇಕೆಂದು ನಿಶ್ಚಯಿಸುವುದಕ್ಕೋಸ್ಕರ ಸಮ್ಮೋಹಕನು ಅವನನ್ನು ಸಮ್ಮೋಹನಾ ನಿದ್ರೆಗೆ ತರುವನು. ಈ ನಿದ್ರೆಯ ಸಮಯದಲ್ಲಿ ಆ ವಿದ್ಯಾರ್ಥಿಯನ್ನು ಭೌತಶಾಸ್ತ್ರದ ಕಷ್ಟಕರವಾದ ಪ್ರಶ್ನೆಗಳ ಮತ್ತು ಉತ್ತರಗಳಿಗೆ ಬಹಿರಂಗ ಪಡಿಸಲಾಗುತ್ತದೆ. ಅವನಿಗೆ ಈಗಾಗಲೇ ವಿಮರ್ಶಿಸಿರುವಂತಹುದೆಲ್ಲವನ್ನೂ ಜ್ಞಾಪಕದಲ್ಲಿ ಉಳಿಸಿಕೊಳ್ಳಲು ಆಜ್ಞಾಪಿಸಲಾಗುತ್ತದೆ. ಅವನು ಆ ವಿಮರ್ಶಣೆಯನ್ನು ಎಂದೂ ಮರೆಯುವುದಿಲ್ಲವೆಂದು ಅವನಿಗೆ ಹೇಳಲಾಗುತ್ತದೆ.

ಅವನಿಗೆ ಭೌತಶಾಸ್ತ್ರವು ತನ್ನಲ್ಲಿಯೇ ಒಂದು ಸರಳ ಹಾಗೂ ಚಿತ್ತಾಕರ್ಷಕದ ವಿಷಯವಾಗಿದೆಯೆಂದು ಆಜ್ಞಾಪಿಸಲಾಗುತ್ತದೆ. ಅವನು ಎಚ್ಚೆತ್ತುಕೊಂಡಾಗ ಈ ಎಲ್ಲಾ ಪ್ರಶ್ನೆ ಮತ್ತು ಉತ್ತರಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುತ್ತಾನೆ ಮತ್ತು ತಿರಸ್ಕೃತ ಹೋಗುತ್ತದೆ.

ಭೌತಶಾಸ್ತ್ರ ಒಂದೇ ಅಲ್ಲ, ಸಮ್ಮೋಹನಾ ನಿದ್ರೆಯಲ್ಲಿ ಬೇರೆಲ್ಲಾ ವಿಷಯಗಳನ್ನು ಕಲಿಸಲಾಗುವುದು ಏಕೆಂದರೆ ವಿದ್ಯಾರ್ಥಿಯು ಯಾವುದೇ ವಿಷಯದಲ್ಲಿ ಕೃಷನಾಗಿರಬಾರದು.

ಬಹಳ ದೇಶಗಳಲ್ಲಿ ಹಲವಾರು ವಿಷಯಗಳನ್ನು ರೆಕಾರ್ಡ್ ಅಥವಾ ಕ್ಯಾಸೆಟ್ಟುಗಳ ಮೂಲಕ ಕಲಿಸಲಾಗುವುದು. ಎಲ್ಲಾ ಸಮ್ಮೋಹಕರೂ ಎಲ್ಲಾ ವಿಷಯಗಳಲ್ಲಿ ಪಾರಂಗತರಿರಬೇಕಿಲ್ಲ. ಆದ್ದರಿಂದ ಪ್ರಶ್ನೆಗಳನ್ನು ಮತ್ತು ಉತ್ತರಗಳನ್ನು ರೆಕಾರ್ಡ್‌ಮಾಡಲಾಗುತ್ತದೆ.

ಈ ಹಂತದಲ್ಲಿ ವಿದ್ಯಾರ್ಥಿಗೆ ಅವನಿಗೆ ಹೇಳಿದುದನ್ನೆಲ್ಲಾ ಜ್ಞಾಪಕದಲ್ಲಿಟ್ಟು ಕೊಳ್ಳಬೇಕೆಂದು ಆಜ್ಞಾಪಿಸಲಾಗುವುದು, ಅದರಲ್ಲಿಯೂ ಅವನು ಎಚ್ಚೆತ್ತುಕೊಂಡಾಗ. ಆಗ ಮೂಲಗ್ರಂಥಕ್ಕೆ ನೇರವಾದ ಸಂಬಂಧವಿರುವ ಪಾಠಗಳನ್ನು ಕೊಡುವಂತಹ ರೆಕಾರ್ಡ್ ಅಥವಾ ಕ್ಯಾಸೆಟ್‌ಗಳನ್ನು ಹಾಕಲಾಗುವುದು. ಮಾಧ್ಯಮನ ಅಂತರ್ಮನಸ್ಸು ಈ ಅನುಕ್ರಮಣಿಕೆಯನ್ನು ಗ್ರಹಿಸಿಕೊಳ್ಳುತ್ತದೆ ಮತ್ತು ಅವನು ಎಚ್ಚೆತ್ತುಕೊಂಡಾಗ, ಅವನು ತನ್ನ ಪಾಠಗಳನ್ನು ಇದ್ದವಾಗೆಯೇ ಜ್ಞಾಪಕದಲ್ಲಿಟ್ಟುಕೊಳ್ಳುತ್ತಾನೆ.

ಆಗಾಗ ಅದನ್ನು ಭದ್ರತೆ ಮತ್ತು ರಕ್ಷಣೆಯ ಕಾರ್ಯಗಳಿಗೆ ಅವಲಂಬಿಸಲಾಗುತ್ತದೆ. ಮಿಲಿಟರಿ ಧುರೀಣರು ಸಮ್ಮೋಹನ ನಿದ್ರೆಯಲ್ಲಿ ಕಲಿಸಿರುವಂತಹ ಪಾಠಗಳು ಸ್ವಲ್ಪಮಟ್ಟಿಗೆ ಸ್ಥಿರವಾಗಿರುತ್ತವೆ ಹಾಗೂ ಓರ್ವನು, ನಿಯೋಜಿಸಿರುವಂತಹ ಪಾಠಗಳ ದೊಡ್ಡ ಜ್ಞಾನವನ್ನು ಸಾಧ್ಯವಾದಷ್ಟು ಕಡಿಮೆ ಸಮಯದಲ್ಲಿ ಒದಗಿಸಬಹುದೆಂದು ನಂಬುತ್ತಾರೆ. ಅವರು, ಒಂದು ವರ್ಷದಲ್ಲಿ ಕಲಿಸಬೇಕೆಂದು ರೂಪಿಸಿರುವ ಅಧ್ಯಯನ ಶ್ರೇಣಿಯನ್ನು ಸಮ್ಮೋಹನ ಕಲೆಯ ಲಾಭವನ್ನು ತೆಗೆದುಕೊಂಡು ಕೇವಲ ಮೂರು ತಿಂಗಳಲ್ಲಿ ತುರುಕಬಹುದೆಂದು ವಿವೇಚಿಸುತ್ತಾರೆ. ಚೀನೀಯರ ಜೊತೆ ಹೋರಾಡಲು ಸಮುಚಿತ್ತದಿಂದಿದ್ದ ಸೈನಿಕರನ್ನು ಕಡಿಮೆ ಸಮಯವಾದ ಕೇವಲ ಮೂರುತಿಂಗಳಲ್ಲಿ ಯುದ್ಧದ ಜ್ಞಾನದೊಂದಿಗೆ ಅಣಿಮಾಡಲಾಗಿತ್ತು. ಸಾಧಾರಣವಾಗಿ ಅದೇ ವಿಷಯವನ್ನು ಕಲಿಸಲು ಒಂದು ವರ್ಷಬೇಕಾಗುತ್ತದೆ.

ದಿನಾಂಕ 24, ಅಕ್ಟೋಬರ್ 1949 *ಲಾಸ್ ಎಂಜಲೀಸ್ ಎಕ್ಸ್ ಪ್ರೆಸ್*‌ನಲ್ಲಿ ಪ್ರಕಾಶಗೊಂಡ ಸಂದೇಶದ ಅಂಶವು ಮುಂದೆ ಈ ಅಭಿಪ್ರಾಯವನ್ನು ದೃಢಪಡಿಸುತ್ತದೆ.

ಯುದ್ಧದ ಸಮಯದಲ್ಲಿ ಪ್ರಾಧ್ಯಾಪಕರುಗಳು ಬಹಿರ್ಮನಸ್ಸಿಗಿಂತ ಅಂತರ್ಮನಸ್ಸಿನ ಮೂಲಕ ಪಾಠಗಳನ್ನು ಕಲಿಸುವುದು ಸುಲಭವಾಗಿದೆಯೆಂದು ನೋಡಲಾರಂಭಿಸಿದರು. ಸಮ್ಮೋಹನ ಕಲಾಕೌಶಲ್ಯವನ್ನು ಉಪಯೋಗಿಸಿ ಒಂದು ಸೈನ್ಯವನ್ನು ಪ್ರಪಂಚದ ದೊಡ್ಡ ಸೈನ್ಯವನ್ನು ನಿಗ್ರಹಿಸಲು ಕೇವಲ ಮೂರುತಿಂಗಳಲ್ಲಿ ಅಣಿಮಾಡಬಹುದು.

ಪ್ರಖ್ಯಾತ ಅಮೆರಿಕ ಮಿಲಿಟರಿ ಧುರೀಣನಾದ ಡಾ.ವಾಕರ್ ರವರು ಬಹಿರ್ಮನಸ್ಸು ಸಂಪೂರ್ಣ ಮನಸ್ಸಿನ ಒಂದರ ಒಂಬತ್ತನೆಯ ಭಾಗವಾಗುತ್ತದೆಂದು ದೃಢಪಡಿಸುತ್ತಾರೆ. ಆದರೂ ಈ ಸಣ್ಣ ಭಾಗವು ಸಂಪೂರ್ಣ ವಿದ್ಯಾಭ್ಯಾಸದ ತಿವಿತವನ್ನು ತೆಗೆದುಕೊಳ್ಳಬೇಕು. ಬದಲಾಗಿ ವಿದ್ಯಾಭ್ಯಾಸವನ್ನು ಅಂತರ್ಮನಸ್ಸಿಗೆ ತಿಳಿಸಿದರೆ ಅದು ಬಹಳ ಹೆಚ್ಚು ಸುಲಭವಾಗಿ ಗ್ರಹಿಸಿಕೊಳ್ಳುತ್ತದೆ ಮತ್ತು ಹಾದಿಯಲ್ಲಿ ಯಾವುದೇ ಅಡಚಣೆಯಿರುವುದಿಲ್ಲ.

ಮುಂದೆ ಡಾ.ವಾಕರ್‌ರವರು, ನಾವು ಹೊಸ ಭಾಷೆಯನ್ನು ಬಹಳ ಕಡಿಮೆಸಾಧ್ಯವಾದ ಸಮಯದಲ್ಲಿ ಸಾಧ್ಯವಾದ ಉತ್ತಮರೀತಿಯಲ್ಲಿ ಕಲಿಯಬಹುದೆಂದು ಪ್ರತಿಪಾದಿಸಿದರು. ಬಹಿರ್ಮನಸ್ಸಿಗೆ ಸೀಮಿತವಾದ ಭಾಷೆಯ ಕಲಿಕೆಯು ಆಗಾಗ ವ್ಯರ್ಥವಾದ ವ್ಯಾಯಾಮವೆಂದು ಸಾಬೀತಾಗಿದೆ.

ವಿದೇಶಗಳಲ್ಲಿ ಸೈನಿಕ ದಳಗಳಿಗೆ ವಿದೇಶ ಭಾಷೆಯನ್ನು ಕಲಿಸುವುದನ್ನು ಬಹಳವಾಗಿ ಸಮ್ಮೋಹನದ ಕಲೆಯ ಮೂಲಕವೇ ಪೂರ್ಣಮಾಡಲಾಗಿದೆ. ಕಲಿಯುವವರನ್ನು ಸಮ್ಮೋಹನ ನಿದ್ರೆಗೆ ಹಾಕಿ ಒಳ್ಳೆಂಪ ಮಟ್ಟದ ಪಾಠಗಳ ಕ್ಯಾಸೆಟ್ ಅಥವಾ ರೆಕಾರ್ಡ್‌ಗಳನ್ನು ಅವರ ಕಿವಿಯ ಸಮೀಪದಲ್ಲಿ ಹಾಕುತ್ತಾರೆ. ಅಂತರ್ಮನಸ್ಸು ಈ ಪಾಠಗಳನ್ನು ಯಾವುದೇ ಪರಿಶ್ರಮವಿಲ್ಲದೆ ಗ್ರಹಿಸಿಕೊಳ್ಳುತ್ತದೆ.

ಈ ಆಧುನಿಕ ಪ್ರಪಂಚದಲ್ಲಿ ಸಮಯದ ಮೇಲೆ ಪ್ರಚಂಡವಾದ ಒತ್ತಡವಿದೆ. ಆದ್ದರಿಂದ ನಾವು ಸಮ್ಮೋಹನ ಕಲಾಕೌಶಲ್ಯಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡರೆ ಬಹಳವೇ ಅಸಾಧ್ಯವಾದ ಕಾರ್ಯಗಳನ್ನು ಹೆಚ್ಚು ಪರಿಶ್ರಮವಿಲ್ಲದೆ ಸಾಧಿಸಬಹುದು. ವಿದ್ಯಾಭ್ಯಾಸದಲ್ಲಿ ಇದು ಒಂದು ವರವಾಗಿ ಸಾಬೀತಾಗಿದೆ.

**ಶಸ್ತ್ರ ಚಿಕಿತ್ಸೆಗಳು.**

ಸಮ್ಮೋಹನವು ಶಸ್ತ್ರಚಿಕಿತ್ಸೆಗಳ ಗೃಹಗಳಲ್ಲಿ[1] ಎನೆಸ್ಥೀಸಿಯಾಕ್ಕೆ(ಸ್ಪರ್ಶಜ್ಞಾನ ಶೂನ್ಯತೆ) ಪರಿಣಾಮಕಾರಿಯಾದ ಪ್ರತಿನಿಧಿಯಾಗಿ ಉಪಯೋಗಿಸಲ್ಪಟ್ಟಿದೆ. ಈಗ ಹೆಚ್ಚಾಗಿ ರೋಗಿಯನ್ನು ಎನೆಸ್ಥೀಸಿಯಾಕ್ಕೆ ಒಳಪಡಿಸದೆ ಸಮ್ಮೋಹನ ನಿದ್ರೆಗೆ ಕಳುಹಿಸಬಹುದು. ಕೆಲವು ಅಂಗಗಳ ಸಂಬಂಧದಲ್ಲಿ ಪ್ರದೇಶ ಎನೆಸ್ಥೀಸಿಯಾಕ್ಕೆ ಹೋಗುವುದು ಅನಾವಶ್ಯಕವಾಗಿ, ಅದು ಸಮ್ಮೋಹನದಿಂದ ನಡೆಸಲ್ಪಟ್ಟಿದೆ.

**ಕ್ಷಯರೋಗದ ಮೇಲೆ ಪರಿಣಾಮ**

ನಾವು ನಮ್ಮ ಸ್ವಂತ ವೃದ್ಧಿಯಾಗಿರುವ ನಿರೋಧ ಶಕ್ತಿಯನ್ನು ಕಳೆದುಕೊಂಡಾಗ ಮಾತ್ರ ನಮ್ಮಲ್ಲಿ ರೋಗದ ಮೇಲುಗೈಯಾಗುವುದು. ಹಾಗೆಯೇ ಒಬ್ಬ ನಿರ್ದಿಷ್ಟರೋಗಿಯು ಅಸ್ವಸ್ಥನಾದಾಗ ಮತ್ತು ನಂತರದಲ್ಲಿ ಅವನು ಆ ವ್ಯಾಧಿಯ ಮೇಲೆ ಹತೋಟಿಯನ್ನು ಪಡೆಯದಿದ್ದರೆ, ಅವನು ಆತ್ಮವಿಶ್ವಾಸವನ್ನು ಪಡೆದುಕೊಳ್ಳುತ್ತಾನೆ.

ಈಗ, ಸಮ್ಮೋಹನದ ಸಹಾಯದಿಂದ ಆತ್ಮವಿಶ್ವಾಸವನ್ನು ಬಲಪಡಿಸುವುದು ಬಹಳ ಸುಲಭದ ಕೆಲಸವು, ಅವನಿಗೆ ವ್ಯಾಧಿಯನ್ನು ಹೊಡೆದೋಡಿಸುವ ನಿರೋಧಶಕ್ತಿಯನ್ನೂ ಕೊಡಬಹುದು. ಹಲವಾರು ಭಾರತೀಯ ಸಮ್ಮೋಹಕರು ಕ್ಷಯರೋಗದಿಂದ ನರಳುತ್ತಿದ್ದ ವ್ಯಕ್ತಿಗಳ ಮೇಲೆ ಪ್ರಯೋಗಗಳನ್ನು ನಡೆಸಿದರು. ಹೇಗಾದರೂ, ರೋಗಿಗಳು ಹೇಳಿದ ಔಷಧಿಗಳನ್ನು ಸೇವಿಸುವುದನ್ನು ಮುಂದುವರಿಸಿದರು. ಸಮ್ಮೋಹನ ಚಿಕಿತ್ಸೆಯನ್ನು ಕೊಟ್ಟಂತಹ ರೋಗಿಯು ಸ್ವಲ್ಪವೇ ಸಮಯದಲ್ಲಿ ಸಂಪೂರ್ಣವಾಗಿ ಗುಣಹೊಂದಿದುದನ್ನು ನೋಡಿ ಅವರು ಆಶ್ಚರ್ಯಗೊಂಡರು.

1. ವೈದ್ಯಕೀಯ ವಿಜ್ಞಾನಿಗಳ ಪ್ರಕಾರ ಎನೆಸ್ಥೀಸಿಯಾ ಹೃದಯವನ್ನು ದುರ್ಬಲ ಗೊಳಿಸುತ್ತದೆ. ಹೃದಯದ ಶಸ್ತ್ರ ಚಿಕಿತ್ಸೆಗೆ ಒಳಪಟ್ಟಿರುವಂತಹ ರೋಗಿಗಳು ಶಸ್ತ್ರಚಿಕಿತ್ಸೆಯ ಸಮಯದಲ್ಲಿ ಎನೆಸ್ಥೀಸಿಯಾದ ಒತ್ತಡದಿಂದ ಕೆಲವೊಮ್ಮೆ ಮೃತರಾಗಿದ್ದಾರೆ.

ಸಾಧಾರಣವಾಗಿ, ಒಬ್ಬ ರೋಗಿಯು ಈ ವ್ಯಾಧಿಯಿಂದ ಗುಣಹೊಂದಬೇಕಾದರೆ ಸರಿಯಾಗಿ ಒಂದು ವರ್ಷ ತೆಗೆದುಕೊಳ್ಳುತ್ತಾನೆ. ಹೇಗಾದರೂ ಸಮ್ಮೋಹನವು ಅವನನ್ನು ನಿರೋಗಿಯನ್ನಾಗಿ ಮಾಡಲು 4 ರಿಂದ 6 ತಿಂಗಳಕಾಲವನ್ನು ತೆಗೆದುಕೊಳ್ಳುತ್ತದೆ.

## ಚರ್ಮರೋಗದಲ್ಲಿ ಪಾತ್ರ

ವೈದ್ಯಕೀಯ ಪ್ರವೀಣರು ಚರ್ಮ ರೋಗಗಳು ಮುಖ್ಯವಾಗಿ ಮನುಷ್ಯರ ಮಾನಸಿಕ ಭಯಗಳಿಂದ ಬರುತ್ತವೆಂದು ತಿಳಿಯುತ್ತಾರೆ, ಕೇವಲ ಮಾನಸಿಕ ಅವಸ್ಥೆಯೇ ಈ ರೋಗಕ್ಕೆ ಪ್ರಮುಖವಾದ ಕಾರಣವು, ಅವನು ಅವನ ದೇಹದ ಒಂದು ಸಣ್ಣ ಭಾಗವು ಈ ರೋಗವನ್ನು ವೃದ್ಧಿಸಿಕೊಳ್ಳುತ್ತಾ ಇದೆ ಎಂದು ಕಂಡಾಗ ಅವನು ಘೋರವಾಗಿ ಭಯಬೀಳುತ್ತಾನೆ. ಆ ಭಯವೇ ಅದನ್ನು ದೇಹದ ಇತರೆ ಭಾಗಗಳಿಗೆಲ್ಲಾ ವ್ಯಾಪಿಸುತ್ತದೆ.

ಸಮ್ಮೋಹಕರು ಇದಕ್ಕೆ ಒಂದು ಪರಿಹಾರವನ್ನು ಕಂಡುಹಿಡಿದಿದ್ದಾರೆ. ಅಂತಹ ರೋಗಿಗಳನ್ನು ಅವರು ಸಮ್ಮೋಹನ ನಿದ್ರೆಗೆ ತಂದು ಅವನು ಆ ಚರ್ಮರೋಗದಿಂದ ಅಷ್ಟೊಂದು ಬಳಲುತ್ತಿಲ್ಲವೆಂದು ಹಾಗೂ ಅವನು ಒಂದು ನಿರ್ದಿಷ್ಟ ಔಷಧಿಯ ಬಲದಿಂದ ಸಂಪೂರ್ಣವಾಗಿ ಗುಣಹೊಂದುವನು ಎಂದು ಆಜ್ಞಾಪಿಸುತ್ತಾರೆ. ಅಲ್ಲದೆ ಅವರು ಈ ರೋಗವು ಮುಂದೆ ವ್ಯಾಪಿಸಿಕೊಳ್ಳುವುದಿಲ್ಲ ಮತ್ತು ಅವನು ಅದರ ಬಗ್ಗೆ ಹೆದರಬೇಕಾಗಿಲ್ಲವೆಂದು ಆಜ್ಞಾಪಿಸುತ್ತಾರೆ.

ಸಮ್ಮೋಹನ ನಿದ್ರೆಯನ್ನು ಕೊನೆಗೊಳಿಸಿದ ನಂತರ ರೋಗಿಯು ತನ್ನ ವ್ಯಾಕುಲತೆಯಿಂದ ಮುಕ್ತಿಹೊಂದಿ ಮಾನಸಿಕವಾಗಿ ಶಕ್ತಿಶಾಲಿಯಾದ ಅನುಭವವನ್ನು ಪಡೆಯುವುದು ಖಚಿತ.

ಹೀಗೆ ಸಮ್ಮೋಹನವು ಚರ್ಮರೋಗದ ನಿರ್ಮೂಲನೆಯಲ್ಲಿ ಬಹಳಷ್ಟು ನೆರವಾಗುತ್ತದೆ.

## ಜಠರದ ತೊಂದರೆಗಳ ಮೇಲೆ ಪರಿಣಾಮ

ಹೊಟ್ಟೆಯ ತೊಂದರೆಗಳು ಮಾನಸಿಕ ಬಿಗುವುತನ ಮತ್ತು ವ್ಯಸನದಿಂದ ಚಿಗುರುತ್ತವೆ ಎನ್ನುವುದು ನಿರ್ವಿವಾದ. ಶೇಕಡ 80 ರಷ್ಟು ಅಂತಹ ರೋಗಿಗಳು ಮಾನಸಿಕ ವ್ಯಾಕುಲತೆಯಿಂದಲೇ ತೊಂದರೆಗೀಡಾಗಿದ್ದಾರೆ. ಯಾವಾಗಲೂ ತಮ್ಮ ವ್ಯವಹಾರ ಮತ್ತು ವ್ಯಾಪಾರಗಳನ್ನು ವೃದ್ಧಿಸಿಕೊಳ್ಳಲು ಪೇಚಾಟದಿಂದಿರುವ ಜನರೂ ಸಹ ಉದರದ ತೊಂದರೆಗಳ ನಿಕೃಷ್ಟ ರೋಗಿಗಳು.

ಸಮ್ಮೋಹನವು ಹೊಟ್ಟೆಯ ರೋಗಗಳನ್ನು ನಿರ್ಮೂಲನ ಮಾಡುವಲ್ಲಿ ಬಹಳ ಪರಿಣಾಮಕಾರಿಯೆಂದು ಸಾಬೀತಾಗಿದೆ. ಏಕೆಂದರೆ ಸಮ್ಮೋಹನವು ಅವನ ಮನಸ್ಸಿಗೆ ಒಂದು ನಿರ್ದಿಷ್ಟ ಶಕ್ತಿಯನ್ನು ಕೊಡುತ್ತದೆ ಮತ್ತು ಸಮ್ಮೋಹನದ ಮೂಲಕ ಅವನಿಗೆ ಅದರ ಬಗ್ಗೆ ಏತಕ್ಕಾಗಿ ಪೇಚಾಡಬೇಕೆಂದೂ ಅದರಿಂದ ಯಾವ ಉಪಯೋಗವಿಲ್ಲವೆಂದೂ ಆಜ್ಞಾಪಿಸಬಹುದು. ಒಂದು ನಿರ್ದಿಷ್ಟ ವ್ಯಾಕುಲತೆಯಿಂದ ಅವನು ಗಾಬರಿಯಾಗಿದ್ದಾನೆ, ಆದರೆ ಅದು ಅವನನ್ನು ಯಾವುದೇ ರೀತಿಯಲ್ಲಿ ತೊಂದರೆಕೊಡುವುದಿಲ್ಲ.

ನಂತರ ಅವನಿಗೆ ತಾನು ವಾಸ್ತವದಲ್ಲಿ ಯಾವುದೇ ಜಠರದ ತೊಂದರೆಯಿಂದ ನರಳುತ್ತಿಲ್ಲ ಎಂದು ಆಜ್ಞಾಪಿಸಬಹುದು. ಈಕಡೆ ಅವನಿಗೆ ಮಲಬದ್ಧತೆ ಅಥವಾ ಇನ್ನಾವ ತೊಂದರೆಯೂ ಇಲ್ಲ. ಅವನಿಗೆ ತಾನು ಎದ್ದನಂತರ ತನಗೆ ಆರೋಗ್ಯದ ಅರಿವಾಗುತ್ತವೆ ಹಾಗೂ ಮಾನಸಿಕ ಒತ್ತಡದಿಂದ ಮತ್ತು ಪ್ರಯಾಸದಿಂದ ಬಿಡುಗಡೆಯಾಗುತ್ತದೆಂದು ಹೇಳಬಹುದು.

## ನೋವುಗಳ ಮತ್ತು ವೇದನೆಗಳ ನಿರ್ಮೂಲನೆಯಲ್ಲಿ ಪಾತ್ರ

ದೇಹದ ಬಹಳಷ್ಟು ನೋವುಗಳನ್ನು ಮತ್ತು ವೇದನೆಗಳನ್ನು ಸಮ್ಮೋಹನದ ಸಹಾಯದಿಂದ ನಿರ್ಮೂಲ ಮಾಡಬಹುದು. ಆಗಾಗ ನಾವು ಹೊಟ್ಟೆನೋವಿನಿಂದ ಚಡಪಡಿಸುತ್ತಿರುವ ಮತ್ತು ಅಳುತ್ತಿರುವ ರೋಗಿಗಳನ್ನು ನೋಡುತ್ತೇವೆ. ಎಲ್ಲಾ ತರಹದ ಔಷಧಿಗಳನ್ನು ತೆಗೆದುಕೊಂಡರೂ ರೋಗಿಗೆ ಯಾವುದೇ ಸಡಿಲತೆ ಸಿಗುವುದಿಲ್ಲ.

ದೇಹದ ಯಾವುದೇ ಬಗ್ಗದಿರುವ ನೋವು ಅಥವಾ ವೇದನೆಯ ಚಿಕಿತ್ಸೆ ಈಗ ಸಮ್ಮೋಹನದ ಮೂಲಕ ಸಾಧ್ಯವಿದೆ. ಸಮ್ಮೋಹಕನು ರೋಗಿಯನ್ನು ಸಮ್ಮೋಹನ ನಿದ್ರೆಗೆ ತಂದು ಅವನು ಸಂಪೂರ್ಣವಾಗಿ ಆರೋಗ್ಯದಿಂದ್ದಾನೆಂದು ಆಜ್ಞಾಪಿಸುತ್ತಾನೆ, ಹಾಗೆ ಅವನಿಗೆ ಯಾವುದೇ ತೊಂದರೆ ಇಲ್ಲ ಮತ್ತು ಅವನು ಸಮ್ಮೋಹನ ನಿದ್ರೆಯಿಂದ ಎಚ್ಚೆತ್ತುಕೊಂಡಾಗ ಖಚಿತವಾಗಿ ನೋವಿನ ಬಗ್ಗೆ ಎಲ್ಲವನ್ನೂ ಮರೆಯುತ್ತಾನೆ.

ಬೇಗನೇ ಸಮ್ಮೋಹನ ನಿದ್ರೆಯನ್ನು ಕೊನೆಗೊಳಿಸಲಾಗುತ್ತದೆ. ಎಚ್ಚರಗೊಂಡಾಗ ಅವನಿಗೆ ಯಾವುದೇ ತರಹದ ಅವಿಶ್ರಾಂತಿ ಅಥವಾ ಗಾಬರಿಯ ಅನುಭವವಾಗುವುದಿಲ್ಲ. ಅವನಿಗೆ ಬಹಳ ಆರೋಗ್ಯವೆನಿಸುತ್ತದೆ.

ಅಂತಹ ಬಹಳ ಪ್ರಯೋಗಗಳನ್ನು ವಿದೇಶಗಳಲ್ಲಿ ನಡೆಸಲಾಗಿತ್ತು. ಅವರು ರೋಗಿಗಳಿಗೆ ನಿಜವಾದ ಸಡಿಲತೆಯನ್ನು ಕೊಡುವ ಬಹಳಷ್ಟು ಈಚೆಯ ಕಲೆಗಳನ್ನು ರೂಪಿಸಿದ್ದಾರೆ. ಭಾರತದಲ್ಲಿ ಅಂತಹ ಚಿಕಿತ್ಸೆಯ ಪದ್ಧತಿಯು ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ. ಆದರೆ ಬೇರೆ ದೇಶಗಳಲ್ಲಿ ಅಂತಹ ಕೆಲಸಗಳಿಗೆ ಮತ್ತು ವೈದ್ಯಕೀಯ ಚಿಕಿತ್ಸೆಗಳ ಕ್ಷೇತ್ರಗಳಲ್ಲಿಯೂ ಸಹ ಹೆಚ್ಚಾಗಿ ಸಮ್ಮೋಹನವನ್ನು ಅವಲಂಭಿಸುತ್ತಾರೆ.

## ವಿಚಾರಗಳನ್ನು ದೃಢಮಾಡುವಲ್ಲಿ ಪಾತ್ರ

ಈ ಆಧುನಿಕ ಸಮಯಗಳಲ್ಲಿ ಏನು ಮುಖ್ಯವಾದುದೆಂದರೆ ಓರ್ವನು ತನ್ನ ವಿಚಾರಗಳಲ್ಲಿ ದೃಢವಾಗಿದ್ದಾಗ ಮತ್ತು ಯಾವಾಗ ಓರ್ವನು ಶ್ರೀಮಂತವಾದ ಪ್ರತಿನಾದಿತವಾದ ವ್ಯಕ್ತಿತ್ವದಿಂದ ಸಂಪನ್ನನಾಗಿದ್ದಾಗ ಮಾತ್ರ ಯಶಸ್ವಿಯಾಗಬಹುದು.

ಓರ್ವನು ಈ ಎರಡೂ ಕುಶಲತೆಗಳನ್ನು ಸಮ್ಮೋಹನದ ಮಾಧ್ಯಮದಿಂದ ಪಡೆದುಕೊಳ್ಳಬಹುದು. ಸಮ್ಮೋಹನದ ಆಧಾರದ ಅಂಗೀಕಾರಗಳಲ್ಲಿ ಒಂದೆಂದರೆ ಅದು ಕೇವಲ ಮನುಷ್ಯನ ದೇಹದಲ್ಲಿ ಒಂದು ಮಟ್ಟದ ಆಕರ್ಷಣ ಶಕ್ತಿ ಇದ್ದಾಗ ಮಾತ್ರ ಕಾರ್ಯನಡೆಸುವುದು. ನಿಮ್ಮ ದೇಹದಲ್ಲಿ ಸಹಜವಾಗಿರುವ ಆಕರ್ಷಣಾ ಶಕ್ತಿಯನ್ನು ಬಲಪಡಿಸುವಲ್ಲಿ ಅದು ಸಹಾಯಕವಾದರೆ, ನಿಮ್ಮ ವ್ಯಕ್ತಿತ್ವವು ಬಹಳ ಪ್ರಭಾವೋತ್ಪಾದಕ ಮತ್ತು ದಿವ್ಯವಾಗಿ ಗೋಚರಕ್ಕೆ ಬರಬೇಕು. ನಿಜವಾಗಿಯೂ ಸಮ್ಮೋಹನವನ್ನು ವ್ಯಕ್ತಿತ್ವದ ಕಲ್ಲಿನಂತಹ ಅಡಿಪಾಯವೆಂದು ತಿಳಿಯಲಾಗಿದೆ.

ಅಲ್ಲದೆ, ನಾವು ಬೇರೆಯವರನ್ನು ಸಮ್ಮೋಹನದ ಮಾಧ್ಯಮದ ಮೂಲಕ ಪ್ರಭಾವಿತಗೊಳಿಸುವಲ್ಲಿ ಯಶಸ್ವಿಯಾದರೆ, ನಾವು ನಮ್ಮ ಆತ್ಮವಿಶ್ವಾಸವನ್ನು ಗಳಿಸುತ್ತೇವೆ ಅದು ನಮ್ಮ ವಿಚಾರಗಳನ್ನು ದೃಢ, ಇತ್ಯರ್ಥ ಹಾಗೂ ಪಕ್ವ ಮಾಡುತ್ತದೆ, ಪುನಃ ಅವು ನಮ್ಮ ಸ್ವಂತ ಜೀವನ ಶೈಲಿಯ ಮೇಲೆ ವಿಶಾಲವಾದ ಪರಿಣಾಮವನ್ನುಂಟುಮಾಡುತ್ತದೆ ಹಾಗೂ ನಾವು ಒಂದು ಯಶಸ್ವಿಯಿಂದ ಇನ್ನೊಂದಕ್ಕೆ ಚುರುಕಾಗಿ ಮುನ್ನಡೆಯುತ್ತೇವೆ.

## ಜ್ಞಾಪಕಶಕ್ತಿಯನ್ನು ಬಲಪಡಿಸುವಲ್ಲಿ ಪಾತ್ರ

ಕಳೆದ ಸಾಲುಗಳಲ್ಲಿ ನಾವು ಈಗಾಗಲೇ ಸಮ್ಮೋಹನದ ಸಹಾಯದಿಂದ ನಮ್ಮ ನೆನಪನ್ನು ಬಲಪಡಿಸಿಕೊಂಡು

ವೃದ್ಧಿಸಿಕೊಳ್ಳಬಹುದೆಂದು ಚರ್ಚಿಸಿದ್ದೇವೆ. ಅದು ಕೇವಲ ನಮ್ಮ ಮೆದುಳು ಉಪಯೋಗವಿಲ್ಲದ ವಿಚಾರಗಳಿಗೆ ಎಡೆಮಾಡದಿದ್ದಾಗ ನಾವು ನಮ್ಮ ನೆನಪನ್ನು ಬಲಪಡಿಸಿ ವೃದ್ಧಿಸಿಕೊಳ್ಳುವುದರ ಬಗ್ಗೆ ವಿಚಾರಮಾಡಬಹುದು.

ಏಕೆಂದರೆ ಮೆದುಳಿಗೆ ಒಂದು ನಿರ್ದಿಷ್ಟ ಸಾಮರ್ಥ್ಯವಿರುತ್ತದೆ. ಮೆದುಳಿನಲ್ಲಿ ಅನಾವಶ್ಯಕ ವಿಚಾರಗಳ ಗುಂಪು ಬಂದರೆ ಅವಶ್ಯಕ ಯೋಚನೆಗಳ ಗುಂಪು ಹೊರಹೋಗುತ್ತದೆ.

ನಾವು ಈಗಾಗಲೇ ಯೋಚನೆರಹಿತ ಮನಸ್ಸಿನ ಬಗ್ಗೆಯ ವಿಚಾರವನ್ನು ಸ್ವಲ್ಪಮಟ್ಟಿಗೆ ಚರ್ಚಿಸಿದ್ದೇವೆ. ನಾವು ನಮ್ಮ ಮನಸ್ಸನ್ನು ಹೇಗೆ ವಿಚಾರರಹಿತವಾಗಿ ಮಾಡಿಕೊಳ್ಳಬೇಕೆಂದು ಸಹ ನೋಡಿದ್ದೇವೆ. ಈ ಪ್ರಯೋಗದ ಪ್ರಮುಖ ಲಾಭವೆಂದರೆ ನಾವು ಈಗಿನಿಂದ ನಮ್ಮ ಮನಸ್ಸಿನಲ್ಲಿ ಸುರಕ್ಷಿತವಾಗಿಡಬೇಕೆಂದಿರುವ ಯೋಚನೆಗಳನ್ನೇ ಸುರಕ್ಷಿತವಾಗಿಡಬಹುದು. ನಾವು ಹಾಗೆ ಒಮ್ಮೆ ಮಾಡಿದರೆ, ಅರ್ಥವಿಲ್ಲದ ಯೋಚನೆಗಳಿಗೆ ನಮ್ಮ ಮನಸ್ಸಿನಲ್ಲಿ ಸ್ಥಳವಿರುವುದಿಲ್ಲವೆನ್ನುವುದು ಸ್ಪಷ್ಟವಾಗಿದೆ.

ಹೀಗೆ, ವಿಚಾರರಹಿತ ಮನಸ್ಸನ್ನು ಪಡೆದುಕೊಳ್ಳುವುದರಿಂದ ನಾವು ಕೇವಲ ಬೇಕಾಗಿರುವಂತಹ ಮತ್ತು ವಿಧೇಯವಾಗಿರುವಂತಹ ವಿಚಾರಗಳಿಗೆ ಎಡೆಮಾಡಬಹುದು.

## ಏಕಾಗ್ರತೆಯಲ್ಲಿ ಪಾತ್ರ

ಓರ್ವನು ಬಲಗೊಂಡ ಏಕಾಗ್ರತೆಯನ್ನು ಹೊಂದದಿದ್ದರೆ ತನ್ನ ಜೀವನದಲ್ಲಿ ಪೂರ್ಣತೆಯನ್ನು ಪಡೆಯಲಾಗುವುದಿಲ್ಲ. ಏಕೆಂದರೆ ಅದು ಏಕಾಗ್ರತೆಯಿಂದಲೇ ನಾವು ನಮ್ಮ ಕ್ಷೇತ್ರಗಳಲ್ಲಿ ಒಳದೃಷ್ಟಿಗಳನ್ನು ವೃದ್ಧಿಸಿಕೊಳ್ಳುತ್ತೇವೆ ಮತ್ತು ನಾವು ಸ್ವಲ್ಪ ಆಳದವರೆಗೂ ಅವನ್ನು ಪರಿಶೋಧಿಸಬಹುದು.

ಪಂಡಿತರು, ಒಂದು ಕ್ಷೇತ್ರದಲ್ಲಿ ಅಥವಾ ವಿಷಯದಲ್ಲಿ ಆಳವಾದ ಏಕಾಗ್ರತೆಯ ಅಧ್ಯಯನವನ್ನು ನಡೆಸಿದರೆ ಓರ್ವನು ಕಡಿಮೆ ಸಮಯದಲ್ಲಿ ಸಂಪೂರ್ಣ ಯಶಸ್ಸಿಯನ್ನು ಪಡೆಯಬಹುದೆಂದು ತಿಳಿಯುತ್ತಾರೆ.

ಮನಸ್ಸು ಅಲೆದಾಡುತ್ತದೆ. ನಾವು ಮನಸ್ಸಿನ ಅರಾಜಕ ಚಲನೆಗಳನ್ನು ನಿಯಂತ್ರಿಸಿದರೆ ನಮಗೆ ಏಕಾಗ್ರತೆ ದೊರೆಯುತ್ತದೆ. ಪರಿಣಾಮವಾಗಿ ಮನಸ್ಸು ಮತ್ತು ಮೆದುಳು ಎರಡೂ ಒಂದು ನಿರ್ದಿಷ್ಟ ಬಿಂದುವಿನ ಮೇಲೆ ಏಕಾಗ್ರತೆಯನ್ನು ಸಾಧಿಸಿ ಅದರಲ್ಲಿ ಯಶಸ್ಸು ದೊರೆಯುತ್ತದೆ.

ನಿಜವಾಗಿಯೂ ಮನಸ್ಸಿನ ಏಕಾಗ್ರತೆಯು ಮನುಷ್ಯನ ಒಂದು ದೊಡ್ಡ ಪಾಂಡಿತ್ಯವಾಗಿದೆ. ಭಾರತೀಯ ***ಯೋಗ* ಶಾಸ್ತ್ರ**ದಲ್ಲಿ, ಯಾವ ಮನುಷ್ಯನು ಅವನ ಅಲೆಯುವಂತಹ ವಿಚಾರಗಳ ಮೇಲೆ ದೃಢ ಹತೋಟಿಯನ್ನು ಸಾಧಿಸಿದ್ದಾನೋ ಅವನು *ಬ್ರಹ್ಮ*ನನ್ನು ತಲುಪಬಹುದು ಎಂದು ಹೇಳಲಾಗಿದೆ.

ಅದು ಸಮ್ಮೋಹನದ ಮೂಲಕ ನಾವು ಮನಸ್ಸಿನ ಏಕಾಗ್ರತೆಯನ್ನು ಸಾಧಿಸಬಹುದು. ಅದು ನಮ್ಮ ಜೀವನದ ಎಲ್ಲಾ ಮಾರ್ಗಗಳಲ್ಲಿಯೂ ಪೂರ್ಣತೆಯನ್ನು ಕೊಡುವುದು.

## ದೇಹದ ತಾಪವನ್ನು ನಿಯಂತ್ರಿಸುವಲ್ಲಿ ಪಾತ್ರ

ಒಂದು ಮಟ್ಟದ ತಾಪವು ಮನುಷ್ಯನಿಗೆ ಕಡ್ಡಾಯವಾಗಿದೆ. ಅದು ಕೆಳಗೆ ಸರಿದರೆ ಅಥವಾ ಆಚೆಗೆ ಹೆಚ್ಚಿನ ಮಟ್ಟಕ್ಕೆ ಹೋದರೆ, ಅವನು ಕಾಯಿಲೆಗೀಡಾಗುತ್ತಾನೆ. ಆರೋಗ್ಯವನ್ನೂ ಮತ್ತು ಬಲವನ್ನೂ ಸಂರಕ್ಷಿಸಿಕೊಳ್ಳುವುದಕ್ಕೋಸ್ಕರ ದೇಹದ ಉಷ್ಣತೆಯು ಅಚಲವಾಗಿ ಉಳಿಯುವ ಅವಶ್ಯಕತೆ ಇದೆ.

ಸಮ್ಮೋಹನಾವಸ್ಥೆಯಲ್ಲಿ ನಾವು ಮಾಧ್ಯಮಿಕ ತಾಪವನ್ನು ಹೆಚ್ಚಿಸಲೂ ಅಥವಾ ತಗ್ಗಿಸಲೂ ಬಹುದು.

ಯಾರಿಗಾದರೂ ಹೆಚ್ಚಿನ ತಾಪವಿದ್ದರೆ, ಅವನನ್ನು ಸಮ್ಮೋಹನಗೊಳಿಸಿ ಅವನ ತಾಪವು ಮೊದಲಿಗಿಂತ ಬಹಳ ಉತ್ತಮ ಹಾಗೂ ಅವನಿಗೆ ಅತ್ಯಂತ ಅನುಕೂಲವಾದ ತಾಪವಿದೆಯೆಂದು ಆಜ್ಞಾಪಿಸಬಹುದು.

ಪ್ರಯೋಗಗಳ ನಂತರ ದೇಹದ ತಾಪವನ್ನು ಸಮ್ಮೋಹನದ ಮೂಲಕ ಹತೋಟಿಗೆ ತರಬಹುದೆಂದು ಖಚಿತಪಡಿಸಿಕೊಳ್ಳಲಾಗಿದೆ. ಮಾಧ್ಯಮನು ಎಚ್ಚೆತ್ತುಕೊಂಡಾಗ, ತನಗೆ ವಿಪರೀತವಾದ ತೊಂದರೆಗಳನ್ನು ಕೊಟ್ಟ ತನ್ನ ಜ್ವರದಿಂದ ತಾನು ಮುಕ್ತವಾಗಿರುವುದನ್ನು ನೋಡಿಕೊಳ್ಳುತ್ತಾನೆ.

ಅದೇರೀತಿ ರಕ್ತದ ಒತ್ತಡವನ್ನು ನಿಯಂತ್ರಿಸುವಲ್ಲಿ ಸಹ ಅದು ಬಹಳ ಪ್ರಯೋಜನಕಾರಿಯಾಗಿರುವುದು ಕಂಡು ಬಂದಿದೆ.

ದೇಹದ ಉಷ್ಣತೆಯಲ್ಲಿ ಹೆಚ್ಚುಕಡಿಮೆಯಾಗುವುದರಿಂದ ಬರುವಂತಹ ತೊಂದರೆಗಳಲ್ಲಿ ಅದು ಬಹು ಯಶಸ್ವಿಯಾಗಿರುವುದನ್ನು ಸಾಬೀತು ಪಡಿಸಿದೆ.

## ದೈವೀಕ ದೃಷ್ಟಿಯನ್ನು ತರುವಲ್ಲಿ ಪಾತ್ರ

ಮನುಷ್ಯನು ತನ್ನ ದೇಹದಲ್ಲಿ ಯಾವಾಗಲೂ ಚೇತನ ಮತ್ತು ಮನುಷ್ಯನ ದೇಹ ಕಾರ್ಯಮಾಡುವಲ್ಲಿ ಸಹ ನಿಯಂತ್ರಿಸುವ ಅಸಂಖ್ಯಾತವಾದ ನರಗಳನ್ನು (ಗ್ಯಾಂಗ್ಲಿಯಾನ್ ಗಳನ್ನು) ಹೊಂದಿದ್ದಾನೆ. ಈ ನರಗಳೇ ಮನುಷ್ಯನನ್ನು ಪ್ರಾಣಿಗಳಿಂದ ಭಿನ್ನಮಾಡಿದೆ. ಆದರೆ ಮನುಷ್ಯನು ಕೆಲವು ನರಗಳ ಉಪಯೋಗವನ್ನು ಬಹಳ ದಿನದಿಂದ ಲಕ್ಷ್ಯವಹಿಸಿಲ್ಲ. ಅವನು ಆ ಉಪಯೋಗಿಸದಂತಹ ನರಗಳು ಅವನಿಗೆ ಕೊಡಬಹುದಾದಂತಹ ಲಾಭಗಳಿಂದ ವಂಚಿತನಾಗಿದ್ದಾನೆ.

ಈ ನರಗಳಲ್ಲಿ ಒಂದು ನರ ನೇರವಾಗಿ ದೈವೀಕ ದೃಷ್ಟಿಗೆ ಸಂಬಂಧಿಸಿದೆ.

ಸಮ್ಮೋಹನದ ಮೂಲಕ ನಾವು ಮತ್ತೊಮ್ಮೆ ಈ ನರವನ್ನು ಎಚ್ಚರಿಸಬಹುದು, ಫಲಿತಾಂಶವಾಗಿ, ನಾವು ಈ ಹಂತದಲ್ಲಿ ನಮಗೆ ಅದೃಷ್ಯವಾಗಿಯೇ ಉಳಿದಿರುವಂತಹ ಭವಿಷ್ಯದ ಸತ್ಯಗಳನ್ನು ನೋಡಬಹುದು.

ದೈವೀಕ ದೃಷ್ಟಿಯಿಂದ ಸಂಪನ್ನನಾದ ಓರ್ವನು ಓರ್ವನ ಭವಿಷ್ಯವನ್ನು ಓರ್ವನ ಕೋಣೆಯಲ್ಲಿ ಚಲನಚಿತ್ರಗಳನ್ನು ನೋಡಿದ ಹಾಗೆ ನೋಡಬಹುದು.

ಸಮ್ಮೋಹನಕ್ಕೆ ಅಂತಹದೇ ಸುಪ್ತಾವಸ್ಥೆಯಲ್ಲಿರುವ ಬಹಳ ನರಗಳನ್ನು ಎಚ್ಚರಿಸುವಂತಹ ಮತ್ತು ಹೆಚ್ಚಿನ ಸಾಮರ್ಥ್ಯಗಳನ್ನು ಪಡೆಯುವಂತಹ ಸಾಬೀತು ಪಡಿಸುವಂತಹ ಸಾಮರ್ಥ್ಯವಿದೆ. ಹೀಗೆ ಅವನು ಎತ್ತರಕ್ಕೆ ತಲುಪಿ ಮುಂದಿನ ಅನಿಷ್ಟಸೂಚನೆಗಳನ್ನು ಕಾಣಬಹುದು.

## ಮಾತಿನ ಮೇಲೆ ಪರಿಣಾಮ

ಸಮ್ಮೋಹನದ ಮೂಲಕ ನಾವು ಬಹಳ ಸುಲಭವಾಗಿ ನಮ್ಮ ಧ್ವನಿಯನ್ನು ಪ್ರಭಾವಿತಗೊಳಿಸಬಹುದು. ಆಗಾಗ ನಾವು ಬಹಳ ಶ್ರೇಷ್ಠವ್ಯಕ್ತಿತ್ವವುಳ್ಳ ಜನರನ್ನು ಕಾಣುತ್ತೇವೆ ಆದರೂ ಅವರು ತೊದಲುತ್ತಾ ಮಾತನಾಡುವುದರಿಂದ ಬೇರೆಯವರ ಮೇಲೆ ಒಳ್ಳೆಯ ಮತ್ತು ಚಿರವಾದ ಪರಿಣಾಮವನ್ನು ಬೀರುವುದಿಲ್ಲ. ಅವರ ವ್ಯಕ್ತಿತ್ವದಲ್ಲಿ ಏನೋ ಕೊರತೆ ಇದೆ.

ಸಮ್ಮೋಹನದ ಮೂಲಕ ನಾವು ಆ ತರಹದ ನ್ಯೂನ್ಯತೆಗಳನ್ನು ಹತೋಟಿಯಲ್ಲಿ ತರಬಹುದು. ಮಾಧ್ಯಮನನ್ನು ಸಮ್ಮೋಹನ ನಿದ್ರೆಗೆ ಹಾಕಿದ ನಂತರ ತನ್ನ ಧ್ವನಿಯು ಒಳ್ಳೆ ರೀತಿಯಲ್ಲಿಯೇ ಇದೆ, ಅವನು ಪದಗಳನ್ನು ಸ್ವಚ್ಛವಾಗಿಯೇ ಉಚ್ಚರಿಸಬಹುದು, ಮತ್ತು ಅವನಲ್ಲಿ ಇದ್ದ ತೊದಲುವಿಕೆ ಈಗ ಹೋಗಿದೆ ಮತ್ತು ಅವನು ಎದ್ದನಂತರ ಅವನು ಯಾವತ್ತೂ ತೊದಲುವುದಿಲ್ಲ ಎಂದು ಆಜ್ಞಾಪಿಸಬಹುದು.

ಆದು ಮಾನಸಿಕ ತೊಂದರೆ ಅಲ್ಲದೆ ಬೇರೇನೂ ಅಲ್ಲ. ಏಕೆಂದರೆ ಅವನು ನೇರವಾಗಿ ಮತ್ತು ಸರಿಯಾಗಿ ಮಾತನಾಡುವುದಿಲ್ಲವೆಂದು ಅವನ ಅಂತರ್ಮನಸ್ಸಿನಲ್ಲಿ ಹೋದರೆ ಕಟ್ಟಕಡೆಗೆ ಅವನಲ್ಲಿ ತೊದಲುವಿಕೆಯನ್ನು ತರುವಂತಹ ಒಂದು ಮಟ್ಟದ ಅಧೈರ್ಯವನ್ನು ಅವನು ವೃದ್ಧಿಸಿಕೊಳ್ಳುತ್ತಾನೆ. ಹೇಗಾದರೂ ಮಾಧ್ಯಮನಿಗೆ ಸಮ್ಮೋಹನ ನಿದ್ರೆಯಲ್ಲಿ ಅವನು ತೊದಲುವುದಿಲ್ಲ ಎಂದು ಆಜ್ಞಾಪಿಸಿದರೆ, ಅವನ ಮಾನಸಿಕ ಭಯ ಹೋಗುತ್ತದೆ ಮತ್ತು ಒಮ್ಮೆ ಈ ಭೀತಿಯನ್ನು ತೆಗೆದರೆ ಅವನ ಧ್ವನಿಯು ಪರಿಣಾಮಕಾರಿಯಾದ, ಪ್ರಭಾವೋತ್ಪಾದಕವಾದ ಮತ್ತು ನೇರವಾದ ಸಲಕರಣೆಯಾಗಿ ವೃದ್ಧಿಗೊಳ್ಳುತ್ತದೆ.

### ನಾಡಿ ಮಿಡಿತದ ವೇಗದ ಮೇಲೆ ಪರಿಣಾಮ

ವೈದ್ಯಕೀಯ ವಿಜ್ಞಾನಿಗಳು ಆರೋಗ್ಯವಾದ ಮನುಷ್ಯನ ದೇಹದಲ್ಲಿ ಒಂದು ಅಚಲ ನಾಡಿಮಿಡಿತದ ವೇಗವಿರಬೇಕೆಂದು ಯಾವಾಗಲೂ ತಿಳಿಯುತ್ತಾರೆ. ಒಂದು ವೇಳೆ ಅದು ಬಹಳ ಅಥವಾ ಕಡಿಮೆ ವೇಗವನ್ನು ದಾಖಲಿಸಿದರೆ, ವ್ಯಕ್ತಿಯು ಅಸ್ವಸ್ಥನಾಗುತ್ತಾನೆ.

ಆಗಾಗ ನಾಡಿಮಿಡಿತದಲ್ಲಿಯ ದೊಡ್ಡ ಹೆಚ್ಚಳಿಕೆಯು ರಕ್ತದ ಒತ್ತಡದಿಂದಾಗಿರುತ್ತದೆ. ಹಾಗೆಯೇ ಓರ್ವನು ಬಹಳ ಸಿಟ್ಟು ಅಥವಾ ಗಾಬರಿಗೊಂಡಾಗ ನಾಡಿಮಿಡಿತವು ತೀವ್ರವಾದ ಇಳಿತವನ್ನು ದಾಖಲಿಸುತ್ತದೆ. ಕೆಲವೊಮ್ಮೆ ನಾಡಿಮಿಡಿತವು ಅಪಾಯದ ಮಟ್ಟಕ್ಕೆ ಏರಿಬಿಡುತ್ತದೆ ಪರಿಣಾಮವಾಗಿ ಅದು ಸಾವಾಗಿ ಸಾಬೀತಾಗುತ್ತದೆ.

ವೈದ್ಯಕೀಯ ವಿಜ್ಞಾನಿಗಳ ಪ್ರಕಾರ ನಾಡಿಮಿಡಿತವನ್ನು ಒಂದು ಸ್ಥಿಮಿತಕ್ಕೆ ತರುವಂತಹ ಸಾಬೀತುಪಡಿಸುವಂತಹ ಸಾಮರ್ಥ್ಯವಿರುವ ಅಂತಹ ಯಾವುದೇ ಔಷಧಿ ಇಲ್ಲ. ಅದು ಕೇವಲ ದೃಢವಾದ ಪರಿಶ್ರಮದಿಂದ ಓರ್ವನು ನಾಡಿಮಿಡಿತದಲ್ಲಿ ಅಚಲತೆಯನ್ನು ತರಬಹುದು.

ಹೇಗಾದರೂ, ಸಮ್ಮೋಹನದಿಂದ ನಾಡಿಮಿಡಿತವನ್ನು ಕೂಡಲೇ ಪರಿಣಾಮಕಾರಿಯಾದ ಹತೋಟಿಗೆ ತರಬಹುದು. ಮಾಧ್ಯಮನನ್ನು ಸಮ್ಮೋಹನನಿದ್ರೆಗೆ ತಂದು ಅವನಿಗೆ ತನ್ನಲ್ಲಿದ್ದ ಸಿಟ್ಟು ಅಥವಾ ಗಾಬರಿಯು ಈಗ ಹೋಗಿದೆ ಎಂದು ಆಜ್ಞಾಪಿಸಲಾಗುತ್ತದೆ. ಫಲಿತಾಂಶವಾಗಿ ಅವನು ಮೊದಲಿಗಿಂತಲೂ ಈಗ ಬಹಳ ವಾಸಿಯಾಗಿರುತ್ತಾನೆ.

ಬೇರೆ ಕೋನದಿಂದ ದೃಷ್ಟಿಸಿದರೆ, ಓರ್ವನ ನಾಡಿಮಿಡಿತವು ನೇರವಾಗಿ ಉಸಿರಾಟದ ಪದ್ಧತಿಗೆ ಸಂಬಂಧವಿದೆ ಎಂಬುದನ್ನು ನೋಡಬಹುದು. ಅಂತಹ ಪರಿಸ್ಥಿತಿಯಲ್ಲಿ ನಾವು ಉಸಿರಾಟವನ್ನು ನಿಯಂತ್ರಿಸಿದರೆ ನಾಡಿಮಿಡಿತವನ್ನೂ ಸಹ ನಿಯಂತ್ರಿಸಬಹುದು.

ಸಮ್ಮೋಹನ ಪ್ರಭಾವದಲ್ಲಿ ಉಸಿರಾಟವು ಪರಿಣಾಮಕಾರಿಯಾದ ಹತೋಟಿಯಲ್ಲಿ ಉಳಿಯುತ್ತದೆ. ಓರ್ವನು ಓರ್ವನ ಉಸಿರಾಟವನ್ನು ಸಮ್ಮೋಹನದ ತಳವಾದ ಪ್ರಾಣಾಯಾಮದ ಮೂಲಕವೂ ನಿಯಂತ್ರಿಸುತ್ತಾನೆ. ಒಬ್ಬ ಸಮರ್ಥ ಸಮ್ಮೋಹಕನಿಗೆ ಯಾವತ್ತೂ ಅನಿಯಮಿತವಾದ ನಾಡಿಬಡಿತವಿರುವುದಿಲ್ಲ.

### ಶ್ರವಣದಲ್ಲಿ ಸುಧಾರಣೆ

ಸಮ್ಮೋಹನವು ಓರ್ವನ ಶ್ರವಣಕ ಸಾಮರ್ಥ್ಯದಲ್ಲಿ ಶಕ್ತಿಯುತವಾದ ಪರಿಣಾಮವನ್ನು ಮಾಡುವುದು. ಮಕ್ಕಳನ್ನೂ ಒಳಗೊಂಡು ಬಹಳ ಜನ ಶ್ರವಣಕೆಯಲ್ಲಿ ಕಷ್ಟಬೀಳುತ್ತಾರೆ. ಪರಿಣಾಮವಾಗಿ ಅವರು ತಮ್ಮಲ್ಲಿಯೇ ಪೂರ್ಣತೆಯ ಅನುಭವವನ್ನು ಪಡೆಯುವುದಿಲ್ಲ.

ಯಾವಾಗಲೂ ಅಚೇತನವಾಗಿರುವ ನರಗಳು ಮತ್ತು ಅವಕ್ಕೆ ಸಂಬಂಧಿಸಿದ ಇಂದ್ರಿಯ ಜ್ಞಾನಗಳು ಸಮ್ಮೋಹನದವಶದಲ್ಲಿ ಪರಿಣಾಮಕಾರಿಯಾಗಿ ಚೇತನಗೊಳ್ಳುತ್ತವೆ. ಓರ್ವನು ಕೇಳುವುದರಲ್ಲಿ ನ್ಯೂನತೆಯನ್ನು ವೃದ್ಧಿಸಿಕೊಳ್ಳುವುದರಲ್ಲಿ ಕಾರಣವೆಂದರೆ ಸಾಧಾರಣವಾಗಿ ನರಗಳು ಅಚೇತನಗೊಂಡಿರುತ್ತವೆ.

ನರಗಳ ಮತ್ತು ಸಂಬಂಧಿಸಿದ ಇಂದ್ರಿಯ ಜ್ಞಾನಗಳನ್ನು ಸಮ್ಮೋಹನದ ಮೂಲಕ ಬಲಪಡಿಸಬಹುದು. ಅದು, ಆದ್ದರಿಂದ ಓರ್ವನ ಕೇಳುವ ಸಾಮರ್ಥ್ಯದಲ್ಲಿ ಅನುರೂಪವಾದ ಹೆಚ್ಚಳಿಕೆಯನ್ನು ತರುವುದು.ಳ ನಾನು ಸ್ವತಃ ಈ ಕ್ಷೇತ್ರದಲ್ಲಿ ಹಲವಾರು ಪ್ರಯೋಗಗಳನ್ನು ನಡೆಸಿದ್ದೇನೆ. ನನಗೆ ಪ್ರತಿ ಪ್ರಯತ್ನದಲ್ಲಿಯೂ ಯಶಸ್ಸು ದೊರೆತಿದೆ. ಆದ್ದರಿಂದ, ನಾನು ಓರ್ವನು ತನ್ನ ಕೇಳುವ ಸಾಮರ್ಥ್ಯವನ್ನು ಸಮ್ಮೋಹನದ ಮೂಲಕ ಬಲಪಡಿಸಿಕೊಳ್ಳಬಹುದೆಂದು ಹೇಳುವ ಸ್ಥಿತಿಯಲ್ಲಿದ್ದೇನೆ ಮತ್ತು ಹೀಗೆ ವ್ಯಕ್ತಿತ್ವದಲ್ಲಿಯ ಒಂದು ದೊಡ್ಡ ಕೊರತೆಯನ್ನು ನಿವಾರಿಸಿಕೊಳ್ಳಬಹುದು.

## ಮನೋಬಲವನ್ನು ಬಲಪಡಿಸಿಕೊಳ್ಳುವುದರಲ್ಲಿ ಪಾತ್ರ

ಮನುಷ್ಯನು ಯೋಚನೆಯಲ್ಲಿಯೇ ಇಳಿದಿದ್ದಾನೆ. ಮಲಗಿಕೊಂಡಾಗ ಸಹ ಅವನು ಯಾವಾಗಲೂ ಚಿಂತಿಸುತ್ತಾನೆ. ಅವನು ಮಲಗಿ ಕೊಂಡಾಗ ಅವನ ಅಂತರ್ಮನಸ್ಸು ಚುರುಕಾಗಿರುತ್ತದೆ. ಓರ್ವನು, ಹೀಗೆ, ಓರ್ವನ ಜೀವನದಲ್ಲಿ ಬಯಕೆಗಳು ಮತ್ತು ಒಲವುಗಳು ಮಹತ್ವದ ಪಾತ್ರವನ್ನುವಹಿಸುತ್ತವೆ ಎನ್ನುವುದನ್ನು ನೋಡಬಹುದು.

ಮನುಷ್ಯನು ಅವನ ಕೆಲವು ಬಯಕೆಗಳು ಪೂರ್ಣಗೊಂಡಾಗ ಸಂತೋಷಿಸುತ್ತಾನೆ. ಆದರೆ, ಯಾವಾಗ ಅವನ ಕೆಲವು ಬಯಕೆಗಳು ಪೂರ್ಣಗೊಳ್ಳುವುದಿಲ್ಲವೋ, ಅವನು ಅವುಗಳ ಬಗ್ಗೆ ವಿಚಾರಮಾಡುತ್ತಾನೆ ಹಾಗೂ ಘೋರವಾಗಿ ದುಃಖಿತನಾಗುತ್ತಾನೆ.

ನಾವು ಈಗಾಗಲೇ ಮೊದಲೇ ಚರ್ಚಿಸಿದಂತೆ ಒಂದು ಬಲವಾದ ವ್ಯಕ್ತಿತ್ವವು ಅವನ ಬಯಕೆಗಳ ಮೇಲೆ ಒಂದು ಒಳ್ಳೆಯ ಮಟ್ಟದ ತಡೆಯನ್ನು ಚಲಾಯಿಸುತ್ತದೆ. ಅವನು, ವಾಸ್ತವದಲ್ಲಿ, ಅವನ ಬಯಕೆಗಳನ್ನು ಆಳುತ್ತಾನೆ. ಅವನು ಎಚ್ಚೆತ್ತ ಪ್ರಯತ್ನಗಳಿಂದಲೂ ಮತ್ತು ಕಷ್ಟಕೆಲಸಗಳಿಂದಲೂ ತನ್ನ ಬಯಕೆಗಳನ್ನು ತೀರಿಸಿಕೊಳ್ಳುತ್ತಾನೆ.

ಒಬ್ಬ ವ್ಯಕ್ತಿಯ ಯಶಸ್ಸು ಅವನ ಮನೋಬಲದ ಮಟ್ಟದ ಮೇಲೆ ಅವಲಂಬಿತವಾಗಿರುತ್ತದೆ. ಅವನಿಗೆ ಬಲವಾದ ಇಚ್ಛಾಶಕ್ತಿ ಅಥವಾ ಮನೋಬಲವಿದ್ದರೆ ಅವನು ಕೀರ್ತಿಯನ್ನು ಸಾಧಿಸುವ ಸಾಧ್ಯತೆ ಇರುತ್ತದೆ. ಅದು ಇಚ್ಛಾಶಕ್ತಿಯ ಪ್ರಭಾವದಿಂದಲೇ ಮನುಷ್ಯನು ಯಾವತ್ತಿಗೂ ಯಾವುದಾದರೂ ವೈಯಕ್ತಿಕ ನೋವನ್ನು ಅನುಭವಿಸಲು ಅಣಿಯಾಗಿರುತ್ತಾನೆ. ಅವನು ಮನೋಬಲದ ಸದ್ಗುಣದಿಂದ ಹಿಮಾಲಯದ ತುದಿಯನ್ನು ಹತ್ತುತ್ತಾನೆ. ಅವನು ಕೊನೆಯಿಲ್ಲದ ಸಾಗರವನ್ನು ಮತ್ತು ವಿಶಾಲವಾಗಿ ಹರಡಿರುವ ಸಹಾರಾ ಮರುಳುಭೂಮಿಯನ್ನು ದಾಟುತ್ತಾನೆ, ಇವೆಲ್ಲವನ್ನೂ ಮನೋಬಲದಿಂದ ಮಾಡುತ್ತಾನೆ. ಅದು ಅವನ ಬಲವಾದ ಇಚ್ಛಾಶಕ್ತಿಯ ಸಂಕೇತವಾಗಿದೆ.

ಹೇಗಾದರೂ, ಒಬ್ಬ ನಿರ್ಬಲವಾದ ಮನೋಬಲವಿರುವ ವ್ಯಕ್ತಿಯು ತನ್ನ ಜೀವನದಲ್ಲಿ ಏನನ್ನೂ ಸಾಧಿಸಲಾರ. ಅವನು ಸಾಧಾರಣ ವ್ಯಕ್ತಿಯಾಗಿಯೇ ಉಳಿಯುವನು. ಅವನು ಪ್ರತಿಯೊಂದು ಹಂತದಲ್ಲಿಯೂ ಪರಾಭವವನ್ನು, ಅಪಮಾನವನ್ನು ಮತ್ತು ಉದಾಸೀನತೆಯನ್ನು ಎದುರಿಸುತ್ತಾನೆ.

ಇಚ್ಛಾಶಕ್ತಿಯಲ್ಲಿ ಹೆಚ್ಚಳಿಕೆಯು ಒಬ್ಬ ವ್ಯಕ್ತಿಗೆ ಒಂದು ನಿರ್ದಿಷ್ಟರೀತಿಯ ಶಕ್ತಿಯನ್ನು ಕೊಡುತ್ತದೆ. ಅದು ಅವನ ಜೀವನದಲ್ಲಿ ಮುನ್ನಡೆಯಲು ಸಹಾಯಕವಾಗುತ್ತದೆ. ಅವನು ದುರ್ಬಲ ಮನಸ್ಸಿನವನಾಗಿಯೇ

ಉಳಿದರೆ, ಅವನು ಯಾವತ್ತೂ ಒಂದು ನಿರ್ದಿಷ್ಟ ರೀತಿಯ ಶಕ್ತಿಯನ್ನು ತಿಳಿದುಕೊಳ್ಳುವುದಿಲ್ಲ. ಈ ಕಾರಣದಿಂದ ಅವನು ಯಾವುದೇ ಕ್ರಿಯಾತ್ಮಕತೆಯನ್ನು ವೃದ್ಧಿಸಿಕೊಳ್ಳುವುದಿಲ್ಲ. ಅವನು ತನ್ನ ಜೀವನದಲ್ಲಿ ಮೇಲೆ ಬರುವುದಿಲ್ಲ.

ಸಮ್ಮೋಹನದ ಮೂಲಕ ನಾವು ನಮ್ಮ ಮನೋಬಲವನ್ನು ಶಕ್ತಿಯುತ ಮಾಡಿಕೊಂಡು ವೃದ್ಧಿಸಿಕೊಳ್ಳಬಹುದು. ಪರಿಣಾಮವಾಗಿ, ನಾವು ನಮ್ಮನ್ನು ಹೆಚ್ಚಿನ ಯಶಸ್ಸಿಗೆ ಮತ್ತು ಬಹಳ ಉನ್ನತಿಗೆ ತೆಗೆದುಕೊಂಡು ಹೋಗಬಹುದಾದಂತಹ, ವೃದ್ಧಿಯಾಗುವಂತಹ ವಿಶಿಷ್ಟ ಶಕ್ತಿಯನ್ನು ಪಡೆಯುತ್ತೇವೆ.

## ವಿಚಾರದ ಏಕಾಗ್ರತೆಯಲ್ಲಿ ಪಾತ್ರ

ಮನಸ್ಸು ದುರ್ಬಲವಾದ ಚಲನೆಗಳಲ್ಲಿ ಒಲವುಳ್ಳದ್ದಾಗಿದೆ. ನಾವು ಮನಸ್ಸಿನ ಮೇಲೆ ಒಂದು ಮಟ್ಟದ ಹತೋಟಿಯನ್ನು ಪಡೆದಾಗಲೇ ನಮ್ಮ ಮನಸ್ಸನ್ನು ಯಶಸ್ಸಿನ ಕಡೆ ಕೆಲಸಮಾಡುವ ಹಾಗೆ ಮಾಡಬಹುದು.

ರಾಮಾಯಣದಲ್ಲಿ ದುಃಖಭರಿತಳಾದ ಸೀತೆಯು, ತನ್ನ ಗಂಡನ ವೈರಿಯಾದ, ರಾವಣನಿಗೆ ಸಂಬಂಧಿಸಿದ ತೋಟದಲ್ಲಿ ಗಡೀಪಾರಾಗಿ, ರಾಮನ ಕೇಂದ್ರೀಕೃತವಾದ ಯೋಚನೆಗಳಲ್ಲಿ ಸಂಪೂರ್ಣವಾಗಿ ಲೀನವಾಗುತ್ತಿದ್ದಳು ಎಂಬುದಾಗಿ ನಾವು ಓದಿದ್ದೇವೆ. ಆಕೆಗೆ ತನ್ನ ಹತ್ತಿರ ಬರುತ್ತಿರುವಂತಹ ವ್ಯಕ್ತಿಗಳ ಹೆಜ್ಜೆಯ ಸಪ್ಪಳಗಳೂ ಕೇಳಿಸುತ್ತಿರಲಿಲ್ಲ. ಈಕಡೆ ಆಕೆಯು ಸುತ್ತಲಿನ ಗದ್ದಲ ಹಾಗೂ ಸಪ್ಪಳಗಳಿಂದ ತೊಂದರೆಗೆ ಒಳಗಾಗುತ್ತಿರಲಿಲ್ಲ. ಪ್ರಶಾಂತತೆಯ ಪ್ರಮುಖವಾದ ಕಾರಣವೆಂದರೆ ಕ್ರಮಾನುಗತಿಯ ಯೋಚನೆಗಳಲ್ಲಿ ಆಕೆಯು ಲೀನವಾಗಿರುವುದು.

ಸಾಧಾರಣವಾಗಿ ನಾವು ಏಕಾಗ್ರತೆಯ ಒಂದು ಖಚಿತವಾದ ಕೇಂದ್ರದಲ್ಲಿ ಆಳವಾಗಿ ಯೋಚಿಸಲು ಪ್ರಾರಂಭಿಸುತ್ತೇವೆ. ಅದರ ಆಳಗಳನ್ನು ತಲುಪುವಲ್ಲಿ ನಾವು ಯಶಸ್ವಿಯಾದಾಗ ನಾವು ಬಹಳಷ್ಟು ಸಾಧಿಸುವಲ್ಲಿ ಯಶಸ್ವಿಯಾಗುತ್ತೇವೆ.

## ತೂಕವಿಲ್ಲದಿರುವಿಕೆ

ಸಮ್ಮೋಹನ ವಶದಲ್ಲಿ ಓರ್ವನಿಗೆ ಯಾವ ವಸ್ತುವಿನ ತೂಕವೂ ಗೊತ್ತಾಗುವುದಿಲ್ಲ. ಏಕೆಂದರೆ ವ್ಯಕ್ತಿಯು ಆ ಸಮಯದಲ್ಲಿ ಒಂದು ವಿಶಿಷ್ಟ ರೀತಿಯ ಚೌಕಟ್ಟಿನಲ್ಲಿ ಉಳಿಯುತ್ತಾನೆ. ಸಮ್ಮೋಹನಗೊಂಡ ದೇಹದ ಮೇಲೆ ನೀವು ಒಂದು ಭಾರವಾದ ವಸ್ತುವನ್ನು ಹಾಕಿದರೆ— 40 ಕೆಜಿಗಳನ್ನು ಎನ್ನಿರಿ, ಅವನಿಗೆ ಅದರ ಭಾರಗೊತ್ತಾಗುವುದಿಲ್ಲ.

## ರುಚಿಯಿಲ್ಲದಿರುವಿಕೆ

ಸಮ್ಮೋಹನದ ವಶದಲ್ಲಿ ಓರ್ವನಿಗೆ ಯಾವುದರ ರುಚಿಯನ್ನೂ ಗೊತ್ತುಪಡಿಸಲಾಗುವುದಿಲ್ಲ. ಉದಾಹರಣೆಗೆ ನೀವು ನಿಮ್ಮ ಮಾಧ್ಯಮನಿಗೆ ದ್ರಾಕ್ಷಿಗಳನ್ನು ಕೊಡುತ್ತೀರಿ ಹಾಗೂ ಅವನು ಹರಳುಗಳನ್ನು ತಿನ್ನುತ್ತಿದ್ದಾನೆಂದು ಆಜ್ಞಾಪಿಸುತ್ತೀರಿ. ಅವನು ಕೂಡಲೇ ಅದನ್ನು ಉಗಿದುಬಿಡುತ್ತಾನೆ. ಅವನು ತನ್ನ ಬಾಯಲ್ಲಿ ನಿಜವಾಗಿಯೇ ಹರಳುಗಳು ಇರುವವು ಎಂದು ತಿಳಿಯುತ್ತಾನೆ.

ಬಹಳ ಜನರಿಗೆ ಕೆಲವು ವಸ್ತುಗಳ ಮೇಲೆ ತಿರಸ್ಕಾರವಿರುತ್ತದೆ. ಅವರನ್ನು ಸಮ್ಮೋಹನ ವಶಕ್ಕೆ ತೆಗೆದುಕೊಂಡ ಮೇಲೆ ನೀವು ಅವರಿಗೆ ಆ ವಸ್ತುಗಳನ್ನು ಇಷ್ಟಪಡುತ್ತೀರಿ ಮತ್ತು ನೀವು ಅವುಗಳನ್ನು ತಿನ್ನಬೇಕೆಂದು ಆಜ್ಞಾಪಿಸಿದರೆ, ಅವನು ಅವುಗಳನ್ನು ಇಷ್ಟಪಟ್ಟು ತಿನ್ನಲಾರಂಭಿಸುವನು. ತಿರಸ್ಕೃತವು ಖಚಿತವಾಗಿ ಹೋಗುವುದು. ಅವನಿಗೆ ತಿರಸ್ಕಾರವಿದ್ದ ವಸ್ತುಗಳು ಈಗ ಅವನಿಗೆ ರುಚಿಸಲಾರಂಭಿಸುವವು.

## ಗರ್ಭಧಾರಣೆಯ ಬಗ್ಗೆ ಜ್ಞಾನ

ಭಾರತೀಯ ಯೋಗಿಗಳು ಗರ್ಭಧಾರಣೆಯ ಸಮಯದ ಬಗ್ಗೆ ಎಲ್ಲವನ್ನೂ ತಮ್ಮ ಅದ್ವಿತೀಯವಾದ ಆಧ್ಯಾತ್ಮಿಕ ಶಕ್ತಿಗಳ ಸದ್ಗುಣದಿಂದ ನೋಡುತ್ತಿದ್ದರು. ಅದು ಇನ್ನೆಂದೂ ಪವಾಡದ ಕೆಲಸವೇನಲ್ಲ. ಏಕೆಂದರೆ ಸಮ್ಮೋಹನವು ಮಾಧ್ಯಮನ ಭೂತಕಾಲವನ್ನು ಮತ್ತು ಗರ್ಭಧಾರಣೆಯ ಬಗ್ಗೆ ಸಂಪೂರ್ಣ ಜ್ಞಾನವನ್ನು ಸಹ ಆವಾಹನ ಮಾಡುತ್ತದೆ. ಏಕೆಂದರೆ ಗರ್ಭಧಾರಣೆಯ ನಾಲ್ಕುತಿಂಗಳ ನಂತರ ಭ್ರೂಣವಾಗಿ ಅಂತರ್ಜೀವನದಿಂದ ಎದೆ ಬಡಿತದೊಂದಿಗೆ ಸಂಪೂರ್ಣವಾಗಿ ಬೆಳೆದ ಭ್ರೂಣವಾಗಿ ವೃದ್ಧಿಗೊಳ್ಳುತ್ತದೆ. ಈ ಘಟನೆಗಳು ತಾಯಿಗೆ ಸಂಬಂಧಿಸುತ್ತವೆ—ಅವಳ ದುಃಖಗಳು, ತಾಪತ್ರಯಗಳು, ತೊಂದರೆಗಳು ಗರ್ಭದ ಒಳಗೇ ದಾಖಲಾಗುತ್ತವೆ, ಅದರ ಅಂತರ್ಮನಸ್ಸು ಘಟನೆಗಳ ಸಂಪೂರ್ಣ ಪರಿಣಾಮವನ್ನು ತೆಗೆದುಕೊಳ್ಳಲಾರಂಭಿಸುತ್ತದೆ.

ಆದ್ದರಿಂದ, ಓರ್ವನು ಸಮ್ಮೋಹನದ ಮೂಲಕ, ಗರ್ಭದೊಳಗಿನ ಜೀವದ ಮೇಲೆ ಎಲ್ಲಾ ಘಟನೆಗಳ ಪರಿಣಾಮದ ನಿರ್ದಿಷ್ಟ ಜ್ಞಾನವನ್ನು ಖಚಿತವಾಗಿ ತಿಳಿದುಕೊಳ್ಳಬಹುದು. ನಾವು ಸಂಬಂಧಪಟ್ಟ ವ್ಯಕ್ತಿಯ ವ್ಯಕ್ತಿತ್ವದ ಬಗ್ಗೆ ಪ್ರಾಮಾಣಿಕವಾದ ವಿಚಾರವನ್ನು ತಿಳಿದುಕೊಳ್ಳಬಹುದು.

## ಗರ್ಭದಲ್ಲಿ ಶಿಕ್ಷಣ.

ಹಿಂದೂ ಪುರಾಣಸಾಹಿತ್ಯದಲ್ಲಿ ನಾವು ಚಕ್ರವ್ಯೂಹದಂತೆ ಇರುವ ಯುದ್ಧ ಭೂಮಿಯನ್ನು ಭೇದಿಸುವುದನ್ನು ತನ್ನ ತಂದೆಯಿಂದ ಕಲಿತಂತಹ ಅಭಿಮನ್ಯುವಿನ ಬಗ್ಗೆ ಓದಿದ್ದೇವೆ. ಮಹಾಭಾರತ ಯುದ್ಧದಲ್ಲಿ ಅರ್ಜುನನು ಯುದ್ಧಭೂಮಿಯ ಹೊರಗಡೆ ಚಕ್ರವ್ಯೂಹವನ್ನು ಭೇದಿಸುವ ಜವಾಬ್ದಾರಿಯನ್ನು ಅಭಿಮನ್ಯುವಿಗೆ ವಹಿಸುತ್ತಾನೆ. ಅವನು ಈ ತರಹದ ಯುದ್ಧದಕ್ರಮವನ್ನು ಭೇದಿಸುವುದು ತನಗೆ ತಿಳಿದಿರುವುದಾಗಿ, ಆದರೆ ಈ ಯುದ್ಧಕ್ರಮದಿಂದ ಹೊರಗೆ ಬರುವ ಯುದ್ಧಕೌಶಲ್ಯವು ತನಗೆ ಗೊತ್ತಿಲ್ಲವೆಂದು ಹೇಳುತ್ತಾನೆ.

ಏಕೆಂದರೆ, ತಾನು ಗರ್ಭದಲ್ಲಿದ್ದಾಗ ಈ ತರಹದ ಯುದ್ಧಕ್ರಮವನ್ನು ಭೇದಿಸುವಂತಹ ಕಲೆಯನ್ನು ಕಲಿತಿರುವುದಾಗಿಯೂ ಹಾಗೂ ತನ್ನ ತಂದೆಯು ತನ್ನ ತಾಯಿಗೆ ಇನ್ನೂ ಈ ತರಹದ ಯುದ್ಧಕ್ರಮದಿಂದ ಹೊರಗೆ ಬರುವ ಯುದ್ಧಕಲೆಯನ್ನು ಬೋಧಿಸುತ್ತಿದ್ದಾಗ, ಆಕೆಯು ನಿದ್ದೆ ಹೋಗಿದ್ದಳು ಎಂದು ಹೇಳಿದನು. ಪರಿಣಾಮವಾಗಿ ಅಭಿಮನ್ಯುವೂ ಸಹ, ಗರ್ಭದಲ್ಲಿ ನಿದ್ದೆಹೋಗಿದ್ದನು. ಆದ್ದರಿಂದ ಅವನು ಈ ತರಹದ ಯುದ್ಧಕ್ರಮದಿಂದ ಹೊರಗೆ ಬರುವ ವಿದ್ಯೆಯನ್ನು ಕಲೆಯಲಾಗಲಿಲ್ಲ.

ಇದರ ಅರ್ಥ ಸ್ಪಷ್ಟವಾಗಿದೆ. ವಿಚಾರಗಳು ಗರ್ಭದಲ್ಲಿರುವ ಜೀವಕ್ಕೆ ತಾಯಿಯ ಮೂಲಕ ತಮ್ಮದೇಯಾದ ಪರಿಣಾಮವನ್ನು ಬೀರುತ್ತವೆ ಮತ್ತು ಓರ್ವನು ಇಚ್ಛಿಸಿದಲ್ಲಿ, ಗರ್ಭದಲ್ಲಿರುವ ಶಿಶುವಿಗೆ ಬೋಧಿಸಲೂ ಬಹುದು. ಸಮ್ಮೋಹನ ನಿದ್ರೆಯಲ್ಲಿ ತಾಯಿಯ ಬಹಿರ್ಮನಸ್ಸು ನಿದ್ದೆಹೋಗಿರುತ್ತದೆ. ಆದರೆ ಆಕೆಯ ಅಂತರ್ಮನಸ್ಸು ಆ ಪರಿಸ್ಥಿತಿಯಲ್ಲೂ ಚೇತನವಾಗಿಯೇ ಇರುತ್ತದೆ ಮತ್ತು ಎಲ್ಲಾ ಆಜ್ಞೆಗಳನ್ನು ಮತ್ತು ಪ್ರಭಾವಗಳನ್ನು ಪಡೆದುಕೊಳ್ಳುವ ಸ್ಥಿತಿಯಲ್ಲಿರುತ್ತದೆ.

ಆ ಪ್ರಕಾರವಾಗಿ, ತಾಯಿಗೆ, ಆಕೆಯ ಸಮ್ಮೋಹನ ನಿದ್ರೆಯಲ್ಲಿ, ಜ್ಞಾನದ ಹಲವಾರು ನೋಟಗಳನ್ನು ಬೋಧಿಸಿದಲ್ಲಿ, ಬೆಳೆದ ಭ್ರೂಣವು ಈ ಜ್ಞಾನವನ್ನು ಪಡೆದುಕೊಂಡು ಹುಟ್ಟಿದ ನಂತರವೂ ಅದನ್ನು ಜ್ಞಾಪಕದಲ್ಲಿಟ್ಟುಕೊಳ್ಳುತ್ತದೆ.

ಉದಾಹರಣೆಗೆ, ನಾನು ಓರ್ವ ದಂಪತಿಗಳಿಗೆ ಈ ಪ್ರಯೋಗಕ್ಕೆ ಅಳವಡಿಸಿದೆ. ಗಂಡ ಹೆಂಡತಿ ಇಬ್ಬರೂ ಬಹಳ ಸಮಚಿತ್ತದಿಂದಿದ್ದರು, ಅವರು ಉತ್ಕೃಷ್ಟ ನಡುವಳಿಕೆಯ ನಿಯಮಗಳಿಗೆ ಹಾಗೂ ಅವರ ಉತ್ತಮ

ಸಂಪ್ರದಾಯದಲ್ಲಿ ಅಚಲವಾಗಿ ಉಳಿದಿರುವುದಕ್ಕೆ ಹೆಸರಾಗಿದ್ದರು. ಅವರು ಒಂದು ಸದ್ಗುಣಿ ಹಾಗೂ ಆದರ್ಶ ಮಗುವಿಗೆ ಜನ್ಮಕೊಡಲು ಬಯಸಿದರು. ಹೆಂಡತಿಯು ಗರ್ಭಿಣಿಯಾದಾಗ, ಅವರು ನನ್ನ ಸೂಚನೆಗಳನ್ನು ಅನುಸರಿಸಿ ಗಂಗೆಯದಡದಲ್ಲಿರುವ ಹರಿದ್ವಾರದಲ್ಲಿ ನೆಲೆಸಲಾರಂಭಿಸಿದರು.

ಗಂಡನಿಗೆ ನಾನು ಸಮ್ಮೋಹನದ ಕ್ಲಿಷ್ಟತೆಗಳನ್ನು ಕಲಿಸಿದ್ದೆ. ಆದ್ದರಿಂದ ಅವನು ಪ್ರತಿ ಮಧ್ಯಾಹ್ನ ಹೆಂಡತಿಯನ್ನು ಸಮ್ಮೋಹನ ನಿದ್ರೆಯಲ್ಲಿ ತಂದು ರಾಮಾಯಣದ ಆಯ್ದ ನುಡಿಗಳನ್ನು ಇಂಪಾದ ಮತ್ತು ಮಧುರವಾದ ಸ್ವರ ಉಚ್ಚಾರದಲ್ಲಿ ಪಠಿಸಿ ಆಕೆಗೆ ಧಾರ್ಮಿಕ ಹಾಗೂ ಧರ್ಮಗ್ರಂಥಗಳನ್ನು ಉಪದೇಶಿಸುತ್ತಿದ್ದನು. ಐದು ತಿಂಗಳವರೆಗೆ ಅವನು ಈ ಅಭ್ಯಾಸವನ್ನು ಮುಂದುವರಿಸಿದನು. ಪ್ರತಿ ಬೆಳಿಗ್ಗೆ ಹಾಗೂ ಸಾಯಂಕಾಲ ಅವರು ಹೊರಗೆ ನದೀದಂಡೆಗೆ ಹೋಗಿ ಹೆಚ್ಚಾಗಿ ಧರ್ಮದಬಗ್ಗೆ ಮಾತಾಡುತ್ತಿದ್ದರು.

ಅವರಿಗೆ ಒಬ್ಬನು ಹುಡುಗನು ಹುಟ್ಟಿದನು. ಆ ದಂಪತಿಗಳು ಅಲ್ಲಿ ಸುಮಾರು ಐದು ವರ್ಷದವರೆಗೆ ಇದ್ದರು. ಆ ಹುಡುಗನನ್ನು ಬಹಳ ಉತ್ತಮವಾದ ಧಾರ್ಮಿಕ ಸಂಪ್ರದಾಯದಲ್ಲಿ ಬೆಳೆಸಲಾಯಿತು. ಅವನನ್ನು ಈ ಆಧುನಿಕ ಹಾದಿಗಳ ಮಾಲಿನ್ಯಗಳಿಂದ ದೂರವಿರಿಸಲಾಗಿತ್ತು.

ಆ ಹುಡುಗನು ಒಬ್ಬ ವಿದ್ವಾಂಸನಾದ ಪಂಡಿತನಹಾಗೆ ಆಧ್ಯಾತ್ಮಿಕ ಪ್ರವಚನಗಳನ್ನು ನಡೆಸುವಾಗ ಹೆಚ್ಚೆಂದರೆ ಐದು ವರ್ಷದವನಾಗಿದ್ದನು. ಅವನಿಗೆ ಬಹಳಷ್ಟು ಸಂಸ್ಕೃತ ದ್ವಿಪದಿ ಪದ್ಯಗಳು ಗೊತ್ತಿದ್ದವು ಹಾಗೂ ಅವನ ಭಾಷಣವು ಬಹಳ ಪರಿಣಾಮಕಾರಿಯಾಗಿತ್ತು. ನಿಜವಾಗಿಯೂ ಅಂತಹ ಹೆಚ್ಚೆಂದರೆ ಐದು ವರ್ಷದ ಮಗುವಾಗಿರುವ ಹುಡುಗನು ಧರ್ಮದ ಗಹನವಾದ ನಿಯಮಗಳ ಬಗ್ಗೆ ಅಷ್ಟೊಂದು ಅಧಿಕಾರಯುತವಾಗಿ ಚರ್ಚಿಸಬೇಕೆಂದರೆ ಅದು ಒಂದು ಪವಾಡವೇ. ಅಂತಹ ಅದ್ಭುತ ನಿದರ್ಶನವನ್ನು ನೋಡುವುದಕ್ಕೆ ಜನರು ದೂರದ ಊರುಗಳಿಂದ ಗುಂಪು ಗೂಡುತ್ತಿದ್ದರು ಹಾಗೂ ಅವರು ತಟಸ್ಥ ಮೂಗರಾಗುತ್ತಿದ್ದರು.

ಆ ದಂಪತಿಗಳು ಈಗಲೂ ಇದ್ದಾರೆ. ಸಹಜವಾಗಿಯೇ ಅವರ ಮಗನೂ ಸಹ. ಅವನಿಗೆ ಈ ವಯಸ್ಸಿನಲ್ಲಿ ಇಂತಹ ಘನವಾದ ಜ್ಞಾನವಿರುವುದು ಒಂದು ಅನುಪಮವಾದ ವಿಷಯವು.

ಗರ್ಭದಲ್ಲಿರುವ ಭ್ರೂಣವು ಆಚ್ಚೆಗಳಲ್ಲಿ ಭಾಗಿಯಾಗುತ್ತದೆನ್ನುವ ವಿಷಯ ಸತ್ಯ. ಭವಿಷ್ಯದಲ್ಲಿಯೂ ಅದು ಅಚಲವಾಗಿಯೇ ಇರುವುದು.

## ಜನನಮುಂಚಿನ ಸ್ಮೃತಿಗಳು

ಸಮ್ಮೋಹನದ ಪ್ರವೀಣರು ತಾವು ಓರ್ವನ ಹಿಂದಿನ ಜನ್ಮವನ್ನು ಅಥವಾ ಜನ್ಮಗಳನ್ನು ಸಮ್ಮೋಹನದ ಮಾಧ್ಯಮದ ಮೂಲಕ ನೋಡಬಹುದೆಂದು ತಿಳಿಯುತ್ತಾರೆ. ಈ ವಾಸ್ತವ ಜೀವನಕ್ಕೆ ಮುಂಚೆ ನಮ್ಮ ಜೀವನ ಏನಾಗಿತ್ತು? ಈ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿಯುವುದು ಪ್ರಮುಖವು, ಏಕೆಂದರೆ, ಈ ಜನ್ಮವು ಬೇರೆ ಅಸ್ತಿತ್ವವುಳ್ಳದ್ದಲ್ಲ. ಅದು ನಮ್ಮ ಹಿಂದಿನ ಜನ್ಮದಿಂದ ಮುಂದುವರಿದಿದೆ. ನಮಗೆ ಇದ್ದ ಜೀವನ ಮತ್ತು ನಾವು ಜೀವನದ ಅಥವಾ ಜೀವನಗಳ ಈ ಜನ್ಮಕ್ಕೆ ಮುಂಚಿತವಾಗಿ ಯಾವ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುತ್ತೇವೋ ಅವು ಈ ಜನ್ಮಕ್ಕೆ ಒಂದು ಸದೃಢವಾದ ಪರಿಣಾಮವನ್ನು ಬೀರಲೇ ಬೇಕು. ನಾವು ಈ ಜನ್ಮದಲ್ಲಿ ಎಲ್ಲವನ್ನೂ ತಿಳಿದುಕೊಳ್ಳಬೇಕಾದರೆ ನಾವು ಹಿಂದಿನ ಜೀವನ ಅಥವಾ ಜೀವನಗಳ ಬಗ್ಗೆ ತಿಳಿದುಕೊಂಡರೇನೇ ಅದು ಸಾಧ್ಯ.

ಭಾರತೀಯ ತರ್ಕಶಾಸ್ತ್ರದ ಪ್ರಕಾರ ಪ್ರಸ್ತುತ ಜನ್ಮವು ಒಂದು ಉದ್ದ ಸರಪಳಿಯಲ್ಲಿ ಒಂದು ವರ್ತುಲವಿದ್ದಹಾಗೆ. ಹಿಂದಿನ ಜನ್ಮವೂ ಒಂದು ವರ್ತುಲವಾಗಿತ್ತು, ಮುಂಬರುವ ಜನ್ಮವೂ ಒಂದು ವರ್ತುಲವಾಗುತ್ತದೆ. ಈ ಎಲ್ಲಾ ವರ್ತುಲಗಳೂ ಸೇರಿ ಒಂದು ಉದ್ದ ಸರಪಳಿಯಾಗುತ್ತದೆ. ನಾವು ಸರಪಳಿ

ಬಗ್ಗೆ ಎಲ್ಲವನ್ನೂ ತಿಳಿದುಕೊಳ್ಳುವವರೆಗೂ, ನಾವು ವರ್ತುಲಗಳ ಬಗ್ಗೆ ಬೇರೆಯಾಗಿ ತಿಳಿದುಕೊಳ್ಳಲಾಗುವುದಿಲ್ಲ, ಆದ್ದರಿಂದ ನಾವು ಹಿಂದಿನ ಮತ್ತು ಮುಂಬರುವ ಸಮ್ಮೋಹನದ ಆಳವಾದ ಜ್ಞಾನದ ಮೂಲಕ ಎಲ್ಲಾ ವರ್ತುಲಗಳ ಬಗ್ಗೆ ತಿಳಿದುಕೊಳ್ಳುವ ಅವಶ್ಯಕತೆ ಇದೆ.

ಸಮ್ಮೋಹನ ವಶದಲ್ಲಿ ಅಂತರ್ಮನಸ್ಸು ವಿಚಾರಮುಕ್ತವಾಗಿ ವಿರಕ್ತವೂ ಆಗುತ್ತದೆ. ಆದರೆ ಈ ಅವಸ್ಥೆಯಲ್ಲಿ ಅಂತರ್ಮನಸ್ಸಿನ ವೇಗವು ನಿಜವಾಗಿಯೂ ಭೀಕರವಾಗಿರುತ್ತದೆ. ಅಂತಹ ಅವಸ್ಥೆಯಲ್ಲಿ ಅಂತರ್ಮನಸ್ಸಿಗೆ ಆಜ್ಞಾಪಿಸಿದರೆ, ಓರ್ವನು ಹಿಂದಿನ ಜನ್ಮದ ಬಗ್ಗೆ ಎಲ್ಲವನ್ನೂ ತಿಳಿದುಕೊಳ್ಳಬಹುದು. ಅದೇರೀತಿ ಸಮ್ಮೋಹನದ ಮೂಲಕ ನಾವು ಮುಂಬರುವ ಜೀವನದ ಬಗ್ಗೆಯೂ, ನಾವು ಎಲ್ಲಿ ಹುಟ್ಟುತ್ತೇವೆ ಮತ್ತು ನಾವು ಎಲ್ಲಿ ಇರುತ್ತೇವೆ ಹಾಗೆಲ್ಲಾ ತಿಳಿದುಕೊಳ್ಳಬಹುದು.

ಪಕ್ಷಪಾತರಹಿತ ರೀತಿಯಲ್ಲಿ ನೋಡಿದಾಗ ಸಮ್ಮೋಹನ ವಿಜ್ಞಾನವು ಆಧುನಿಕ ಯುಗದಲ್ಲಿ ಎತ್ತರದ ಹಂತದ ಪ್ರಗತಿಗೆ ತಲುಪಿದೆ. ಮಾನವ ಜೀವನವನ್ನು ಅನುಕೂಲಕರ ಹಾಗೂ ಸಂತೋಷಮಯ ಮಾಡುವಲ್ಲಿ ಅದು ತನ್ನ ಸಾಮರ್ಥ್ಯವನ್ನು ಸಾಬೀತುಪಡಿಸಿದೆ. ಸಮ್ಮೋಹನದ ಸಲಕರಣೆಯ ಮೂಲಕ ನಮ್ಮ ಯೋಚನೆಗಳನ್ನು ಕೇಂದ್ರೀಕರಿಸಿ ಬಹಳ ಎತ್ತರಕ್ಕೆ ತಲುಪಬಹುದು. ಇಚ್ಛಾಶಕ್ತಿಯ ಸರಿಯಾದ ಸಂಸ್ಕರಣದ ಮೂಲಕ ನಾವು ಅಪರೂಪದ ಪೂರ್ಣತೆಯನ್ನು ಸಾಧಿಸಬಹುದು.

ವಾಸ್ತವದಲ್ಲಿ ಈ ಎಲ್ಲಾ ಗೌರವವು ತನ್ನ ಗುರಿಯನ್ನು ಅಷ್ಟು ಕಡಿಮೆ ಸಮಯದಲ್ಲಿ ಮುಟ್ಟುವಂತಹ ಮಾನವ ಜೀವನಕ್ಕೆ ಹೋಗಬೇಕು.

ಗುರಿಯನ್ನು ಮುಟ್ಟುವ ಉದ್ದೇಶಕ್ಕೋಸ್ಕರ, ಅದಕ್ಕೆ ಹಲವಾರು ಶಕ್ತಿಗಳ ಸಹಕಾರ ಬೇಕಾಗುತ್ತದೆ. ಈ ಜೀವಕೊಡುವಂತಹ ಶಕ್ತಿಗಳಲ್ಲಿ ಸಮ್ಮೋಹನವು ಬಹಳ ಎತ್ತರದ ಶ್ರೇಣಿಯದ್ದಾಗಿದೆ. ಈ ವಿಜ್ಞಾನದ ಸಹಾಯದಿಂದ ನಾವು ನಮ್ಮ ಸ್ವಂತ ಕುಂದುಕೊರತೆಗಳನ್ನು ದಾಟಿಕೊಂಡು ನಮ್ಮ ವ್ಯಕ್ತಿತ್ವದಲ್ಲಿ ಬೇರೆಯವರಿಗೆ ಅದ್ವಿತೀಯವಾದ ಆಕರ್ಷಣೆಯನ್ನು ಸೃಷ್ಟಿಸಿಕೊಳ್ಳಬಹುದು. ನಾವು ಬೇರೆಯವರನ್ನು ಪ್ರಭಾವಿತಗೊಳಿಸಿದ ಹಾಗೆ, ನಮ್ಮ ಸ್ವಂತ ವ್ಯಕ್ತಿತ್ವವನ್ನು ಪ್ರಭಾವಯುತವಾದ ಆಕರ್ಷಣೆಯಿಂದ ಆರೋಗ್ಯವಾದ ಶಕ್ತಿಯುತ ಸಲಕರಣೆಯಾಗಿ ಪುನರ್ರೂಪಿಸಿಕೊಳ್ಳಬಹುದು.

ಈಗ ತುರ್ತಾಗಿ ಬೇಕಾಗಿರುವುದೇನೆಂದರೆ ಈ ವಿಜ್ಞಾನವನ್ನು ಒಂದು ನಿಯಮಾನುಸಾರವಾಗಿ ಅಧ್ಯಯನ ಮಾಡಬೇಕು, ಹಾಗೂ ಈ ವಿಶಿಷ್ಟ ಶಕ್ತಿಗಳನ್ನು ಉಪಯೋಗಿಸಿಕೊಂಡು ನಾವು ನಮ್ಮ ಪೂರ್ಣತೆಯ ಗುರಿಯನ್ನು ಮುಟ್ಟಬೇಕು.

## ಆಧ್ಯಾತ್ಮಿಕ ಶಕ್ತಿಗಳು

ಆಧಾರಭೂತವಾಗಿ ಸಮ್ಮೋಹನವು ಮನಸ್ಸಿನ ಹಾಗೂ ಮೆದುಳಿನ ವಿಜ್ಞಾನವು. ಅದು ನಮಗೆ ನಮ್ಮ ಮನಸ್ಸಿನಿಂದ ಹಾಗೂ ಮೆದುಳಿನಿಂದ ಯೋಚನೆಗಳಿಂದ ಮುಕ್ತ ಮಾಡುವಂತಹ ಒಂದೇ ವಿಜ್ಞಾನವಾಗಿದೆ. ಅದು, ಪುನಃ ನಮ್ಮ ಜೀವನವನ್ನು ಆಯ್ದುಕೊಂಡ ಗುರಿಯ ಕಡೆ ಮುಂದುವರಿಯಲು ಸಹಾಯಕ ವಾಗುವುದಲ್ಲದ, ನಮ್ಮ ಜೀವನದಲ್ಲಿ ಪೂರ್ಣತೆಯನ್ನು ಕೊಡುವಂತಹ ವಿಜ್ಞಾನವು.

ಸಮ್ಮೋಹನವು ಭಾರತದ ಒಂದು ಪುರಾತನ ಹಾಗೂ ಪ್ರಮುಖವಾದ ವಿಜ್ಞಾನವಾಗಿದೆ. ನಮಗೆ ಈ ಅಪೂರ್ವವಾದ ವಿಜ್ಞಾನವನ್ನು ಕೊಟ್ಟಿರುವಂತಹವರು ಪೂರ್ವಕಾಲದ ಋಷಿಗಳೂ ಹಾಗೂ ಮುನಿಗಳು.

ಈ ವಿಜ್ಞಾನದ ಮಾಧ್ಯಮದ ಮೂಲಕವೇ ಅವರು ವಾಸ್ತವದಲ್ಲಿ ನಂಬಲಾಗದಂತಹ *ಸಿದ್ಧಿ*[1]ಗಳನ್ನು ಪಡೆದರು. ಅವರು ಎಂತಹ ಕ್ಲಿಷ್ಟ ಹಾಗೂ ಕಷ್ಟಕರ ಸಮಸ್ಯೆಗಳನ್ನು ಬಗೆಹರಿಸಿದರೆಂದರೆ ಅವು ಬಹಳ ಅರ್ಹರ ಶಕ್ತಿಗಳನ್ನು ಮೀರಿಸಿದ್ದವು.

ಮನಸ್ಸು *ತುರಿಯಾವಸ್ಥೆ*[2]ಯನ್ನು ತಲುಪಿದಾಗಿ ಅಭ್ಯಾಸಕಾರನು *ಅಷ್ಟಸಿದ್ಧಿ*[3]ಗಳ ಬಿರುದನ್ನು ಪಡೆಯುವನು ಹಾಗೂ ತನ್ನಷ್ಟಕ್ಕೆ ತಾನೇ ಅಷ್ಟೊಂದು ಪ್ರಾಮುಖ್ಯವಲ್ಲದ ಧ್ಯಾನಗಳ ಮೇಲೆ ಜಯಿಸುತ್ತಾನೆ.ಪುರಾತನ ಗ್ರಂಥಗಳಲ್ಲಿ ನಾವು ಸಮುದ್ರದ ಅಲೆಗಳ ಮೇಲೆ ನಡೆಯುವಂತಹ, ಗಾಳಿಯ ಜೊತೆ ಹಾರುವಂತಹ ಮತ್ತು ಸಾವಿರಾರು ಮೈಲಿ ದೂರದಲ್ಲಿರುವ ದೃಶ್ಯಗಳನ್ನು ವೀಕ್ಷಿಸುವಂತಹ ಯೋಗಿಗಳ ಉದಾಹರಣೆಗಳನ್ನು ಕಾಣುತ್ತೇವೆ. ನಮಗೆ ಈ ಸಾಧನೆಗಳು ಪವಾಡಗಳ ಹಾಗೆ ಕಾಣುತ್ತವೆ. ಆದರೆ ಭಾರತದ ಪುರಾತನ ಋಷಿಗಳಿಗೆ ಈ ಸಿದ್ಧಿಗಳು ತಮ್ಮ ಮನಸ್ಸಿನ ಮೇಲೆ ಸಂಪೂರ್ಣ ಹತೋಟಿಯನ್ನು ತಂದ ಪರಿಣಾಮವಾಗಿ ತಮ್ಮ ಈ ಸಾಮರ್ಥ್ಯವನ್ನು ಸಾಧಿಸಲು ಸಾಧ್ಯವಾಯಿತು ಮತ್ತು ಯೋಚನೆಗಳ ಮತ್ತು ಮನಸ್ಸಿನ ಮೇಲೆ ಸಂಪೂರ್ಣವಾದ ಅಗಲುವಿಕೆ ಮತ್ತು ಅಂತರ್ಮನಸ್ಸನ್ನು ಎಚ್ಚರಿಸಲು ಒಂದು ನಿರ್ದಿಷ್ಟವಾದ ಯೋಗ್ಯತೆಯನ್ನು ಪಡೆಯಲೂ ಸಹ ಸಾಧ್ಯವಾಯಿತು. ಈ ಕಠಿಣವಾದ ತಡೆಯ ದಾರಿಯಿಂದ ಅವರು ನಂಬಲಾಗದ ಸಿದ್ಧಿಗಳನ್ನು ಪಡೆದುಕೊಂಡು ಬಿಟ್ಟರು.

ಎಲ್ಲಾ ಧ್ಯಾನಗಳಲ್ಲಿಯೂ ನಂಬಿಕೆಯು ಒಂದು ಕಲ್ಲಿನಂತಹ ಅಡಿಪಾಯವಾಗಿತ್ತು. ಓರ್ವನು ನಂಬಿಕೆಯಿಲ್ಲದೆ ಏನನ್ನೂ ಸಾಧಿಸಲಿಚ್ಛಿಸಲಾಗುವುದಿಲ್ಲ. ಕೃಷ್ಣ ಭಗವಾನನು ತಾನೇ ಹೇಳಿದ: *ಶ್ರದ್ಧಾ ಧನ್ ಲಭತೇ ಜ್ಞಾನಮಃ* ನಿಮ್ಮಲ್ಲಿ ನಂಬಿಕೆ ಇದ್ದರೆ ನೀವು ಜೀವನದಲ್ಲಿ ಖಚಿತವಾಗಿ ಯಶಸ್ವಿಯಾಗುವಿರಿ. ನಂಬಿಕೆಯೊಂದೇ ಬೇರೆಯವರ ಜೊತೆ ಸಂಕೋಲೆಯನ್ನು ತಯಾರಿಸುವ ಅವಶ್ಯಕತೆಯನ್ನು ಕೊಡುವುದು. ನಂಬಿಕೆಯು ಯಾವತ್ತೂ ನಿಜವಾದ ಪ್ರಾಮುಖ್ಯತೆಯಿಲ್ಲದೆ ಇಲ್ಲ. ಅದಕ್ಕೆ ಒಂದು ನಿಶ್ಚಿತವಾದ ಪ್ರಕೃತಿಸ್ವಭಾವದ ಅವಶ್ಯಕತೆ ಇದೆ. ನಾವು ಬೇರೆ ವ್ಯಕ್ತಿಯ ಕೆಲವು ಕ್ಷಣಗಳಲ್ಲಿ ಭಾಗಿಯಾಗಲು ಇಚ್ಛಿಸುತ್ತೇವೆ, ಆದ್ದರಿಂದ ಹೇಳಲು, ಅದು ನಂಬುಗೆಯ ಮೂಲವಾಗಿತ್ತು.

ಒಬ್ಬ ಸುಂದರವಾದ ಹೆಂಗಸು ಒಂದು ಏಕಾಂತ ಸ್ಥಳದಲ್ಲಿ ಇರಬೇಕಾಗಿ ಬಂದರೆ ತನಗೆ ತಾನೇ ಸುರಕ್ಷಿತ ಎಂದು ಭಾವಿಸಿಕೊಳ್ಳುವುದಿಲ್ಲ. ಅರ್ಧ ಡಝುನ್ ಮನುಷ್ಯರ ಉಪಸ್ಥಿತಿಯೂ ಸಹ ಆಕೆಯ ಆಳವಾಗುತ್ತಿರುವ ಅಸುರಕ್ಷತೆಯ ಭಾವನೆಯನ್ನು ತೆಗೆಯಲಾಗುವುದಿಲ್ಲ. ಆಕೆಗೆ ಹೇಗಾದರೂ, ತನ್ನ ಗಂಡನ ಜೊತೆಯಲ್ಲಿರುವುದು ಸಂಪೂರ್ಣ ಸುರಕ್ಷಿತ ಭಾವನೆಯನ್ನು ಕೊಡುತ್ತದೆ. ಇದಕ್ಕೆ ಮುಖ್ಯವಾದ ಕಾರಣವೆಂದರೆ ಆಕೆಗೆ ತನ್ನ ಗಂಡನಲ್ಲಿ ಆಳವಾದ ನಂಬಿಕೆ ಇದೆ. ಬೇರೆಯವರು ಎಷ್ಟೇ ಆಕ್ಷೇಪಣೆ ಮಾಡಿದರೂ, ಆಕೆಗೆ ಅದೇ ನಂಬಿಕೆ ಅವರಲ್ಲಿ ಇಲ್ಲ.

ಅದೇ ತರಹದ ನಂಬಿಕೆಯು ಗುರು ಮತ್ತು ಶಿಷ್ಯರಲ್ಲಿ ಕಾರ್ಯ ನಡೆಸುತ್ತದೆ. ಶಿಷ್ಯನಿಗೆ ಗುರುವಿನಲ್ಲಿ ಯಾವುದೇ ತರಹದ ನಂಬಿಕೆ ಇಲ್ಲದಿದ್ದರೆ, ಅವನಲ್ಲಿ ಅವರಿಂದ ಏನನ್ನಾದರೂ ಕಲಿಯಲು ತಳಹದಿಯಾದ ಉಪಕರಣವು ಇಲ್ಲದಂತಾಗುತ್ತದೆ. ಈ ಉಪಕರಣದೊಂದಿಗೆ ಸಂಪನ್ನನಾಗಿ ಅವನು ಗುರುವಿನಿಂದ ಎಲ್ಲವನ್ನೂ ಕಲಿಯಲಿಚ್ಛಿಸಬಹುದು.

ಒಬ್ಬ ಗುರುವಿಗೆ ಸುಮಾರು ಇಪ್ಪತ್ತು ಶಿಷ್ಯರಿದ್ದಾರೆ. ಅವರಲ್ಲಿ ಕೆಲವರು ಮಾತ್ರ ನಿಗದಿತ ಸಮಯದಲ್ಲಿ

---

1. ಸಿದ್ಧಿಗಳು : ದೈವೀಕ ಕೃಪೆ ಹಾಗೂ ಆಧ್ಯಾತ್ಮಿಕ ಮುಕ್ತಿಯನ್ನು ಪಡೆಯುವುದು.
2. ತುರಿಯಾವಸ್ಥೆ : ಬೇರೊಂದೆಡೆ ವಿವರಿಸಲಾಗಿದೆ.
3. ಅಷ್ಟ ಸಿದ್ಧಿಗಳು : ಒಟ್ಟಿಗೆ ಎಂಟು ಸಿದ್ಧಿಗಳಿವೆ.

ಎಲ್ಲವನ್ನೂ ಸಾಧಿಸುತ್ತಾರೆ. ಅವರ ಯಶಸ್ಸು ಯಾವತ್ತೂ ಅವನ ಗುರುವಿನ ಮೇಲಿನ ಸ್ಥಿರವಾದ ನಂಬುಗೆಯ ಮೇಲೆ ಅವಲಂಬಿಸಿರುತ್ತದೆ. ನಂಬಿಕೆ ಇಲ್ಲ, ಜ್ಞಾನವಿಲ್ಲ.

ನಾವು ಈ ಮೊದಲೇ ಚರ್ಚಿಸಿದಂತೆ, ನಮ್ಮ ಮನಸ್ಸಿನಲ್ಲಿ ಬರುತ್ತಾ ಇರುವಂತಹ ಯೋಚನೆಗಳು, ಅವಶ್ಯವಾಗಿ ಎದುರಿನಲ್ಲಿ ಕೂತುಕೊಂಡ ಮನುಷ್ಯನ ಮೇಲೆ ಪರಿಣಾಮ ಬೀರುತ್ತವೆ. ಅದು, ಯಾವತ್ತಿಗೂ, ಒಂದು ಕಡೆಯ ಓಡಾಟ (ಒನ್ ವೇ ಟ್ರಾಫಿಕ್) ಅಲ್ಲ. ನಾವೂ, ಸಹ, ಎದುರಿನಲ್ಲಿ ಕೂತುಕೊಂಡವನ ಮನಸ್ಸಿನಲ್ಲಿ ಅಲೆ ಅಲೆಯಾಗಿ ಬರುವಂತಹ ಯೋಚನೆಗಳ ಪರಿಣಾಮಕ್ಕೆ ಒಳಗಾಗುತ್ತೀವಿ. ಆದ್ದರಿಂದ ವಿಧಾನವು ಸ್ಪಷ್ಟವಾಗಿ ಪರಸ್ಪರವಾಗಿದೆ. ಉದಾಹರಣೆಗೆ, ಗುರುಗಳ ಕಲಿಕೆಯಲ್ಲಿ ಸಂದೇಹಾತ್ಮಕವಾಗಿದ್ದರೆ ಹಾಗೂ ಅವರ ಯೋಗ್ಯತೆಯ ಬಗ್ಗೆ ಪ್ರಶ್ನಿಸುತ್ತಾ ಹೋದರೆ, ನಾವು ಬಾಯಿಬಿಟ್ಟು ಹೇಳದಂತಹ ಅನುಮಾನಗಳು ಗುರುವಿನಲ್ಲಿ ಅದೇ ತರಹದ ಪ್ರತಿಕ್ರಿಯೆಯನ್ನು ಹೊರತರುತ್ತವೆ, ಪರಿಣಾಮವಾಗಿ ಗುರುವು ತಾನು ಕಲಿಸಬೇಕೆಂದಿರುವ ಜ್ಞಾನದ ಮಟ್ಟದಲ್ಲಿ ಎಲ್ಲಾ ಆಸಕ್ತಿಯನ್ನೂ ಕಳೆದುಕೊಳ್ಳುತ್ತಾನೆ.

ಅಪನಂಬಿಕೆ ಹಾಗೂ ಅನುಮಾನಗಳಿಂದ ಆಕ್ರಮಿತಗೊಂಡ ನಾವು ನಮ್ಮ ಎಲ್ಲಾ ಗಮನವನ್ನು ಮಂತ್ರದ ಮೇಲೆ ಕೇಂದ್ರೀಕರಿಸುವುದು ಅಸಾಧ್ಯವೆಂದು ಕಾಣುತ್ತೇವೆ. ಮಂತ್ರಕ್ಕೆ ನಾವು ಪ್ರತ್ಯೇಕವಾದ ಏಕಾಗ್ರತೆಯನ್ನು ತೆಗೆದಿಡದಿದ್ದಾಗ, ನಾವು ಈ ಧ್ಯಾನದಿಂದ ಪಡೆಯಬೇಕಾದುದನ್ನು ಸಾಧಿಸಲಾಗುವುದಿಲ್ಲ.

ಈ ಮೊದಲೇ, ನಾವು ವಿರಕ್ತದ ಮನಸ್ಸು ಅಂದರೆ ಒಂದು ಸಂಪೂರ್ಣವಾಗಿ ವಿಚಾರಣೆ ಮತ್ತು ಯೋಚನೆಗಳಿಂದ ವಿಘಟನೆಯನ್ನು ಸಾಕ್ಷಿಮಾಡಿರುವಂತಹ ಮನಸ್ಸು ಯಾವಾಗಲೂ ಮನುಷ್ಯನ ಜೀವನದ ಕೊನೆಯ ಸಾಧನೆಯೆಂದು ತಿಳಿಯಲಾಗಿದೆಯೆಂದು ಒತ್ತಿಹೇಳಿದ್ದೇವೆ. ಧ್ಯಾನದಲ್ಲಿ ಸಿದ್ಧಿಯನ್ನು ಪಡೆಯುವುದಕ್ಕೋಸ್ಕರ ಈ ತರಹದ ಮನಸ್ಸು ಎಂದಿಗೂ ಅವಶ್ಯಕವಾಗಿದೆ. ಆ ತರಹದ ವಿಘಟನೆ ಇಲ್ಲದೆ ಸಾಧಾರಣವಾಗಿ ಮನಸ್ಸು ಆಕ್ರಮಕ್ಕೆ ಮತ್ತು ಜೀವನವು ಬಹಳ ಸಾಧಾರಣ ಮತ್ತು ಲೌಕಿಕದ ಮಟ್ಟಕ್ಕೆ ಇಳಿಯುತ್ತದೆ. ಮಂತ್ರವನ್ನು ಜೀವಂತ ಮಾಡಿಬಿಡಲು ಮತ್ತು ನಮ್ಮ ಸಹಜವಾದ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳಲು ವಿಘಟನೆಯು ಮೊದಲನೆಯ ನಿಬಂಧನೆ.

ಅದು, ಪುನಃ, ಈ ವಿಧಾನದಿಂದಲೇ ಓರ್ವನು ದೇವರಿಗೆ ಹತ್ತಿರವಾಗುವನು. ಏಕೆಂದರೆ ನಿಮ್ಮಲ್ಲಿ ಸಂಪೂರ್ಣ ಪರಿಣಾಮಕಾರಿಯಾಗಿ ಸಾಬೀತಾಗುವಂತಹ ಒಂದೇ ಒಂದು ಪ್ರಬಲವಾಗಿರುವ ಏಕಾಗ್ರತೆ ಇರುವುದು. ನೀವು ಹೇಗಾದರೂ, ಅಹಂಕಾರ ಹಾಗೂ ಬಿಂಕತನಗಳು ಯಾವಾಗಲೂ ನಮ್ಮ ಎದುರಾಳಿಗಳಾಗಿದ್ದಾವೆ ಎನ್ನುವ ಸತ್ಯವನ್ನು ಗಮನದಲ್ಲಿಟ್ಟುಕೊಳ್ಳಬೇಕು. ವಾಸ್ತವದಲ್ಲಿ ಅಹಂಕಾರವು ಯಾವತ್ತೂ ಮುಗುಚಬೀಳುತ್ತದೆ. ಅದು ಯಾವಾಗಲೂ ನಮ್ಮ ಏಕಾಗ್ರತೆಯನ್ನು ಕ್ಷೀಣಗೊಳಿಸಿದೆ. ಇನ್ನೊಂದು ಕಡೆ ನಿಮ್ಮ ಧ್ಯಾನವು ನಮ್ರತೆಯ ವ್ಯಾಯಾಮವಾಗಿರಬೇಕು. ಜ್ಞಾನವು ಅಧಿಕಾರಕ್ಕೆ ಎಡೆಮಾಡಬಾರದು. ನೀವು ಯಾವಾಗಲೂ ಇನ್ನೂ ಮೀರಿಸದೆ ಉಳಿದಿರುವಂತಹ ಜ್ಞಾನವು ನಮ್ಮ ಬಹಳ ಪೂರ್ವಿಕರ ವೈಶಿಷ್ಟ್ಯವಾಗಿದೆ ಹಾಗೂ ನೀವು ಅವರ ಆರ್ಜನೆಯ ಒಬ್ಬ ಉತ್ತರಾಧಿಕಾರಿ ಎನ್ನುವ ಸತ್ಯದ ಅರಿವನ್ನು ಯಾವಾಗಲೂ ತೋರಿಸಬೇಕು. ಈ ತರಹದ ಸರ್ವಸಾಧಾರಣೆಕತೆಯು ನಿಮ್ಮ ಜೀವನದ ಒಂದೇ ಸಿದ್ಧಿಯಾಗಿ ಉಳಿದಿರಬೇಕು.

ಅಹಂಕಾರ ಹಾಗೂ ದುರಾಭಿಮಾನಗಳು ಮನುಷ್ಯನನ್ನು ಅವಿಶ್ರಾಂತನನ್ನಾಗಿ ಮಾಡುತ್ತವೆ. ಅದು ಓರ್ವನ ತೃಪ್ತಿಯ ತಯಾರಿಯನ್ನು ನಾಶಗೊಳಿಸುತ್ತದೆ.

ಈ ಮುಂದಿನ ಪುಟಗಳಲ್ಲಿ ನಾನು ಸಮ್ಮೋಹನಾಧಾರಿತ ಕೆಲವು ಅದ್ವಿತೀಯವಾದ ಸಿದ್ಧಿಗಳನ್ನು

ಚರ್ಚಿಸಲಿಚ್ಛಿಸುತ್ತೇನೆ. ಯಾರೊಬ್ಬನು ಸಾಬೀತು ಪಡಿಸುವಂತಹ ಪ್ರವೀಣತೆಯನ್ನು ಪಡೆದಿರುವನೋ ಅಂತಹವನು ಈ ಸಿದ್ಧಿಗಳನ್ನು ಸಹ ಪಡೆಯಬಹುದು.

ಓರ್ವನು ಅತೀ ಪ್ರಾರಂಭದ ಪ್ರಯತ್ನದಲ್ಲೇ ಯಶಸ್ವಿಯಾಗಬೇಕೆನ್ನುವ ಅವಶ್ಯಕತೆ ಏನೂ ಇಲ್ಲ. ವಿಫಲತೆಯು ನಿಮ್ಮನ್ನು ವಿಮುಖಗೊಳಿಸಬಾರದು. ನೀವು ಶಾಂತ ಹಾಗೂ ತಣ್ಣಗೆ, ನಿಮ್ಮಲ್ಲಿ ಎಲ್ಲಿ ಸ್ವಲ್ಪ ತಪ್ಪಿದೆ ಮತ್ತು ನಿಮ್ಮ ವಿಫಲತೆಗಳಿಗೆ ಕಾರಣಗಳೇನಾಗಿದ್ದವು ಎಂದು ಪ್ರತಿಕ್ರಿಯಿಸಬೇಕು. ಆದ್ದರಿಂದ ನಮಗೆ ಎಷ್ಟೋಸಾರಿ ಪದೇ ಪದೇ ಪ್ರಯತ್ನಿಸಿದ ನಂತರವೂ ಯಶಸ್ಸು ದೊರೆಯುವುದಿಲ್ಲ. ಪ್ರಮುಖ ಕಾರಣವೆಂದರೆ ಮನಸ್ಸಿನ ಅಸ್ಥಿರತೆ, ಎಲ್ಲಾ ಯಶಸ್ಸು ಹಾಗೂ ವಿಫಲತೆಯು ಓರ್ವನ ಮನಸ್ಸಿನ ಗುಣದ ಮೇಲೆ ಅವಲಂಬಿತವಾಗಿರುತ್ತದೆ. ಆದ್ದರಿಂದ, ನೀವು ಮನಸ್ಸಿನ ಮೇಲೆ ಉತ್ತಮ ಹತೋಟಿಯನ್ನು ಪಡೆಯಲು ಮುನ್ನುಗ್ಗಬೇಕು.

ನಾವೂ ಸಹ ಸಮಾಜದ ಜೀವಿಗಳು. ನಾವು ಸಮಾಜದ ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ. ಪರಿಣಾಮವಾಗಿ ನಾವು ಯಾವಾಗಲೂ ವಿವಿಧ ತರಹದ ಕೆಲಸಗಳಿಂದ ಆಕ್ರಮಿತರಾಗಿರುತ್ತೇವೆ. ಈ ತರಹದ ಮನಸ್ಸಿನ ಅವಸ್ಥೆಯಲ್ಲಿ, ನಾವು ನಮ್ಮ ಗಮನವನ್ನು ಯಾವಾಗಲೂ ಒಂದೇ ಕೇಂದ್ರದ ಮೇಲೆ ಏಕಾಗ್ರತೆವಹಿಸಲು ಸಾಧ್ಯವಿಲ್ಲ. ನಾವು ಎಲ್ಲಾ ತರಹದ ಉದ್ಯೋಗದಲ್ಲಿ ಮುಳುಗಿದ ದಿನದಂದು, ಆದಿನ ಧ್ಯಾನದ ಅಭ್ಯಾಸವನ್ನು ಬಿಟ್ಟುಬಿಡುವುದು ಉತ್ತಮವು. ಏಕೆಂದರೆ ಮನಸ್ಸು ತನ್ನಷ್ಟಕ್ಕೆ ತಾನೇ ಈ ಕೆಲಸಗಳಿಂದ ವಿಘಟನೆಗೊಳಿಸುವಲ್ಲಿ ಬಹಳ ಶ್ರಮಿಸಬೇಕಾಗುತ್ತದೆ. ಅದು, ನಿರಂತರ ಶ್ರಮಗಳಿಂದ ಒಳಗೊಂಡಿದೆ. ಏಕೆಂದರೆ ಯಾವುದೇ ಸಂದರ್ಭದಲ್ಲಿ, ಮನಸ್ಸಿಗೆ ಒಗ್ಗದಂತಹ ನಿರಂತರ ಶ್ರಮಗಳನ್ನು ಮನಸ್ಸು ಒಳಗಾಗಬೇಕಾಗುತ್ತದೆಂದು ಅನುಭವವು ತೋರಿಸುತ್ತದೆ.

## ೧. ವಿಚಾರ ಸಂಕ್ರಮಣ ಸಿದ್ಧಿ[1]

ಈ ಸಿದ್ಧಿಯಿಂದ ನಾವು ಬೇರೆಯವರಲ್ಲಿ ವಿಚಾರಗಳನ್ನು ವರ್ಗಾಯಿಸಬಹುದು. ಬೇರೆ ಪದಗಳಲ್ಲಿ, ಬೇರೆ ವ್ಯಕ್ತಿಯು ನಾವು ಹೇಳದಿದ್ದರೂ ನಮಗೆ ಬೇಕಾದಂತಹ ಕೆಲಸವನ್ನು ಮಾಡಬೇಕು.

ಮನಸ್ಸು ಎಂದೂ ಬರಿದಾಗಿರುವುದಿಲ್ಲ. ಪ್ರತಿಕ್ಷಣಕ್ಕೂ ವಿಪರೀತವಾದ ಯೋಚನೆಗಳು ಮನಸ್ಸಿನಲ್ಲಿ ಗುಂಪುಗೂಡುತ್ತಲೇ ಇರುತ್ತವೆ. ಪರಿಣಾಮವಾಗಿ ನಾವು ಒತ್ತಡ ಹಾಕಬೇಕೆಂದಿರುವ ಯೋಚನೆಯ ಮೇಲೆ ಒತ್ತಡ ಬೀಳುವುದಿಲ್ಲ ಮತ್ತು ಅದರ ಅನುಸಾರವಾಗಿ ಅದು ಬೇರೆಯವರ ಮೇಲೆ ಅವಶ್ಯಕವಾದ ಪರಿಣಾಮವನ್ನು ಬೀರುವುದಿಲ್ಲ.

ನಾವು ನಿಮಗೀಗಲೇ ಎರಡು ಮನಸ್ಸುಗಳ ಬಗ್ಗೆ ಹೇಳಿದ್ದೇವೆ. ಎಚ್ಚರವಾಗಿದ್ದಾಗ ಬಹಿರ್ಮನಸ್ಸು ಚುರುಕಾಗಿರುತ್ತದೆ. ಅಂತರ್ಮನಸ್ಸು ಯಾವಾಗಲೂ ಚುರುಕಾಗಿದ್ದು ಮತ್ತು ಎಚ್ಚರವಾಗಿದ್ದು ಎಲ್ಲಾ ವಿಚಾರ ಹಾಗೂ ಕಲ್ಪನೆಗಳನ್ನು ಯಾವಾಗಲೂ ತೆಗೆದುಕೊಳ್ಳುತ್ತದೆ.

ಕೆಲವು ಯೋಚನೆಗಳು ನಮ್ಮ ಮನಸ್ಸಿನಲ್ಲಿ ಉದ್ಭವಿಸುತ್ತವೆ. ಒಂದುವೇಳೆ ಅವು ನಮ್ಮ ಎದುರಿನಲ್ಲಿ ಕೂತುಕೊಂಡ ಮನುಷ್ಯನಿಗೆ ಸಂಬಂಧವಿರಬಹುದು. ಆ ವಿಷಯದಲ್ಲಿ ಅದು ಉತ್ಪಾದಿಸುವಂತಹ ಒತ್ತಡವು ಅವನ ಅಂತರ್ಮನಸ್ಸಿನ ಮೇಲೆ ಪರಿಣಾಮ ಬೀರಬೇಕು. ಎಷ್ಟೆಂದರೆ ಅವನು ನಿಮ್ಮ ಬಾಯಿ ಬಿಡದ ಯೋಚನೆಗಳನ್ನು ಅನುಸರಿಸುವಲ್ಲಿ ನಿರ್ಬಂಧಿತನಾಗಿರಬೇಕು. ಆದರೆ ಈ ತರಹದ ವರ್ಗಾವಣೆಯ ಒಂದು ಊಹೆಗೆ ನಮಗೆ ನಮ್ಮ ಕೇವಲ ಭದ್ರವಾದ ಮತ್ತು ನುರಿತ ಯೋಚನೆಗಳ ಅವಶ್ಯಕತೆ ಇರುತ್ತದೆ. ಅದಕ್ಕೆ

1.ಅಕ್ಷರಾರ್ಥವಾಗಿ ಯೋಚನೆ ಅಥವಾ ವಿಚಾರಗಳನ್ನು ನಿಶ್ಚಯವಾಗಿ ವರ್ಗಾಯಿಸುವಂತಹ ಒಂದು ಸಿದ್ಧಿ

ಸ್ಪಷ್ಟ ಹಾಗೂ ವ್ಯವಹಾರ್ಯ ಯೋಚನೆಗಳ ಅವಶ್ಯಕತೆಯೂ ಇದೆ. ಅದು ಆಗಲೇ ಮಾತ್ರ ಎದುರಿನಲ್ಲಿ ಕೂತುಕೊಂಡ ವ್ಯಕ್ತಿಯ ಅಂತರ್ಮನಸ್ಸಿನ ಮೇಲೆ ಶಕ್ತಿಯುತವಾದ ಪ್ರಭಾವವನ್ನು ಬೀರುವುದು. ಅವನು ಆ ಪ್ರಕಾರವಾಗಿ ನಾವು ಬಾಯಿಬಿಟ್ಟು ಹೇಳದ ಆಜ್ಞೆಗಳನ್ನು ನಡೆಸಲು ಪ್ರಾರಂಭಿಸುವನು.

ನೀವು ವರ್ಗಾಯಿಸಬೇಕೆಂದಿರುವ ಯೋಚನೆಗಳು ಬಹಳ ದೃಢ ಹಾಗೂ ಅಚಲವಾಗಿಯೇ ಇರಬೇಕು. ನಮ್ಮ ಮನಸ್ಸಿನಲ್ಲಿ ಕೇವಲ ಪ್ರಬಲವಾಗಿರುವಂತಹ ಯೋಚನೆ ಇದ್ದರೆ ಮಾತ್ರ ಅದು ಸಾಧ್ಯ. ಆ ಸಂದರ್ಭದಲ್ಲಿ ನಾವು ಅಂತಹ ಯೋಚನೆಯನ್ನು ಪೂರ್ಣ ಒತ್ತಡದೊಂದಿಗೆ ಹಾಗೂ ಪೂರ್ಣಶಕ್ತಿಯೊಂದಿಗೆ ವರ್ಗಾಯಿಸಬಹುದು.

ಅದರ ವಿರುದ್ಧವಾಗಿ ನಿಮ್ಮಲ್ಲಿರುವ ಮನಸ್ಸು ಎಲ್ಲಾ ವಿಧದ ಯೋಚನೆಗಳ ಗುಂಪಿನಿಂದ ಗೊಂದಲವಾಗಿದ್ದು ಹಾಗೂ ಆ ಯೋಚನೆಗಳಲ್ಲಿ ನೀವು ಓರ್ವ ನಿರ್ದಿಷ್ಟ ವ್ಯಕ್ತಿಗೆ ವರ್ಗಾಯಿಸಬೇಕೆಂದಿರುವ ಯೋಚನೆಯೂ ಇದ್ದರೆ, ಬಹಳ ಸಾರಿ ಎಲ್ಲಾ ಯೋಚನೆಗಳು, ನೀವು ಎದುರಿನಲ್ಲಿ ಕೂತುಕೊಂಡ ವ್ಯಕ್ತಿಯಲ್ಲಿ ವರ್ಗಾಯಿಸಬೇಕೆಂದಿರುವ ಯೋಚನೆಯೂ ಸೇರಿ, ಒಂದು ಸಾಧಾರಣ ಮಟ್ಟಕ್ಕೆ ಇಳಿಯುತ್ತವೆ, ಒಂದುವೇಳೆ ನೀವು ವರ್ಗಾಯಿಸಬೇಕೆಂದಿರುವ ಒಂದು ಯೋಚನೆ ಎಲ್ಲಾ ಒತ್ತಡ ಹಾಗೂ ಶಕ್ತಿಯೊಡನೆ ಹಿಂದೆ ಬೀಳಲಿಚ್ಛಿಸುತ್ತೀರಿ. ಆ ಸಂದರ್ಭದಲ್ಲಿ ನಿಮ್ಮ ರಭಸ ಮತ್ತು ಶಕ್ತಿಯು ಮನಸ್ಸಿನಲ್ಲಿ ಗುಂಪುಗೂಡುತ್ತಿರುವ ಯೋಚನೆಗಳಲ್ಲಿ ಚದುರುತ್ತವೆ. ಈಗ ಅನಾಹುತವೆಂದರೆ ನೀವು ವರ್ಗಾಯಿಸಬೇಕೆಂದಿರುವ ಯೋಚನೆ. ಅದಕ್ಕೆ ತನಗೆ ಬೇಕಾಗಿರುವಷ್ಟು ರಭಸ ಹಾಗೂ ಶಕ್ತಿಯು ದೊರೆಯುವುದಿಲ್ಲ.

ಆದ್ದರಿಂದ, ನೀವು ಮನಸ್ಸು ಯೋಚನೆ ಹಾಗೂ ವಿಚಾರಗಳಿಂದ ವಿಘಟನೆಗೊಳ್ಳುವಂತಹ ಕಲೆಯನ್ನು ಅಭ್ಯಾಸಿಸುವುದು ಅವಶ್ಯವಾಗಿದೆ.

ನಾವು ಈ ಹಿಂದಿನ ಪುಟಗಳಲ್ಲಿ ಈ ಕಲೆಯ ಬಗ್ಗೆ ಸ್ವಲ್ಪ ವಿವರವಾಗಿ ಚರ್ಚಿಸಿದ್ದೇವೆ.

ಯೋಚನೆಗಳನ್ನು ವರ್ಗಾಯಿಸುವ ಅಭ್ಯಾಸದಲ್ಲಿ ಓರ್ವನು ಓರ್ವನ ಅಭ್ಯಾಸವನ್ನು ನಿಧಾನವಾಗಿ ಮತ್ತು ನಿಶ್ಚಲವಾಗಿ ಮುಂದುವರಿಸಬೇಕು. ಪ್ರಾರಂಭದ ಪ್ರಯತ್ನಗಳಲ್ಲಿ ನೀವು ಯಶಸ್ವಿಯಾಗದಿದ್ದರೆ ನೀವು ನಿರಾಶರಾಗಿ ಬಿಟ್ಟುಬಿಡುವುದರಲ್ಲಿ ಉಪಯೋಗವಿಲ್ಲ. ನೀವು ಅಭ್ಯಾಸವನ್ನು ಸ್ವಲ್ಪ ಸಮಯದವರೆಗೆ ಮುಂದುವರಿಸಿದರೆ ನಿಮಗೆ ಖಚಿತವಾಗಿ ಯಶಸ್ವಿಯ ಪಟ್ಟ ದೊರೆಯುವುದು.

ನಾನು ನಿಮಗೆ ಒಂದು ಉದಾಹರಣೆಯನ್ನು ಕೊಡುವೆ. ಒಮ್ಮೆ ನಿಮ್ಮ ಮನೆಗೆ ಒಬ್ಬ ಅತಿಥಿ ಆಗಮಿಸುವರು. ನಾನು ನಿಮಗೆ ಸರಿಯಾಗಿ ಈ ಸ್ಥಳದಿಂದ ನಿಮ್ಮ ಅಭ್ಯಾಸವನ್ನು ಪ್ರಾರಂಭಿಸಲು ಆದೇಶಿಸುವೆ. ಯಾವುದೇ ಸಂದರ್ಭದಲ್ಲಿ ಒಂದು ಪದ ಅಥವಾ ಒಂದು ಶಬ್ದ ನಿಮ್ಮ ನಾಲಿಗೆಯಿಂದ ತಪ್ಪಿಸಿಕೊಳ್ಳಲಿಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಿ.

ಕೆಲವೇ ಕ್ಷಣಗಳಲ್ಲಿ ಅತಿಥಿಯು ಸ್ವಲ್ಪ ಬಿಸಿಯಾದ ಪೇಯಗಳನ್ನು ಪಡೆಯಲು ಇಚ್ಛಿಸುವನು. ಅವನು ವಾಸ್ತವದಲ್ಲಿ ಸ್ವಲ್ಪ ಪೇಯಕ್ಕಾಗಿ ಅವಿಶ್ರಾಂತನಾಗುವನು. ಅವನು ಹಾಗೆ ಮಾಡಿದಲ್ಲಿ, ಅದನ್ನು ನೀವು ವರ್ಗಾಯಿಸಿರುವುದು ಸರಿ ಎಂದು ಸಂಕೇತವಾಗಿ ತೆಗೆದುಕೊಳ್ಳಬೇಕು.

ಒಂದುವೇಳೆ, ನೀವು ನಿಮ್ಮ ಕಛೇರಿಯಲ್ಲಿರುವಿರಿ. ಈಗ ನಿಮ್ಮ ಅಧಿಕಾರಿಯು ನಿಮ್ಮ ಕ್ಯಾಬಿನ್ ಗೆ ಒಂದು ನಿರ್ದಿಷ್ಟವಾದ ಫೈಲ್ ನೊಡನೆ ಬಂದು ನಿಮಗೆ ಅದನ್ನು ನೋಡಿಕೊಳ್ಳಲು ಹೇಳುವನೆಂಬ ವಿಚಾರವನ್ನು ತಂದುಕೊಳ್ಳಿ. ಅಧಿಕಾರಿಯು ನಿಮ್ಮ ಮುಂದಿರುವ ಕ್ಯಾಬಿನ್ ನಲ್ಲಿ ಕೂತುಕೊಂಡಿರುವನು. ನೀವು ಅವನನ್ನು ನೋಡಬೇಡಿರಿ, ಏಕೆಂದರೆ ಅವನು ನಿಮ್ಮ ಎದುರಿನಲ್ಲಿ ಕೂತುಕೊಂಡಿಲ್ಲ. ಹೀಗಿದ್ದರೂ

ನಿಮ್ಮ ಮನಸ್ಸಿನಲ್ಲಿ ಉದ್ಭವಿಸಿದ ಯೋಚನೆಯನ್ನು ಅವನ ಮನಸ್ಸಿನಲ್ಲಿ ನೆಡಲು ಪ್ರಯತ್ನಿಸಿ. ಅದನ್ನು 5 ರಿಂದ 7 ಸಾರಿ ಮಾಡಿ.

ವರ್ಗಾಯಿತಗೊಂಡ ಯೋಚನೆಗಳ ವೇಗವು ಸಂಪೂರ್ಣವಾಗಿ ನಿಮ್ಮ ಇಚ್ಛಾಶಕ್ತಿಯನ್ನು ಅವಲಂಬಿಸಿರುತ್ತದೆ ಎನ್ನುವುದನ್ನು ಗಮನದಲ್ಲಿಟ್ಟುಕೊಳ್ಳಿ. ನಿಮಗೆ ಬಲವಾದ ಇಚ್ಛಾಶಕ್ತಿ ಇದ್ದರೆ ಯೋಚನೆಯು ವೇಗವನ್ನು ಪಡೆಯುತ್ತದೆ. ಅಲ್ಲದೆ, ಯೋಚನೆಗಳ ಮೇಲೆ ಪೂರ್ಣ ಏಕಾಗ್ರತೆ ಇರಬೇಕು. ಒಂದು ಯೋಚನೆಗಳ ಗುಂಪು ನಿಮ್ಮ ಶಕ್ತಿಯನ್ನು ಚದುರಿಸಿ ನಿಮ್ಮ ಒಂದೇ ಯೋಚನೆಯ ಮೇಲೆ ಕೇಂದ್ರೀಕೃತವಾಗಬೇಕಿರುವ ಸಾಮರ್ಥ್ಯವನ್ನು ತಗೆದುಕೊಳ್ಳುತ್ತದೆ. ಅದು ಸರಳವಾಗಿಯೇ ಯಾವುದೇ ವೇಗದೊಡನೆ ಯೋಚಿಸುವುದಿಲ್ಲ.

ನೀವು ಯೋಚನೆಗಳ ವರ್ಗಾವಣೆಯನ್ನು 10 ರಿಂದ 15 ಸಾರಿ ಮಾಡಿದರೆ, ನೀವು ನಿಮ್ಮ ಅಧಿಕಾರಿಯು ತನ್ನಷ್ಟಕ್ಕೆ ತಾನೇ ತನ್ನ ಕೈಯಲ್ಲಿ ಒಂದು ನಿರ್ದಿಷ್ಟ ಫೈಲನ್ನು ನಿಮ್ಮ ಕೈಗೆ ಕೊಡುವಾಗ ನಿಮಗೆ ಅದನ್ನು ಸ್ವಲ್ಪ ತ್ವರಿತ ವಿಷಯವಾಗಿ ಗಮನವರಿಸಲು ಬೇಡಿಕೊಳ್ಳುವನು. ಅವನು ಹೊರಗೆ ಹೋಗಬೇಕಿತ್ತು ಹಾಗೆಯೇ ಆತನು ಈ ಕೆಲಸವನ್ನು ನಿಮಗೆ ಒಪ್ಪಿಸಲಿಚ್ಛಿಸಿದನು. ಅದನ್ನು ನೀವು ಸಾಧಿಸಿದರೆ, ನೀವು ಯೋಚನೆಯನ್ನು ವರ್ಗಾಯಿಸುವಲ್ಲಿ ಯಶಸ್ವಿಯಾಗಿರುವ ಸಂಕೇತವೆಂದು ತಿಳಿದುಕೊಳ್ಳಬಹುದು.

ಅದೇ ಸಮಯದಲ್ಲಿ ನೀವು ನಿಮ್ಮ ಮನಸ್ಸಿನಲ್ಲಿ ಒಂದೇ ಸಮಯದಲ್ಲಿ ಪರಸ್ಪರ ವಿರುದ್ಧವಾಗಿರುವ ಯೋಚನೆಗಳಿಗೆ ಎಡೆಮಾಡಬಾರದು. ಉದಾಹರಣೆಗೆ ನೀವು ನಿಮ್ಮ ಅಧಿಕಾರಿಯು ಒಂದು ಫೈಲ್ ನೊಡನೆ ನಿಮ್ಮ ಕ್ಯಾಬಿನ್ ಗೆ ಬರುವನೆನ್ನುವ ವಿಚಾರವನ್ನು ವರ್ಗಾಯಿಸಲಿಚ್ಛಿಸುತ್ತಿದ್ದೀರಿ. ಅದೇ ಸಮಯದಲ್ಲಿ ನೀವು ನಿಮ್ಮ ಮನಸ್ಸನ್ನು ಅಧಿಕಾರಿಯು ದೊಡ್ಡ ವ್ಯಕ್ತಿಯಾಗಿರುವುದರಿಂದ, ಯಾವುದೇ ಸಂದರ್ಭದಲ್ಲಿ ನಿಮ್ಮ ಮೇಜಿನ ಹತ್ತಿರ ಬರುವುದಿಲ್ಲ ಎನ್ನುವ ವಿಚಾರಕ್ಕೆ ಎಡೆಮಾಡಿದರೆ, ಈ ನಾಕಾರಾತ್ಮಕ ಮನೋಭಾವವೂ, ಸಹ, ಖಚಿತವಾಗಿ ನಿಮ್ಮ ಮೊದಲಿನ ಖಂಡಿತವಾದ ಮನೋಭಾವವನ್ನು ದುರ್ಬಲಗೊಳಿಸುತ್ತದೆ. ಪರಿಣಾಮವಾಗಿ ಯೋಚನೆಯ ವರ್ಗಾವಣೆಯಲ್ಲಿ ಪರಿಣಾಮಕಾರಿಯಾದ ಒತ್ತಡವಿಯುವುದಿಲ್ಲ.

ಆದ್ದರಿಂದ, ನೀವು ಒಂದೇ ವಿಚಾರದ ಮೇಲೆ ಏಕಾಗ್ರತೆವಹಿಸುವುದು ಅತೀ ಅವಶ್ಯಕವಾಗಿದೆ ಮತ್ತು ಯಾವುದೇ ಸಂದರ್ಭದಲ್ಲಿ ಪರಸ್ಪರ ವಿರುದ್ಧವಾದ ಯೋಚನೆಗಳಿಗೆ ಎಡೆಮಾಡಬಾರದು.

ಈ ಹಿಂದಿನ ಪುಟಗಳಲ್ಲಿ ನಾನು *ಚಿತ್ರ ತ್ರಾಟಕ* ಹಾಗೂ *ಮೂರ್ತಿ ತ್ರಾಟಕದ* ಕಲಾಕೌಶಲ್ಯಗಳ ಬಗ್ಗೆ ಚರ್ಚಿಸಿದ್ದೇನೆ. ನೀವು ಈ ತರಹದ ಏಕಾಗ್ರತೆಯಲ್ಲಿ ಯಶಸ್ವಿಯಾಗಬೇಕೆಂದಿದ್ದರೆ ನೀವು ಈ ರೀತಿಯ *ತ್ರಾಟಕದ* ಅಭ್ಯಾಸದ ಆಶ್ರಯ ತೆಗೆದುಕೊಳ್ಳಬೇಕು. ಏಕೆಂದರೆ ನಾವು ಮೂರ್ತಿತ್ರಾಟಕವನ್ನು ಅಭ್ಯಸಿಸಿದಾಗ ನಾವು ನಮ್ಮ ಮುಂದೆ ಸಜೀವವಾಗಿ ಬರುವ ಮೂರ್ತಿಯನ್ನು ನಮ್ಮಲ್ಲಿ ಆವಾಹನ ಮಾಡಿಕೊಳ್ಳುತ್ತೇವೆ. ನಾವು ಆ ಸಮಯದಲ್ಲಿ ನಮ್ಮ ಕಣ್ಣುಗಳನ್ನು ಮುಚ್ಚಿಕೊಂಡಿರುವುದು ಬೇರೆ ವಿಷಯವು.

ಅದೇ ರೀತಿ ನಾವು ನಮ್ಮ ಯೋಚನೆಗಳನ್ನು ಒಬ್ಬ ನಿರ್ದಿಷ್ಟ ವ್ಯಕ್ತಿಯಲ್ಲಿ ವರ್ಗಾಯಿಸಲಿಚ್ಛಿಸಿದಾಗ, ಅವನ ಪ್ರತಿಬಿಂಬವು ನಮ್ಮ ಮುಂದೆ ಸಜೀವವಾಗಿರಬೇಕು. ನಾವು ಎಷ್ಟು ಶಕ್ತಿಯನ್ನು ವೃದ್ಧಿಪಡಿಸಿಕೊಂಡಿರ ಬೇಕೆಂದರೆ ನಮ್ಮನ್ನು ಈ ಪ್ರತಿಬಿಂಬದಿಂದ ಗಮನವನ್ನು ಬೇರೆಯ ಪ್ರತಿಬಿಂಬದ ಕಡೆಗೆ ಹರಿಸದೆ ಇರಬೇಕೆನ್ನುವುದನ್ನು ಖಚಿತಪಡಿಸಿಕೊಳ್ಳಬೇಕು.

ಪ್ರತಿಬಿಂಬ ಅಥವಾ ಚಿತ್ರವನ್ನು ಆವಾಹನ ಮಾಡಿ, ಅದು ನಿಮ್ಮ ಕಣ್ಣಿನ ಮುಂದೆ ಬಂದನಂತರ, ಆ ಪ್ರತಿಬಿಂಬದಲ್ಲಿ ಯೋಚನೆಯನ್ನು ಆಚ್ಛಾದಿಸಿ ಅಥವಾ ವರ್ಗಾಯಿಸಿ. ನೀವು ಯಶಸ್ವಿಯಾಗಿರುವಿರೆಂದು ನೀವು ನೋಡುವಿರಿ. ಈ ಮೊದಲೇ ಕೊಟ್ಟ ಉದಾಹರಣೆಯಲ್ಲಿ, ಅಧಿಕಾರಿಯ ಪ್ರತಿಬಿಂಬವು ನಿಮ್ಮ

ಕಣ್ಣಿನಲ್ಲಿ ಪೂರ್ಣ ಸಜೀವವಾಗಿ ಬಂದಿರಬೇಕು. ಆಗಲೇ ಯೋಚನೆಗಳ ವರ್ಗಾವಣೆ ಸಾಧ್ಯವಾಗುವುದು ಕಂಡುಬರುತ್ತದೆ.

ಒಂದುವೇಳೆ ನೀವು ನಿಮ್ಮ ಯೋಚನೆಗಳನ್ನು ವರ್ಗಾಯಿಸಬೇಕೆಂದಿರುವ ವ್ಯಕ್ತಿಯನ್ನು ನೀವು ನೋಡಿಯೇ ಇಲ್ಲ. ಅಂತಹ ವಿಷಯದಲ್ಲಿ, ಅವನ ಚಿತ್ರ ಅಥವಾ ಫೋಟೋವನ್ನು ಪಡೆದುಕೊಳ್ಳಿ. ಅದು ದೊರೆಯದಿದ್ದಲ್ಲಿ, ನೀವು ಅವನ ಬಗ್ಗೆ ಕೇಳಿದುವಂತಹುದರ ಮೇಲೆ ಒಂದು ಹೊರ ರೂಪವನ್ನು ಕಟ್ಟಲು ಪ್ರಯತ್ನಿಸಿ. ಅದಕ್ಕೆ ಒಂದು ಸಾಕಾರವಾದ ರೂಪವನ್ನು ಕೊಟ್ಟನಂತರ ನಿಮ್ಮ ಯೋಚನೆಗಳನ್ನು, ಆ ಆಕಾರ ಅಥವಾ ಚಿತ್ರ, ವಿಷಯವಿದ್ದ ಹಾಗೆ, ಅದಕ್ಕೆ ವರ್ಗಾಯಿಸಿ. ನೀವು ಈ ಪ್ರಯೋಗದಲ್ಲಿ ಯಶಸ್ವಿಯಾಗುವಿರಿ.

ತನ್ನ ಮಗನು ಮರೆಯಾಗಿರುವುದನ್ನು ಹೇಳಿಕೊಂಡು ಒಬ್ಬ ನಿರ್ದಿಷ್ಟ ಸಜ್ಜನನು ಒಮ್ಮೆ ನನ್ನಲ್ಲಿಗೆ ಬಂದನು. ಅವನು ಒಂದು ಹಳ್ಳಿಯವನಾಗಿದ್ದನು. ಆದ್ದರಿಂದ ಅವನಲ್ಲಿ ಅವನ ಮಗನ ಯಾವುದೇ ಛಾಯಚಿತ್ರವಿರಲಿಲ್ಲ. ಅವನು ನನಗೆ ತನ್ನ ಮಗನು ಸರಿಯಾದ ನಡತೆಯವನಾಗಿ ಆದಷ್ಟು ಬೇಗ ಮನೆಗೆ ಹಿಂದಿರುಗುವ ಹಾಗೆ ಒಂದು ದಾರಿಯನ್ನು ಹುಡುಕಲು ಒತ್ತಾಯಿಸಿದನು. ಹುಡುಗನು ಮನೆಯೆಂದರೆ ಒಂದುರೀತಿಯ ತಿರಸ್ಕಾರವನ್ನು ವೃದ್ಧಿಸಿಕೊಂಡಿದ್ದನು.

ಇಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದ ನನಗೆ ಆ ಹುಡುಗನ ಬಾಹ್ಯಚಹರೆಗಳನ್ನು ಪಡೆದುಕೊಳ್ಳುವುದನ್ನು ಬಿಟ್ಟರೆ ಬೇರೆ ಯಾವ ಮಾರ್ಗವಿರಲಿಲ್ಲ. ಆ ಸಜ್ಜನನು ನನಗೆ ಅವನ ಮಗನ ಬಣ್ಣ, ಎತ್ತರ, ಮುಖದ ರೂಪರೇಖೆ ಮತ್ತು ಉಡುಗೆಯ ಬಗ್ಗೆ ಎಲ್ಲವನ್ನೂ ತಿಳಿಸಿದ. ನಾನು ಆ ಮಗನನ್ನು ಹೋಲುವಂತಹ ಒಂದು ಪ್ರತಿಬಿಂಬವನ್ನು ಕಟ್ಟಿಕೊಂಡೆ.

ಈಗ ನಾನು ಆ ಪ್ರತಿಬಿಂಬವನ್ನು ಮನಸ್ಸಿನಲ್ಲಿ ಭದ್ರವಾಗಿಸಿದೆ. ನನ್ನ ಕಡೆಯಿಂದ ಎಲ್ಲಾ ಶಕ್ತಿಯಿಂದ ನಾನು ಅವನಿಗೆ ಆದಷ್ಟು ಬೇಗ ಮನೆಗೆ ಹಿಂದಿರುಗಲು ಆಜ್ಞಾಪಿಸಿದೆ. ಯಾವುದೇ ವಿಳಂಬವಿಲ್ಲದೆ ಅವನು ಸರಿಯಾಗಿ ಮತ್ತು ಯೋಗ್ಯವಾಗಿ ಮನೆಗೆ ಹಿಂದಿರುಗಿದನು. ಅವನು ಮನೆಯ ಸಂಸಾರದ ಇತರ ಸದಸ್ಯರುಗಳ ಮೇಲೆ ತಿರಸ್ಕಾರವನ್ನು ವೃದ್ಧಿಸಿಕೊಳ್ಳುವ ಕಾರಣವೇನೆಂದರೆ ಅವನಲ್ಲಿದ್ದ ಆಧಾರವಿಲ್ಲದ ಅನುಮಾನಗಳಿಂದ. ಹೇಗಾದರೂ ಅನುಮಾನಗಳಿಗೆ ಯಾವುದೇ ಕಾರಣವಿರಲಿಲ್ಲ. ಆದ್ದರಿಂದ, ಅವನು, ಹಿಂದಿರುಗಬೇಕು.

ಸುಮಾರು 15 ನಿಮಿಷಗಳಿಗಿಂತ ಹೆಚ್ಚಾಗಿ ನಾನು ಯೋಚನೆಯನ್ನು ವರ್ಗಾಯಿಸುತ್ತಲೇ ಇದ್ದೆ. ನಂತರ ನಾನು ಅವನ ತಂದೆಯನ್ನು ಕಳುಹಿಸಿದೆ. ಆ ಹುಡುಗನು ಮೂರನೆಯ ದಿನದಂದು ಮನೆಗೆ ಹಿಂದಿರುಗಿದುದರಲ್ಲಿ ಆಶ್ಚರ್ಯವಿಲ್ಲ. ಮನೆಗೆ ಹಿಂದಿರುಗಿದ ನಂತರ ಅವನು ತನ್ನ ಹೆತ್ತವರಿಗೆ ಸರಿಯಾಗಿ ಮೂರುದಿನಗಳ ಹಿಂದೆ ಯಾರೋ ಮನೆಗೆ ಹಿಂದಿರುಗಲು ಹೇಳುತ್ತಿರುವ ಹಾಗೆ ಅನ್ನಿಸಿತು ಎಂದು ಹೇಳಿದನು ಮತ್ತು ಅವರು ಪುನಃ ಪುನಃ ಕರೆದರು. ಆ ಧ್ವನಿಯು ತನ್ನ ಕಿವಿಯಲ್ಲಿ ಎಡೆಬಿಡದೆ ಗುಂಯ್ ಗುಟ್ಟುತ್ತಿತ್ತು. ಅವನು ನಿದ್ದೆ ಹೋಗಿರಲಿ ಎಚ್ಚೆತ್ತುಕೊಂಡಿರಲಿ ಅದು ಕಿವಿಯಲ್ಲಿ ಗುಂಯ್ ಗುಟ್ಟುತ್ತಲೇ ಇತ್ತು. ಪರಿಣಾಮವಾಗಿ ಅವನು ಹಿಂದಿರುಗಬೇಕಾಯಿತು.

ನಾನು ಹೇಳುವುದೇನೆಂದರೆ: ನಿಮ್ಮಲ್ಲಿ ಬಲವಾದ ಇಚ್ಛಾಶಕ್ತಿ ಅಥವಾ ಮನೋಬಲವಿದ್ದು, ಯೋಚನೆಗಳನ್ನು ವರ್ಗಾಯಿಸುವಂತಹ ವೃದ್ಧಿಸಿಕೊಂಡ ಸಾಮರ್ಥ್ಯವಿದ್ದರೆ, ವ್ಯಕ್ತಿಯು ನಿಮ್ಮ ಎದುರಿನಲ್ಲಿ ಕೂತುಕೊಂಡಿದ್ದಾನೋ ಇಲ್ಲವೋ ಅಥವಾ ಅವನು ಸಾವಿರಾರು ಮೈಲಿ ಆಚೆಯಲ್ಲಿದ್ದಾನೋ, ಯೋಚನೆಗಳ ತಿವಿತಗಳ ಅನುಭವ ಅವನಿಗೆ ಆಗುತ್ತದೆ.

ನೀವು ಸರಿಯಾದ ಮಾರ್ಗದಲ್ಲಿ ಹೆಜ್ಜೆ ಇಡುತ್ತಿದ್ದೀರಾ ಇಲ್ಲೋ ಎಂದು ಖಚಿತಪಡಿಸಿಕೊಳ್ಳಲು ಪ್ರಾರಂಭದಲ್ಲಿ ಕೆಲವು ಅಭ್ಯಾಸಗಳನ್ನು ಮಾಡಬಹುದು.

೧. ಕುಟುಂಬದ ಒಬ್ಬ ಸದಸ್ಯರಮೇಲೆ ಪ್ರಯೋಗ ಮಾಡಿ. ಅವನಿಗೆ ನಿಮಗೆ ಈ ಕೂಡಲೇ ಒಂದು ಲೋಟ ನೀರನ್ನು ಕೊಡಲು ಹೇಳಿ. ಈ ಪ್ರಯೋಗವನ್ನು ನಡೆಸಲು ನೀವು ಒಂದು ಶಾಂತವಾದ ಕೋಣೆಯಲ್ಲಿ ಕೂತುಕೊಂಡಿರಬೇಕು, ಕಣ್ಣುಗಳನ್ನು ಮುಚ್ಚಿ, ಆ ವ್ಯಕ್ತಿಯ ಪ್ರತಿಬಿಂಬವನ್ನು ನಿಮ್ಮ ಕಣ್ಣುಗಳ ಮುಂದೆ ಆವಾಹನ ಮಾಡಿ.

ಈಗ ಅವನು ಕೂಡಲೇ ಒಂದು ಲೋಟ ನೀರನ್ನು ತರುವ ಹಾಗೆ ಯೋಚನೆಯನ್ನು ವರ್ಗಾಯಿಸಿ.

ಸ್ವಲ್ಪ ಸಮಯದ ನಂತರ ಆ ವ್ಯಕ್ತಿಯು ನಿಮ್ಮ ಮುಂದೆ ಒಂದು ಲೋಟ ನೀರಿನೊಂದಿಗೆ ನಿಂತಿರುವುದನ್ನು ನೀವು ನೋಡುವಿರಿ. ಸತ್ಯವೇನೆಂದರೆ ನೀವು ಅವನಿಗೆ ಈ ರೀತಿಯ ಕೆಲಸವನ್ನು ಕೈಗೊಳ್ಳುವ ಹಾಗೆ ಸಂದೇಶಕೊಟ್ಟಿರಲಿಲ್ಲ. ನೀವು ಅವನಿಗೆ ಈ ರೀತಿಯ ಸಂದೇಶವನ್ನೇ ಕೊಟ್ಟಿಲ್ಲವೆಂದು ಹೇಳಿದಾಗ, ಅವನಿಗೆ ನಿಜವಾಗಿಯೂ ಆಶ್ಚರ್ಯವಾಗುತ್ತದೆ. ನೀವು ಕೇಳುತ್ತಿರುವುದಾಗಿ ತಾನು ತಿಳಿದುಕೊಂಡಿದ್ದಾನೆಂದು ಅವನು ಹೇಳುತ್ತಾನೆ.

ಈ ರೀತಿ ಪ್ರಯೋಗದಲ್ಲಿ ಯಾವುದೇ ತರಹದ ಯಶಸ್ಸಿಯು ಒಂದು ದೊಡ್ಡ ಹೆಜ್ಜೆಯೆಂದೇ ಪರಿಗಣಿಸಲಾಗುವುದು.

೨. ಈಗ ನಿಮ್ಮ ಅಭ್ಯಾಸದ ಕಾರ್ಯವನ್ನು ಹೆಚ್ಚಿನ ಕ್ಷೇತ್ರಕ್ಕೆ ವಿಸ್ತರಿಸಿ. ಅದೇ ಊರಿನಲ್ಲಿರುವ ಯಾವುದಾದರೂ ದೇಹದ ಪ್ರತಿಬಿಂಬವನ್ನು ಆವಾಹನ ಮಾಡಿಕೊಳ್ಳಿ. ಈ ಕ್ಷಣವೇ ಅವನು ನಿಮಗೆ ದೂರವಾಣಿ ಮೂಲಕ ಸಂಪರ್ಕಿಸಬೇಕೆನ್ನುವ ವಿಚಾರವನ್ನು ವರ್ಗಾಯಿಸಿ.

ಸುಮಾರು 10 ರಿಂದ 15 ನಿಮಿಷಗಳವರೆಗೆ ನೀವು ಅವನಿಗೆ ಈ ವಿಚಾರವನ್ನು ವರ್ಗಾಯಿಸುತ್ತಾ ಹೋಗಿ. ದೂರವಾಣಿ ಕರೆ ಸರಿಯಾಗಿ ಅದೇ ಸಮಯದಲ್ಲಿ ಬರುವುದನ್ನು ನೀವು ನೋಡುವಿರಿ. ಆ ಕಡೆ ನೀವು ಆವಾಹನ ಮಾಡಿಕೊಂಡ ದೇಹದ ಪ್ರತಿಬಿಂಬವೇ ಇರುತ್ತದೆ.

ಪ್ರಾರಂಭದಲ್ಲಿ ನೀವು ಒಂದು ನಿರ್ದಿಷ್ಟ ವಿಚಾರವನ್ನು ವರ್ಗಾಯಿಸಲು 10 ರಿಂದ 15 ನಿಮಿಷ ತೆಗೆದುಕೊಳ್ಳುವಿರಿ. ನಿಧಾನವಾಗಿ ಅದೇ ಕೆಲಸವನ್ನು ಸಿದ್ಧಿಸಲು ನೀವು ಒಂದು ನಿಮಿಷಕ್ಕಿಂಥ ಹೆಚ್ಚು ತೆಗೆದುಕೊಳ್ಳುವುದಿಲ್ಲ.

ನಿಮ್ಮಿಂದ ಸಂಪೂರ್ಣವಾದ ದೂಡುವಿಕೆಯನ್ನು ವರ್ಗಾಯಿಸಲು ಅವನಿಂದ ನಿಮಗೆ ಬೇಕಾಗಿರುವುದನ್ನು ಮಾಡಿಸಿಕೊಳ್ಳಲಾಗುವುದು.

೩. ಈಗ ನಿಮ್ಮ ಅಭ್ಯಾಸದ ಕಾರ್ಯವನ್ನು ಇನ್ನೂ ಹೆಚ್ಚಿನ ಕ್ಷೇತ್ರಕ್ಕೆ ವಿಸ್ತರಿಸಿ. ಒಬ್ಬ ಸ್ನೇಹಿತನನ್ನು ಅಥವಾ ಬೇರೆ ಊರಿನಲ್ಲಿರುವ ನಿಮ್ಮ ಸ್ವಂತ ಹೆಂಡತಿ ಅಥವಾ ಮಗನನ್ನು ಯಾರನ್ನಾದರೂ ಆಯ್ದುಕೊಳ್ಳಿ. ಅವನು ನಿಮಗೆ ಈ ಕೂಡಲೇ ಪತ್ರ ಬರೆಯಬೇಕೆನ್ನುವ ವಿಚಾರವನ್ನು ವರ್ಗಾಯಿಸಿ. ನಿಮಗೆ ಅವನು ಒಂದು ನಿರ್ದಿಷ್ಟವಾದ ನಿಮಗೆ ಆಸಕ್ತಿಯುತವಾದ ವಿಚಾರದ ಬಗ್ಗೆ ಬರೆಯಲು ಆಜ್ಞಾಪಿಸಿ. ಅದು, ಪುನಃ ನೀವು ಅವನಿಗೆ ಯಾವ ವಿಷಯದ ಬಗ್ಗೆ ಬರೆಯಬೇಕೆನ್ನುವ ವಿಚಾರದ ಬಗ್ಗೆಯೂ ತಿಳಿಸಬೇಕು. ಉದಾಹರಣೆಗೆ ಅವನು ನಿಮ್ಮನ್ನು ನೋಡಲು ಹೇಗೆ ಹಾತೊರೆಯುತ್ತಿದ್ದಾನೆನ್ನುವ ವಿಚಾರವನ್ನು ವರ್ಗಾಯಿಸಿ. ಅವನು ಕೂಡಲೇ ನಿಮ್ಮನ್ನು ಅವನ ಊರಿಗೆ ಬರಲು ಆಹ್ವಾನಿಸುವನು.

ನೀವು ವಿಚಾರವನ್ನು ವರ್ಗಾಯಿಸಿ, ನಂತರ, ಅದರ ದಿನ ಮತ್ತು ದಿನಾಂಕವನ್ನು ಬರೆದಿಟ್ಟುಕೊಳ್ಳುವುದನ್ನು ಮರೆಯಬೇಡಿರಿ. ಈಗ ಪತ್ರಕ್ಕಾಗಿ ಕಾಯಿರಿ. ನೀವು ಪತ್ರದ ದಿನಾಂಕವನ್ನು ನೋಡಿದಾಗ ಆ ದಿನಾಂಕವು ನೀವು ವಿಚಾರವನ್ನು ವರ್ಗಾಯಿಸಿದ ದಿನವೇ ಆಗಿರುವುದನ್ನು ನೀವು ನೋಡುವಿರಿ.

ಅದೇ ರೀತಿ ನೀವು ನಿಮ್ಮ ವಿಚಾರಗಳನ್ನು ವಿದೇಶದಲ್ಲಿರುವ ನಿಮ್ಮ ಬಂಧುಗಳು ಅಥವಾ ಸ್ನೇಹಿತರಿಗೆ ವರ್ಗಾಯಿಸಿ ಅವರಿಂದ ನಿಮಗೆ ಬೇಕಾಗಿರುವುದನ್ನು ಮಾಡಿಸಿಕೊಳ್ಳಬಹುದು.

೪. ನೀವು ಅಭ್ಯಾಸದ ಒಂದು ನಿರ್ದಿಷ್ಟ ಕ್ರಮವನ್ನು ದಾಟಿದ ಮೇಲೆ ಈಗ ನಿಮಗೆ ಗೊತ್ತಿರದ ನಿಮ್ಮಲ್ಲಿರುವ ವ್ಯಕ್ತಿಯ ಫೋಟೋ ಅಥವಾ ಚಿತ್ರವನ್ನು ತೆಗೆದುಕೊಳ್ಳಿ. ಆ ವ್ಯಕ್ತಿಗೆ ನಿಮ್ಮ ವಿಚಾರವನ್ನು ವರ್ಗಾಯಿಸಿ ಮತ್ತು ಈ ಕೆಲಸಕ್ಕಾಗಿ ಆ ಫೋಟೋ ಅಥವಾ ಚಿತ್ರವನ್ನು ಮಾಧ್ಯಮನನ್ನಾಗಿಮಾಡಿಕೊಳ್ಳಿ. ಅವನಿಗೆ ಕೆಲವು ಕೆಲಸಗಳನ್ನು ಮಾಡಲು ಹೇಳಿ.

ಅವನು ನೀವು ಆಜ್ಞಾಪಿಸಿದ ಕೆಲಸಗಳನ್ನು ಮಾಡಿದ ಮೇಲೆ, ಅದು ನೀವು ಈ ಕ್ಷೇತ್ರದಲ್ಲಿ ಮುನ್ನಡೆಯಬಹುದೆನ್ನುವ ಸೂಚನೆಯಾಗಿದೆ.

೫. ಈಗ ನೀವು ವಿಚಾರಗಳನ್ನು ನಿಮಗೆ ಪರಿಚಯವಿಲ್ಲದ ಮತ್ತು ಯಾವತ್ತೂ ನೋಡದ ಮತ್ತು ಯಾರ ಫೋಟೋ ಅಥವಾ ಚಿತ್ರ ನಿಮ್ಮಲ್ಲಿ ಇಲ್ಲವೊ ಅಂತಹ ವ್ಯಕ್ತಿಗೆ ವರ್ಗಾಯಿಸಲು ಪ್ರಯತ್ನಿಸಿ. ನಿಮಗೆ ಆ ವ್ಯಕ್ತಿಯ ಬಗ್ಗೆ ಒಂದು ವಿಶಾಲವಾದ ಒತ್ತಟ್ಟಿನ ರೂಪ ಮಾತ್ರ ಹೇಳಲಾಗಿದೆ. ಅವನ ಪ್ರತಿಬಿಂಬವನ್ನು ರಚಿಸಿ ಆ ಅಪರಿಚಿತ ವ್ಯಕ್ತಿಗೆ ಪ್ರತಿಬಿಂಬದ ಮೂಲಕ ವಿಚಾರಗಳನ್ನು ವರ್ಗಾಯಿಸಿ.

ಈ ಪ್ರಯೋಗದ ಯಶಸ್ಸು ನಿಮ್ಮನ್ನು ಅದ್ವಿತೀಯ ಸಮ್ಮೋಹಕನನ್ನಾಗಿ ನೆಲೆಗೊಳಿಸುವುದು.

ನಾವು ನಿಮಗೆ ಕೆಲವು ಎಚ್ಚರಿಕೆಯ ಮಾತುಗಳನ್ನು ಹೇಳಲಿಚ್ಛಿಸುತ್ತೇವೆ. ನೀವು ಈ ಎಚ್ಚರಿಕೆಯನ್ನು ಸಂಪೂರ್ಣವಾದ ಪ್ರಾಮುಖ್ಯತೆಯಿಂದ ಅನುಸರಿಸುವುದು ಅವಶ್ಯಕತೆ ಇರುತ್ತದೆ.

i) ಪ್ರಾರಂಭದ ಹಂತದಲ್ಲಿ ನೀವು ಈ ಅಭ್ಯಾಸವನ್ನು ರಾತ್ರಿ 10ಅಥವಾ 11 ಕ್ಕೆ ತೆಗೆದುಕೊಳ್ಳಿ. ಏಕೆಂದರೆ ಈ ಸಮಯದಲ್ಲಿ ಗುರಿಯಿಟ್ಟ ವ್ಯಕ್ತಿಯ ಬಹಿರ್ಮನಸ್ಸು ನಿದ್ರೆ ಹೋಗಿ ಮತ್ತು ಅಂತರ್ಮನಸ್ಸು ಗರಿಷ್ಠಮಟ್ಟದಲ್ಲಿ ಚೇತನಗೊಂಡಿರುತ್ತದೆ. ಪರಿಣಾಮವಾಗಿ ನೀವು ವರ್ಗಾಯಿಸಬೇಕೆಂದಿರುವ ವಿಚಾರಗಳೆಲ್ಲಾ ಒಂದು ವೇಗಕ್ಕೆ ಬಂದು ಅವನ ಮನಸ್ಸಿನ ಮೇಲೆ ಶಕ್ತಿಯುತವಾದ ಪರಿಣಾಮವನ್ನು ಬೀರುತ್ತದೆ. ನಿಮಗೆ ಶೀಘ್ರವಾದ ಯಶಸ್ಸು ದೊರೆಯುತ್ತದೆ.

ii) ಆ ಸಮಯದಲ್ಲಿ, ನಿಮಗೂ ಸಹ, ಬಹಳ ಶಾಂತವೆನಿಸುತ್ತದೆ. ನಿಮ್ಮ ಸುತ್ತಲೂ ಶಾಂತಿಯನ್ನು ಕಂಡುಕೊಳ್ಳುವಿರಿ. ಸುತ್ತಲೂ ಯಾವುದೇ ಗದ್ದಲ ಅಥವಾ ಸಪ್ಪಳವಿರುವುದಿಲ್ಲ. ವಾತಾವರಣವು ಬಹಳ ವಶವರ್ತಿಯಾಗಿದೆ. ಆದ್ದರಿಂದ ಎಲ್ಲಾ ಅಭ್ಯಾಸಕಾರರೂ ಈ ಸಮಯವನ್ನು ಬಹಳ ಸರಿಯಾದದ್ದೆಂದು ಪರಿಗಣಿಸುತ್ತಾರೆ.

iii) ಈ ಮಾಧ್ಯಮದಿಂದ ಸಮಾಜ ವಿರೋಧ ಮತ್ತು ಅನೀತಿ ಚಟುವಟಿಕೆಗಳಲ್ಲಿ ತೊಡಗಬೇಡಿರಿ. ಈ ಮಾಧ್ಯಮದಿಂದ ನೀವು ಒಬ್ಬ ಅಪ್ಪಟ ಗುಣವುಳ್ಳ ಹೆಂಗಸಿನ ಹಾದಿ ತಪ್ಪಿಸಲಿಚ್ಛಿಸಿದರೆ, ಈ ನಡೆಯನ್ನು ಖಂಡಿತವಾಗಿ ಸಮಾಜವಿರೋಧವೆಂದು ತೆಗೆದುಕೊಳ್ಳಲಾಗುವುದು. ನಿಮಗೆ ಯಾವುದೇ ಯಶಸ್ಸು ದೊರೆಯುವುದಿಲ್ಲ. ಏಕೆಂದರೆ ಅಂತಹ ಹೆಂಗಸಿನ ಮನಸ್ಸು ಬಹಳ ಶಕ್ತಿಯುತವಾಗಿರುತ್ತದೆ. ಆಕೆಯ ಮನಸ್ಸಿನೊಡನೆ ನಿಮ್ಮ ವಿಚಾರಗಳು ಅಡ್ಡವಾಗುತ್ತವೆ.

iv) ನೀವು ಈ ಸಿದ್ಧಿಯನ್ನು ಉತ್ತಮ ಕಡೆಗೆ ಉಪಯೋಗಿಸಬೇಕು. ಉದಾಹರಣೆಗೆ ನಿಮ್ಮ ಸ್ನೇಹಿತನ ಮಗನಿಗೆ ವಿದ್ಯೆಯಲ್ಲಿ ಆಸಕ್ತಿಯಿರುವುದಿಲ್ಲ. ಅವನು ಬರೆಯುವುದನ್ನೂ ಓದುವುದನ್ನು ಎಲ್ಲವನ್ನೂ ಬಿಟ್ಟುಬಿಟ್ಟಿದ್ದಾನೆ. ಅವನನ್ನು ನೀವು ಹಿಂದಕ್ಕೆ ವಿದ್ಯಾಭ್ಯಾಸಕ್ಕೆ ಹಚ್ಚಬಹುದು. ವಿಚಾರಗಳನ್ನು ವರ್ಗಾಯಿಸುವುದರ ಮೂಲಕ ಅವನ ಗಮನವನ್ನು ವಿದ್ಯಾಭ್ಯಾಸದ ಕಡೆಗೆ ಏಕಾಗ್ರತೆವಹಿಸುವ ಹಾಗೆ ಮಾಡಬಹುದು.

v) ಓರ್ವನು ಈ ಕಲಾಕೌಶಲ್ಯದಲ್ಲಿ ತಾನು ಅತ್ಯಾನಂದವಾದ ಶಾಂತತೆಯಲ್ಲಿ ಇದ್ದಾಗ ಮಾತ್ರ ಯಶಸ್ಸನ್ನು ಹೊಂದುತ್ತಾನೆಂದು ನಾವು ಈಗಾಗಲೇ ಹೇಳಿದ್ದೇವೆ. ಬೇರೆ ಯಾವುದೇ ವಿಚಾರಗಳು ನಿಮ್ಮ ಮನಸ್ಸಿನಲ್ಲಿ ಅಡ್ಡವಾಗಿ ಬರಬಾರದು. ನಿಮ್ಮ ಮನಸ್ಸು ಒಂದೇ ಒಂದು ವಿಚಾರಕ್ಕೆ ಎಡೆಮಾಡುತ್ತದೆ. ಅಲ್ಲಿ ಒಂದಕ್ಕೊಂದು ವಿರುದ್ಧವಾದ ವಿಚಾರಗಳು ಇರುವುದಿಲ್ಲ. ನಿಮ್ಮ ಇಚ್ಛಾಶಕ್ತಿಯು ಅಥವಾ ಮನೋಬಲವು ಬಹಳ ಶಕ್ತಿಯುತವಾಗಿಯೇ ಇರುತ್ತದೆ. ಅದಕ್ಕೆ ಭಯಂಕರವಾದ ಏಕಾಗ್ರತೆಯ ಅವಶ್ಯಕತೆ ಇರುತ್ತದೆ. ಆಗ ಮಾತ್ರವೇ ನೀವು ಯಶಸ್ಸನ್ನು ಪಡೆಯಬಹುದು.

vi) ಈ ಎಲ್ಲಾ ಚಟುವಟಿಕೆಗಳಿಗೆ ನಂಬಿಕೆ ಅಡಿಪಾಯವಾಗಿದೆ. ನಿಮಗೆ ಈ ಧ್ಯಾನದಲ್ಲಿ ಯಾವುದೇ ನಂಬಿಕೆಯಿಲ್ಲದಿದ್ದರೆ ಅಥವಾ ಈ ಚಟುವಟಿಕೆಗಳಲ್ಲಿ ಯಾವುದೇ ವಿಶ್ವಾಸವಿಲ್ಲದಿದ್ದರೆ, ನೀವು ಎಷ್ಟೇ ಪ್ರಯತ್ನಿಸಿದರೂ ನಿಮಗೆ ಯಾವುದೇ ಯಶಸ್ಸು ದೊರೆಯುವುದಿಲ್ಲ. ಏಕೆಂದರೆ ವಿರುದ್ಧ ವಿಚಾರಗಳು ಈಗಾಗಲೇ ನಿಮ್ಮ ಮನಸ್ಸಿನಲ್ಲಿ ಮನೆಮಾಡಿವೆ. ಅದು ಯಾವ ವಿಚಾರವಾಗಿತ್ತೆಂದರೆ ಇದೆಲ್ಲವೂ ವ್ಯರ್ಥ ಮತ್ತು ಇವರು ಸುಮ್ಮನೇ ಹೇಳಿದುದನ್ನೆಲ್ಲಾ ಸಾಧಿಸಲಾಗುವುದಿಲ್ಲ ಎನ್ನುವುದು.

ಒಮ್ಮೆ ಏಸುಕ್ರಿಸ್ತನು ತನ್ನ ಶಿಷ್ಯಂದಿರಿಗೆ ನೀವು ಒಂದು ಖಚಿತ ಮಟ್ಟದ ವಿಶ್ವಾಸದೊಂದಿಗೆ ಇಚ್ಛಿಸಿದಲ್ಲಿ ಎದುರಿನಲ್ಲಿರುವ ಬೆಟ್ಟವನ್ನು ಬೇರುಸಮೇತ ಕಿತ್ತಿ ಆಚೆಯಿರುವ ಸಮುದ್ರದಲ್ಲಿ ಮುಳುಗಿಸಬಹುದೆಂದನು. ಆದರೆ ಓರ್ವನು ತನ್ನಲ್ಲಿ ಅವಿಭಾಜ್ಯವಾದ ನಂಬಿಕೆಯಿದ್ದರೆ ಮಾತ್ರ ಅದನ್ನು ಸಿದ್ಧಿಸಿಕೊಳ್ಳಬಹುದು. ಈ ಒಂದು ಪ್ರತೀಕವಾದ ಒಂದೇ ವಾಕ್ಯದಲ್ಲಿ ಏಸುಕ್ರಿಸ್ತನು ಎಲ್ಲವನ್ನೂ ಹೇಳಿದ್ದಾನೆ. ಓರ್ವನಲ್ಲಿ ಅಚಲವಾದ ಮತ್ತು ಸಂಪೂರ್ಣವಾದ ನಂಬಿಕೆಯಿದ್ದಲ್ಲಿ ಅವನು ಅಸಾಧ್ಯ ಕೆಲಸಗಳನ್ನು ಸಿದ್ಧಿಸಿಕೊಳ್ಳಬಹುದು ಎಂದು ಸಹ ಆತನು ಹೇಳಿದ್ದಾನೆ. ನಿಮ್ಮ ಮನಸ್ಸು ತನ್ನಷ್ಟಕ್ಕೆ ತಾನೇ ಅತೀ ವೇಗ ಮತ್ತು ಸಂಪೂರ್ಣ ತಲ್ಲೀನತೆಯಲ್ಲಿ ಕಾರ್ಯದ ಚಾತುರ್ಯದ ಕಡೆ ವಾಲುತ್ತದೆ. ಆದ್ದರಿಂದ ನಂಬಿಕೆಯು ಯಾವುದೇ ಧ್ಯಾನದ ಅಡಿಪಾಯವಾಗಿದೆ.

ವಿಚಾರಗಳನ್ನು ನಿಶ್ಚಯವಾಗಿ ವರ್ಗಾಯಿಸುವಂತಹ ಸಿದ್ಧಿಯು ಬಹಳ ಅನುಪಮವಾಗಿರುವುದು ಕಂಡುಬಂದಿದೆ. ನಾವು ಜಗತ್ತಿಗೆ ಒಡೆಯರಾಗಬಹುದು. ನಾವು ಯಾವುದೇ ವ್ಯಕ್ತಿಯನ್ನು ವಶದಲ್ಲಿ ತೆಗೆದುಕೊಳ್ಳಬಹುದು. ಹೀಗೆ ನಾವು ಬೇರೆಯವರನ್ನು ಹೆಚ್ಚು ಮಂಗಳಕರ ಹಾಗೂ ಸಂತೋಷವಾಗುವಹಾಗೆ ಮಾಡಬಹುದು.

## ೨. ಸಂಕಲ್ಪ ಸಾಧನೆ *

ಶಾಸ್ತ್ರೋಕ್ತವಾದ ಪ್ರತಿಜ್ಞೆಯನ್ನು ಮಾಡುವ ಅಭ್ಯಾಸವು ನಮ್ಮ ಜೀವನದ ಅತ್ಯಂತ ಪ್ರಮುಖವಾದದ್ದಾಗಿದೆ. ಭಾರತೀಯ ಯೋಗ ಶಾಸ್ತ್ರದಲ್ಲಿ ಪ್ರತಿಜ್ಞೆಯನ್ನು ಮತ್ತೆಮತ್ತೆ ಹೇಳಲು ಇಚ್ಛಿಸುವಂತಹ ಧ್ಯಾನ ಮತ್ತುಮನೋಬಲದ ಸಂಸ್ಕರಣ ಈ ಎರಡೂ ಪ್ರಾಧಾನ್ಯತೆಯನ್ನು ಪಡೆದಿವೆ. ಏಕೆಂದರೆ ಈ ನಿರ್ಣಾಯಕ

*ಸಂಕಲ್ಪ ವೆಂದರೆ ನಿಶ್ಚಯ ಅಥವಾ ನಿರ್ಣಯ. ಹಿಂದೂಗಳು ಪ್ರಾರಂಭದಲ್ಲಿ ಯಾವ ಉದ್ದೇಶಕ್ಕಾಗಿ ಕೈಗೊಳ್ಳುತ್ತಿರುವುದೋ ಅದನ್ನು ಒತ್ತಿ ಹೇಳುವ ಒಂದು ಧಾರ್ಮಿಕ ಆಚಾರ ವಿಧಿಯ ಶಾಸ್ತ್ರೋಕ್ತ ಶಪಥವನ್ನು ತೆಗೆದುಕೊಳ್ಳುವುದು.

ಸಹನಶಕ್ತಿಗಳನ್ನು ವೃದ್ಧಿಸಿಕೊಳ್ಳದೆ ಯಾರೂ ಏಳ್ಗೆಯಾಗುವುದಿಲ್ಲವೆಂದು ವಿಶಾಲವಾಗಿ ಅಂಗೀಕೃತವಾಗಿದೆ.

ಪ್ರತಿಯೊಬ್ಬರೂ ತಮ್ಮಲ್ಲಿಯೇ ಒಂದು ಬಯಕೆಯನ್ನು ಆಳವಾಗಿ ಕಾಪಾಡಿಕೊಳ್ಳುತ್ತಾರೆ. ಕೆಲವೊಬ್ಬನಿಗೆ ಕೋಟ್ಯಾಧೀಶನಾಗಬೇಕಾಗಿರುತ್ತದೆ, ತನ್ನ ದೀರ್ಘಕಾಲದ ವ್ಯಾಧಿಯ ನರಳುವಿಕೆಯಿಂದ ಬಿಡುಗಡೆಯನ್ನಿಚ್ಛಿಸುವವನು ಇನ್ನೊಬ್ಬನಿರುತ್ತಾನೆ. ಅವನು ಬಾಹ್ಯರೂಪವು ಅದ್ವಿತೀಯವಾಗಿ ಸುಂದರವಾಗಬೇಕೆನ್ನುತ್ತಾನೆ. ಇನ್ನೂ ಕೆಲವರು ದೈವತ್ವವನ್ನು ಸಾಧಿಸಲು ಇಚ್ಛಿಸುತ್ತಾರೆ.

ಹೇಗಾದರೂ ಕೆಲ ಅದೃಷ್ಟಶಾಲಿಗಳು ಮಾತ್ರ ತಮ್ಮ ಜೀವನದಲ್ಲಿ ತಮ್ಮ ಗುರಿಯನ್ನು ತಿಳಿದಿರುತ್ತಾರೆ. ಉಳಿದವರು ಅದು ಒಳಗೊಂಡ ಮೂಲದಾರಿಯಲ್ಲೇ ತೃಪ್ತಿಯಾಗಿರುತ್ತಾರೆ. ಬಹಳ ಜನರು ಅವರ ಕೈಗೆ ಎಟುಕದಂತಹ ಆಟೆಯಿರುವ ಬಯಕೆಗಳನ್ನು ಇಟ್ಟುಕೊಂಡಿರುತ್ತಾರೆ.

ಅವರ ಬಯಕೆಗಳು ಪೂರ್ಣಗೊಳ್ಳದ ಮುಖ್ಯಕಾರಣವೇನೆಂದರೆ ಓರ್ವನ ಮನೋಬಲದಲ್ಲಿಯ ನ್ಯೂನ್ಯತೆ. ನೀವು ನಿಮ್ಮ ಮನೋಬಲದಲ್ಲಿ ಕ್ಷೀಣರಾದಷ್ಟು, ನೀವು ನಿಮ್ಮ ಗುರಿಯಿಂದ ಹೆಚ್ಚುದೂರವಾಗಿದ್ದೀರಿ. ಹೆಚ್ಚುಕಡಿಮೆ ಪ್ರತಿನಿತ್ಯವೂ ನಮ್ಮ ಹೊಚ್ಚಹೊಸ ಯೋಜನೆ ಹಾಗೂ ವಿಚಾರಗಳು ಹೊಳೆಯುತ್ತವೆ. ನಾವು ನವೀನ ವಿಚಾರ ಹಾಗೂ ಯೋಜನೆಗಳಲ್ಲಿ ಲೀನವಾಗುತ್ತೇವೆ. ಏಕೆಂದರೆ ನಾವು ಜೀವನದಲ್ಲಿ ಏನನ್ನಾದರೂ ಸಾಧಿಸಬೇಕಾಗಿದೆ. ನಮ್ಮ ವಿಚಾರಗಳು ಮತ್ತು ಯೋಜನೆಗಳು ಗಾಳಿಗೋಪುರಗಳಾಗಿಬಿಡುತ್ತವೆ. ಅವು ಹೀಗೆ ಕೊನೆಗೊಳ್ಳಲು ಕಾರಣವೇನೆಂದರೆ ಅವಕ್ಕೆ ಅವಶ್ಯವಾದ ಮನೋಬಲ ಮತ್ತು ಇಚ್ಛಾಶಕ್ತಿಗಳ ಬೆಂಬಲವಿಲ್ಲ. ನಮ್ಮಲ್ಲಿ ದೃಢಸಂಕಲ್ಪದ ಅರಿವಿರಬೇಕು. ನಾವು ಏನನ್ನು ನಿರ್ಧರಿಸಿದ್ದೇವೋ ಅದಕ್ಕೆ ಕಟ್ಟುಬದ್ಧವಾಗಿರಬೇಕು, ಏನೇಯಾಗಲಿ ನಾವು ಅದನ್ನು ಸಾಧಿಸಿಯೇ ತೀರುತ್ತೇವೆ ಎನ್ನುವ ನಿರ್ಧಾರವಿರಬೇಕು. ಈ ರೀತಿಯ ದೃಢಸಂಕಲ್ಪದೊಂದಿಗೆ ನಾವು ಮುಂದೆ ಹೋದದ್ದೇಯಾದರೆ ನಮಗೆ ಖಚಿತವಾಗಿ ಯಶಸ್ಸು ದೊರೆಯುತ್ತದೆ.

ನಮ್ಮ ಜೀವನದಲ್ಲಿ ವಾಸ್ತವದ ಯೋಜನೆಗಳಿರಬೇಕೆಂದು ನಾನು ಒತ್ತಿಹೇಳಲು ಬಯಸುತ್ತೇನೆ. ಅಲ್ಲದೆ, ಯೋಜನೆಗಳು ಸಂಬಂಧಸೂಚಕವಾಗಿರಬೇಕು. ಅದರ ನಿರ್ಣಾಯಕ ಅಂಶಗಳು ಕಾಲ, ಸಮಯ ಮತ್ತು ಕೃತಿಯಾಗಿರಬೇಕು. ಒಂದು ವೇಳೆ ನಾವು ನ್ಯೂಯಾರ್ಕ್‌ನ್ನು ದೆಹಲಿಯ ಪಕ್ಕಕ್ಕೆ ತರುತ್ತೇವೆಂದು ನಿರ್ಧಾರ ತೆಗೆದುಕೊಳ್ಳುತ್ತೇವೆ. ಈ ತರಹದ ಒಂದು ಯೋಜನೆಯು ನಿರರ್ಥಕವಾದ ವ್ಯಾಯಾಮದಲ್ಲಿ ಕೊನೆಗೊಳ್ಳಲೇ ಬೇಕಾಗುತ್ತದೆ. ಏಕೆಂದರೆ ಅದು ಸಮಯ ಮತ್ತು ಸ್ಥಳದ ನಿರ್ಣಾಯಕ ಅಂಶಗಳನ್ನು ಉಲ್ಲಂಘಿಸುತ್ತದೆ. ಒಂದುವೇಳೆ ಯಾರಾದರೂ ಆಧುನಿಕ ಯುದ್ಧವನ್ನು ಕತ್ತಿಗಳ ಸಹಾಯದಿಂದ ಎದುರಿಸಲು ಯೋಜಿಸುತ್ತಾರೆ, ವಿಜ್ಞಾನದ ಈ ಯುಗದಲ್ಲಿ ಅದು ಕೆಲಸಮಾಡುವುದಿಲ್ಲ. ಅದು ಐತಿಹಾಸಿಕ ಕಾಲಗಣನಾದೋಷವಾಗಿಯೇ ಉಳಿಯುವುದು. ಖಚಿತವಾಗಿ ನಾವು ಹಿಂದಿನಕಾಲಕ್ಕೆ ಹಿಂದಿರುಗಲಾಗುವುದಿಲ್ಲ.

ಆದ್ದರಿಂದ ನಾವು ಸರಿಯಾಗಿ ಯೋಚಿಸಿದ ನಂತರವೇ ಯೋಜಿಸುವ ಅವಶ್ಯಕತೆ ಇರುತ್ತದೆ. ಒಬ್ಬ ಕಡು ಬಡವನು, ಮೂರು ತಿಂಗಳಲ್ಲಿ ಕೋಟ್ಯಾಧೀಶನಾಗಬೇಕೆಂದು ಇಚ್ಛಿಸಿದರೆ, ಅವನು ಖಚಿತವಾಗಿ ದುಃಖಿಕ್ಕೀಡಾಗುವನು. ಓರ್ವನು ತಾನು ಹೆಚ್ಚು ಗಳಿಸಬೇಕೆನ್ನುವ ದೃಢಸಂಕಲ್ಪವನ್ನು ಯಾವಾಗಲೂ ಒಂದು ಖಚಿತ ಚೌಕಟ್ಟಿನಲ್ಲಿ ಇಟ್ಟು ಕೊಳ್ಳುತ್ತಾನೆ. ಈ ತರಹದ ದೃಢಸಂಕಲ್ಪವನ್ನು ತೆಗೆದುಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ.

ಯೋಜನೆಯು ದೃಢಸಂಕಲ್ಪಕ್ಕಿಂತ ಮುಂಚಿತವಾಗಿರಬೇಕು. ನಾವು, ಹೇಗಾದರೂ, ಕಾರ್ಯರೂಪದಲ್ಲಿ

ಯೋಜಿಸಬೇಕು. ಆದ್ದರಿಂದ ನೀವು ವಾಸ್ತವ ಯೋಜನೆಯೊಂದಿಗೆ ಬಂದಾದ ನಂತರ ಅದನ್ನು ಒಂದು ಕಾಗದದ ಮೇಲೆ ಬರೆದಿಟ್ಟುಕೊಳ್ಳುವುದು ಉತ್ತಮವು. ನೀವು ಈ ಯೋಜನೆಯನ್ನು ಸಾಧಿಸುತ್ತೀರಿ ಮತ್ತು ನಿಮ್ಮ ಎಲ್ಲಾ ಪ್ರಯತ್ನ ಹಾಗೂ ಸಮಯವನ್ನು ಈ ಕೊನೆಯಲ್ಲಿ ಕೇಂದ್ರೀಕರಿಸುತ್ತೀರಿ ಎನ್ನುವ ಪ್ರತಿಜ್ಞೆಯನ್ನು ತೆಗೆದುಕೊಳ್ಳಬೇಕು.

ಈಗ ನೀವು ನಿಮ್ಮ ದೃಷ್ಟಿಗಳಿಗೆ ಈ ಗುರಿಯನ್ನು ಮುಟ್ಟುವ ಕಡೆ ತರಬೇತಿ ಕೊಡಬೇಕು. ನೀವು ಪ್ರತಿಯೊಂದು ಹೆಜ್ಜೆಯಲ್ಲಿಯೂ ಎಲ್ಲಾ ರೀತಿಯ ಅಡಚಣೆಗಳನ್ನು ಎದುರಿಸುವುದರಲ್ಲಿ ಅನುಮಾನವಿಲ್ಲ. ಕೆಲವೊಮ್ಮೆ, ನಿಮ್ಮ ದೃಢ ಸಂಕಲ್ಪವು ವಿರೋಧಾತ್ಮಕ ವಾತಾವರಣಕ್ಕೆ ಸಮತೋಲನಗೊಂಡು ಸಡಿಲಾಗುತ್ತದೆ. ಆದರೆ ಪರಾಭವವಾದ ಹಾಗೆ ಭಾವಿಸಬೇಕಾಗಿಲ್ಲ. ನೀವು ದ್ವಿಗುಣಗೊಂಡ ಬಲದಿಂದ ನಿವೇದಿಸಿಕೊಳ್ಳಬೇಕು. ನೀವು ಪ್ರಾರಂಭದಲ್ಲಿದ್ದಷ್ಟೇ ಕಠಿಣವಾಗಿರಬೇಕು. ನೀವು ನಿಯೋಜಿತ ಸಮಯದಲ್ಲೇ ನಿಮ್ಮ ಗುರಿಯನ್ನು ಮುಟ್ಟುವಿರಿ.

ಒಮ್ಮೆ ನಾನು ಧ್ಯಾನ ಮಾಡಬೇಕಿತ್ತು. ಅದಕ್ಕಾಗಿ ನನಗೆ ಕರಿ ಜಿಂಕೆಯ ಚರ್ಮದ ಆಸನದ ಅವಶ್ಯಕತೆಯಿತ್ತು. ಅದು ನಮ್ಮ ಊರಲ್ಲಿ ದೊರೆಯುತ್ತಿರಲಿಲ್ಲ.

ಸಂಜೆಯಲ್ಲಿ ನಾನು ಈ ಧ್ಯಾನವನ್ನು ಮುಂದಿನ ಮಧ್ಯಾಹ್ನದೊಳಗೆ ಮಾಡಬೇಕೆಂದು ನಿರ್ಧರಿಸಿದೆ. ನನ್ನಲ್ಲಿ ಆಸನವಿರಲಿಲ್ಲ ಮತ್ತು ನಿಯೋಜಿತ ಸಮಯದಲ್ಲಿ ನಾನು ಆ ಧ್ಯಾನವನ್ನು ಕೈಗೊಳ್ಳುವುದರಲ್ಲಿ ನನಗೆ ಖಂಡಿತತೆಯಿತ್ತು.

ಮರುದಿನ ಬೆಳಿಗ್ಗೆ, ನನ್ನ ಆಶ್ಚರ್ಯಕ್ಕೆ, ನನ್ನ ಓರ್ವ ಶಿಷ್ಯನು ವಾರಣಾಸಿಯಿಂದ ನನಗೆ ಬೇಕಾದ ಆಸನವನ್ನು ತರುತ್ತಿರುವುದನ್ನು ನಾನು ನೋಡಿದೆ. ಅವನು ಬಹಳ ಕಾಲದಿಂದ ಅದನ್ನು ನನಗೆ ಉಡುಗೊರೆಯಾಗಿ ಕೊಡಬೇಕೆಂದಿದ್ದುದಾಗಿ ಹೇಳಿದನು. ಈಗ ಅಕಸ್ಮಿಕವಾಗಿ ಅವನಿಗೆ ಅದು ಸಿಕ್ಕಿತು, ಅವನು ಅದನ್ನು ನನಗೆ ಕೊಡಬೇಕೆಂದು ನಿರ್ಧರಿಸಿದನು.

ನಾನು ನಿಯೋಜಿತ ಸಮಯದಲ್ಲಿ ಧ್ಯಾನವನ್ನು ಕೈಗೊಂಡೆ. ಅದು ನನಗೆ ಓರ್ವನಲ್ಲಿ ದೃಢ ಸಂಕಲ್ಪವು ಅಚಲವಾಗಿದ್ದರೆ ಏನನ್ನಾದರೂ ಮಾಡಬಹುದೆನ್ನುವ ನನ್ನ ಭಾವನೆಯನ್ನು ಬಲಪಡಿಸಿತು.

ಒಮ್ಮೆ ನಾನು ಓರ್ವ ಸಹ ಶಿಷ್ಯನ ಆಶ್ರಮದಲ್ಲಿ ಕೂತುಕೊಂಡಿದ್ದೆ. ಅದು ಊರಿನಿಂದ ಒಂದು ಕಿಲೋಮೀಟರ್ ದೂರದಲ್ಲಿರುವ ಅಡವಿಯಲ್ಲಿ ಸ್ಥಾಪಿತವಾಗಿತ್ತು. ಅವನಲ್ಲಿ ಪೂಜೆಯ ಸಾಮಗ್ರಿಯಾದ ಧೂಪದ ಕೊರತೆಯಿತ್ತು ಅವನಿಗೆ ನಾನು ಅದನ್ನು ಊರಿನಿಂದ ತರಬೇಕಿತ್ತು. ಚಳಿಯಾದ್ದರಿಂದ ನನಗೆ ಹೊರಗೆ ಹೋಗಲು ಮನಸ್ಸೇ ಇರಲಿಲ್ಲ. ಅವನಿಗೆ ನನ್ನ ಭಾವನೆಗಳ ಅರ್ಥವಾಯಿತು. ನಾನು ಹೊರಗೆ ಹೋಗಬೇಕಾಗಿಲ್ಲವೆಂದು ಅವನು ನನಗೆ ಭರವಸೆಕೊಟ್ಟನು. ಅವನಿಗೆ ಬೇರೆಶಿಷ್ಯರಿಂದ ಅದನ್ನು ಮುಂಚಿತವಾಗಿಯೇ ಪಡೆದುಕೊಳ್ಳಬಹುದೆನ್ನುವ ಸಂಪೂರ್ಣ ವಿಶ್ವಾಸವಿತ್ತು.

ಬೇಗನೇ ಒಬ್ಬ ಭಕ್ತನು ಊದುಬತ್ತಿಯ ಒಂದು ಪ್ಯಾಕೆಟ್ ನೊಡನೆ ಆಶ್ರಮಕ್ಕೆ ಬಂದದ್ದು ಬೆರಗುಗೊಳಿಸುವಂತಹುದಾಗಿತ್ತು.

ಪ್ರಖ್ಯಾತ ಅಮೆರಿಕದ ಸಂತನಾದ ಸಂತಫಿಲ್ ಮೋರೆಯ ಉದಾರಹಣೆಯನ್ನು ಕೊಡಲು ಸಾಕಾಗಬಹುದು. ಒಮ್ಮೆ ಅವನಲ್ಲಿ ಆಹಾರದ ಕೊರತೆಯಾಗಿತ್ತು. ಅವನ ಆಶ್ರಮದಲ್ಲಿ ಹೆಚ್ಚಾಗಿ ದಿಕ್ಕಿಲ್ಲದ ಅಥವಾ ಹೆತ್ತವರಿಲ್ಲದ 50 ಕ್ಕಿಂತಲೂ ಹೆಚ್ಚು ಮಕ್ಕಳಿದ್ದರು. ಮಕ್ಕಳು 5 ರಿಂದ 15 ವರ್ಷದೊಳಗಿನವರಾಗಿದ್ದರು.

ಒಂದು ನಿಯಮವಾಗಿ ಮಕ್ಕಳು ಬೆಳಿಗ್ಗೆ 11 ಗಂಟೆಗೆ ಆಹಾರವನ್ನು ತೆಗೆದುಕೊಳ್ಳುತ್ತಿದ್ದರು. ಆದಿನ ಆಗಲೇ ಹತ್ತುವರೆ ಆಗಿತ್ತು. ಮ್ಯಾನೇಜರ್‌ನು ಸಂತನಿಗೆ ಪರಿಸ್ಥಿತಿಯನ್ನು ಎದುರಿಸಲು ಏನುಮಾಡಬೇಕೆಂದು ಕೇಳಿದನು. ನಂತರ ಯಾವುದೇ ಆಹಾರ ಸರಕನ್ನು ತಂದಿರಲಿಲ್ಲ. ಆಕಡೆ ಯಾವುದೇ ವ್ಯವಸ್ಥೆಯನ್ನೂ ಮಾಡಿರಲಿಲ್ಲ.

ಒಂದು ರೀತಿಯ ಪ್ರಶಾಂತತೆಯಿಂದ ಸಂತನು ಉತ್ತರ ಕೊಟ್ಟನು: ಅವರಿಗೆ 11 ಗಂಟೆಗೆ ಭೋಜನವನ್ನು ನೀಡಿರಿ.

ಆತನು ಮ್ಯಾನೇಜರ್‌ಗೆ ಗಾಬರಿಪಡಬೇಕಾಗಿಲ್ಲವೆಂದು ಹೇಳಿದನು. ಮಕ್ಕಳಿಗೆ ನಿಯೋಜಿತ ಸಮಯಕ್ಕೆ ಊಟ ಸಿಗುವುದು. ಅವರು ಊಟವನ್ನು ಮಾಡಲೇಬೇಕು.

ಮ್ಯಾನೇಜರ್ ಹಿಂದಿರುಗಿದನು. ಈಗ ಹನ್ನೊಂದಕ್ಕೆ ಐದು ನಿಮಿಷ ಕಡಿಮೆಯಿತ್ತು. ಅವನು ಪುನಃ ಸಂತನಲ್ಲಿ ಬಂದನು. ಅವನೆಂದನು: ನಾನು ಊಟದ ಗಂಟೆಯನ್ನು ಬಾರಿಸಲೇ? ನಾನು ಮಕ್ಕಳಮುಂದೆ ಬರಿದಾದ ತಟ್ಟೆಗಳನ್ನು ಇಡಲೇ?

ಸಂತನು ಹೇಳಿದನು: ನಿಯೋಜಿತ ಸಮಯಕ್ಕೆ ಗಂಟೆಯನ್ನು ಬಾರಿಸಿರಿ. ಎಲ್ಲಾ ಮಕ್ಕಳೂ ಊಟದ ವರಾಂಡಕ್ಕೆ ಬರಲಿ.

ನಿಜವಾಗಿಯೂ ಮ್ಯಾನೇಜರ್‌ನು ಬಹಳ ತಬ್ಬಿಬ್ಬಾದನು. ಅವನು ಸಂಪೂರ್ಣ ಸುಸ್ತಾಗಿದ್ದನು. ಸರಿಯಾಗಿ 11ಕ್ಕೆ ಅವನು ಊಟದ ಗಂಟೆಯನ್ನು ಬಾರಿಸಿದನು.

ಮಕ್ಕಳು ಅವರ ಕೋಣೆಗಳಿಂದ ಹೊರ ಓಡಿಬಂದು ಊಟದ ವರಾಂಡದಲ್ಲಿ ಕೂಡಿದರು.

ಸರಿಯಾಗಿ ಈ ಸಮಯಕ್ಕೆ ಊಟದ ಸರಕುಗಳಿಂದ ತುಂಬಿಕೊಂಡ ವ್ಯಾನು ಆಶ್ರಮಕ್ಕೆ ಬಂದಿತು. ಒಬ್ಬ ನಿರ್ದಿಷ್ಟ ಸಜ್ಜನನು ಅದನ್ನು ಆಶ್ರಮಕ್ಕೆ ತಂದನು.

ಅವನೆಂದನು: ನಾನು ನೂರುಜನರಿಗೆ ಊಟವನ್ನು ಆಜ್ಞಾಪಿಸಿದ್ದೆ. ಅವರು ಇನ್ನೂರು ಜನರಿಗೆ ಅಡಿಗೆ ಮಾಡಿದ್ದಾರೆ. ಆದ್ದರಿಂದ ನಾನು ಮಕ್ಕಳಿಗೆ ಉಣಬಡಿಸಲು ಯೋಚಿಸಿದೆ.

ಸಂತನು ಮಕ್ಕಳಿಗೆ ನೀಡಲು ಅನುವುಮಾಡಿದನು.

ಸಂತನು, ಒಂದು ಗಂಟೆಗೆ ಮ್ಯಾನೇಜರ್‌ನನ್ನು ಬರಹೇಳಿದನು. ಅವನು ಆತನಿಗೆ ಎಲ್ಲಾ ಮಕ್ಕಳ ಊಟವಾಯಿತೇ ಎಂದು ಕೇಳಿದನು. ಮ್ಯಾನೇಜರ್‌ನು ಮಕ್ಕಳೊಂದೇ ಅಲ್ಲ ಸಂಪೂರ್ಣ ಸಿಬ್ಬಂದಿಯೇ ಊಟಮಾಡಿದೆ ಎಂದು ತಿಳಿಸಿದನು.

ಸಂತನು ಹೇಳಿದನು: ಸರಿ. ಈ ದಿನದಿಂದ ನಾನು ನಿನ್ನನ್ನು ಸೇವೆಯಿಂದ ಬಿಡುಗಡೆ ಮಾಡುತ್ತಿದ್ದೇನೆ. ಏಕೆಂದರೆ ನಿನಗೆ ದೇವರಲ್ಲಿ ಯಾವುದೇ ನಂಬಿಕೆ ಇದ್ದಹಾಗೆ ಕಾಣುವುದಿಲ್ಲ. ಈಕಡೆ ನಿನ್ನಲ್ಲಿ ಯಾವುದೇ ದೃಢ ನಿರ್ಧಾರವಿಲ್ಲ. ಈದಿನ ನೀನು ತಡವರಿಸುತ್ತಾ ಮಾತನಾಡುವ ಹಾಗೆ ಕಂಡೆ. ಮಕ್ಕಳೆಲ್ಲರಿಗೂ ಪ್ರತಿನಿತ್ಯ 11 ಗಂಟೆಗೆ ಊಟ ಸಿಕ್ಕಾಗ ಈದಿನ ವಿಶಿಷ್ಟ ಗಾಬರಿ ಏತಕ್ಕೆ?

ಈ ಘಟನೆಯನ್ನು, ನಾನು ಒತ್ತಿ ಹೇಳಲು ಇಚ್ಛಿಸುತ್ತೇನೆ, ದೃಢ ಸಂಕಲ್ಪದ ಪ್ರಾಮುಖ್ಯತೆಯ ನಿದರ್ಶನವಾಗಿದೆ. ನಮ್ಮಲ್ಲಿ ದೃಢಸಂಕಲ್ಪವಿದ್ದರೆ ನಮ್ಮನ್ನು ಏನೂ ತಡೆಗಟ್ಟುವುದಿಲ್ಲ. ನಿರ್ಧಾರವು ಅಚಲವಾಗಿಯೇ ಇರಬೇಕು.

ಪಶ್ಚಿಮದವರು ಮನೋಬಲದಲ್ಲಿ ಬಹಳವೇ ಅನ್ವೇಷಣೆಗಳನ್ನು ಕೈಗೆತ್ತಿಕೊಂಡರು. ಅವರು ಇನ್ನೊಂದು ಕಲೆಯನ್ನು ಅನುಸರಿಸಿದರು. ಉದಾಹರಣೆಗೆ, ಅವರು ತಮ್ಮ ಇಚ್ಛೆಯನ್ನು ಒಂದು ಕಾಗದದ ತುಂಡಿನ ಮೇಲೆ ಬರೆಯುವರು. ಅವರು ಅದನ್ನು ಅವರ ಮೇಜಿನಮೇಲೆ ಇಡುವರು. ಪ್ರತಿದಿನವೂ ಅವರು ಈ ಟಿಪ್ಪಣಿಯ ಮೇಲೆ ಐದು ನಿಮಿಷ ಗಮನವನ್ನು ಕೇಂದ್ರೀಕರಿಸುವರು. ಹೀಗೆ ಅವರು ತಮ್ಮ ಗಮನವನ್ನು ಕಾಗದದ ಮೇಲೆ ಬರೆದ ಆ ವಾಕ್ಯದ ಮೇಲೆ ಏಕಾಗ್ರತೆಗೊಳಿಸುವರು. ಅವರು ಇದನ್ನು ಒಂದು ತಿಂಗಳವರೆಗೂ ಮುಂದುವರಿಸುವರು. ನಂತರ ಅವರು ಕಾಗದವನ್ನು ತುಂಡುತುಂಡು ಮಾಡಿ ಬಿಸಾಡುವರು.

ಈ ರೀತಿ ಅವರು ತಮ್ಮ ಕೆಲಸಗಳನ್ನು ಮಾಡುವುದಾಗಿ ಅವರು ನಂಬುವರು. ಏಕೆಂದರೆ ಮನಸ್ಸಿನ ಸಂಪೂರ್ಣವಾದ ವೇಗವು ಒಂದು ಪೂರ್ಣ ತಿಂಗಳವರೆಗೂ ಆ ಕಾಗದದ ಮೇಲೆ ಬೀಳುತ್ತದೆನ್ನುವುದು ಸತ್ಯವು. ಅದು ಮನೋಬಲವನ್ನು ಹೆಚ್ಚಿಸಿ ಗುರಿಯನ್ನು ಮುಟ್ಟಲು ಸಹಾಯಕವಾಗುತ್ತದೆ.

ಓರ್ವನು ಈ ಕಲೆಯಲ್ಲಿ ಯಶಸ್ಸನ್ನು ಪಡೆದರೂ, ಇದು ಸಮಗ್ರವಾದ ಕಲೆಯೆಂದು ನನಗೆ ಅನ್ನಿಸುವುದಿಲ್ಲ. ಈ ಹಿಂದಿನ ಸಾಲುಗಳಲ್ಲಿ ನಾನು ಚರ್ಚಿಸಿದಂತಹ ಕಲಾಕೌಶಲ್ಯಗಳು ಹೆಚ್ಚು ಉಚಿತ ಹಾಗೂ ಹೆಚ್ಚು ಅಧಿಕೃತ. ನಮ್ಮ ಉದ್ದೇಶಕ್ಕೆ ಮುಟ್ಟಿಸುವಲ್ಲಿ ಅವು ಉತ್ತಮವಾಗಿ ಸಜ್ಜುಗೊಂಡಿವೆ.ಮನೋಬಲವು ನಮ್ಮ ಜೀವನಕ್ಕೆ ಮತ್ತು ನಮ್ಮ ಜೀವನದ ಯಶಸ್ಸಿಗೆ ಕೇಂದ್ರಬಿಂದುವಾಗಿದೆ. ಈ ಜ್ಞಾನ ಭಂಡಾರವನ್ನು ಅಭಿವೃದ್ಧಿ ಪಡಿಸುವಲ್ಲಿ ನಾವು ಹೆಚ್ಚು ಯಶಸ್ಸನ್ನು ಪಡೆದಷ್ಟು ನಮ್ಮ ಉದ್ದೇಶಕ್ಕೆ ನಾವು ಹತ್ತಿರವಾಗುತ್ತೇವೆ. ಸಂಕಲ್ಪ ಸಾಧನೆಯ ಅಭ್ಯಾಸದ ಮೂಲಕ ನಾವು ನಮ್ಮ ಜೀವನದಲ್ಲಿ ಪೂರ್ಣತೆಯನ್ನು ಪಡೆಯುತ್ತೇವೆ.

**೩. ದೂರದರ್ಶನ ಸಿದ್ಧಿ.**

ದೂರದರ್ಶನವು ನಮಗೆ ಸಮಯ ಮತ್ತು ಸ್ಥಳದಾಚೆ ಇರುವ ವಸ್ತುಗಳನ್ನು ನೋಡಿ ಇದ್ದಹಾಗೆ ಇಡುವ ಸಿದ್ಧಿಯನ್ನು ಕೊಡುತ್ತದೆ.

ನಾನು ಈ ಮೊದಲೇ ವಿಮರ್ಶಿಸಿದಂತೆ, ದೇವರು ಮನುಷ್ಯನನ್ನು ಅಸಮಾನ್ಯ ಶಕ್ತಿ ಮತ್ತು ಕೊನೆಯಿಲ್ಲದ ಶಕ್ತಿಯೊಡನೆ ಸಂಪನ್ನ ಮಾಡಿದ್ದಾನೆ. ಹೆಚ್ಚೇನಿದೆ, ಮನುಷ್ಯನು ತನ್ನಲ್ಲಿಯೇ ಹೇಗಾದರಾಗಲಿ ಯಾವುದೇ ಬಲಾತ್ಕಾರವಿಲ್ಲದ ನಿರ್ಧಾರಿತ ಅಂತರ್ಮನಸ್ಸನ್ನು ಹೊಂದಿದ್ದಾನೆ. ಅಂತರ್ಮನಸ್ಸು ಅಲೌಕಿಕವಾಗಿದೆ. ವಾಸ್ತವವನ್ನು ನೋಡುವುದಲ್ಲದೆ ಅದು ಭೂತಕಾಲದಲ್ಲಿ ಹಣಿಕಿಹಾಕಿ ಸಾವಿರವರ್ಷಕ್ಕಿಂತಲೂ ಹೆಚ್ಚು ಹಿಂದಿನ ಎಲ್ಲಾ ಘಟನೆಗಳನ್ನು ಸ್ಪಷ್ಟವಾಗಿ ನೋಡಬಲ್ಲದು. ಅದೇ ರೀತಿ ಅದು ಭವಿಷ್ಯವನ್ನೂ ನೋಡಿ ಭವಿಷ್ಯದ ಮೈಲಿಗಲ್ಲಿನೊಡನೆ ಜೀವಂತ ಸಂಬಂಧಗಳನ್ನು ಸ್ಥಾಪಿಸಬಹುದು.

ಸಮಯ ಮತ್ತು ಸ್ಥಳಗಳ ಸಾಧಾರಣ ನಿರ್ಧಾರಕ ಅಂಶಗಳಿಂದ ಯಾವುದೇ ರೀತಿಯಲ್ಲಿ ನಿಯಂತ್ರಿತವಾಗದೆ ಅಂತರ್ಮನಸ್ಸು ಪರಮಾಧಿಕಾರದ ಅಸ್ತಿತ್ವವುಳ್ಳದ್ದಾಗಿದೆ. ಅದಕ್ಕೆ ಪ್ರಚಂಡವಾದ ವೇಗವಿರುತ್ತದೆ. ಅದು ಒಂದು ಕ್ಷಣದಲ್ಲಿ ಸಾವಿರ ಮೈಲಿಗಿಂತಲೂ ಹೆಚ್ಚು ದೂರ ಪಯಣಿಸುತ್ತದೆ. ಅದು ಭೂತಕಾಲದಲ್ಲಿ ಮತ್ತು ಭವಿಷ್ಯದಲ್ಲಿಯೂ ಸಹ ಸಮನಾದ ಅನುಕೂಲತೆಯಿಂದ ಪಯಣಿಸುತ್ತದೆ.

ಆಧುನಿಕ ವಿಜ್ಞಾನವು ಅಂತರ್ಮನಸ್ಸಿನ ಅಸ್ತಿತ್ವವನ್ನು ಮತ್ತು ಅದು ತನ್ನಲ್ಲಿಯೇ ಅನುಪಮವಾಗಿದೆ ಎನ್ನುವುದನ್ನು ಸಹ ಅಂಗೀಕರಿಸಿದೆ ಎನ್ನುವುದರಲ್ಲಿ ಅನುಮಾನವಿಲ್ಲ. ಹಾಗೆಯೇ ಓರ್ವನು ವಿಜ್ಞಾನದಿಂದ ಅದರ ಅಸಾಮಾನ್ಯ ಸಾಮರ್ಥ್ಯವನ್ನು ಪರಿಶೋಧಿಸಲಾಗಿದೆಯೇ ಎಂದು ವಿಸ್ಮಯಗೊಳ್ಳುವನು. ಹಾಗೆ ಮಾಡಲು ಇನ್ನೂ ಸಾವಿರಾರು ವರ್ಷಗಳೇ ಬೇಕಾಗಬಹುದು.

ಬಹಿರ್ಮನಸ್ಸು ಸಮಕಾಲೀನವಾದ ಘಟನೆಗಳಿಂದ ನಿಶ್ಚಿತ ಸ್ಥಿತಿಯಲ್ಲಿರುತ್ತದೆ. ಹೇಗಾದರೂ ಅಂತರ್ಮನಸ್ಸಿಗೆ ಯಾವುದೇ ರೀತಿಯಲ್ಲಿ ಸಂಘಟಿತವಾಗಿರುವುದಿಲ್ಲ. ಅದು ಸಮಕಾಲೀನ ಅಭಿವೃದ್ಧಿಗಳಿಗೆ ಅಬಾಧಿತವಾಗಿಯೇ ಇರುತ್ತದೆ. ಆದ್ದರಿಂದ ಅದಕ್ಕೆ ಹೆಚ್ಚಿನ ಮಟ್ಟದ ಸ್ವಾತಂತ್ರ್ಯ ಮತ್ತು ಶಾಂತತೆ ಇರುತ್ತದೆ. ಕೇವಲ ಅಂತರ್ಮನಸ್ಸಿನ ಉಚಿತವಾದ ಸಂಸ್ಕರಣದಿಂದ ಮಾತ್ರ ದೂರದರ್ಶನ ಸಿದ್ಧಿಯನ್ನು ಪಡೆಯಬಹುದು. ಈ ತರಹದ ದಿವ್ಯ ದೃಷ್ಟಿಯು *ಕರ್ಣ ಪಿಶಾಚಿನಿ ಸಿದ್ಧಿಯ*[1] ಮೂಲಕವೂ ಸಾಧ್ಯವಿದೆ. ಆದರಿಂದ ಹೇಗಾದರೂ, ಓರ್ವನಿಗೆ ಕೇವಲ ಭೂತಕಾಲವನ್ನು ನೋಡಲಾಗುವುದು ಆದರೆ ಭವಿಷ್ಯಕಾಲವನ್ನು ನೋಡಲಾಗುವುದಿಲ್ಲ.

ಯಾವುದೇ ವಿಷಯಕ್ಕೆ ನಾವು ಇಲ್ಲಿ ಕೇವಲ ಸಮ್ಮೋಹನದ ಬಗ್ಗೆ ಚರ್ಚಿಸುತ್ತಿದ್ದೇವೆ. ಈ ಮಾಧ್ಯಮದ ಮೂಲಕ ಓರ್ವನು ತನ್ನ ಅಂತರ್ಮನಸ್ಸನ್ನು ಚೇತರಿಸಿಕೊಂಡು ತೃಪ್ತಿಕರ ರೀತಿಯಲ್ಲಿ ಭೂತ ಮತ್ತು ಭವಿಷ್ಯ ಇವೆರಡನ್ನೂ ನೋಡಬಹುದು. ಅದು ಚೇತನಯುಕ್ತ ಧ್ಯಾನ ಮತ್ತು ಸಂಪೂರ್ಣ ಮತ್ತು ಅವಿಭಾಗ ಏಕಾಗ್ರತೆಯನ್ನು ಒಳಗೊಂಡಿದೆ.

ದೂರದರ್ಶನ ಸಾಧನವನ್ನು ಅಭ್ಯಸಿಸಲು 8" x 8" ಗ್ಲಾಸಿನ ತುಂಡನ್ನು ತೆಗೆದುಕೊಳ್ಳಿರಿ. ಅದರ ಒಂದು ಮುಖವನ್ನು ಕಪ್ಪಗಾಗಿಸಲು ಕಪೂರ್ರದ ಕರಿಕಾಡಿಗೆಯನ್ನು ತೆಗೆದುಕೊಳ್ಳಿ. ಗ್ಲಾಸಿನ ಒಂದು ಮುಖವನ್ನು ಮಾತ್ರ ಕಪ್ಪಗಾಗಿಸುವುದನ್ನು ನಿಶ್ಚಯಮಾಡಿಕೊಳ್ಳಿ. ಈಗ ಕಪ್ಪು ಕಡೆಯು ನಿಮ್ಮ ಕಡೆ ಮುಖವಾದ ಹಾಗೆ ಅದನ್ನು ಒಂದು ಗೋಡೆಗೆ ಒರಗಿಸಿ, ಮೇಜಿನ ಮೇಲೆ ಇಡಿರಿ. ಅದನ್ನು ನಿಮ್ಮ ಕಣ್ಣಿಗೆ ನೇರವಾಗಿ ನೀವು ಕೂತುಕೊಂಡಿರುವ ಸ್ಥಳದಿಂದ ಕನಿಷ್ಠ 2 ಅಡಿ ದೂರದಲ್ಲಿಡಿ. ನಿಮ್ಮ ಆಸನವನ್ನು ಹರಡಿಕೊಂಡು ಆದಷ್ಟು ಚೈತನ್ಯಯುಕ್ತರಾಗಿ ಕೂತುಕೊಳ್ಳಿ.

ಗ್ಲಾಸಿನ ಮುಂದೆ ಒಂದು ದೀಪವನ್ನು ಇಟ್ಟು ಅದನ್ನು ಬೆಳಗಿಸಿ. ಕೋಣೆಯ ಎಲ್ಲಾ ಬಾಗಿಲು ಮತ್ತು ಕಿಟಕಿಗಳನ್ನು ಮುಚ್ಚಿರಿ. ಈಗ ಶಾಂತ ಹಾಗೂ ಸಮಚಿತ್ತದಿಂದ ಗ್ಲಾಸಿನ ಮೇಲಿನ ಜ್ವಾಲೆಯ ಪ್ರತಿಬಿಂಬದ ಮೇಲೆ ನಿಮ್ಮ ಕಣ್ಣನ್ನು ಸ್ಥಿರವಾಗಿಸಿ. ನೀವು ಜ್ವಾಲೆಯನ್ನು ಬಿಟ್ಟರೆ ಬೇರೇನನ್ನೂ ನೋಡುತ್ತಿಲ್ಲವೆನ್ನುವುದನ್ನು ಖಚಿತಪಡಿಸಿಕೊಳ್ಳಿ.

ನೀವು ನಿಧಾನವಾಗಿ ಉಸಿರಾಡಿ. ನೀವು ಜೋರಾಗಿ ಉಸಿರಾಡಿದರೆ ಅದು ಜ್ವಾಲೆಗೆ ತೊಂದರೆಯಾಗಬಹುದು. ನಿಮಗೆ ನಿಮ್ಮ ಉಸಿರಾಟದ ಮೇಲೆ ಸಂಪೂರ್ಣ ನಿಯಂತ್ರಣವಿರಬೇಕು.

ಈ ಅಭ್ಯಾಸವನ್ನು ಸ್ವಲ್ಪಹೊತ್ತು ಅಥವಾ, ಅವಶ್ಯಕತೆ ಇದ್ದಲ್ಲಿ, ಸ್ವಲ್ಪದಿನಗಳವರೆಗೆ ಮುಂದುವರಿಸಿ. ನೀವು ನಿಧಾನವಾಗಿ ಆ ಕಪ್ಪುಕಡೆಯ ಭಾಗವು ಬೆಳಕಾಗುತ್ತಿದೆ ಎಂದು ನೋಡುವಿರಿ. ನೀವು ನಿಜವಾಗಿಯೂ ಅದು ಬೆಳಕಾಗಿರುವುದನ್ನು ಕಂಡರೆ, ನೀವು ಅದನ್ನು ನಿಮ್ಮ ಯಶಸ್ಸಿನ ನಿಶ್ಚಿತವಾದ ಚಿಹ್ನೆ ಎಂದು ತಿಳಿಯಬಹುದು. ಆ ಕಪ್ಪುಕಡೆಯ ಭಾಗದ ಮೇಲಿನ ಬೆಳಕು ವಾಸ್ತವದಲ್ಲಿ ನಿಮ್ಮ ಅಂತರ್ಮನಸ್ಸಿನ ಬೆಳಕೇಯಾಗಿದೆ ಹಾಗೂ ಅದು ಆ ಗ್ಲಾಸಿನಮೇಲೆ ಪ್ರತಿಬಿಂಬವಾಗಿದೆ.

ಅದೇ ರೀತಿ ನೀವು ಈ ಅಭ್ಯಾಸವನ್ನು ನಿಯಮಿತವಾಗಿಸಿ. ಸ್ವಲ್ಪ ಸಮಯದ ನಂತರ ನೀವು ಈ ಗ್ಲಾಸಿನ ಭಾಗದಲ್ಲಿ ಹಲವಾರು ದೃಷ್ಯಗಳನ್ನು ನೋಡುವಿರಿ. ಈಗ ನೀವು ಹೆಚ್ಚು ಹುಷಾರಾಗಿರಬೇಕು. ಏಕೆಂದರೆ ಅದು ನಿಮ್ಮ ಅಂತರ್ಮನಸ್ಸು ಮತ್ತು ಬಹಿರ್ಮನಸ್ಸು ಒಂದಕ್ಕೊಂದು ಸ್ಪರ್ಶಿಸುತ್ತಿವೆ ಎಂದು

1.ಇದು ಓರು ಅಘೋರ ಅಭ್ಯಾಸವು. ಅಘೋರ ಹಾದಿಯ ಮುಖಂಡರು ತಮ್ಮ ವಿಧೇಯತೆಯನ್ನು ಶಿವನಿಗೆ ಅರ್ಪಿಸುತ್ತಾರೆ. ಅವರ ಮುಖ್ಯ ಕೆಲಸವು ಸತ್ತ ವ್ಯಕ್ತಿಯ ಆತ್ಮವನ್ನು ಆಕರ್ಷಿಸುವುದು. ವಾಸ್ತವವಾಗಿ ಅಘೋರವೆಂದರೆ ಘೋರವಾದುದಲ್ಲ. ಆದರೆ ಅವರು ಅನುಸರಿಸುವ ವಿಧಿಗಳು ಭೀಕರವಾಗಿರುತ್ತವೆ. ಪ್ರಾಯಶಃ ಒಂದು ಮಟ್ಟಕ್ಕೆ ಅಸಹ್ಯವೂ ಹೌದು. ಆದ್ದರಿಂದ ಅದನ್ನು ಸಾರ್ವಜನಿಕ ಅಭ್ಯಾಸವೆಂದು ಶಿಫಾರಸ್ಸು ಮಾಡುವುದಿಲ್ಲ

ಸಂಕೇತಿಸುತ್ತದೆ, ಮತ್ತು ಬಹಿರ್ಮನಸ್ಸು ಏನೇನೆಲ್ಲವನ್ನೂ ಅನುಭವಿಸುತ್ತದೆಯೋ ಆ ಅನುಭವಗೊಂಡವುಗಳನ್ನು ಅದು ಅಂತರ್ಮನಸ್ಸಿಗೆ ವರ್ಗಾಯಿಸುತ್ತದೆ.

ಈಗ ಅದರಲ್ಲಿ ನೀವು ಮೊದಲೇ ನೋಡಿದಂತಹ ದೃಷ್ಯ ಅಥವಾ ಸ್ಥಳಗಳನ್ನು ನೋಡಲು ಪ್ರಯತ್ನಿಸಿ. ನಿದರ್ಶನಕ್ಕೆ, ಒಂದು ಕ್ಷಣ ತಾಜ್ ಮಹಲ್ ನ ಮುಖ್ಯ ದ್ವಾರದ ಹೊರವಲಯದಲ್ಲಿ ಏನು ನಡೆಯುತ್ತಿದೆ ಎಂದು ತಿಳಿಯಲು ಪ್ರಯತ್ನಿಸಿ.

ನೀವು ಹಾಗೆ ಯೋಚಿಸಿದ ಕೂಡಲೇ ಬಹಿರ್ಮನಸ್ಸು ಕೂಡಲೇ ಅದನ್ನು ಆ ಸಂದೇಶವನ್ನು ಅಂತರ್ಮನಸ್ಸಿಗೆ ವರ್ಗಾಯಿಸುತ್ತದೆ. ಪರಿಣಾಮವಾಗಿ ಅಂತರ್ಮನಸ್ಸು ಒಂದು ಕ್ಷಣಕ್ಕೆ ತಾಜ್ ಮಹಲ್ ನ ಮುಖ್ಯದ್ವಾರದಲ್ಲಿ ಏನು ನಡೆಯುತ್ತಿದೆ ಎನ್ನುವುದನ್ನು ನೋಡಲು ಪ್ರಯತ್ನಿಸುತ್ತದೆ. ನೀವು ತಾಜ್ ಮಹಲ್ ನನ್ನು ಸ್ಪಷ್ಟವಾಗಿ ನೋಡುತ್ತಿರುವುದನ್ನು ಮತ್ತು ಅತ್ತಿತ್ತ ತಿರುಗಾಡುತ್ತಿರುವ ಜನರನ್ನೂ ಸಹ ಕಂಡು ನೀವು ಸಂಪೂರ್ಣವಾಗಿ ಚಕಿತಗೊಳ್ಳುವಿರಿ.

ನೀವು ಇದನ್ನು ನಿಯಮಿತವಾಗಿ ಅಭ್ಯಾಸಮಾಡುತ್ತಾ ದೂರದಲ್ಲಿ ನೆಲೆಸಿರುವಂತಹ ದೃಷ್ಯಗಳನ್ನು ಮತ್ತು ಸ್ಥಳಗಳನ್ನು ನೋಡಲು ಪ್ರಯತ್ನಿಸುವುದು ಉತ್ತಮವು.

ಈ ಕ್ಷೇತ್ರದಲ್ಲಿ ನಿಮ್ಮ ಕಣ್ಣುಗಳು ಸಹಾಯಕವಾಗುವುದಿಲ್ಲ. ನೀವು ನಿಮ್ಮ ಕಣ್ಣುಗಳನ್ನು ಮುಚ್ಚಿದಾಗ, ಮನಸ್ಸಿನ ಕಣ್ಣು ಅಥವಾ ಅಂತರ್ಕಣ್ಣು ತೆರೆಯುತ್ತದೆ. ಈ ಕಣ್ಣೇ ಎಲ್ಲಾ ದೃಷ್ಯಗಳನ್ನೂ ನೋಡಲಿಚ್ಛಿಸುತ್ತದೆ.

ನೀವು ಉಪಯೋಗಿಸಿದಂತಹ ಗ್ಲಾಸಿನ ತುಂಡು ಕೇವಲ ಪ್ರಾರಂಭದ ಅಭ್ಯಾಸಕ್ಕೆ. ನೀವು ಯಶಸ್ಸನ್ನು ಸಾಧಿಸಿದ ನಂತರ, ಅದು ಕೆಲಸಕ್ಕೆ ಬರುವುದಿಲ್ಲ. ಏಕೆಂದರೆ ನೀವು ಕಣ್ಣನ್ನು ಮುಚ್ಚಿದ ತಕ್ಷಣ ಅಂತರ್ಮನಸ್ಸು ಎಚ್ಚೆತ್ತುಗೊಂಡು ಎಲ್ಲಾ ರೀತಿಯ ಶಾಂತತೆಯಿಂದ ಕೂತುಕೊಂಡಿರುತ್ತದೆ. ಅದು ದೂರದ ಎಲ್ಲಾ ವಸ್ತು ಮತ್ತು ಘಟನೆಗಳನ್ನು ನೋಡಲು ಪ್ರಾರಂಭಿಸುತ್ತದೆ.

ಈ ಅಭ್ಯಾಸವು ಸುವ್ಯಕ್ತವಾಗಿ ಸುಲಭ ಕಾಣುತ್ತದೆ. ಅದು, ಹೇಗಾದರೂ, ಅಷ್ಟು ಸುಲಭವಲ್ಲ. ಅದಕ್ಕೆ ಬಹಳಷ್ಟು ಪ್ರಯತ್ನಗಳು, ಬಹಳ ಕಷ್ಟಕೆಲಸ ಹಾಗೂ ಸಂಪೂರ್ಣ ಧ್ಯಾನದ ಅವಶ್ಯಕತೆ ಇರುತ್ತದೆ, ಆದರೆ ಅಭ್ಯಾಸಕಾರನು ಈ ವ್ಯಾಯಾಮವನ್ನು ನಿಯಮಿತವಾಗಿ ಅಭ್ಯಸಿಸಿದ್ದೇಯಾದರೆ ಕೊನೆಯಲ್ಲಿ ಯಶಸ್ಸನ್ನು ಪಡೆಯುವನೆನ್ನುವುದರಲ್ಲಿ ಎರಡು ಮಾತಿಲ್ಲ.

ನಮ್ಮ ಎದುರಿನಲ್ಲಿ ಕೂತುಕೊಂಡ ವ್ಯಕ್ತಿಯ ಭೂತಕಾಲವನ್ನೂ ಸಹ ನಾವು ನೋಡಬಹುದು. ಅವನ ಭೂತಕಾಲದಲ್ಲಿ ಏನೇನು ಪ್ರಕಟವಾಗುತ್ತದೆ ಮತ್ತು ಒಂದು ನಿರ್ದಿಷ್ಟ ದಿನಾಂಕದಂದು ವಾಸ್ತವದಲ್ಲಿ ಏನು ನಡೆಯಿತೆಂದು ನಾವು ನೋಡಬಹುದು. ಅವನ ಭವಿಷ್ಯದಲ್ಲಿ ಏನು ಅಡಗಿದೆ ಎಂದು ಸಹ ನಾವು ನೋಡಬಹುದು.

ಒಂದುವೇಳೆ ಆ ವ್ಯಕ್ತಿ ನಮ್ಮ ಸುತ್ತಮುತ್ತಲಿಲ್ಲದಿದ್ದರೆ. ನಾವು ಅವನ ಭಾವಚಿತ್ರವನ್ನು ಪಡೆದುಕೊಂಡು ಅವನ ಭೂತಕಾಲ ಮತ್ತು ಭವಿಷ್ಯಗಳನ್ನು ನೋಡಬಹುದು.

ಈ ಧ್ಯಾನದಲ್ಲಿ ಅಂತರವು ಎಣಿಕೆಗೆ ಬರುವುದಿಲ್ಲ. ಒಂದು ಕ್ಷಣದಲ್ಲಿ ನಾವು ನೂರಾರು ಮತ್ತು ಸಾವಿರಾರು ಮೈಲಿಯಾಚೆ ಏನೇನು ನಡೆಯುತ್ತಿದೆ ಎನ್ನುವುದನ್ನು ನೋಡಬಹುದು. ಹಾಗೆಯೇ ನಾವು ಅದನ್ನು ಭೂತಕಾಲ ಮತ್ತು ಭವಿಷ್ಯಕ್ಕೆ ಹೊರಡಿಸಬಹುದು.

ಪ್ರಾರಂಭದ ಹಂತಕ್ಕೆ ನಿಡಿದಾದ ಮತ್ತು ದೀರ್ಘವಾದ ಅಭ್ಯಾಸದ ಅವಶ್ಯಕತೆಯಿರುತ್ತದೆ. ಅವನು ಯಶಸ್ವೀ ಅಭ್ಯಾಸವನ್ನು ದಾಟಿದನಂತರ ಅಭ್ಯಾಸಕಾರನು ತನ್ನ ಆಸನದ ಮೇಲೆ ಶಾಂತ ಹಾಗೂ ನಿಶ್ಚಲ ಮನಸ್ಸಿನಿಂದ

ಕೂತುಕೊಂಡ ತಕ್ಷಣ ತಾನು ನೋಡಬೇಕೆಂದಿರುವ ಎಲ್ಲಾ ದೃಷ್ಯ ಮತ್ತು ಸ್ಥಳಗಳನ್ನು ನೋಡಲಾರಂಭಿಸುವನು.

### ೪. ಭವಿಷ್ಯಕಾಲ ಸಿದ್ಧಿ

ಈ ಸಿದ್ಧಿಯನ್ನು ನೀವು ಭವಿಷ್ಯ ಸಮಯದ ಧ್ಯಾನವೆಂದು ಕರೆಯಬಹುದು. ಇದು ನಾವು ಹಿಂದಿನ ನುಡಿಯಲ್ಲಿ ಚರ್ಚಿಸಿದಂತಹ ದಿವ್ಯದೃಷ್ಟಿಯ ಪದ್ಧತಿಯ ಸಮಾನ ಲಕ್ಷಣದ್ದಾಗಿದೆ. ಮೊದಲಿನ ತಂತ್ರದ ಹಾಗೆಯೇ ಈ ತಂತ್ರದಲ್ಲಿಯೂ ಸಹ ಓರ್ವನು ಓರ್ವನ ಭೂತ ಮತ್ತು ಭವಿಷ್ಯಕಾಲವನ್ನೂ ಸಹ ನೋಡಬಹುದು. ಹೇಗಾದರೂ, ಒಂದು ಮುಖ್ಯ ನೋಟದಲ್ಲಿ ಇದು ಬೇರೆಡೆಯೆಲ್ಲಾ ವಿಮರ್ಶಿಸಿದಂತಹ ತಂತ್ರಗಳಿಗೆ ವಿಭಿನ್ನವಾಗಿದೆ. ಈ ತಂತ್ರವನ್ನು ಅನುಸರಿಸಿ ಓರ್ವನು ಹೇಳುವಂತಹ ಕಾಲಜ್ಞಾನವು ಸಾಧಾರಣವಾಗಿ ಹೆಚ್ಚು ದೃಢೀಕೃತ ಹಾಗೂ ಸರಿ ಎಂದು ಕಂಡುಬಂದಿದೆ.

ನಾವು ತಿಳಿದಿರುವಂತಹ ಜೋತಿಷ್ಯವೆಂದರೆ ಕಾಲಜ್ಞಾನವನ್ನು ಹೇಳುವುದು. ಅದಕ್ಕೆ ತನ್ನದೇಯಾದ ನಿಬಂಧನೆಗಳಿವೆ, ಏಕೆಂದರೆ ಅದು ಕೇವಲ ಬಹಿರ್ಮನಸ್ಸಿನ ಸೇವೆಗಳನ್ನು ಪಡೆಯುತ್ತದೆ. ಅಲ್ಲದೆ ಈಗಾಗಲೇ ನಮಗೆ ಬಹಿರ್ಮನಸ್ಸು ಬಾಹ್ಯ ಸಮಕಾಲೀನ ಒತ್ತಡಗಳಲ್ಲಿ ಒಳಗೊಂಡು ಸಂಪೂರ್ಣವಾಗಿ ಮುಕ್ತವಾಗಿಲ್ಲವೆನ್ನುವುದು ಸ್ಪಷ್ಟವಾಗಿ ಗೊತ್ತಿದೆ. ಆ ತರಹದ ಒತ್ತಡಗಳಿಂದ ಕಲುಷಿತಗೊಂಡ ಮನಸ್ಸಿನ ಮೇಲೆ ನಾವು ಸರಿಯಾದ ಮತ್ತು ವಾಸ್ತವವಾದ ಕಾಲಜ್ಞಾನವನ್ನು ನಿರೀಕ್ಷಿಸುವಹಾಗಿಲ್ಲ.

ಈ ಜೋತಿಷ್ಯ ವಿಜ್ಞಾನಕ್ಕೆ ಇನ್ನೊಂದು ನಿಬಂಧನೆ ಇದೆ. ಜೋತಿಷ್ಯವು ಬೇರೆಯಾವುದೇ ವಿಜ್ಞಾನದ ಹಾಗೆ ತನ್ನಲ್ಲಿಯೇ ಪೂರ್ಣವಾಗಿಲ್ಲ. ಅಲ್ಲದೆ, ಜೋತಿಷ್ಯದ ಚಿತ್ರಪಟವು ಕೊನೆಯಿಲ್ಲದ್ದಾಗಿದೆ. ಆದ್ದರಿಂದ ಅದು ತಪ್ಪುಗಳನ್ನು ಮಾಡಲು ಕೆಲಮುಖವಾಗಿದೆ. ಒಂದುವೇಳೆ ಸುಮಾರು ಹತ್ತು ಜನ ಜೋಯಿಸರು ಒಂದು ನಿರ್ದಿಷ್ಟಜಾತಕವನ್ನು ಅಧ್ಯಯನ ಮಾಡುತ್ತಾರೆ. ಸ್ಪಷ್ಟವಾಗಿ ಅವರು ಹತ್ತು ಭವಿಷ್ಯಗಳ ಜತೆಗಳನ್ನು ಹೇಳುವರು. ಪ್ರಾಯಶಃ ಒಂದು ಅಥವಾ ಎರಡು ಪ್ರತಿಪಾದಿಸಿ ಉಳಿದವು ಸುಳ್ಳಾಗಬಹುದು.

ನೀವು ಭವಿಷ್ಯವನ್ನು ಹೇಳುವಲ್ಲಿ ಅಂತರ್ಮನಸ್ಸಿನ ಚೇತನಯುಕ್ತ ಹೊಂದಾಣಿಕೆಯನ್ನು ಪಡೆಯುವವರೆಗೂ, ಭವಿಷ್ಯವನ್ನು ಹೇಳುವ ಕೆಲಸವು ಸರಿ ಅಲ್ಲದ ಮತ್ತು ಅಸಂಪೂರ್ಣವಾಗಿಯೇ ಉಳಿಯುವುದು. ಈ ಹಿಂದೆ ಹೇಳಿದಂತಹ ನುಡಿಯಲ್ಲಿಯ ಉದಾಹರಣೆಯಲ್ಲಿ ನಾವು ಒಬ್ಬಿಬ್ಬ ಜೋತಿಷ್ಯರು ಸರಿಯಾಗಿ ಜೋತಿಷ್ಯ ಹೇಳಿರುವುದನ್ನು ತಿಳಿಸಿದ್ದೇವೆ. ಅವರ ಭವಿಷ್ಯ ಜ್ಞಾನವು ಸರಿಯಾಗಿರಲು ಸಾಬೀತಾಗಿರುವ ಕಾರಣವೇನೆಂದರೆ ಅಂತರ್ಮನಸ್ಸು ಮತ್ತು ಬಹಿರ್ಮನಸ್ಸು ಎರಡೂ ಈ ಕೆಲಸದಲ್ಲಿ ಹೊಂದಾಣಿಕೆಯಾಗಲು ಅವಕಾಶ ಸಿಕ್ಕಿತು.

ನಾವು ಜೋತಿಷ್ಯದ ಲೆಕ್ಕಾಚಾರಗಳಲ್ಲಿ ಅಂತರ್ಮನಸ್ಸನ್ನು ಅಳವಡಿಸುವಲ್ಲಿ ಯಶಸ್ವಿಯಾದದ್ದೇಯಾದರೆ, ನಾವು ಹೇಳುವಂತಹ ಭವಿಷ್ಯವು ಹೆಚ್ಚು ಸರಿ ಹಾಗೂ ದೃಢೀಕೃತವಾಗಿ ಸಾಬೀತಾಗಬಹುದು.

ಒಮ್ಮೆ ನಾನು ಒಬ್ಬ ಬಡಮನುಷ್ಯನ ಜಾತಕವನ್ನು ನೋಡುತ್ತಿದ್ದೆ. ಆ ಅಧ್ಯಯನದಿಂದ ನಾನು ಆ ಮನುಷ್ಯನು ಬಹಳ ಸಾಧಾರಣವೆಂದು ತಿಳಿದೆ, ಏಕೆಂದರೆ ಅವನ ಜಾತಕದಲ್ಲಿ ವಿಶಿಷ್ಟ ಗ್ರಹಗಳ ಚಾಲನೆಯಿರಲಿಲ್ಲ.

ನಂತರ ನಾನು ಕಣ್ಣುಗಳನ್ನು ಮುಚ್ಚಿಕೊಂಡು ನನ್ನ ಅಂತರ್ಮನಸ್ಸು ಮತ್ತು ಬಹಿರ್ಮನಸ್ಸುಗಳ ಮೇಲೆ ಏಕಾಗ್ರತೆವಹಿಸಿದಾಗ ಆ ಮನುಷ್ಯನು ಸಾಧಾರಣದವನೇ ಅಲ್ಲ ಎನ್ನುವುದನ್ನು ನಾನು ತಿಳಿದೆ. ವಾಸ್ತವದಲ್ಲಿ ಅವನು ಸಾಧಾರಣ ಉಡುಗೆಯನ್ನು ತೊಟ್ಟಿದ್ದನು. ಆದರೆ ಅವನು ಬಹಳ ಶ್ರೀಮಂತನಿದ್ದು ಒಂದು ಉತ್ಕೃಷ್ಟ ಸಾಮಾಜಿಕ ವರ್ಗವನ್ನು ಪ್ರತಿನಿಧಿಸುತ್ತಿದ್ದನು.

ನಾನು ನನ್ನ ಕಣ್ಣುಗಳನ್ನು ತೆರೆದು ಆ ವ್ಯಕ್ತಿಗೆ ಆ ಜಾತಕದಿಂದ ತಾನು ಬಹಳ ಸಾಧಾರಣವಾಗಿ ಕಂಡುಬರುತ್ತಿರುವುದನ್ನು ಹೇಳಿದೆ. ನಾನು ಆಳವಾಗಿ ಅಧ್ಯಯನ ಮಾಡಿದ ನಂತರ ಅವನು ನಿಜವಾಗಿಯೂ ಶ್ರೀಮಂತ ವ್ಯಕ್ತಿ ಮತ್ತು ಅವನಲ್ಲಿ ಕೋಟ್ಯಾನುಗಟ್ಟಲೆ ಹಣ ಇರಬೇಕೆಂದು ಸಹ ಹೇಳಿದೆ.

ಒಂದೆರಡು ನಿಮಿಷ ಆ ವ್ಯಕ್ತಿ ನನ್ನ ಕಡೆಗೇ ನೋಡುತ್ತಿದ್ದನು. ನಂತರ ನಾನು ಸರಿಯೆಂದು ಒಪ್ಪಿಕೊಂಡನು. ಆತನು ಒಳ್ಳೆಸ್ಥಾಪಿತಗೊಂಡ ಹತ್ತಿಮಿಲ್‌ನ ಮಾಲಿಕನಾಗಿದ್ದನು. ತಾನು ನನ್ನನ್ನು ಪರೀಕ್ಷಿಸಲು ಸಾಧಾರಣವಾದ ಉಡುಗೆಗೆ ಬದಲಾಗಿರುವುದಾಗಿ ತಿಳಿಸಿದನು.

ಕೆಲವೊಮ್ಮೆ ನಮ್ಮ ಸ್ವಂತ ಕಣ್ಣುಗಳೇ ನಮ್ಮನ್ನು ಮೋಸಗೊಳಿಸುತ್ತವೆನ್ನುವುದನ್ನು ನಾವು ನೋಡಿದ್ದೇವೆ. ಏಕೆಂದರೆ ಜೋತಿಷ್ಯದ ಸೀಮಾಬಂಧನಗಳು, ಅದು ಹೇಳುವಂತಹ ಭವಿಷ್ಯ ವಾಣಿಗಳು ತಪ್ಪಾಗಬಹುದು ಮತ್ತು ಆಗಾಗ ಅಪೂರ್ಣವೂ ಆಗಬಹುದು. ಆದರೆ ಯಾವುದೇ ಸಂದರ್ಭದಲ್ಲಿ ಅಂತರ್ಮನಸ್ಸು ಯಾವುದೇ ತಪ್ಪನ್ನು ಮಾಡುವುದಿಲ್ಲ. ಅದು ಏನೇನೆಲ್ಲವನ್ನೂ ನೋಡುತ್ತದೆಯೋ ಮತ್ತು ಏನೇನೆಲ್ಲವನ್ನೂ ಅನುಭವಿಸುತ್ತದೆಯೋ ಎಲ್ಲವೂ ತನ್ನಲ್ಲಿಯೇ ಸಂಪೂರ್ಣವಾಗಿದ್ದು ಯಾವುದೇ ಕುಂದುಕೊರತೆಗೆ ಎಡೆಮಾಡುವುದಿಲ್ಲ.

ಆದ್ದರಿಂದ ಭವಿಷ್ಯವಾಣಿಯಲ್ಲಿ ಪ್ರವೀಣರಾಗಬೇಕೆಂದಿರುವ ವ್ಯಕ್ತಿಗಳಿಗೆ ತಮ್ಮ ಗಮನವನ್ನು ಅಂತರ್ಮನಸ್ಸಿನ ಕಡೆ ತಿರುಗಿಸಿ ಇದನ್ನು ಸಾಧ್ಯವಾದಷ್ಟು ವೃದ್ಧಿಸಿ ಅಂತರ್ಮನಸ್ಸಿನಿಂದ ನಿಮ್ಮ ವಿನಿಯೋಗದಲ್ಲಿರುವ ಒಳದೃಷ್ಟಿಗಳ ಭವಿಷ್ಯವಾಣಿಗಳ ಅಧ್ಯಯನ ಮಾಡಬೇಕು. ಪ್ರಾಯಶಃ ಆಗಲೇ ನಮ್ಮ ಭವಿಷ್ಯವಾಣಿಗಳು ನಿಖರವೆಂದು ಸಾಬೀತಾಗುವುದು.

### ೫. ಕೃತ್ಯ ಸಿದ್ಧಿ[1]

ಹಿಂದೂ ಪುರಾಣ ಸಾಹಿತ್ಯ ಮತ್ತು ಧರ್ಮ ಗ್ರಂಥಗಳಲ್ಲಿ ನಾವು ಅಪಾಯಕ್ಕೆ ಸಮತೋಲನಗೊಂಡ ದೇವತೆಗಳು ಅಥವಾ ಭೂತಗಳು ತಮ್ಮ ಸ್ವಂತ ಯೋಗಿಕ ಶಕ್ತಿಯಿಂದ ಒಂದು ಅದ್ವಿತೀಯತೆಯಿಂದ ಸಂಪನ್ನವಾದ ಹೆಣ್ಣು ಅಥವಾ ಗಂಡನ್ನು ಸೃಷ್ಟಿಸಿ ತಮ್ಮ ಕೆಲಸಗಳಿಗೆ ನೆರವಾಗಿದ್ದ ಸತ್ಯತೆಗಳ ಬಗ್ಗೆ ಆಗಾಗ ಉಲ್ಲೇಖನಗಳನ್ನು ತಿಳಿಯುತ್ತೇವೆ. *ದಕ್ಷ-ಯಜ್ಞ*[2] ವನ್ನು ಧ್ವಂಸಮಾಡಲು ಶಿವನಿಂದ ಆಗಲಿಲ್ಲ. ಈ ಪರಿಸ್ಥಿತಿಯನ್ನು ಎದುರಿಸಲು ಆತನು ಒಂದು ಇಹಲೋಕದ ಜೀವವನ್ನು ಸೃಷ್ಟಿಸಿದ—ಕೃತ್ಯ ಅದರಿಂದ *ಯಜ್ಞ*ವನ್ನು ಧ್ವಂಸ ಮಾಡಿ *ದಕ್ಷ*[3] ನನ್ನು ಕೊಲ್ಲಿಸಿದ.

ನಾವು *ದೇವಿ ಭಾಗವತ*[4] ದಲ್ಲಿ ಇಂತಹವೇ ಬಹಳ ಉಲ್ಲೇಖಗಳನ್ನು ಕಾಣುತ್ತೇವೆ.

ಭಸ್ಮಾಸುರನ ಅತಿಯಾದ ದಬ್ಬಾಳಿಕೆಯಿಂದ ಎಲ್ಲಾ ದೇವತೆಗಳೂ ಸಂಪೂರ್ಣವಾಗಿ ಕೆರಳಿದಾಗ, ವಿಷ್ಣು

---

1. *ಕೃತ್ಯ*: ಭಾರತೀಯ ಪಿತ್ರಾರ್ಜಿತದಲ್ಲಿ ಕೃತ್ಯವೆಂದರೆ ಒಂದು ಹೆಂಗಸು ಅಥವಾ ಗಂಡಸಿನ ಆಕಾರವನ್ನು ಊಹಿಸಿಕೊಳ್ಳುವಂತಹ ಜೀವಶಾಸ್ತ್ರಕ್ಕೆ ಸಂಬಂಧವಲ್ಲದ ಆದರೆ ಯೋಗದ ರಭಸದ ಉತ್ಪಾದನೆಯಿಂದ ಸೃಷ್ಟಿಯಾದ ಒಂದು ಅದ್ವಿತೀಯತೆಯಿಂದ ಸಂಪನ್ನವಾದ ವಸ್ತು. ಅದರಿಂದ ನಾವು ಅಸಾಧ್ಯವಾದ ಅದ್ಭುತಕಾರ್ಯಗಳನ್ನು ಶ್ರೇಷ್ಠವಾದ ಶೌರ್ಯ ಅಥವಾ ಮೋಸಗೊಳಿಸುವಂತಹ ಸಂಚಿನ ಕೆಲಸಗಳನ್ನು ಮಾತ್ರ ಹೆಚ್ಚಾಗಿ ನಮ್ಮ ನಿಸ್ವಾರ್ಥ ಕೆಲಸಗಳಿಗೆ ಮಾಡಿಸಿಕೊಳ್ಳಬಹುದು.

2. *ದಕ್ಷ-ಯಜ್ಞ*: ಪುರಾಣೋಕ್ತವಾಗಿ ಇದು ದಕ್ಷನಿಂದ ಮಾಡಲ್ಪಟ್ಟ ಒಂದು ಧಾರ್ಮಿಕ ಹಬ್ಬ ಅದರಲ್ಲಿ ಶಿವನನ್ನು ಆಹ್ವಾನಿಸದೆ ಬಹಿರಂಗವಾಗಿ ನಿಂದಿಸಲಾಗಿತ್ತು, ಮತ್ತು ಶಿವನ ಹೆಂಡತಿಯಾದ ಸತಿಯು ದುಃಖವನ್ನು ತಡೆಯಲಾರದೆ ಸತ್ತಳು, ಆಗ ಶಿವ ತನ್ನ ಅನುಯಾಯಿಗಳೊಂದಿಗೆ ಉತ್ಸವವನ್ನು ಹಾಳುಮಾಡಿದನು.

3. *ದಕ್ಷ*: ದಕ್ಷ ಶಿವನ ಹೆಂಡತಿಯಾದ ಸತಿಯ ತಂದೆ.

4. *ದೇವಿಭಾಗವತ*: ಭಾಗವತ ಎಂದರೆ ಹಿಂದೂ ಪುರಾಣಗಳಲ್ಲಿ ಒಂದು, ದೇವಿ ಚಂಡಿಯ ಭವ್ಯತೆಯನ್ನು ವಿವರಿಸುವಂತಹ ಒಂದು ಪುರಾತನ ಪವಿತ್ರ ಪುಸ್ತಕ.

ದೇವನು ಮರಳುಗೊಳಿಸುವಂತಹ ಒಬ್ಬ ಹೆಂಗಸು—ಕೃತ್ಯವನ್ನು ಸೃಷ್ಟಿಸಿದ, ಆಕೆಯು ಭಸ್ಮಾಸುರನನ್ನು ಮರುಳುಗೊಳಿಸುವ ಹಾಗೆ ರೂಪಿತಗೊಂಡಿದ್ದು ಅವನನ್ನು ಕೊನೆಗೊಳಿಸಿತು.

ಕೃತ್ಯವು ಸಂಕ್ಷಿಪ್ತವಾಗಿ ಹೇಳಲು, ಎಂತಹ ಅಸಾಧ್ಯ ಕೆಲಸಗಳನ್ನೂ ಮಾಡುವ ಅದ್ವಿತೀಯತೆಯಿಂದ ಸಂಪನ್ನವಾದ ಹೆಂಗಸು. ಆಕೆಯು ತಿಳುವಳಿಕೆಯಲ್ಲಿ ಅನುಪಮ. ಆಕೆಯು ವರ್ಗೀಕರಣದ ರೂಪಗೆಡಿಸುತ್ತಾಳೆ. ಆಕೆ ದೇವತೆಗಳ ವರ್ಗಕ್ಕೆ ಸೇರುವುದಿಲ್ಲ ಈಕಡೆ ಪಾತಾಳದ ಭೂತಗಳಿಗೆ , ಆಕಡೆ ಯಾವುದೇ ಗೊತ್ತಿರುವ ವರ್ಗಕ್ಕೆ ಸೇರುವುದಿಲ್ಲ. ಕಟ್ಟು ನಿಟ್ಟಾಗಿ ಹೇಳಬೇಕೆಂದರೆ ಆಕೆಯು ಓರ್ವನ ಸ್ವಂತ ಮಾನಸಿಕ ಶಕ್ತಿ ಮತ್ತು ದೃಢಸಂಕಲ್ಪದ ರಭಸಕ್ಕೆ ಸೃಷ್ಟಿಗೊಳ್ಳುತ್ತಾಳೆ. ಆಕೆಯು ನಮ್ಮ ಮಾನಸಿಕ ಸೃಷ್ಟಿ ನಮ್ಮ ಅಂತರ್ಮನಸ್ಸಿನ ಪೂರ್ಣತೆಯ ಮಗು.

ನಮಗೆ ಈ ಶಕ್ತಿಯನ್ನು ಕೊಡುವಂತಹ ಜ್ಞಾನವು ಎಲ್ಲಾ ಶ್ರೇಣಿಗಳಲ್ಲಿ ಅನುಪಮವಾಗಿದೆ. ಇದನ್ನು ಬಹಳ ಮಟ್ಟಿಗೆ ಗೋಪ್ಯವಾಗಿಡಲಾಗುತ್ತದೆ. ಆದರೂ ನಾವು ನಮ್ಮ ಓದುಗರ ಜ್ಞಾನಕ್ಕಾಗಿ ಬಹಿರಂಗ ಪಡಿಸುತ್ತಿದ್ದೇವೆ.

ಅಭ್ಯಾಸಕಾರರು ಒಂದು ನಿಯೋಜಿತ ಸ್ಥಳದಲ್ಲಿ ನಿಯಮಿತವಾಗಿ ತಮ್ಮ ಆಸನವನ್ನು ತೆಗೆದುಕೊಳ್ಳಬೇಕೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಕೋಣೆಯ ಎಲ್ಲಾ ಬಾಗಿಲುಗಳು ಮತ್ತು ಕಿಟಕಿಗಳು ಮುಚ್ಚಿರಬೇಕು. ಕೋಣೆಯಲ್ಲಿ ಸಂಪೂರ್ಣ ಶಾಂತತೆಯನ್ನು ನಿಶ್ಚಯಪಡಿಸುವಂತಹ ಕಾಳಜಿಯನ್ನು ತೆಗೆದುಕೊಳ್ಳಬೇಕು.

ಬೆಳಗಿನ ಜಾವದಲ್ಲಿ ಬೇಗನೇ ಅಭ್ಯಾಸಕಾರನು ಈ ವ್ಯಾಯಾಮವನ್ನು ತೆಗೆದುಕೊಳ್ಳಬೇಕು. ಈ ಅಭ್ಯಾಸಕ್ಕೆ ಬಹಳ ಅನುಕೂಲಕರವಾದ ಸಮಯವೆಂದರೆ ಸೂರ್ಯೋದಯಕ್ಕೆ ಒಂದು ಗಂಟೆ ಮುಂಚೆ ಅಥವಾ ಸೂರ್ಯಾಸ್ತದ ಒಂದು ಗಂಟೆಯ ನಂತರ.

ಸಂಪೂರ್ಣ ಶಾಂತಿಯೊಡನೆ ಅಭ್ಯಾಸಕಾರನು ತನ್ನ ಆಸನವನ್ನು ತೆಗೆದುಕೊಂಡು ತನ್ನ ದೇಹದ ಎಲ್ಲಾ ಭಾಗಗಳಿಂದಲೂ ಉಜ್ವಲವಾದ ಬೆಳಕು ಹೊರಹೊಮ್ಮುತ್ತಿದೆ, ಅದರಿಂದ ಮಾನಸಿಕ ಹುಡುಗಿಯ ತಲೆಯು ರೂಪಗೊಳ್ಳುತ್ತಿದೆ ಎಂದು ಊಹಿಸಿಕೊಳ್ಳಬೇಕು. ಅದೇ ರೀತಿ ಆಕೆಯ ಕೈಗಳು, ಕಾಲುಗಳು ಮತ್ತು ಇತರೆ ಅಂಗಗಳು ನಿಧಾನವಾಗಿ ಆಕಾರದ ರೂಪವನ್ನು ಊಹಿಸಿಕೊಳ್ಳುತ್ತಿವೆ ಎನ್ನುವುದನ್ನು ಅವನು ನೋಡುವನು.

ಅಭ್ಯಾಸಕಾರನು ಇನ್ನೂ ಸ್ವಲ್ಪಹೊತ್ತು ತನ್ನ ಕಣ್ಣುಗಳನ್ನು ಮುಚ್ಚಿಕೊಂಡಾಗ ಆ ಮಾನಸಿಕವಾಗಿ ಸೃಷ್ಟಿಗೊಂಡ ಹುಡುಗಿಯು ತನ್ನ ಸ್ವಂತದೇಹದಿಂದಲೇ ಉದ್ಭವ ವಾಗುತ್ತಿರುವುದನ್ನು ಅವನು ಸ್ಪಷ್ಟವಾಗಿ ನೋಡುವನು. ಅಭ್ಯಾಸಕಾರನು ತನ್ನ ಏಕಾಗ್ರತೆಯನ್ನು ಆ ಹುಡುಗಿಯ ಮೇಲೆ ಅವಳ ಮೇಲೆ ತನ್ನ ಕಣ್ಣನ್ನು ಸ್ಥಿರವಾಗಿಸುವ ಮೂಲಕ ಅಥವಾ ಅವಳ ಬಗ್ಗೆಯೇ ಆಳವಾಗಿ ಯೋಚಿಸುತ್ತಾ ಇರಬೇಕೆನ್ನುವುದನ್ನು ಯಾವಾಗಲೂ ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ಒಂದು ಕ್ಷಣವೂ ಸಹ ಅವನು ತನ್ನ ದೇಹದಿಂದ ಉದ್ಭವಿಸುತ್ತಿರುವಂತಹ ಸೃಷ್ಟಿಯಿಂದ ತನ್ನ ಗಮನವನ್ನು ವಿಚಲಿತಗೊಳಿಸಬಾರದು.

ಅಭ್ಯಾಸಕಾರನು 4 ರಿಂದ 6 ತಿಂಗಳು ಈ ಅಭ್ಯಾಸಕ್ಕೆ ನಿವೇದಿಸಬೇಕು. ಅವನು ಈ ಅಭ್ಯಾಸಕ್ಕೆ ನಿಯಮಿತವಾಗಿ ಅಂಟಿಕೊಂಡರೆ ಆ ಮಾನಸಿಕ ಹುಡುಗಿಯು ಯಾವಾಗಲೂ ತನ್ನ ದೃಷ್ಟಿಯಲ್ಲಿ ಸುಳಿದಾಡುತ್ತಿರುವುದನ್ನು ಅವನು ಕಾಣುವನು. ಸ್ವಲ್ಪ ಅಭ್ಯಾಸದ ನಂತರ ಅವನು ಮಲಗಿಕೊಂಡಿದ್ದರೇನು ಅಥವಾ ಪ್ರಯಾಣಿಸುತ್ತಿದ್ದರೇನು ಅಥವಾ ಧ್ಯಾನಿಸುತ್ತಿದ್ದರೇನು ಅವನು ಅವಳನ್ನು ತನ್ನ ಮುಂದೆಯೇ ಕಾಣುತ್ತಲೇ ಇರುತ್ತಾನೆ. ಈ ಮಾನಸಿಕ ಮಗು, ಉತ್ಕೃಷ್ಟವಾದ ಶಕ್ತಿ ಹಾಗೂ ಶೌರ್ಯಗಳಿಂದ ಸಂಪನ್ನವಾದ ಕೃತ್ಯವಲ್ಲದೇ ಬೇರೇನೂ ಅಲ್ಲ. ಅವಳು ಕೊನೆಗೊತ್ತಿಲ್ಲದ ಶಕ್ತಿ. ಆಕೆಯು ಅಸಾಧ್ಯ ಕಾರ್ಯಗಳನ್ನು ಸಿದ್ಧಿಸುತ್ತಾಳೆ. ಮಾನವ ಸಾಮರ್ಥ್ಯಕ್ಕೂ ಕೃತ್ಯದ ಸಾಮರ್ಥ್ಯಕ್ಕೂ ಬಹಳ ವ್ಯತ್ಯಾಸವಿದೆ. ಮನುಷ್ಯನು ಐದು

ಮೂಲತತ್ವಗಳಿಂದ ಸೃಷ್ಟಿಯಾಗಿದ್ದಾನೆ, ಆದರೆ ಕೃತ್ಯ ಮೂರು ಮೂಲತತ್ವಗಳಿಂದ ಸೃಷ್ಟಿಗೊಂಡಿದೆ. ಈ ಕಾರಣದಿಂದ ಅವಳಲ್ಲಿ ಅದ್ವಿತೀಯವಾದ ರಭಸ ಹಾಗೂ ವೇಗವಿರುತ್ತದೆ. ಅಂತರ್ಮನಸ್ಸೂ ಸಹ ಅಷ್ಟೊಂದು ವೇಗದಲ್ಲಿ ಪ್ರಯಾಣಿಸುವುದಿಲ್ಲ.

ನಿಮ್ಮ ಮುಂದೆ ಕೃತ್ಯದ ಪ್ರತಿಬಿಂಬವು ಎಲ್ಲಾ 24 ಗಂಟೆಯವರೆಗೂ ಸ್ಥಾಪಿತವಾದರೆ, ನೀವು ವಾಸ್ತವದಲ್ಲಿ ಕೃತ್ಯವನ್ನು ಸೃಷ್ಟಿಸಿರುವ ಹಾಗೆ ಭಾವಿಸಬಹುದು.

ಅವಳಿಗೆ ಏನನ್ನಾದರೂ ಮಾಡಲು ಹೇಳಿ. ಅವಳಿಗೆ ಈ ನಿಮಿಷದಲ್ಲಿ ದೆಹಲಿಯಿಂದ ಏನನ್ನಾದರೂ ತೆಗೆದುಕೊಂಡು ಬರಲು ಹೇಳಿ. ಆ ನಿಮಿಷವೇ ಅವಳು ನಿಮಗೆ ಅದನ್ನು ತರುವಳು. ಉದಾಹರಣೆಗೆ ನೀವು ನಿಮ್ಮ ಮನೆಯಿಂದ 50 ಮೈಲಿ ದೂರದ ಸ್ಥಳಕ್ಕೆ ಹೋಗಿರುವಿರಿ. ನೀವು ಮನೆಯಲ್ಲಿಯೇ ಬಿಟ್ಟಂತಹ ದಿನಚರಿಯ ಪುಸ್ತಕವನ್ನು ತರಲು ಕೃತ್ಯಕ್ಕೆ ಹೇಳಿ. ನಿಮ್ಮಲ್ಲಿಗೆ ದಿನಚರಿಯನ್ನು ಅವಳು ಒಂದು ಕ್ಷಣದಲ್ಲಿ ತರುವಳು. ಈ ಸಾಧಾರಣ ಸಂದೇಶಗಳೊಂದೇ ಅಲ್ಲ ನೀವು ಈ ಕೃತ್ಯದ ಸಲಕರಣೆಯಿಂದ ಭೂತಕಾಲವನ್ನು ಮತ್ತು ಭವಿಷ್ಯವನ್ನೂ ಸಹ ತಿಳಿದಿಕೊಳ್ಳಬಹುದು. ಉದಾಹರಣೆಗೆ ನೀವು ಅವಳಿಗೆ ಯಾರದ್ದಾದರೂ ಭೂತಕಾಲವನ್ನು ವಿವರಿಸಲು ಹೇಳಿ. ಅವಳು ಸಂಪೂರ್ಣ ಕಥೆಯನ್ನು ವಿಶದವಾದ ವಿವರಗಳೊಂದಿಗೆ ವಿವರಿಸುವಳು.

ಕೃತ್ಯದ ಬಗ್ಗೆ ಒಂದು ಗಣನೀಯವಾದ ಅಂಶವೆಂದರೆ ಅವಳು ಮಾತನಾಡುವುದು ಕೇಳಿಸುವುದೆಂದರೆ ನಿಮಗೊಬ್ಬರಿಗೇ . ನಿಮ್ಮ ಜೊತೆಯಲ್ಲಿ ಒಂದು ಡಝನ್ ಜನರು ಇರಬಹುದು. ಸರಿಯಾಗಿ ನಿಮ್ಮ ಜೊತೆಗಾರರ ಮುಂದೆಯೇ ಅವಳಿಗೆ ತಿಳಿಸಿದ ವಿಷಯವನ್ನು ವಿವರಿಸುವಳು. ಬೇರ್ಯಾರೂ ಅಲ್ಲದೇ ನೀವೊಬ್ಬರೇ ಕೇಳಿಸಿಕೊಳ್ಳುವಿರಿ.

ನೀವು ಅವಳಿಗೆ ಯಾವುದೇ ಅಪ್ಪಣೆಯನ್ನು ನಿಕ್ಷೇಪಿಸಬಹುದು. ಅದು ನಿಮ್ಮ ವೈರಿಯ ನಾಶವೇ ಆಗಿರಬಹುದು ಅಥವಾ ನಿಮ್ಮ ವೈಯಕ್ತಿಕ ಲಾಭದ್ದೇನಾದರೂ ಆಗಿರಬಹುದು, ಒಂದು ಕ್ಷಣದಲ್ಲಿ ಅವಳು ಅದನ್ನು ಕಾರ್ಯಗತ ಮಾಡುವಳು. ನೀವು ಅವಳಿಗೆ ಸಾಮಾನ್ಯವಾದ ಮತ್ತು ಅಸಂಬದ್ಧವಾದ ಸಂದೇಶಗಳನ್ನು ಕೊಡುತ್ತಿಲ್ಲವೆನ್ನುವುದನ್ನು ನಿಶ್ಚಯಮಾಡಿಕೊಳ್ಳಿ. ನೀವು ಬಹಳ ಬಿಗಿಯಾದ ಪರಿಸ್ಥಿತಿಯಲ್ಲಿದ್ದಾಗ ಮಾತ್ರ ಅವಳ ಸೇವೆಗಳನ್ನು ಉಪಯೋಗಿಸಿಕೊಳ್ಳಬಹುದು. ಮನುಷ್ಯತ್ವದಿಂದ ಅಸಾಧ್ಯವಾದ ಕೆಲಸಗಳನ್ನು ಮಾತ್ರ ಅವಳಿಗೆವಹಿಸಿಕೊಡಬೇಕು.

ನಿಜವಾಗಿಯೂ ಈ ಸಾಧನೆಯು ಸಾರ್ವತ್ರಿಕವಾಗಿ ಕೇವಲ ಉತ್ಕೃಷ್ಟವಲ್ಲದೆ ಯಾವುದೇ ವರ್ಗದಲ್ಲಿ ಅನುಪಮವೆಂದು ಅಂಗೀಕೃತವಾಗಿದೆ.

# ಅಧ್ಯಾಯ 16

## ತೀರ್ಪು

ಸಮ್ಮೋಹನವು ತನ್ನಲ್ಲಿಯೇ ಸಂಪೂರ್ಣ ಮತ್ತು ಪ್ರತಿಷ್ಠಿತ ಪ್ರಭಾವವುಳ್ಳ ವಿಜ್ಞಾನವಾಗಿದೆ. ಅದು ಆಧುನಿಕ ಸಮಯಗಳಲ್ಲಿ ಪ್ರಚಂಡ ಪ್ರಾಮುಖ್ಯತೆಯನ್ನು ಪಡೆದಿದೆ. ಬೇರೆಲ್ಲಾ ವಿಜ್ಞಾನಗಳು ಭೌತಿಕತ್ವದಕಡೆ ಓರೆಯಾಗಿವೆ, ಆದರೆ ಸಮ್ಮೋಹನ ಮನಸ್ಸಿನ ಅರಿವನ್ನು ಹೆಚ್ಚಿಸುವುದು ಅದರಿಂದ ಮನಸ್ಸು ಪ್ರಭಾವಿಕ ಹತೋಟಿಯಲ್ಲಿ ಉಳಿದು ಸಮಾಜದ ಕಡೆ ಓರೆಯಾಗಿ ಸಾಬೀತಾಗುವುದು. ಮನುಷ್ಯನ ಜೀವನದಲ್ಲಿ ಮನಸ್ಸು ಕೇಂದ್ರಸ್ಥಾನದಲ್ಲಿದೆ. ಏಕೆಂದರೆ ಓರ್ವನು ಯಾವುದೇ ಅದ್ಭುತಕಾರ್ಯಗಳನ್ನು ಸಿದ್ಧಿಸಿಕೊಳ್ಳುವುದನ್ನು ಯೋಜಿಸಿಕೊಳ್ಳಬಹುದು. ಅವಶ್ಯವಾಗಿರುವುದೇನೆಂದರೆ ಎಲ್ಲಾ ತರಹದ ಅದ್ಭುತಕಾರ್ಯಗಳನ್ನು ಸಿದ್ಧಿಸಿಕೊಳ್ಳಲು ಮನಸ್ಸು ಸಹಕಾರವನ್ನು ಕೊಡಬೇಕು. ಈದಿನ ನಾವು ಬಹಳ ಘಟನೆಗಳು ಜಗತ್ತಿನಲ್ಲೆಲ್ಲಾ ನಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಎಲ್ಲಾ ಮನುಷ್ಯನ ಪ್ರಾರಂಭಗಳಿಗೂ ಮನಸ್ಸೇ ಕೇಂದ್ರವಾಗಿದೆ. ಮನಸ್ಸೇ ವೈರತ್ವ ಮತ್ತು ಕ್ರೋಧವನ್ನು ಕೆರಳಿಸುವ ಪ್ರಧಾನ ಸಲಕರಣೆಯಾಗಿದೆ. ರಚನಾತ್ಮಕ ಉಪಯೋಗಕ್ಕೆ ಮನಸ್ಸನ್ನು ತೊಡಗಿಸಿದ್ದೇಯಾದರೆ ನಮ್ಮಲ್ಲಿ ಪ್ರೀತಿ, ಸೌಜನ್ಯ, ಕರುಣೆ ಮತ್ತು ಧಾರ್ಮಿಕತೆ ಎಲ್ಲೆಡೆಯೂ ಮೇಲುಗೈಯಾಗುತ್ತಿತ್ತು, ಆದ್ದರಿಂದ ನಾವು ವಿಶ್ವಭಾತೃಭಾವವನ್ನು ಸಾಧಿಸಬಹುದು.

ನಿಜವಾಗಿಯೂ ನಾವು ನಮ್ಮ ಮನಸ್ಸನ್ನು ಪ್ರಭಾವಿಕ ಹತೋಟಿಯಲ್ಲಿ ತಂದರೆ ಎಲ್ಲಾ ತರಹದ ಸಮಾಜವನ್ನುಮುಗುಚಿ ಬೀಳಿಸುವಂತಹ ಚಟುವಟಿಕೆಗಳನ್ನು ಕಡಿಮೆ ಅಥವಾ ನಿರ್ಮೂಲನೆ ಮಾಡಬಹುದೆನ್ನುವುದು ಸಂಪೂರ್ಣ ಸ್ಪಷ್ಟವಾಗಿದೆ. ನಾವು ಹೇಳಬೇಕೆಂದರೆ ಸಾಮಾಜಿಕವಾಗಿ ಉಪಯೋಗವಾಗುವಂತಹ ಚಟುವಟಿಕೆಗಳಿಗೆ ಪ್ರಚೋದನೆ ಕೊಡಬಹುದು.

ವಿದೇಶಗಳಲ್ಲಿ ಈ ವಿಜ್ಞಾನಕ್ಕೆ ಬಹಳ ಉತ್ಕೃಷ್ಟವಾದ ಸ್ಥಾನವನ್ನು ಅನುಗ್ರಹಿಸಿದ್ದಾರೆ. ಈ ವಿಜ್ಞಾನವು ಎಲ್ಲಾ ಮನುಷ್ಯನ ಪ್ರೇರೇಪಣೆ ಮತ್ತು ಪ್ರಾರಂಭಗಳಿಗೆ ಅಡಿಪಾಯವಾಗಿದೆ ಎಂದು ಅವರು ತಿಳಿಯಲಾರಂಭಿಸಿದ್ದಾರೆ ಮತ್ತು ಈ ಆಧುನಿಕ ಸಮಯಗಳಲ್ಲಿ ಈ ವಿಜ್ಞಾನವೊಂದೇ ಮನುಷ್ಯನ ಜೀವನವನ್ನು ಸತ್ಯಯುತ, ಸಂತೋಷಕರ ಮತ್ತು ವೈಭವಾತ್ಮಕ ಮಾಡಬಲ್ಲದು. ಉಳಿದೆಲ್ಲಾ ವಿಜ್ಞಾನಗಳಲ್ಲಿ ನಾವು ವಿರೋಧೋಕ್ತಿಯನ್ನು ಎದುರಿಸುತ್ತೇವೆ. ಸಮ್ಮೋಹನದಲ್ಲಿ ನಾವು ಉದ್ಭವಿಸುತ್ತಿರುವ ಅನಾಹುತದ ಭೀತಿಯ ವಿರೋಧೋಕ್ತಿಗಳನ್ನು ನೋಡುವುದಿಲ್ಲ. ಆದ್ದರಿಂದ ಅವರು ಜೀವನದ ಎಲ್ಲಾ ಹೆಜ್ಜೆಯಲ್ಲಿಯೂ ಈ ವಿಜ್ಞಾನದ ಸಹಕಾರವನ್ನು ಪಟ್ಟಿಯಲ್ಲಿ ಸೇರಿಸುವುದನ್ನು ಪ್ರಾರಂಭಿಸಿದ್ದಾರೆ.

ಸಮ್ಮೋಹನವು ವೈದ್ಯಕೀಯ ಚಿಕಿತ್ಸೆಯ ಜಗತ್ತಿನಲ್ಲಿ ಪವಾಡಗಳನ್ನೇ ತಂದಿದೆ. ಸಮ್ಮೋಹನವು ಜನರು ವಾಸಿಯಾಗುವುದಿಲ್ಲವೆಂದು ಕೈಬಿಟ್ಟಂತಹ ರೋಗಗಳನ್ನು ಗುಣಪಡಿಸಿದೆ. ಮಾನಸಿಕ ವ್ಯಾಧಿಗಳಲ್ಲಿ ಸಂಬಂಧಿಸಿರುವಲ್ಲಂತೂ ಸಮ್ಮೋಹನವು ಬಹಳ ಪರಿಣಾಮಕಾರಿಯಾಗಿರುವುದು ಸಾಬೀತಾಗಿದೆ. ಸಮ್ಮೋಹನವು ನಮಗೀಗಾಗಲೇ ಗೊತ್ತಿರುವಂತೆ ಯಾವುದೇ ಔಷಧಿಗಳನ್ನು ನಿರ್ದೇಶಿಸುವುದಿಲ್ಲ. ಅದು ತಿಳಿಸಬೇಕೆಂದರೆ, ಈ ಪದ್ಧತಿಯಿಂದ ಅಂತರ್ಮನಸ್ಸಿನಲ್ಲಿ ಎಲ್ಲಾ ಕ್ಲಿಷ್ಟ ಹಾಗೂ ಬಗ್ಗದ ರೋಗಗಳನ್ನು

ವಾಸಿಮಾಡುವಂತಹ ನಿರ್ದಿಷ್ಟ ಅಚ್ಚೆಗಳನ್ನು ನೆಡುತ್ತದೆ. ನಮಗೆ ಯಾವುದೇ ವಿರೋಧ ಪ್ರತಿಕ್ರಿಯೆ ಅಥವಾ ದುಷ್ಪರಿಣಾಮಗಳಾಗುವುದಿಲ್ಲ.

ಮನುಷ್ಯನ ಸಂಬಂಧದಲ್ಲಿಯೂ ಸಹ ಈ ವಿಜ್ಞಾನವನ್ನು ಹೆಚ್ಚಾಗಿ ಉಪಯೋಗಿಸಲಾಗುತ್ತದೆ. ಬಯಲಿಗೆ ಬರುತ್ತಿರುವ ಹೊಸ ಜನಾಂಗದಲ್ಲಿ ಓರ್ವನು ಅಗಮ್ಯವಾದ ಪ್ರವೃತ್ತಿ ಅಥವಾ ಸ್ವಮತಾಭಿಮಾನದಲ್ಲೇ ಉಳಿಯುವುದನ್ನು ಗಮನಿಸುತ್ತಾನೆ. ಓರ್ವನು ಆ ತರಹದ ಹಟತನದ ಹಲವಾರು ಸಂಗತಿಗಳನ್ನು ಸಮ್ಮೋಹನದ ಸಹಾಯದಿಂದ ಚಿಕಿತ್ಸೆ ನೀಡಿದ್ದಾನೆ. ಅಮಲು ದ್ರವ್ಯಗಳಿಗೆ ವಶವಾಗಿರುವಂತಹ, ಅಥವಾ ಡ್ರಗ್ ಅಡಿಕ್ಟ್ ಗಳನ್ನು ಅದರ ವಶದಿಂದ ಮುಕ್ತಗೊಳಿಸಲಾಗಿದೆ. ಸಾಧಾರಣ ಸ್ಥಳ ಪರಿಸ್ಥಿತಿಯಲ್ಲಿಯೂ ಸಹ ಈ ವಿಜ್ಞಾನವು ಹೆಚ್ಚು ಪರಿಣಾಮಕಾರಿಯಾಗಿ ಸಾಬೀತಾಗಿದೆ.

ಭಾರತದಲ್ಲಿ ಇದುವರೆಗೂ ನಾವು ಈ ವಿಜ್ಞಾನದ ವ್ಯಾಪಕವಾದ ಉಪಯೋಗವನ್ನು ಬಹಳ ಸ್ವಲ್ಪ ಅಥವಾ ಚಿಹ್ನೆಯನ್ನೇ ಕಂಡಿಲ್ಲ. ಈ ಕಡೆ ನಾವು ಈ ವಿಜ್ಞಾನದ ಸಲಕರಣೆಯ ಮೂಲಕ ಗುಂಪಾಗಿ ಆಸಕ್ತಿ ಕೆರಳಿಸಿಕೊಂಡು ಸಂಘಟಿತವಾಗುವಂತಹವರನ್ನು ಯಾರನ್ನೂ ಕಾಣುವುದಿಲ್ಲ. ನಾವು ಅಪರೂಪಕ್ಕೆ ವೈದ್ಯಕೀಯ ಕ್ಷೇತ್ರದಲ್ಲಿ ಸಮ್ಮೋಹನವನ್ನು ಉಪಯೋಗಿಸುತ್ತಿರುವುದು ನಿಜ, ಪಶ್ಚಿಮಾತ್ಯ ಪರಿಣಾಮಕ್ಕೆ ಧನ್ಯವಾದಗಳು. ಯಾವುದೇ ಸಂದರ್ಭದಲ್ಲಿ ನಾವು ಈ ವಿಜ್ಞಾನವನ್ನು ಇತರ ಕ್ಷೇತ್ರಗಳಲ್ಲಿ ಅದನ್ನು ಉಪಯೋಗಿಸುವ ಮಟ್ಟದಲ್ಲಿ ಉಪಯೋಗಿಸುತ್ತಿಲ್ಲ.

ಭಾರತೀಯ ಜೋತಿಷ್ಯ ವಿಜ್ಞಾನಗಳ ಅನ್ವೇಷಣೆ ಕೇಂದ್ರ, ಜೋಧಪುರವು, ಈ ಪರಿಸ್ಥಿತಿಯ ನಿಕಟ ಗುಣಮಟ್ಟದ ನಿಷ್ಕರ್ಷೆಯನ್ನು ಭಾರತದಲ್ಲಿ ಮತ್ತು ವಿದೇಶಗಳಲ್ಲಿ ಮಾಡಿದೆ. ಕೇಂದ್ರವು ಈ ವಾಸ್ತವಿಕ ಪರಿಸ್ಥಿತಿಯನ್ನು ಸುಧಾರಿಸಲು ನಾವು ಏನನ್ನೂ ಮಾಡದಿದ್ದರೆ ನಾವು ಬೇಗನೇ ಎಲ್ಲರಿಕ್ಕಿಂತಲೂ ಹಿಂದೆ ಬೀಳುತ್ತೇವೆ ಎಂದು ಅಭಿಪ್ರಾಯ ಪಟ್ಟಿದೆ. ಬಹಳ ಮಟ್ಟಿಗೆ ಪಶ್ಚಿಮದ ಜನರು ಈ ಕ್ಷೇತ್ರದಲ್ಲಿ ಭಾರತೀಯರಿಂದ ಮಾಡಲ್ಪಟ್ಟ ರೇತಸ್ಸಿನ ಕೆಲಸವನ್ನು ಅಂಗೀಕರಿಸುತ್ತಾರೆ. ಅವರು ಈ ವಿಜ್ಞಾನವು ಭಾರತದಲ್ಲಿಯೇ ಜನ್ಮತೆಗೆದುಕೊಂಡಿದೆ ಮತ್ತು ಅದಕ್ಕೆ ಬೆಳೆಯುವ ಸಾಮರ್ಥ್ಯವೇನಾದರೂ ಇದ್ದರೆ ಅದನ್ನು ಕೇವಲ ಭಾರತದೇಶವೇ ಸಾಧ್ಯವಾಗುವ ಹಾಗೆ ಮಾಡಬಹುದೆಂದು ಒಪ್ಪಿಕೊಳ್ಳುತ್ತಾರೆ. ಹೇಗಾದರೂ, ನೀವು ನಿಮ್ಮ ಕಣ್ಣನ್ನು ಎಲ್ಲಡೆಯೂ ಹಾಯಿಸಿದಾಗ ಹೊರನೋಟವು ಭರವಸೆಕೊಡುವಂತಹುದಾಗಿ ಕಾಣಿಸುವುದಿಲ್ಲ. ಪಶ್ಚಿಮದಿಂದ ಬಹಳಷ್ಟು ಪರಿಶೋಧಕರು ಈ ಕ್ಷೇತ್ರದಲ್ಲಿ ಯಾವುದಾದರೂ ಹೊಸ ಜ್ಞಾನವನ್ನು ಸಂಪಾದಿಸಲು ಭಾರತಕ್ಕೆ ಭೇಟಿಕೊಡುವರು. ಅವರು ಈ ದೇಶದಲ್ಲಿ ಯಾವುದೇ ಹೊಸ ಸಾರ್ಥಕವಾಗುವಂತಹುದು ಈ ಕ್ಷೇತ್ರದಲ್ಲಿ ಕಾಣದೆ ಖಿನ್ನರಾಗಿ ಹಿಂದಿರುಗುವರು.

ಈ ಬಿಕ್ಕಟ್ಟು ಹೀಗಿಯೇ ಸ್ವಲ್ಪ ಸಮಯದವರೆಗೆ ಮುಂದುವರಿದರೆ, ಬಹುಶಃ ನಾವು ಈ ವಿಜ್ಞಾನದ ಪ್ರಾಥಮಿಕ ಜ್ಞಾನವನ್ನು ಪಡೆದುಕೊಳ್ಳಲು ವಿದೇಶಗಳಿಗೆ ನಿರ್ಬಂಧವಾಗಬಹುದು. ಭಾರತೀಯರಾದ ನಮಗೆ ಈ ತರಹದ ಪರಿಸ್ಥಿತಿಯು ಖಚಿತವಾಗಿ ಬಹಳ ತೊಡಕಾಗುವುದು. ಈ ವಿಜ್ಞಾನವು ಈ ಭೂಮಿಯಲ್ಲಿ ಮತ್ತು ನಮ್ಮ ಪರಂಪರೆಯಲ್ಲಿ ಬೇರೂರಿದೆ. ಹೀಗಿದ್ದಾಗ್ಯೂ ನಮಗೆ ಈ ವಿಜ್ಞಾನವನ್ನು ಕಲಿಯಲು ವಿದೇಶಗಳಿಗೆ ಹೋಗುವುದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲದಿದ್ದರೆ, ನಾವು ಗಾಬರಿಪಡಿಸುವಂತಹ ಅನುಭವವನ್ನು ಎದುರಿಸಬೇಕಾಗುವುದು.

ಕೇಂದ್ರವು ಈ ಎಲ್ಲಾ ನೋಟಗಳನ್ನು ಒಂದು ಮಟ್ಟಿನ ಆಳಕ್ಕೆ ಪರೀಕ್ಷಿಸಿ ಎದ್ದುಕಾಣುವಂತಹ ಮುಖ್ಯವಾದ ಮುನ್ನಡೆಯೊಂದು ಇರಬೇಕೆಂದು ನಿರ್ಧರಿಸಿತು. ನಾವು ನಮ್ಮ ಜನರಲ್ಲಿ ಈ ವಿಜ್ಞಾನದ ಬಗ್ಗೆ ಒಂದು

ವಿಶ್ವಾಸದ ಅರಿವನ್ನು ಮೊದಲು ಮಾಡಿಸಬೇಕು ಮತ್ತು ನಾವು ದೇಶದ ಎಲ್ಲೆಡೆಯಲ್ಲಿಯೂ ವ್ಯಾಪಕವಾದ ಆಸಕ್ತಿಯನ್ನು ಸೃಷ್ಟಿಸಬೇಕು. ಆಗ ಮಾತ್ರವೇ ಅವರು ಈ ವಿಜ್ಞಾನದ ಪ್ರಾಮುಖ್ಯತೆಯನ್ನು ಗ್ರಹಿಸುವಲ್ಲಿ ಸಮರ್ಥರಾಗುವರು, ಅದು ಆ ಸಂದರ್ಭದಲ್ಲಿ ಬಹಳ ಪರಿಣಾಮಕಾರಿಯಾದ ಪಾತ್ರವನ್ನು ಮತ್ತು ಸಮಾಜಿಕವಾಗಿ ಓರೆಯಾದಂತಹ ಪಾತ್ರವನ್ನು ಮಾಡಲು ಪ್ರಾರಂಭಿಸುವುದು.

ನಮ್ಮ ಗುಣಮಟ್ಟದ ನಿಷ್ಕರ್ಷೆಯ ಪ್ರಕರಣವಾಗಿ, ಕೇಂದ್ರವು ಸಮ್ಮೋಹನ ಅಕಾಡೆಮಿಯನ್ನು ಸ್ಥಾಪಿಸಿದೆ, ಅದು ಕೆಳಗಿನ ಪ್ರಮುಖ ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತದೆ.

### ೧. ಅನ್ವೇಷಣೆಯ ಇಲಾಖೆ.

ಈ ಇಲಾಖೆಯ ಎಲ್ಲಾ ಅನ್ವೇಷಣೆಯ ಮುಖ್ಯ ಒತ್ತಡವು ಸಮ್ಮೋಹನವನ್ನು ಎಷ್ಟು ಶ್ರೇಷ್ಠವಾಗಿ ಬಹಳ ವಿಶಾಲವಾಗಿ ಉಪಯೋಗಿಸಬಹುದು ಮತ್ತು ಈ ವಿಜ್ಞಾನದಲ್ಲಿ ಸ್ವಾಭಾವಿಕವಾಗಿರುವ ಸಾಮರ್ಥ್ಯವನ್ನು ಎಷ್ಟು ಪರಿಣಾಮಕಾರಿಯಾಗಿ ತಿಳಿದುಕೊಳ್ಳಬಹುದೆನ್ನುವುದನ್ನು ಬಯಲು ಮಾಡುವುದು.

ಒಂದು ನಿಷ್ಠುರವಾದ ಗುಣನಿರ್ಧಾರತೆಯನ್ನು ಸಹ ಕೈಗೊಳ್ಳಲಾಗಿದೆ. ಬಹಳ ನೇರವಾದ ಮತ್ತು ಓರೆಯಾದ ಪ್ರಯೋಗಗಳನ್ನು ಈ ವಿಜ್ಞಾನದ ಮಾಧ್ಯಮದ ಮೂಲಕ ನಿರ್ವಹಿಸಲಾಗಿದೆ. ಆದ್ದರಿಂದ ಅನ್ವೇಷಣೆಗಳ ನಿರ್ಣಯಗಳನ್ನು ಮುಂದುವರಿದ ಕಠೋರವಾದ ಶೋಧನೆಗೆ ಅಳವಡಿಸಲಾಗಿದೆ.

ಇಲಾಖೆಯು ಮನಸ್ಸಿನ ಅಧ್ಯಯನದ ಕ್ಷೇತ್ರದಲ್ಲಿ ಬಹಳ ಗಣನೀಯವಾದ ನಿರ್ಣಯಗಳಿಂದ ಹೊರಬಂದಿದೆ. ಈ ನಿರ್ಣಯಗಳು ಪ್ರಪಂಚದಾದ್ಯಂತ ಅಂಗೀಕೃತವಾಗಿವೆ.

### ೨. ಪ್ರಕಟಣೆಯ ಇಲಾಖೆ.

ಹತ್ತಿರದ ಮೌಲ್ಯ ನಿರ್ಧಾರ ಮತ್ತು ವಾಸ್ತವವಾಗಿ ಪ್ರಮಾಣೀಕರಿಸಿದ ನಂತರ, ನಿರ್ಣಯಗಳನ್ನು ಪತ್ರಿಕೆಗಳಲ್ಲಿ ಪ್ರಕಾಶಿತಗೊಳಿಸಲಾಗುತ್ತದೆ, ಆದ್ದರಿಂದ ಬೇರೆಯವರು ಈ ನವೀನ ಜ್ಞಾನದಿಂದ ಪಾರ್ಶ್ವಚಿತ್ರವನ್ನು ಪಡೆದುಕೊಳ್ಳಬಹುದು.

ಇಲಾಖೆಯು ಲಘು ಪ್ರಕಟಣೆಗಳನ್ನು ಮತ್ತು ಪತ್ರಿಕೆಗಳನ್ನು ಪ್ರಕಾಶಿಸುತ್ತದೆ. ಹಾಗಿಯೇ ಹಲವಾರು ಪುರಾತನ ಕೆಲಸಗಳನ್ನು ಆಧೀನಕ್ಕೆ ತೆಗೆದುಕೊಂಡು ಪ್ರಕಾಶಿಸಲಾಗುತ್ತದೆ.

### ೩. ಗುಣಪಡಿಸುವ ಇಲಾಖೆ.

ಈ ಇಲಾಖೆಯನ್ನು ಬಹಳವಾಗಿ ಚಿಕಿತ್ಸೆಕೊಡುವ ಮತ್ತು ಗುಣಪಡಿಸುವ ಕಾರ್ಯಗಳಿಗೆ ಉಪಯೋಗಿಸಲಾಗಿದೆ. ಇದನ್ನು ಮಾನಸಿಕ ಅಸ್ವಸ್ಥ್ಯಗಳ ಚಿಕಿತ್ಸೆಗಳಿಗೆ ಹೆಚ್ಚಾಗಿ ಉಪಯೋಗಿಸಲಾಗುತ್ತದೆ. ಇಲಾಖೆಯಿಂದ ಸಾಧಿಸಿರುವಂತಹ ಪರಿಣಾಮಗಳು ಬಹಳ ಅದ್ವಿತೀಯವಾಗಿವೆ.

ಈ ಕ್ಷೇತ್ರದಲ್ಲಿ ಪಡೆದಂತಹ ಒಳದೃಷ್ಟಿಗಳ ಇಲಾಖೆಯು, ಮೌಲ್ಯನಿರ್ಧಾರತೆಯನ್ನು, ಶೋಧನೆಯನ್ನು ಮತ್ತು ಕಾಯಿದೆ ಮಾಡುವುದನ್ನು ಸಂಘಟಿಸುತ್ತದೆ.

ಇಲಾಖೆಯು ಸುವ್ಯಕ್ತವಾಗಿ ಹಲವಾರು ವಾಸಿಯಾಗದಂತಹ ರೋಗಗಳಿಂದ ನರಳುವಂತಹ ರೋಗಿಗಳನ್ನು ಕಾಣುತ್ತಲೇ ಇದೆ. ಇಲಾಖೆಯು ಅಂತಹ ರೋಗಿಗಳ ಚಿಕಿತ್ಸೆಯನ್ನು ಸಂಘಟಿಸುತ್ತದೆ. ಫಲಿತಾಂಶಗಳು ಬಹಳ ಅಸಾಧಾರಣವಾಗಿವೆ.

ಳ. ಬೋಧನೆಯ ಇಲಾಖೆ.

ಇಲಾಖೆಯು ಈ ವಿಜ್ಞಾನದ ಬೋಧನೆಯನ್ನು ಸಂಘಟಿಸಿದೆ. ಸ್ವದೇಶಿ ಅಥವಾ ವಿದೇಶಿ ಯಾರೇಯಾಗಲಿ ಈ ಶ್ರೇಣಿಗಳಲ್ಲಿ ಸೇರಿಕೊಳ್ಳಬಹುದು. ಇಲಾಖೆಯು ಸಂಕ್ಷೇಪವಾದ ಶ್ರೇಣಿಗಳನ್ನು ತೆಗೆದುಕೊಂಡಿದೆ ಮತ್ತು ಕಲಿಯುವವನು ಈ ಯಾವ ಶ್ರೇಣಿಗಳನ್ನಾದರೂ ಇಚ್ಛಿಸಿ ಅದರಲ್ಲಿ ನೋಂದಾಯಿಸಿಕೊಳ್ಳಬಹುದು. ಈ ಶ್ರೇಣಿಗಳಲ್ಲಿ ನೋಂದಾಯಿತಗೊಳ್ಳಲು ಯಾವುದೇ ಔಪಚಾರಿಕವಾದ ಅರ್ಹತೆಗಳ ಅವಶ್ಯಕತೆ ಇಲ್ಲ. ಹೇಗಾದರೂ, ಇಲಾಖೆಯು ವಿದ್ಯಾರ್ಥಿಯಲ್ಲಿ ಮೂಲ ಸಾಮರ್ಥ್ಯ ಮತ್ತು ಈ ಕ್ಷೇತ್ರದಲ್ಲಿ ಸರಿಯಾದ ಆಸಕ್ತಿ ಇದೆಯೋ ಎನ್ನುವುದನ್ನು ಖಚಿತಪಡಿಸಿಕೊಳ್ಳಲಿಚ್ಛಿಸುತ್ತದೆ. ಈ ಶ್ರೇಣಿಗಳಲ್ಲಿ ಯಶಸ್ವಿಯಾಗಿ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳು ದೇಶಾದ್ಯಾಂತ ಪ್ರಖ್ಯಾತಿಯನ್ನು ಪಡೆದಿದ್ದಾರೆ.

೫. ವಿಶೇಷ ಪ್ರಕಾರ ಸಂಬಂಧದ ಸೇವೆಗಳ ಇಲಾಖೆ.

ಇಲಾಖೆಯು ಹೊರಗಡೆ ತನ್ನ ಸಭೆಗಳ ಆವಾರಗಳನ್ನು ಮತ್ತು ಗೋಷ್ಠಿಗಳನ್ನು ಸಂಘಟಿಸುತ್ತದೆ. ಹಲವಾರು ಸಾರಿ ಅದು ವಿದೇಶಗಳಲ್ಲಿಯೂ ಸಹ ಕೆಲ ಗೋಷ್ಠಿಗಳನ್ನು ಸಂಘಟಿಸಿದೆ.

ಇಲಾಖೆಯು ಸಮ್ಮೋಹನಕ್ಕೆ ಸಂಬಂಧಿಸಿದ ತಮಗೆ ತಾವೇ ವಿದೇಶದ ಪ್ರಮುಖ ಇಲಾಖೆಗಳ ವರ್ಗೀಕರಣಕ್ಕೆ ಬೆಂಬಲಕೊಡದಂತಹ ಎಲ್ಲಾ ಕಾರ್ಯಗಳನ್ನು ತೆಗೆದುಕೊಳ್ಳಲಿಚ್ಛಿಸುತ್ತದೆ.

ಅದು ಇನ್ನೂ ತನ್ನಲ್ಲಿಯೇ ಹೆಚ್ಚು ಕೆಲಸಗಳನ್ನು ಪ್ರತಿಪಾದಿಸಬೇಕಾಗಿದ್ದರೂ, ಅಕ್ಯಾಡೆಮಿಯು ಈಗಾಗಲೇ ಪ್ರಪಂಚದಾದ್ಯಂತದಿಂದ ಒಳ್ಳೆಯ ಪ್ರಶಂಸೆ ಹಾಗೂ ಹೊಗಳಿಕೆಗಳಿಂದ ಕೂಡಿದೆ. ಅಕ್ಯಾಡೆಮಿಯು ಈ ತರಹದ ಒಂದೇ ಒಂದು ಸಂಸ್ಥೆ ಎಂದು ಹೇಳಬೇಕಾಗಿಲ್ಲ. ಅದು ಈಗಾಗಲೇ ಪ್ರಪಂಚದಾದ್ಯಂತ ಸಮ್ಮೋಹನ ಪಂಡಿತರ ಗಮನವನ್ನು ಸೆಳೆದಿರುವಂತಹ ಅದರದೇ ಆದ ದೃಢೀಕೃತ ಮತ್ತು ಅನ್ವೇಷಣೆಗಳ ವರದಿಗಳನ್ನು ಹೊರತಂದಿದೆ.

ಇತರೆ ಪ್ರಮುಖ ಚಟುವಟಿಕೆಗಳು.

ಸಮ್ಮೋಹನದ ಅಧ್ಯಯನ ಮತ್ತು ಅನ್ವೇಷಣೆ ಅಲ್ಲದೆ ಅಕ್ಯಾಡೆಮಿಯು ಇತರೆ ಪ್ರಮುಖ ಚಟುವಟಿಕೆಗಳನ್ನು ಸಂಘಟಿಸಿದೆ. ಚಟುವಟಿಕೆಗಳು ಈಗಾಗಲೇ ಪ್ರಪಂಚದಾದ್ಯಂತ ಅಕ್ಯಾಡೆಮಿಯ ಕಡೆ ಪಂಡಿತರ ಗಮನವನ್ನು ಗಳಿಸಿದೆ. ಹಲವಾರು ಸಂಬಂಧಿತ ಕ್ಷೇತ್ರಗಳಲ್ಲಿ ಅದು ಈಗಾಗಲೇ ಉತ್ಕೃಷ್ಟ ಪಂಡಿತರಿಂದ ಶ್ರೇಷ್ಠವಾದ ಪ್ರಶಂಸೆಯನ್ನು ಗಳಿಸಿದೆ. ಈ ಕೆಳಗೆ ನಾವು ಅಕ್ಯಾಡೆಮಿ ಸಂಘಟಿಸುವಂತಹ ಹಲವಾರು ಚಟುವಟಿಕೆಗಳ ಕೇವಲ ಪರಿಚಯವನ್ನು ಕೊಡುತ್ತಿದ್ದೇವೆ.

ಜೋತಿಷ್ಯದ ಇಲಾಖೆ:

ಇಲಾಖೆಯು ಎಲ್ಲಾ ತರಹದ ಜೋತಿಷ್ಯದ ಹೇಳಿಕೆಗಳನ್ನು ತೆಗೆದು ಕೊಳ್ಳುತ್ತದೆ. ವ್ಯಕ್ತಿಯ ಹುಟ್ಟಿದ ಸಮಯ ಮತ್ತು ಹುಟ್ಟಿದ ಸ್ಥಳವನ್ನು ಪಡೆದುಕೊಂಡ ನಂತರ ಕೆಲಸವು ಪ್ರಾರಂಭವಾಗುತ್ತದೆ. ಯಾರಲ್ಲಿ ಶಾಸ್ತ್ರೋಕ್ತವಾದ ಜಾತಕವಿದೆಯೋ ಅವರು ಜೋತಿಷ್ಯದ ಹೇಳಿಕೆಗಳಿಗೆ ಜಾತಕವನ್ನು ಕಳುಹಿಸಬಹುದು. ಒಂದು ವೇಳೆ ಅವರಲ್ಲಿ ಜಾತಕವಿಲ್ಲದಿದ್ದರೆ ಅವರು ತಮ್ಮ ಎರಡೂ ಅಂಗೈಗಳ ಅಚ್ಚನ್ನು ಕಳುಹಿಸಬಹುದು.

ಅವರಿಗೆ ಕಪ್ಪು ಮಸಿಯನ್ನು ತಮ್ಮ ಅಂಗೈಗಳ ಮೇಲೆ ಹರಡಿ ಅದನ್ನು ಒಂದು ಬಿಳಿ ಕಾಗದದ ಮೇಲೆ ಮುದ್ರಿಸಿ ಅದನ್ನು ಅಕ್ಕಾಡೆಮಿಗೆ ಕಳುಹಿಸಬೇಕೆಂದು ಆದೇಶಿಸಲಾಗಿದೆ. ಇಲಾಖೆಯು ಸಂಪೂರ್ಣ ಜೀವನದ ಭವಿಷ್ಯ ನುಡಿಗಳನ್ನು ಮತ್ತು ಸತ್ಯತೆಗಳನ್ನು ಲೆಕ್ಕಹಾಕುವುದು. ಅದು ನಿರ್ದಿಷ್ಟವಾಗಿ ತನ್ನ ಗಮನವನ್ನು ಆಯುಷ್ಯ, ವ್ಯಾಪಾರದ ನೋಟಗಳು, ವ್ಯಾಪಾರದ ಆಯ್ಕೆ, ಆರೋಗ್ಯ, ಸಂಸಾರ, ದಾಂಪತ್ಯ, ಜೀವನ, ಮಕ್ಕಳು, ಹೆತ್ತವರು, ಸ್ನೇಹಿತರು ಮತ್ತು ವೈರಿಗಳು, ಉದ್ಯೋಗಗಳು, ಆರ್ಥಿಕನೋಟಗಳು ಮತ್ತು ಜೀವನದ ಸನ್ನಿಹಿತವಾಗಿರುವ ಅಡಚಣೆಗಳ ಕಡೆಗೆ ಕೇಂದ್ರೀಕರಿಸುತ್ತದೆ. ಅದು ಅಡಚಣೆಗಳನ್ನು ಜಯಿಸುವಂತಹ ದಾರಿಗಳನ್ನು ಮತ್ತು ಸಾಧನೆಗಳನ್ನು ಸಹ ತಿಳಿಸುತ್ತದೆ. ವಾಹನ ಮತ್ತು ಮನೆಯನ್ನು ಖರೀದಿಸುವ ಮತ್ತು ವಿದೇಶಕ್ಕೆ ಹೋಗುವ ನೋಟಗಳನ್ನು ಸಹ ಅದು ಅಧ್ಯಯನ ಮಾಡುತ್ತದೆ.

ಈ ಕೆಳಗಿನ ಕೆಲಸಗಳನ್ನು ಸಹ ನಿರ್ವಹಿಸಲಾಗುತ್ತದೆ:

### ೧. ಒಂದು ಪ್ರಶ್ನೆಗೆ ವಿವರವಾದ ಉತ್ತರ

ಯಾವುದೇ ವ್ಯಕ್ತಿಯು ವಿವರವಾದ ಉತ್ತರಕ್ಕೆ ಒಂದು ಪ್ರಶ್ನೆಯನ್ನು ಕೇಳಬಹುದು. ಒಂದಕ್ಕಿಂಥ ಹೆಚ್ಚು ಪ್ರಶ್ನೆಯನ್ನೂ ಸಹ ಕೇಳಬಹುದು. ಹೇಗಾದರೂ ಆ ವ್ಯಕ್ತಿಯು ತನ್ನ ಜಾತಕ ಅಥವಾ ಅಂಗೈಮುದ್ರೆಗಳು ಅಥವಾ ಭಾವಚಿತ್ರವನ್ನು ಕಳುಹಿಸುವ ಅವಶ್ಯಕತೆ ಇರುತ್ತದೆ.

### ೨. ವಾರ್ಷಿಕ ಭವಿಷ್ಯನುಡಿಗಳು.

ಅಕ್ಕಾಡೆಮಿಯು ಸಂಪೂರ್ಣ ವರ್ಷದ ಭವಿಷ್ಯ ನುಡಿಗಳನ್ನು ಲೆಕ್ಕಹಾಕುವುದು ಪ್ರಮುಖ ಘಟನೆಗಳು ಏನಾಗುವವು ಮತ್ತು ಈ ವರ್ಷದಲ್ಲಿ ನಾವು ಯಾವ ರೀತಿಯ ಅಡೆತಡೆಗಳನ್ನು ಎದುರಿಸಬೇಕಾಗುವುದು ಮತ್ತು ಈ ಅಡೆಚಣೆಗಳನ್ನು ಹೇಗೆ ಬಗೆಹರಿಸಿಕೊಳ್ಳಬಹುದು.

### ೩. ವಧೂ ಮತ್ತು ವರನ ಸಂಯೋಗ

ಅಕ್ಕಾಡೆಮಿಯು ಮದುವೆಗೆ ಮುಂಚೆ ವಧು ಮತ್ತು ವರರ ಜಾತಕಗಳನ್ನು ಹೋಲಿಸುವುದು. ಅದು ಅವರ ಮದುವೆಯಲ್ಲಿಯ ಸಂಯೋಗದ ನೋಟಗಳನ್ನು ಅಧ್ಯಯನಮಾಡುವುದು. ಅದು ಸಂಯೋಗವು ಎರಡೂ ಕಡೆಯವರಲ್ಲಿಯೂ ಉತ್ತಮವಾಗಿರುವುದೇ ಮತ್ತು ಅವರ ದಾಂಪತ್ಯ ಜೀವನದಲ್ಲಿ ಎದುರಿಸಬೇಕಾಗುವ ಅಡಚಣೆಗಳನ್ನು ಸಹ ತಿಳಿದುಕೊಳ್ಳುತ್ತದೆ.

ಸಂಪೂರ್ಣವರದಿಯನ್ನು ಸಂಬಂಧಪಟ್ಟವ್ಯಕ್ತಿಗೆ ಕೊಡಲಾಗುತ್ತದೆ.

### ೪. ನಿರ್ಧಾರಿತ ಅಥವಾ ಶುಭಕಾರಕ ಸಮಯ

ವ್ಯಾಕುಲದ ವಿಚಾರಣೆಗಳ ಉತ್ತರವಾಗಿ ಅಕ್ಕಾಡೆಮಿಯು ಓರ್ವನು ಒಂದು ಕೆಲಸಮಾಡಬೇಕಾದರೆ ತಿಳಿದುಕೊಳ್ಳಬೇಕೆಂದಿರುವ ಮುಹೂರ್ತ ಅಥವಾ ಶುಭಕಾರಕ ಸಮಯವನ್ನು ತೆಗೆಯುತ್ತದೆ. ಓರ್ವನಿಗೆ ಒಂದು ವ್ಯವಹಾರವನ್ನು ಪ್ರಾರಂಭಿಸಲು ಒಂದು ಮುಹೂರ್ತ ಬೇಕಾಗಬಹುದು, ಹೊಸಮನೆ ಕಟ್ಟಲು, ಬುನಾದಿ ಹಾಕಲು, ಹೊಸತಾಗಿ ಕಟ್ಟಿರುವಂತಹ ಅಥವಾ ಹಂಚಿಕೆಯಲ್ಲಿ ಬಂದಂತಹ ಮನೆಯನ್ನು ಪ್ರವೇಶಿಸಲು ಮತ್ತು ಮದುವೆ ಅಥವಾ ಮುಂಜಿಗಳ ಸಮಾರಂಭಕ್ಕೆ. ಅಕ್ಕಾಡೆಮಿಯು ಸಮಯವನ್ನು ಗುರಿತಿಸಿ ಪತ್ರ ವ್ಯವಹಾರಿಕನಿಗೆ ತಿಳಿಸುವುದು.

## ೫. ವಿಶೇಷ ಪ್ರಕಾರ ಸಂಬಂಧದ ಸೇವೆಗಳು.

ಈ ಇಲಾಖೆಯು ವಿಶೇಷ ರೀತಿಯ ಎಲ್ಲಾ ಕೆಲಸಗಳನ್ನೂ ಕೈಗೊಳ್ಳುತ್ತದೆ. ಇಲಾಖೆಯು ಪತ್ರ ವ್ಯವಹಾರಕರಿಗೆ ಸಂಪೂರ್ಣವಾದ ಗುಪ್ತತೆಯ ಭರವಸೆಯನ್ನು ಕೊಡುತ್ತದೆ. ವೈಯಕ್ತಿಕ ವಿಚಾರಣೆಗಳನ್ನು ಗುಪ್ತತೆಯಿಂದ ಗಮನಿಸಲಾಗುವುದು.

ಇಲಾಖೆಯು ಅರ್ಹ ವ್ಯಕ್ತಿಗೆ ಯುಕ್ತವಾದ ಮಂತ್ರಪಠಣೆಯ ಮಾರ್ಗವನ್ನೂ ಸಹ ತೋರಿಸುತ್ತದೆ. ಅದು ವೇದಕ್ಕೆ ಸಂಬಂಧಿಸಿದ ಸಮಾರಂಭಗಳು, ಧರ್ಮಾಚರಣೆಗಳು ಮತ್ತು ಅನುಷ್ಠಾನಗಳನ್ನೊಳಗೊಂಡ ಯಜ್ಞಗಳನ್ನೂ ಸಹ ಕೈಗೊಳ್ಳುತ್ತದೆ.

## ಜೀವ ಚೇತನಕೊಡುವ ಸಲಕರಣೆಗಳು:

ಅಕ್ಯಾಡೆಮಿಯು ಹಲವಾರು ವರ್ಷಗಳಿಂದ ನಿರ್ದಿಷ್ಟವಾದ ಜೀವ ಚೇತನಕೊಡುವಂತಹ ಸಲಕರಣೆಗಳನ್ನು ಮಾಡುವಲ್ಲಿ ಯಶಸ್ವಿಯಾಗಿದೆ. ಅದು ಇಚ್ಛೆಯುಳ್ಳ ವ್ಯಕ್ತಿಗಳಿಗೆ ಸಲಕರಣೆಗಳನ್ನು ಒದಗಿಸಲು ಒಂದು ವಿಶಾಲವಾದ ಹಣಕೆಯನ್ನು ಕಟ್ಟಿದೆ.

ಈ ಕೆಳಗಿನ ಸಲಕರಣೆಗಳು ದೊರೆಯುತ್ತವೆ:

### ೧. ಶ್ರೀ ಯಂತ್ರ:

ಇದು ಲೋಹಗಳಿಂದ ಮಾಡಿದಂತಹ ಒಂದು ಪ್ರಭಾವವುಳ್ಳ ಸಲಕರಣೆ. ವೇದದ ಮಂತ್ರಗಳಿಂದ ಅದನ್ನು ಶಕ್ತಿಯುತ ಮಾಡಲಾಗಿದೆ. ಅದು ನಿರ್ದಿಷ್ಟವಾಗಿ ವ್ಯವಹಾರದ ಅಭ್ಯುದಯ ಮತ್ತು ಆರ್ಥಿಕ ಉನ್ನತಿಗೆ ಸಹಾಯಕವಾಗಿದೆ. ಈ ಸಲಕರಣೆಯನ್ನು ಹೊಸತಾಗಿ ಕಟ್ಟುತ್ತಿರುವಂತಹ ಕಟ್ಟಡದ ಬುನಾದಿಯಲ್ಲಿ ಇಡುವುದು ಶ್ರೇಷ್ಠವೆಂದು ಪರಿಗಣಿಸಲಾಗಿದೆ. ಅದನ್ನು ದೇವರ ಮನೆಯಲ್ಲಿ ಅಥವಾ ವ್ಯವಹಾರದ ಸ್ಥಳದಲ್ಲಿ ಸ್ಥಾಪಿಸಬಹುದು.

### ೨. ಕನಕ ಧಾರಾ ಯಂತ್ರ

ಈ ಉಪಕರಣವು ತನ್ನಲ್ಲಿಯೇ ಬಹಳ ದಿವ್ಯವಾದದ್ದಾಗಿದೆ. ಭಾರತೀಯ ಪುರಾತನ ಋಷಿಗಳು ಅದನ್ನು ಉಗ್ಗಡಿಸಿದ್ದಾರೆ. ಆದ್ದರಿಂದ ಅದಕ್ಕೆ ಭಾರತದಲ್ಲಿ ಪುರಾತನ ಪಿತ್ರಾರ್ಜಿತವಿದೆ. ಅದು ನಿರ್ದಿಷ್ಟವಾಗಿ ವ್ಯಾಪಾರದ ಏಳ್ಗೆಯಲ್ಲಿ ಮತ್ತು ಜೀವನದ ಎಲ್ಲಾ ಹೆಜ್ಜೆಯಲ್ಲೂ ಸಹಾಯಕವಾಗಿದೆ. ಅದು ತನ್ನ ಪರಿಣಾಮಕತ್ವ ಶಕ್ತಿಯನ್ನು ವ್ಯಾಪಾರದ ಏಳ್ಗೆಯನ್ನು ನಿಶ್ಚಯಮಾಡುವಲ್ಲಿ, ಸೇವೆಯಲ್ಲಿ ಜಗಿತ, ಆರ್ಥಿಕ ಉನ್ನತಿ, ಅಡಚಣೆಗಳ ಪೂರ್ಣತೆಯನ್ನು ಈಗಾಗಲೇ ಸಾಬೀತು ಪಡಿಸಿದೆ. ಇದು ಸಹ ಲೋಹದಿಂದಮಾಡಿರುವಂತಹುದು, ಮತ್ತು ಪರೀಕ್ಷಿಸಿದ ವೇದಮಂತ್ರಗಳಿಂದ ಶಕ್ತಿಯುತ ಮಾಡಿರುವಂತಹುದು.

### ೩. ವಿಜಯ ಗಣಪತಿ.

ವಿಜಯ ಗಣಪತಿ ಮೂರ್ತಿಯನ್ನು ಲೋಹಗಳಿಂದ ಮಾಡಲ್ಪಟ್ಟಿದೆ. ಇದನ್ನೂ ಸಹ ಪರೀಕ್ಷಿಸಿದ ವೇದ ಮಂತ್ರಗಳಿಂದ ಪ್ರಾಣಪ್ರತಿಷ್ಠಾಪನೆ ಮಾಡಲಾಗಿದೆ.

ಭಾರತೀಯ ಹಳೆಯ ಅಭ್ಯಾಸಗಳ ಪ್ರಕಾರ ಮನೆಯಲ್ಲಿ ಮೊದಲು ಪೂಜಿಸಲ್ಪಡುವಂತಹ ದೇವರು ಗಣಪತಿ ಮತ್ತು ಮೊದಲು ಸ್ಥಾಪನೆಯಾಗುವಂತಹ ದೇವರು ಪುನಃ ಗಣಪತಿಯೇ. ಇದನ್ನು ಬಹಳ ಶುಭಕಾರಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಅಕ್ಯಾಡೆಮಿಯು ಎಲ್ಲಾ ಕೋನಗಳಿಂದಲೂ ಶುಭಕಾರಕವಾದ ಯುಕ್ತ ಮೂರ್ತಿಯನ್ನು ತಯಾರಿಸಲು ತನ್ನ ಎಲ್ಲಾ ಸಾಧನಗಳನ್ನು ಒಗ್ಗೂಡಿಸಿದೆ.

ಅದು, ಸಾಧಾರಣವಾಗಿ, ಓರ್ವನು ತನ್ನ ಮನೆಯಲ್ಲಿ ಅಥವಾ ವ್ಯಾಪಾರದ ಸ್ಥಳದಲ್ಲಿ ಈ ಮೂರ್ತಿಯನ್ನು ತಯಾರಿಸಲು ತನ್ನ ಎಲ್ಲಾ ಸಾಧನಗಳನ್ನು ಒಗ್ಗೂಡಿಸಿದೆ.

## ೪. ಬಗಲಾಮುಖಿ ಯಂತ್ರ

ಈ ಸಲಕರಣೆಯನ್ನು ಬೆಳ್ಳಿಯಿಂದ ಮಾಡಲಾಗಿದೆ. ಇದನ್ನು ಸಹ ಪರೀಕ್ಷಿಸಿದ ವೇದಮಂತ್ರಗಳಿಂದ ಶಕ್ತಿಯುತ ಮಾಡಲಾಗಿದೆ. ಇದು ನಿರ್ದಿಷ್ಟವಾಗಿ ವೈರಿಯನ್ನು ಗೆಲ್ಲುವಲ್ಲಿ ಪರಿಣಾಮಕಾರಿಯಾಗಿದೆ. ಇದು ಕಾನೂನು ವ್ಯಾಜ್ಯಗಳಲ್ಲಿ, ಚುನಾವಣೆಯ ಯಶಸ್ಸಿನಲ್ಲಿ ಮತ್ತು ವ್ಯಾಪಾರದ ಪೈಪೋಟಿಯಲ್ಲಿ ಲಾಭವನ್ನು ಪಡೆಯುವುದರಲ್ಲಿ ಸಹ ಸಹಾಯಕವಾಗಿದೆ.

ಅದು ಪದವಿಯ ಭೀತಿಗೆ ಮತ್ತು ಪದವಿಯ ಹಕ್ಕಿಗೆ ಸಂಪೂರ್ಣ ರಕ್ಷಣೆಯನ್ನು ಕೊಡುತ್ತದೆ. ಅದು ಬಹಳ ಪರಿಣಾಮಕಾರಿಯಾಗಿರುವುದನ್ನು ಕಾಣಲಾಗಿದೆ. ಅದರ ಪರಿಣಾಮವು ಬಹಳ ತಾಳಿಕೊಳ್ಳುವಂತಹುದೆಂದು ಕಾಣಲಾಗಿದೆ.

## ೫. ಭಾಗ್ಯೋದಯ ಯಂತ್ರ

ಇದು ಸಹ ಬೆಳ್ಳಿಯಿಂದ ಮಾಡಲ್ಪಟ್ಟ ಉಪಕರಣವು. ಇದನ್ನೂ ಸಹ ಪರೀಕ್ಷಿಸಿದ ವೇದಮಂತ್ರಗಳಿಂದ ಶಕ್ತಿಯುತ ಮಾಡಲಾಗಿದೆ.

ಈ ಸಲಕರಣೆಯು ವ್ಯಕ್ತಿಯ ಜೀವನ ಮತ್ತು ಏಳ್ಗೆಯನ್ನು ಆಕ್ರಮಿಸುವಂತಹ ಎಲ್ಲಾ ತರಹದ ಅಡಚಣೆ ಮತ್ತು ಕಷ್ಟಗಳಿಂದ ಗೆಲ್ಲುವಲ್ಲಿ ನಿರ್ದಿಷ್ಟವಾಗಿ ಪರಿಣಾಮಕಾರಿಯಾಗಿದೆಯೆಂದು ತಿಳಿದುಕೊಳ್ಳಲಾಗಿದೆ. ನಾವು ಯಾವಾಗಲೂ ಎಲ್ಲಾ ತರಹದ ತೊಂದರೆ ಹಾಗೂ ಅಡಚಣೆಗಳನ್ನು ಎದುರಿಸುತ್ತಿರುತ್ತೇವೆ ಎನ್ನುವುದು ಸತ್ಯ. ಯಾವ ವ್ಯಕ್ತಿಯ ಜಾತಕ ಅಥವಾ ಅಂಗೈಯಲ್ಲಿ ವಿರುದ್ಧವಾದ ಗ್ರಹಗಳ ಸಂಗಮಗಳಿಂದ ಅಥವಾ ಅಡಚಣೆಯ ಗೆರೆಗಳಿಂದ ಕಲುಷಿತವಾಗಿರುತ್ತದೋ ಅಂತಹವರಿಗೆ ನಿಶ್ಚಯವಾಗಿ ಕಷ್ಟಗಳಿಂದ ಮತ್ತು ಅಡಚಣೆಗಳಿಂದ ಜಯವನ್ನು ನಿಶ್ಚಯಿಸುವಂತಹ ಒಂದೇ ದುಃಖ ಪರಿಹಾರವಾಗಿ ಇದು ಕಾಣುವುದು.

## ೬. ಅಷ್ಟಲಕ್ಷ್ಮಿ ಯಂತ್ರ

ಈ ಸಲಕರಣೆಯು ಕಾರ್ಯನಿರ್ವಹಣೆಯ ಏಳ್ಗೆಯಲ್ಲಿ ಮತ್ತು ಚುರುಕಾದ ಆರ್ಥಿಕ ಅಭಿವೃದ್ಧಿಯಲ್ಲಿ ಬಹಳ ಪರಿಣಾಮಕಾರಿಯಾಗಿ ಕಂಡಿದೆ. ವಾಸ್ತವದಲ್ಲಿ ಅದು ಎಲ್ಲಾ ಭೌತಿಕ ಅನುಕೂಲತೆಗಳನ್ನು ಮತ್ತು ಸಿದ್ಧಿಗಳನ್ನು ನಿಶ್ಚಯಿಸುತ್ತದೆ.

ಕೆಲ ವ್ಯಕ್ತಿಗಳ ಜಾತಕಗಳು ಮತ್ತು ಅಂಗೈಗಳು ಅವರ ಅಭಿವೃದ್ಧಿಗೆ ಒಂದು ರೀತಿಯ ಗ್ರಹಣ ಹಿಡಿದಿರುವುದನ್ನು ಸಂಕೇತಿಸುತ್ತವೆ. ನಿರ್ದಿಷ್ಟವಾಗಿ ಅಂತಹ ವ್ಯಕ್ತಿಗಳಿಗೆ ಈ ಸಲಕರಣೆಯು ಸಹಾಯಕವಾಗಿದೆ.

## ಇತರೆ ಆಕರ್ಷಣೆಗಳು

ಅಕ್ಕಾಡೆಮಿಯು ತನ್ನ ಸ್ವಂತ ಪ್ರಕಟಣೆಗಳಲ್ಲಿ ಇಳಿದಿದೆ. ಅದು ಅಪರೂಪದ ಮತ್ತು ವಿಶಿಷ್ಟವಾದ ಗ್ರಂಥಗಳನ್ನೇ ಪ್ರಕಟಿಸುತ್ತದೆ. ಅಂತಹ ಪ್ರಕಟಣೆಗಳಲ್ಲಿ ಕೆಲವಾದ **ಮಂತ್ರರಹಸ್ಯ, ಸಮ್ಮೋಹನ ವಿದ್ಯೆ ಮತ್ತು ವ್ರಿಹದ್ ತಂತ್ರ ಸಾಧನಗಳು** ಗಣ್ಯ ಪಂಡಿತರಿಂದ ಪ್ರಶಂಸಿಸಲ್ಪಟ್ಟಿವೆ. ತೀರ್ಮಾನಿಸಲು ಸಮ್ಮೋಹನವು ಮಾನವತ್ವದ ಗಣನೀಯವಾದ ಯಶಸ್ಸನ್ನು ನಿಶ್ಚಯಿಸುವಲ್ಲಿ ಸಹಜವಾದ ಗುಣವನ್ನು ಹೊಂದಿದೆ ಎಂದು ನಾವು ನಂಬುತ್ತೇವೆ. ಈ ವಾಸ್ತವಿಕ ಪುಸ್ತಕವು ಸಮ್ಮೋಹನವನ್ನು ಪ್ರಪಂಚದ ಮೂಲೆಮೂಲೆಗೂ ಮುಟ್ಟಿಸುವಂತಹ ಒಳ್ಳೆ ಮೌಲ್ಯವುಳ್ಳ ಪ್ರಯತ್ನದ ಸಣ್ಣಕೊಡುಗೆಯೆಂದು ನಾವು ನಂಬುತ್ತೇವೆ.

ಈ ಪುಸ್ತಕದಲ್ಲಿ ಕೊಟ್ಟಂತಹ ಸತ್ಯತೆಗಳು ಪ್ರಾಯೋಗಿಕ ಪ್ರಾಮಾಣಿಕತ್ವಕ್ಕೆ ಮತ್ತು ರುಜುವಾತಿಗೆ ಒಳಪಟ್ಟಿವೆ, ವೃದ್ಧಿಯಾಗುತ್ತಿರುವಂತಹ ಜನಾಂಗವು ಈ ಪುಸ್ತಕದಿಂದ ಲಾಭವನ್ನು ಪಡೆದರೆ, ಸಾಮಾಜಿಕ ಏಕ್ಯತೆಗೆ ಮತ್ತು ಒಬ್ಬವ್ಯಕ್ತಿಯ ಪೂರ್ಣತೆಯ ಕಡೆ ಒಂದು ದೊಡ್ಡ ಹೆಜ್ಜೆಯೆಂದು ಪರಿಗಣಿಸಲಾಗುವುದು.

ಯಾವುದೇ ನೆರವು ಅಥವಾ ಸಹಾಯವನ್ನು ಒಪ್ಪಿಕೊಳ್ಳದೆ ಅಕ್ಕಾಡೆಮಿಯು ಈ ಸೇವೆಗಳಲ್ಲಿ ತೊಡಗಿಸಿಕೊಂಡಿದೆ. ಬರುವ 10 ವರ್ಷಗಳಲ್ಲಿ ಅಕ್ಕಾಡೆಮಿಯು ಹೆಚ್ಚಿನ ಪ್ರಯತ್ನಗಳನ್ನು ಹಾಕುವಲ್ಲಿ ಮತ್ತು ಚಿರವಾಗಿರುವಂತಹ ಸಿದ್ಧಿಗಳನ್ನು ಸಾಧಿಸುವುದೆಂದು ಉದ್ದೇಶಿಸಲಾಗಿದೆ.ಅಕ್ಕಾಡೆಮಿಯ ಚಟುಚಟಿಕೆಗಳಲ್ಲಿ ಆಸಕ್ತಿ ಇರುವ ಜನರು ತಮ್ಮ ವಿಚಾರಣೆಗಳನ್ನು ಈ ಕೆಳಗಿನ ವಿಳಾಸಕ್ಕೆ ಇಂಗ್ಲಿಷ್ ಅಥವಾ ಹಿಂದಿಯಲ್ಲಿ ಬರೆಯಬಹುದು:

**ಸೆಕ್ರೆಟರಿ,**
**ಭಾರತೀಯ ಜೋತಿಷ್ಯ ಅಧ್ಯಯನ ಅನುಸಂಧಾನ ಕೇಂದ್ರ**
**ಡಾ. ಶ್ರೀಮಾಲಿ ಮಾರ್ಗ್, ಹೈಕೋರ್ಟ್ ಕಾಲೋನಿ,**
**ಜೋಧಪುರ -342001,ರಾಜಸ್ಥಾನ, ಭಾರತ.**
**ದೂರವಾಣಿ** -32209

***The Secretary,***
***Bharatiya Jyotish Adhyayan***
***Anusandhan Kendra,***
***Dr.Shrimali Marg,***
***Jodhpur-342001,Rajastan ,***
***India***